ಆನಂದ ಕರ್ಣಾಟಕ ಗ್ರಂಥರತ್ನಮಾಲೆ. ನಂ. ೨.

ಶ್ರೀ ವ್ಯಾ ಸ ಮ ಹ ರ್ಷಿ ಪ್ರ ಣೀ ತ

# ಶ್ರೀಮದ್ಭಾಗವತವು

ಕರ್ಣಾಟಕವಚನವು



(ಸಪ್ತಮ ಅಷ್ಟಮ ನವಮ ಸ್ಕಂಧಗಳು)

ಶ್ರೀಮದ್ಯದುಶೈಲನಿವಾಸರಸಿಕ
ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯವಿರಚಿತವು.

Vol. V

ಮ ದ್ರಾ ಸು
ಆನಂದಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ,
ಆರ್. ವೆಂಕಟೇಶ್ವರ ಕಂಪೆನಿಯರಿಂದ
ಪ್ರಕಟಿಸಲ್ಪಟ್ಟಿದೆ.



1925.

# ಸಪ್ತಮಸ್ಕಂಧದ ವಿಷಯಾನುಕ್ರಮಣಿಕೆ.

---

# ಅಷ್ಟಮಸ್ಕಂಧದ ವಿಷಯಾನುಕ್ರಮಣಿಕೆ.

# ನವಮಸ್ಕಂಧದ ವಿಷಯಾನುಕ್ರಮಣಿಕೆ.



# ಸಪ್ತಮ ಅಷ್ಟಮ ನವಮ ಸ್ಕಂಧಗಳೊಳಗಿನ ಪಟಗಳ ಪಟ್ಟಿ



ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ,

# ಶ್ರೀಮದ್ಭಾಗವತವು

# ಸಪ್ತಮ ಸ್ಕಂಧವು.

## ನೃಸಿಂಹಾವತಾರದ ಕಥೆ.

### ಸನಕಾದಿಗಳು ಜಯವಿಜಯರಿಗೆ ಶಾಪವನ್ನು ಕೊಟ್ಟುದು.

ಪರೀಕ್ಷಿದ್ರಾಜನು ಶುಕಮಹರ್ಷಿಯನ್ನು ಕುರಿತು, "ಓ ಯೋಗೀಂದ್ರಾ! ನೀನು ಹೇಳುವ ಭಗವಚ್ಚರಿತ್ರಗಳೆಲ್ಲವೂ ಅತ್ಯಂತಸಂತೋಷಕರವಾಗಿರುವುವು ಆದರೆ ಇವುಗಳನ್ನು ಕೇಳಿ ನನಗೆ ಒಂದು ಸಂದೇಹವುಂಟಾಗಿರುವುದು.ಅದನ್ನೂ ನೀನು ಪರಿಹರಿಸಬೇಕು ಏನೆಂದರೆ, ಭಗವಂತನಾದರೋ ಸದ್ಗುಣಗಳಿಂದ ಪರಿಪೂರ್ಣನಾದವನು ರಾಗದ್ವೇಷಾದಿದೋಷಗಳೊಂದೂ ಇಲ್ಲದವನು. ಅವನು ಕೋರತಕ್ಕ ವಸ್ತುವೊಂದೂ ಇಲ್ಲದುದರಿಂದ ಪೂರ್ಣಕಾಮನೆನಿಸಿಕೊಂಡಿರುವನು ಅವನಿಗೆ ರಾಗದ್ವೇಷಾದಿಗಳಿಲ್ಲದುದರಿಂದ ಸಮಸ್ತಭೂತಗಳನ್ನೂ ಸಮವಾಗಿ ನೋಡತಕ್ಕವನು ಎಲ್ಲರಿಗೂ ಸ್ನೇಹಿತನಂತೆ ಪ್ರಿಯನಾಗಿರುವನು. ಎಲ್ಲರಲ್ಲಿಯೂ ಅಂತರ್ಯಾಮಿಯಾಗಿ ಎಲ್ಲರನ್ನೂ ಒಂದೇವಿಧವಾಗಿ ನೋಡತಕ್ಕ ಆಭಗವಂತನಿಗೆ, ದೇವತೆಗಳಾದರೇನು? ಮನುಷ್ಯರಾದರೇನು ? ರಾಕ್ಷಸರಾದರೇನು ? ಎಲ್ಲರನ್ನೂ ಒಂದೇ ವಿಧವಾಗಿ ಪೋಷಿಸಬೇಕಾದುದೇ ಅವನ ಕರ್ತವ್ಯವಲ್ಲವೆ ? ಹೀಗಿರುವಾಗ ಅವನ ಚರಿತ್ರಗಳನ್ನು ನೋಡಿದರೆ, ಅವನೂ ಪಕ್ಷಪಾತಿಯೆಂದೇ ತೋರುವುದು. ಏಕೆಂದರೆ,ದೇವತೆಗಳ ಪಕ್ಷವನ್ನುವಹಿಸಿ ದೈತ್ಯರನ್ನು ಕೊಲ್ಲುವುದರಿಂದ ಅವನೂ ವಿಷಮಬುದ್ಧಿಯನ್ನೇ ತೋರಿಸಿದಂತಾಗುವುದಿಲ್ಲವೆ? ಸರ್ವಸಮನಾಗಿರಬೇಕಾದ

ಭಗವಂತನು,ಕೆಲವರಲ್ಲಿ ದ್ವೇಷವನ್ನೂ,ಕೆಲವರಲ್ಲಿ ಸ್ನೇಹವನ್ನೂ ತೋರಿಸು ವುದೇಕೆ? ದೇವತೆಗಳಂತೆ ದೈತ್ಯರೂ ಆ ಪರಮೇಶ್ವರನಿಗೆ ಶರೀರಭೂತರಾ ಗಿಯೇ ಇರುವರು ಲೋಕದಲ್ಲಿ ಯಾವನಾದರೂ ತನ್ನ ಶರೀರದಲ್ಲಿ ಸ್ವಲ್ಪ ಭಾಗಕ್ಕೆ ಹಿತವನ್ನೂ, ಇತರಭಾಗಕ್ಕೆ ಅಹಿತವನ್ನೂ ಕೋರುವನೆ? ಶ್ರೀ ಹರಿಯು ಇಂದ್ರನ ಪ್ರಯೋಜನಕ್ಕಾಗಿ ದೈತ್ಯರನ್ನು ಸಂಹರಿಸಿದುದೇಕೆ? ಆ ಭಗವಂತನಾದರೋ ಅವಾಪ್ತಸಮಸ್ತಕಾಮನು ಸಿತ್ಯಾನಂದಸ್ವರೂಪನು ಇವನಿಗೆ ದೇವತೆಗಳಿಂದ ಆಗಬೇಕಾದ ಪ್ರಯೋಜನವೊಂದೂ ಇಲ್ಲ, ದೈತ್ಯ ರನ್ನು ದ್ವೇಷಿಸುವುದರಿಂದ ಸಾಧಿಸಬೇಕಾದ ಕಾರ್ಯವೂ ಇಲ್ಲ! ಸತ್ವಾದಿಗುಣ ಗಳಿಂದುಂಟಾಗತಕ್ಕವಾದ,ದ್ವೇಷ,ಭಯ,ಮುಂತಾದುವುಗಳಿಗೂ ಈಡಾಗತ ಕ್ಕವನಲ್ಲ ಇದರಿಂದ ಅವನು ರಾಕ್ಷಸರಿಗೆ ಭಯಪಡಬೇಕಾದುದೂ ಇಲ್ಲ. ಹೀ ಗಿರುವಾಗ ಅವನಿಗೆ ರಾಕ್ಷಸರಲ್ಲಿ ದ್ವೇಷವೇಕೆ? ಈ ವಿಷಯವಾಗಿ ನನಗೆ ದೊಡ್ಡ ಸಂದೇಹವುಂಟಾಗಿದೆ ಅದನ್ನು ಪರಿಹರಿಸಬೇಕು" ಎಂದನು

ಅದಕ್ಕಾ ಶುಕಮುನಿಯು "ರಾಜೇಂದ್ರಾ! ಭಗವಂತನ ಅದ್ಭುತಚ ರಿತ್ರೆಯನ್ನು ಕುರಿತು,ನೀನು ಕೇಳಿದ ಪ್ರಶ್ನವು ಯುಕ್ತವಾಗಿಯೇ ಇರುವುದು ನಿನ್ನ ಪ್ರಶ್ನಕ್ಕಾಗಿ ನಾನು ಸಂತೋಷಪಟ್ಟೆನು ಮೇಲೆಮೇಲೆ ಭಕ್ತಿಯನ್ನು ಹೆಚ್ಚಿಸತಕ್ಕ ಆ ಭಗವಂತನ ಪುಣ್ಯಚರಿತ್ರವನ್ನು ನಾರದಾದಿಮಹರ್ಷಿಗಳೂ ಕೂಡ ಅನವರತವೂ ಗಾನಮಾಡುತ್ತಿರುವರು ಆ ಭಗವಂತನ ಮಹಿಮೆ ಯನ್ನು ಕುರಿತೇ ನೀನೂ ಮೇಲೆಮೇಲೆ ಪ್ರಶ್ನೆಮಾಡುತ್ತಿರುವುದರಿಂದ, ನಾ ನು ಬಹಳಸಂತೋಷಪಟ್ಟೆನು.ರಾಜೇಂದ್ರಾ!ನಾನು ನನ್ನ ತಂದೆಯಾದ ವ್ಯಾ ಸಮಹರ್ಷಿಗೆ ಮೊದಲು ನಮಸ್ಕರಿಸಿ, ನಿನ್ನ ಸಂದೇಹಪರಿಹಾರವಾಗುವಂತೆ ಆ ಭಗವಂತನ ಚರಿತ್ರವನ್ನು ವಿವರಿಸುವೆನು ಕೇಳು. ನೀನು ಹೇಳಿದಂತೆ ಆ ಸರ್ವೇಶ್ವರನಿಗೆ ರಾಗದ್ವೇಷಾದಿದೋಷಗಳಾಗಲಿ, ಕರ್ಮಾಧೀನವಾದ ಜನನ ಮರಣಗಳಾಗಲಿ ಇಲ್ಲವೆಂಬುದೇನೋ ವಾಸ್ತವವು ! ಆತನ ಸ್ವರೂಪವು ಪ್ರತ್ಯಕ್ಷಾದಿಪ್ರಮಾಣಗಳಿಗೆ ಗೋಚರಿಸತಕ್ಕುದಲ್ಲ. ಚಿದಚಿದಾತ್ಮಕವಾದ ಈ ಪ್ರಪಂಚಕ್ಕಿಂತಲೂ ಅವನು ಬೇರೆಯಾಗಿರುವನು ಅವನು ತಾನಾ ಗಿ ಯಾವ ಕೆಲಸವನ್ನೂ ಮಾಡತಕ್ಕವನಲ್ಲ. ತನಗೆ ಶರೀರವಾದ ಪ್ರ

ಕೃತಿಯಲ್ಲಿ ಪ್ರವೇಶಿಸಿ, ಆದರ ಸತ್ವಾದಿಗುಣಗಳಲ್ಲಿ, ಒಂದರಿಂದೊಂದನ್ನು ಅಡಗಿಸುತ್ತಿರುವನು. ಸಮುದ್ರದಲ್ಲಿರುವ ಅಲೆಗಳು ಒಂದರಮೇಲೊಂದು ಬಿದ್ದು, ಆಗಾಗ ಹೆಚ್ಚುತ್ತಲೂ ತಗ್ಗುತ್ತಲೂ ಇರುವುವಲ್ಲವೆ? ಅದರಿಂದ ಸಮುದ್ರಕ್ಕೆ ಹಾನಿಯೇನು? ಅದರಂತೆ ಭಗವಂತನಿಗೆ ಶರೀರವಾದ ಪ್ರಕೃತಿಯಲ್ಲಿ, ಗುಣಗಳ ಹೆಚ್ಚುಕಡಿಮೆಯಿಂದಲೇ ಈ ವೃದ್ಧಿಕ್ಷಯಗಳುಂಟಾಗುವುವು ಭಗವಂತನು ದೇವಾಸುರರಲ್ಲಿ ಅಂತರಾತ್ಮನಾಗಿಯೇ ಇದ್ದರೂ, ಶರೀರಗತವಾದ ದೋಷಗಳು ಆತ್ಮವನ್ನು ಮುಟ್ಟದಿರುವಂತೆ, ಈ ಸಾಧಕ ಬಾಧಕಗಳೊಂದೂ ಅವನನ್ನು ಮುಟ್ಟಲಾರವು ಸತ್ವ,ರಜಸ್ಸು ತಮಸ್ಸು,ಎಂಬಿವು ಮೂರೂ ಪ್ರಕೃತಿಯ ಗುಣಗಳೇಹೊರತು ಆತ್ಮನಿಗೆ ಸೇರಿದುವಲ್ಲ ಇವು ಮೂರುಗುಣಗಳಿಗೂ ಏಕಕಾಲದಲ್ಲಿ ಉದ್ರೇಕವಾಗಲಿ, ಕ್ಷೀಣತೆಯಾಗಲಿ ಸಂಭವಿಸುವುದಿಲ್ಲ ಆಯಾ ಜೀವಗಳ ಕರ್ಮಕ್ಕೂ, ಕಾಲಕ್ಕೂ ಅನುಗುಣವಾಗಿ ಒಮ್ಮೊಮ್ಮೆ ಒಂದೊಂದು ಗುಣವು ಹೆಚ್ಚುತ್ತಲೂ, ಮತ್ತೊಮ್ಮೆ ತಗ್ಗುತ್ತಲೂ ಇರುವುದು. ಒಂದು ಹೆಚ್ಚಿದಾಗ ಮತ್ತೆರಡೂ ತಗ್ಗಿರುವುವು ಮತ್ತು ದೇವತೆಗಳು ಸತ್ವಗುಣಪ್ರಧಾನರೆಂದೂ, ದೈತ್ಯರು ರಜೋಗುಣಪ್ರಧಾನರೆಂದೂ, ಯಕ್ಷರಾಕ್ಷಸಾದಿಗಳು ತಮೋಗುಣ ಪ್ರಧಾನರೆಂದೂ ನೀನು ಕೇಳಿರುವೆಯಷ್ಟೆ? ಭಗವಂತನು, ಸತ್ವವು ತಲೆಯೆತ್ತಿದಾಗ ದೇವತೆಗಳನ್ನೂ, ರಜೋಗುಣದ ಪ್ರಾಬಲ್ಯದಿಂದ ದಾನವರನ್ನೂ, ತಮೋಗುಣದ ಪ್ರಾಬಲ್ಯದಿಂದ ಯಕ್ಷರಾಕ್ಷಸರನ್ನೂ ವೃದ್ಧಿಗೊಳಿಸುವನು ಹೀಗೆ ಅವರವರ ಕರ್ಮಕ್ಕೂ ಕಾಲಕ್ಕೂ ಅನುಗುಣವಾಗಿ, ಗುಣಗಳಲ್ಲಿ ತಾರತಮ್ಯವುಂಟಾಗುವುದು. ಆದರೆ ಸತ್ವಗುಣವಿದ್ದಕಡೆಯಲ್ಲಿಯೇ ಜಯವೂ, ರಜಸ್ತಮೋಗುಣಗಳಿದ್ದ ಕಡೆಯಲ್ಲಿ ಪರಾಜಯವೂ ಸಿದ್ಧವು.ಆದುದರಿಂದಲೇ ಸತ್ವಪ್ರಧಾನರಾದ ದೇವತೆಗಳಿಗೆ ಪ್ರಾಯಶಃ ಜಯವೇ ಕೈಗೂಡಿಬರುವುದು. ಒಂದುವೇಳೆ ದೈತ್ಯ ದಾನವ ಯಕ್ಷ ರಾಕ್ಷಸಾದಿಗಳಲ್ಲಿಯೂ ಅವರ ಪೂರ್ವಕರ್ಮವಿಶೇಷದಿಂದ, ಅವರಿಗೆ ಸಹಜವಾದ ರಜಸ್ತಮೋಗುಣಗಳನ್ನು ಮೀರುವಂತೆ ಸತ್ವಗುಣವು ತಲೆಯೆತ್ತಿದಪಕ್ಷದಲ್ಲಿ, ಅವರಿಗೇ ಆಗ ಜಯವುಂಟಾಗುವುದು. ಆದುದರಿಂದ ಸತ್ವಗುಣದ ವೃದ್ಧಿಕ್ಷಯಗಳೇ ಜಯಾಪಜಯಗ

ಳಿಗೆ ಕಾರಣಗಳಾಗುವುವು ಈ ಗುಣಗಳಲ್ಲಿ ಕಾಣುವ ಹೆಚ್ಚುಕಡಿಮೆಗಳೆಲ್ಲ ವೂ ಅವರವರ ಕರ್ಮಾನುಸಾರವಾಗಿರುವುದರಿಂಲೂ, ಅವುಗಳ ತಾರತಮ್ಯ ಕ್ಕೆ ತಕ್ಕಂತೆ ಜಯಾಪಜಯಗಳೂ ಪ್ರಾಪ್ತವಾಗುವುದರಿಂದಲೂ, ದೇವತೆ ಗಳ ಜಯಕ್ಕಾಗಲಿ,ದಾನವರ ಪರಾಜಯಕ್ಕಾಗಲಿ ಈಶ್ವರನನ್ನು ಕಾರಣವಾಗಿ ತಿಳಿಯಬಾರದು ಹೀಗೆ ಅವರವರಕರ್ಮಾನುಸಾರವಾಗಿನಡೆಸತಕ್ಕ ಈಶ್ವರನನ್ನು ಪಕ್ಷಪಾತಿಯೆಂದು ಹೇಳುವುದು ಅಜ್ಞತೆಯಲ್ಲದೆ ಬೇರೆಯಲ್ಲ ಭಗವಂತನು ದೇವಾಸುರರೆಲ್ಲರಲ್ಲಿಯೂ ಅಂತರಾತ್ಮನಾಗಿಯೇಇರುವನು ಆದರೆಅರಣಿ ಕಾಷ್ಠದಲ್ಲಿರುವ ಬೆಂಕಿಯಂತೆ, ದೇಹೇಂದ್ರಿಯಾದಿಗಳ ಸಮುದಾಯದಲ್ಲಿ ಕಲೆತಿರುವುದರಿಂದ ಹೊರಕ್ಕೆ ಕಾಣಿಸಲಾರನು ಕಟ್ಟಿಗೆಯಲ್ಲಿರುವ ಬೆಂಕಿ ಯು,ಅದರ ದೋಷಕ್ಕೊಳಗಾಗದೆ ಪ್ರಕಾಶಿಸುವಂತೆ,ಇವನು ಆಯಾವಸ್ತು ಗಳಲ್ಲಿರುವ ದೋಷಕ್ಕೆ ಗುರಿಯಾಗದೆ ಪ್ರಕಾಶಿಸುತ್ತಿರುವನು ತತ್ವತ್ರಯ ಜ್ಞಾನದಿಂದ ಭಕ್ತಿಯೋಗದಲ್ಲಿ ಸಿದ್ಧಿಹೊಂದಿದ ಪಂಡಿತರುಮಾತ್ರವೇ ಹೀಗೆ ಒಂದೊಂದು ಜೀವಾತ್ಮನಲ್ಲಿಯೂ ಅಂತರಾತ್ಮನಾಗಿರುವ ಭಗವಂತ ನನ್ನು ತಿಳಿಯಬಲ್ಲರು ಅರಣಿಯನ್ನುಜ್ಜುವುದರಿಂದ ಬೆಂಕಿಯನ್ನು ಹೊರಡಿಸುವಂತೆ, ಪಂಡಿತರು ತತ್ವಜ್ಞಾನಪೂರ್ವಕವಾದ ತಮ್ಮ ಬುದ್ಧಿ ಯಿಂದ ಚೆನ್ನಾಗಿ ಮಥಿಸಿ, ತಮ್ಮೊಳಗಿರುವ ಅಂತರಾತ್ಮನನ್ನು ಬಹುಕಾಲ ದಮೇಲೆ ತಿಳಿದು ಕೊಳ್ಳುವರು ಭಗವಂತನು ಯಾವಾಗ ತನ್ನ ಸಂಕಲ್ಪಜ್ಞಾ ನದಿಂದ ಜೀವಿಗಳಿಗೆ ಶರೀರವನ್ನು ಸೃಷ್ಟಿಸಬೇಕೆಂದು ಕೋರುವನೋ, ಆಗ ರಜೋಗುಣವನ್ನು ಪ್ರೇರಿಸುವನು ಹಾಗೆ ಸೃಷ್ಟಿಸಲ್ಪಟ್ಟ ದೇಹದಲ್ಲಿ ತಾ ನು ಯಾವಾಗ ಲೀಲೆಗಳನ್ನು ತೋರಿಸುತ್ತ ಅದನ್ನು ರಕ್ಷಿಸಬೇಕೆಂದೆಣಿಸು ವನೋ, ಆಗ ಸತ್ವಗುಣವನ್ನು ಪ್ರೇರಿಸುವನು ಆ ಲೀಲೆಗಳೆಲ್ಲವನ್ನೂ ಅಡ ಗಿಸಿ ಯಾವಾಗ ಶಯಸಿಸಬೇಕೆಂದಿಷ್ಟಪಡುವನೋ, ಆಗ ತಮೋಗುಣವ ನ್ನು ನಿಯಮಿಸುವನು ರಾಜೇಂದ್ರಾ! ಇದಲ್ಲದೆ ಪರಮಾತ್ಮನು ತನಗೆ ಶರೀರ ಭೂತವಾದ ಕಾಲವಿಭಾಗವನ್ನನುಸರಿಸಿ, ಪ್ರಕೃತಿಪುರುಷ ಸಮಷ್ಟಿಯಿಂದ ಪ್ರಪಂಚರೂಪವಾದ ವ್ಯಷ್ಟಿಸೃಷ್ಟಿಯನ್ನು ಮಾಡುವನು. ತನಗಧೀನವಾದ ಕಾಲವನ್ನೇ ಆಯಾಜೀವಗಳ ಕರ್ಮಾನುಸಾರವಾಗಿ ಸತ್ವಗುಣವನ್ನು ಹೆ

ಚ್ಚಿಸುವುದಕ್ಕೂ, ತಗ್ಗಿಸುವುದಕ್ಕೂ ಪ್ರೇರಿಸುತ್ತಿರುವನು ಹೀಗೆ ಕರ್ಮಾ
ನುಗುಣವಾಗಿ ಈಶ್ವರನಿಂದ ಪ್ರೇರಿಸಲ್ಪಟ್ಟ ಕಾಲವೇ ಸತ್ವಗುಣವನ್ನು ಹೆ
ಚ್ಚಿಸಿ, ಜಯವನ್ನುಂಟುಮಾಡುವುದು ಇದರಿಂದಲೇ ಸತ್ವಪ್ರಧಾನರಾದ
ದೇವತೆಗಳಿಗೆ ಪ್ರಾಯಕವಾಗಿ ಜಯವೂ, ರಜಸ್ತಮೋಗುಣವುಳ್ಳ ರಾಕ್ಷಸರಿ
ಗೆ ಪ್ರಾಯಕವಾಗಿ ಅಪಜಯವೂ ಕಂಡು ಬರುವುದು. ರಾಜೇಂದ್ರಾ! ಈ
ವಿಷಯವಾಗಿ ಪೂರ್ವದಲ್ಲಿ ಧರ್ಮರಾಜನು ರಾಜಸೂಯವನ್ನು ಮಾಡುತ್ತಿ
ದ್ದಾಗ, ಅವನಿಗೆ ನಾರದನಿಂದುಪದೇಶಿಸಲ್ಪಟ್ಟ ಒಂದಾನೊಂದು ಇತಿಹಾ
ಸವುಂಟು ಅದನ್ನೇ ನಿನಗೆ ತಿಳಿಸುವೆನು ಕೇಳು. ಧರ್ಮರಾಜನು ರಾಜಸೂ
ಯಯಾಗವನ್ನು ಮುಗಿಸಿದಮೇಲೆ,ಭೀಷ್ಮಾದಿಗಳ ಅನುಮತಿಯನ್ನು ಪಡೆದು,
ಶ್ರೀಕೃಷ್ಣನಿಗೆ ಅಗ್ರಮರ್ಯಾದೆಯನ್ನು ಕೊಟ್ಟು ಪೂಜಿಸುತಿದ್ದನು. ಶಿಶು
ಪಾಲನು ಅದನ್ನು ನೋಡಿ ಸಹಿಸಲಾರದೆ, ಕೃಷ್ಣನನ್ನು ಬಾಯಿಗೆ ಬಂದಂತೆ
ನಿಂದಿಸಲಾರಂಭಿಸಿದನು ಆಗ ಕೃಷ್ಣನು ತನ್ನ ಚಕ್ರಾಯುಧದಿಂದ ಶಿಶು
ಪಾಲನ ತಲೆಯನ್ನು ಕತ್ತರಿಸಿದನು.ಒಡನೆಯೇ ಆ ಶಿಶುಪಾಲನ ದೇಹದಿಂದ
ಒಂದಾನೊಂದು ತೇಜಸ್ಸುಹೊರಟುಬಂದು, ಶ್ರೀ ಕೃಷ್ಣನಲ್ಲಿ ಸೇರಿತು ಇ
ದನ್ನು ನೋಡಿ ಧರ್ಮರಾಜನು ಅತ್ಯಾಶ್ಚರ್ಯಗೊಂಡು,ಅಲ್ಲಿದ್ದ ಋಷಿಗಳೆಲ್ಲರೂ
ಕೇಳುತ್ತಿರುವಾಗ, ಆ ಸಭೆಯಲ್ಲಿ ಕುಳಿತಿದ್ದ ನಾರದನನ್ನು ಪ್ರಶ್ನೆಮಾ
ಡುವನು “ಓ ಮುನೀಂದ್ರಾ! ಆಹಾ! ಇದೇನಾಶ್ಚರ್ಯವು! ಈ ಶಿಶುಪಾ
ಲನ ಭಾಗ್ಯವಲ್ಲವೇ ಭಾಗ್ಯವು!ಶಿಶುಪಾಲನು, ಪರತತ್ವವೆನಿಸಿಕೊಂಡ ಶ್ರೀಕೃ
ಷ್ಣನಿಗೆ ಜನ್ಮಶತ್ರುವಾಗಿದ್ದರೂ ತೇಜೋರೂಪದಿಂದ ಹೊರಟು ಅವನಲ್ಲಿ
ಯೇ ಸಾಯುಜ್ಯವನ್ನು ಹೊಂದಿದನಲ್ಲಾ!ಬೇರೆಯಾವ ಫಲವನ್ನೂ ಅಪೇಕ್ಷಿ
ಸದೆ ಬಹುಕಾಲವವರೆಗೆ ಆ ಭಗವಂತನ ಪಾದಾರವಿಂದದಲ್ಲಿ ಭಕ್ತಿಯನ್ನ ಸಾ
ಧಿಸಿದ ಮಹಾತ್ಮರಿಗೂ ಈ ಭಾಗ್ಯವು ಲಭಿಸಲಾರದು.ಪೂರ್ವದಲ್ಲಿ ಪೃಥುರಾ
ಜನ ತಂದೆಯಾದ ವೇನನು, ಭಗವಂತನನ್ನು ನಿಂದಿಸಿದುದಕ್ಕಾಗಿ ಬ್ರಾಹ್ಮಣ
ರೆಲ್ಲರೂ ಕೋಪಿಸಿ ಅವನನ್ನು ನರಕಕೂಪದಲ್ಲಿ ಬೀಳುವಂತೆ ಮಾಡಿದರು. ಈ
ಶಿಶುಪಾಲನಾದರೋ ತಾನು ಮಾತಾಡುವುದಕ್ಕೆ ಕಲಿತುದುಮೊದಲು,
ಇದುವರೆಗೂ ಆ ಕೃಷ್ಣನಲ್ಲಿ ದ್ವೇಷವನ್ನೇ ಬೆಳೆಸುತ್ತ, ಅವನನ್ನು ನಿಂದಿ

ಸುತ್ತಲೇ ಇದ್ದನು ಇವನ ಸಹೋದರನಾದ ದಂತವಕ್ತ್ರನೂ ಹಾಗೆಯೇ ದ್ವೇಷಿಸುತ್ತಿದ್ದನು. ಇವರಿಬ್ಬರೂ ಮಹಾಪಾಪಿಗಳು ! ದುರಾತ್ಮರು ! ಯಾವ ಅಕೃತ್ಯಕ್ಕೂ ಹೆದರತಕ್ಕವರಲ್ಲ ಸಾಕ್ಷಾತ್ಪರಮಪುರುಷನಾದ ಶ್ರೀ ಕೃಷ್ಣನನ್ನು ಯಾವಾಗಲೂ ನಿಂದಿಸುತ್ತಿದ್ದ ಈ ಶಿಶುಪಾಲದಂತವಕ್ತ್ರರನಾಲಗೆಯು, ಆ ಕ್ಷಣವೇ ಕುಷ್ಠರೋಗದಿಂದ ಪೀಡಿತವಾಗಿ ಬಿದ್ದುಹೋಗ ಬೇಕಾಗಿದ್ದಿತಲ್ಲವೆ ! ಸತ್ತಮೇಲಾದರೂ ಇವರು ನರಕದಲ್ಲಿ ಬೀಳಬೇಕಲ್ಲ ವೆ? ಈ ಎರಡು ಶಿಕ್ಷೆಗಳನ್ನೂ ತಪ್ಪಿಸಿಕೊಂಡು, ಅವರಿಬ್ಬರೂ ಭಗ ವಂತನಲ್ಲಿಯೇ ಸೇರಿದರಲ್ಲವೆ? ಇವರಿಬ್ಬರೂ ಮೋಕ್ಷಪ್ರಾಪ್ತಿಗೆ ಬೇಕಾದ ಉಪಾಯವೊಂದೂ ಇಲ್ಲದೆ ನಾವೆಲ್ಲರೂ ನೋಡುತಿದ್ದಹಾಗೆಯೇ ಅಪ್ರ ಮೇಯವಾದ ತೇಜಸ್ಸುಳ್ಳ ಈ ಕೃಷ್ಣನಲ್ಲಿ ಲಯಹೊಂದಿದುದು ಹೇಗೆ? ಇ ದು ಪರಮಾಶ್ಚರ್ಯವಲ್ಲವೆ ? ಓ ಮಹರ್ಷೀ! ಈವಿಚಾರವಾಗಿ ನನ್ನ ಮನಸ್ಸು ಗಾಳಿಯಲ್ಲಿಟ್ಟ ದೀಪದಂತೆ ಸಂದೇಹದಿಂದ ಕಳವಳಿಸುತ್ತಿರುವುದು. ಈ ಆಶ್ಚರ್ಯಕ್ಕೆ ಕಾರಣವೇನೆಂಬುದನ್ನು ತಿಳಿಸಬೇಕು” ಎಂದನು ಆಗ ನಾರದನು ಧರ್ಮರಾಜನ ಪ್ರಶ್ನೆಗೆ ಸಂತೋಷಪಟ್ಟು,ಸಭಾಸದರೆಲ್ಲರೂ ಕೇಳುತ್ತಿರುವ ಹಾಗೆ ಅವನಿಗೆ ಸಮಾಧಾನವನ್ನು ಹೇಳುವನು “ಓ ಧರ್ಮರಾಜಾ! ಶಿಶು ಪಾಲನು ಶ್ರೀಕೃಷ್ಣನನ್ನು ನಿಂದಿಸಿದುದಾಗಿ ಹೇಳಿದೆಯಲ್ಲವೆ? ನಿಂದೆಯಾಗ ಲಿ, ಸ್ತೋತ್ರವಾಗಲಿ, ಸತ್ಕಾರವಾಗಲಿ, ತಿರಸ್ಕಾರವಾಗಲಿ, ಚಂದನಾದ್ಯ ಲಂಕಾರಗಳಾಗಲಿ, ವಿಕಾರವೇಷಗಳಾಗಲಿ ದೇಹಕ್ಕೇಹೊರತು ಆತ್ಮ ಕ್ಕಲ್ಲ!ದೇಹವನ್ನೇ ಆತ್ಮವೆಂದು ಭ್ರಮಿಸತಕ್ಕವರುಮಾತ್ರವೇ ಅವೆಲ್ಲವನ್ನೂ ತಮ್ಮಲ್ಲಿ ಆರೋಪಿಸಿಕೊಳ್ಳುವರು ಈ ಅವಿವೇಕದಿಂದಲೇ ಕೋಪವನ್ನು ತಂದುಕೊಂಡು ಮತ್ತೊಬ್ಬರನ್ನು ಹಿಂಸಿಸುವುದಕ್ಕೂ ಯತ್ನಿಸುವರು. ಹೀಗೆಯೇ ನಾವು ಇತರರಿಗೆ ಮಾಡತಕ್ಕ ನಿಂದಾದಿಗಳೂ ಅವರಶರೀರಕ್ಕೇ ಹೊರತು ಆತ್ಮಕ್ಕಲ್ಲ ನಿಂದೆ, ದಂಡನೆ ಮೊದಲಾದುವು ಹೇಗೆ ದೇ ಹಕ್ಕೆಮಾತ್ರವೇ ಸೇರುವುವೋ,ಹಾಗೆಯೇ ವಧವೆಂಬುದೂ ಕೂಡ ದೇಹಕ್ಕೇ ಸೇರಿದುದು ದೇಹವನ್ನೇ ಆತ್ಮವೆಂಬ ಅಭಿಮಾನವಿದ್ದವರು, ಆ ವಧವನ್ನೂ ಆತ್ಮದಲ್ಲಿಯೇ ಆರೋಪಿಸಿಕೊಳ್ಳುವರು. ಹೀಗೆ ಭ್ರಾಂತಿಯನ್ನು ಹುಟ್ಟಿಸ

ತಕ್ಕ ದೇಹಾತ್ಮಾಭಿಮಾನವು, ಸಂಸಾರಿಗಳಿಗೇಹೊರತು ಸರ್ವೇಶ್ವರನಿಗಿಲ್ಲ. ಈ ಅಭಿಮಾನವೆಲ್ಲವೂ ಅನಾದಿಯಾದ ಕರ್ಮವಾಸನೆಯಿಂದಲೇ ಉಂಟಾಗುವುವು ಕರ್ಮರಹಿತನಾದ ಪರಮೇಶ್ವರನಿಗೆ, ಆ ಅಭಿಮಾನವಾಗಲಿ, ಅದರಿಂದ ತೋರತಕ್ಕ ಹಿಂಸಾದಿಗಳಾಗಲಿ, ಹೇಗೆ ತಾನೇ ಉಂಟಾಗುವುವು. ಶಿಶುಪಾಲನು ಕೃಷ್ಣನನ್ನು ನಿಂದಿಸಿದುದೂ, ಕೃಷ್ಣನು ಅದಕ್ಕಾಗಿ ಕೋಪಿಸಿ ಅವನನ್ನು ಕೊಂದುದೂ, ನಮಗೆ ಪ್ರತ್ಯಕ್ಷವಾಗಿ ಕಂಡುಬಂದ ವಿಷಯಗಳಾಗಿದ್ದರೂ, ಇದರಲ್ಲಿ ತಿಳಿಯಬೇಕಾದ ರಹಸ್ಯವೊಂದುಟು ಕೃಷ್ಣನು ದೇಹಾತ್ಮಾಭಿಮಾನವಿಲ್ಲದವನಾಗಿದ್ದರೂ, ಲೋಕದಲ್ಲಿ ಪರನಿಂದೆಯನ್ನು ಮಾಡುವವರು, ಶಿಕ್ಷಾರ್ಹರೆಂಬುದನ್ನು ಜನಗಳಿಗೆತಿಳಿಸುವುದಕ್ಕಾಗಿಯೇ ಅವನನ್ನುಕೊಂದನು ಇದಲ್ಲದೆ ಶಿಶುಪಾಲನಿಗೆ ರಾಕ್ಷಸಜನ್ಮವನ್ನು ನೀಗಿಸಿ ತನ್ನಲ್ಲಿ ಸೇರಿಸಿಕೊಳ್ಳಬೇಕಾದ ಕಾಲವೂ ಬಂದೊದಗಿತು. ಈ ಎರಡುಕಾರಣಗಳಿಂದ, ಶ್ರೀಕೃಷ್ಣನು ಆತನನ್ನು ಸಂಹರಿಸಿದನೇಹೊರತು ಶಿಶುಪಾಲನಮೇಲೆ ಕೋಪದಿಂದಲಾಗಲಿ, ಸ್ವಾಭಿಮಾನದಿಂದಲಾಗಲಿ, ಹೀಗೆ ಮಾಡಿದವನಲ್ಲ. ಸಂಸಾರಿಗಳಂತೆ ಇವನು ಸ್ತೋತ್ರಕ್ಕಾಗಲಿ, ನಿಂದೆಗಾಗಲಿ, ಕದಲತಕ್ಕವನಲ್ಲ. ಇದರಿಂದಲೇ ಅವನು ತನ್ನನ್ನು ನಿಂದಿಸಿದ ಶಿಶುಪಾಲನಿಗೂ ಮುಕ್ತಿಯನ್ನೇ ಕೊಟ್ಟನು. ಲೋಕವೆಲ್ಲವನ್ನೂ ಶಿಕ್ಷಿಸಿ ಸನ್ಮಾರ್ಗದಲ್ಲಿ ನಿಯಮಿಸತಕ್ಕ ಆ ಪರಮಪುರುಷನಿಗೆ, ಮತ್ತೊಬ್ಬರಿಂದ ತಿರಸ್ಕಾರವೆಂದರೇನು ? ಆದರೆ ನಾವೂ ಶಿಶುಪಾಲನಂತೆ ಭಗವಂತನನ್ನು ನಿಂದಿಸಿಯೇ ಮೋಕ್ಷವನ್ನುಪಡೆಯಬಾರದೆ? ಶಾಸ್ತ್ರಗಳೆಲ್ಲವೂ ಭಗವಂತನನ್ನು ಸ್ತುತಿಸಬೇಕೆಂದು ವಿಧಿಸಿರುವುದೇಕೆ?" ಎಂದು ನೀನು ಕೇಳಬಹುದು ಓ ಧರ್ಮರಾಜಾ! ಸುಮ್ಮನೆ ಭಗವಂತನನ್ನು ನಿಂದಿಸಿದಮಾತ್ರಕ್ಕೂ ಮುಕ್ತಿಯುಂಟಾಗದು! ಯಾವನು, ಅವಿಚ್ಛಿನ್ನವಾದ ದ್ವೇಷದಿಂದಾಗಲಿ, ಭಕ್ತಿಯಿಂದಾಗಲಿ, ಸ್ನೇಹದಿಂದಾಗಲಿ, ಭಯದಿಂದಾಗಲಿ, ಕಾಮದಿಂದಾಗಲಿ, ಆ ಶ್ರೀಹರಿಯಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ, ಬೇರೊಂದನ್ನೂ, ಗಮನಿಸದೆ, ತದೇಕಧ್ಯಾನದಲ್ಲಿರುವನೋ, ಅವನಿಗೆ ಮೋಕ್ಷವೆಂಬುದು ಸಿದ್ಧವು ಬಾಲ್ಯದಿಂದ ಸಾಯುವವರೆಗೂ ಶಿಶುಪಾಲನು ಆ ಕೃಷ್ಣನಲ್ಲಿ ಅವಿಚ್ಛಿನ್ನ

ವಾದ ದ್ವೇಷವನ್ನೇ ಬೆಳೆಸಿ, ಯಾವಾಗಲೂ ಅದೇ ಚಿಂತೆಯಲ್ಲಿದ್ದುದರಿಂಲೇ ಅವನಿಗೆ ಮುಕ್ತಿಯುಂಟಾಯಿತು ಇದನ್ನು ಬಿಟ್ಟು ಒಂದೆರಡಾವರ್ತಿ ಆ ಭಗವಂತನನ್ನು ಬೈದಮಾತ್ರಕ್ಕೆ ಮುಕ್ತಿಯುಂಟಾಗುವುದೆ? ಆ ಭಗವಂತ ನಲ್ಲಿ ಭಕ್ತಿಯಾಗಲಿ, ವೈರವಾಗಲಿ, ಅವಿಚ್ಛಿನ್ನವಾಗಿ ನಡೆದುಬಂದಾಗಲೇ ಮುಕ್ತಿಸಾಧಕವಾಗುವುದು ಆದರೆ ಮಹತ್ತಾದ ವೈರದಿಂದಲೂ, ಭಯ ದಿಂದಲೂ ಮನುಷ್ಯನ ಮನಸ್ಸು ಭಗವಂತನಲ್ಲಿ ತನ್ಮಯವಾಗಿ ನಿಲ್ಲುವಂತೆ ಭಕ್ತಿಯಿಂದಲೂ ನಿಲ್ಲಲಾರದೆಂಬುದೇ ನನ್ನ ಮತವು. ಇದಕ್ಕೆ ಭ್ರಮರಕೀ ಟನ್ಯಾಯವನ್ನು ದೃಷ್ಟಾಂತವಾಗಿ ಹೇಳಬಹುದು. ಕಣಜದ ಹುಳವು, ತನ್ನ ಆಹಾರಾರ್ಥವಾಗಿ ಬೇರೆ ಹುಳುಗಳನ್ನು ತಂದು, ತನ್ನಗೂಡಿನಲ್ಲಿ ನಿರ್ಬಂಧಿಸಿ ಟ್ಟಾಗ, ಆ ಹುಳವು ಸಂತತವೂ ಭಯದಿಂದ ಆ ಕಣಜದ ರೂಪವನ್ನೇ ಸ್ಮರಿ ಸುತ್ತಿದ್ದು, ಕೊನೆಗೆ ರೆಕ್ಕೆಬೆಳೆದು ಅದೇರೂಪವನ್ನು ಹೊಂದಿ, ಹಾರಿ ಹೋಗುವುದು ಹೀಗೆಯೇ ಷಾಡ್ಗುಣ್ಯಪರಿಪೂರ್ಣನಾಗಿಯೂ, ಲೀಲಾ ಮಾನುಷಸ್ವರೂಪನಾಗಿಯೂ ಇರುವ ಶ್ರೀಕೃಷ್ಣನಲ್ಲಿ, ಶಿಶುಪಾಲದಂತವ ಕ್ತ್ರರಿಬ್ಬರೂ, ಹುಟ್ಟಿದುದುಮೊದಲು ವೈರವನ್ನೇ ಬೆಳೆಸುತ್ತ, ತದೇಕಧ್ಯಾ ನದಿಂದ ಪಾಪಶೇಷವನ್ನು ಕಳೆದು, ಆ ಕೃಷ್ಣನೊಡನೆ ಸಾರೂಪ್ಯವನ್ನು ಹೊಂದಿದರು. ಓ ಧರ್ಮರಾಜಾ! ಹೀಗೆಯೇ ಯಾವವಿಧದಿಂದಲಾದರೂ ಎಡೆಬಿಡದೆ ಆ ಭಗವಂತನನ್ನು ಧ್ಯಾನಿಸಿದವರಿಗೆ, ಮುಕ್ತಿಯು ಲಭಿಸುವುದರಲ್ಲಿ ಸಂದೇಹವಿಲ್ಲ ಹೀಗೆ ಕಾಮದಿಂದಲೂ, ದ್ವೇಷದಿರಿದಲೂ, ಭಯದಿಂದ ಲೂ, ಸ್ನೇಹದಿಂದಲೂ, ಪರಮಾತ್ಮನಲ್ಲಿ ನಟ್ಟಮನಸ್ಸುಳ್ಳವರೆಷ್ಟೋಮಂದಿ, ಭಕ್ತಿಯೋಗದಿಂದ ಹೇಗೋ ಹಾಗೆಯೇ ಪಾಪವಿಮುಕ್ತಿಯನ್ನು ಹೊಂದಿ, ವೈಕುಂಠವನ್ನು ಸೇರಿರುವರು ಇದಕ್ಕೆ ಕೆಲವು ನಿದರ್ಶನಗಳನ್ನು ಹೇಳುವೆನು ಕೇಳು! ಗೊಪಸ್ತ್ರೀಯರು ಕಾಮದಿಂದಲೂ, ಕಂಸನು ಭಯದಿಂದಲೂ, ಶಿಶು ಪಾಲಾದಿಗಳು ದ್ವೇಷದಿಂದಲೂ, ಯಾದವರು ಬಂಧುತ್ವದಿಂದಲೂ, ಪಾಂ ಡವರಾದ ನೀವು ಸ್ನೇಹದಿಂದಲೂ, ಭಕ್ತಿಯಿಂದ ನಾವೂ ಆ ಕೃಷ್ಣನಲ್ಲಿ ಮನಸ್ಸನ್ನು ನೆಲೆಗೊಳಿಸಿ, ಪಾಪವಿಮುಕ್ತರಾದೆವು. ಆದರೆ ‹‹ಭಗವಂತನನ್ನು ದ್ವೇಷಿಸುತ್ತಿದ್ದರೂ, ಪೃಥುಚಕ್ರವರ್ತಿಯ ಮಗನಾದ ವೇನನೊಬ್ಬನಿಗೆಮಾ

ತ್ರ ಶಿಶುಪಾಲಾದಿಗಳಂತೆ ಮುಕ್ತಿಯುಂಟಾಗದೆ ಹೋದುದೇಕೆ?" ಎಂದು ನೀನು ಕೇಳಿದೆಯಲ್ಲವೆ? ಹಿಂದೆ ಹೇಳಿದ ಕಾಮದ್ವೇಷಾದಿಗಳೈದರಲ್ಲಿ ಯಾವುದಾದರೂ ಒಂದನ್ನು ದೃಢವಾಗಿ ಹಿಡಿದು, ಮನಸ್ಸನ್ನು ಭಗವಂತನಲ್ಲಿ ನಿಶ್ಚಲವಾಗಿ ನೆಲೆಗೊಳಿಸಿದರೆ, ಮುಕ್ತಿಯೇನೋ ಸಿದ್ಧವು*ವೇನನಾದರೋ ಈ ಐದರಲ್ಲಿ ಯಾವುದೊಂದನ್ನೂ ದೃಢವಾಗಿ ಹಿಡಿಯದೆ ವಿಷಯಾಸಕ್ತನಾಗಿ ಆಗಾಗ ಮಾತ್ರ ಭಗವಂತನನ್ನು ನಿಂದಿಸುತ್ತಿದ್ದುದರಿಂದ,ಅವನಿಗೆ ಅಧೋಗತಿಯುಂಟಾಯಿತು ಧರ್ಮರಾಜಾ! ನಿನ್ನ ಚಿಕ್ಕಮ್ಮನ ಮಕ್ಕಳಾದ ಶಿಶುಪಾಲದಂತವಕ್ತ್ರರು ಮುಕ್ತಿಹೊಂದುವುದಕ್ಕೆ ಬೇರೊಂದುಕಾರಣವೂ ಉಂಟು ಇವರಿಬ್ಬರೂ ಮೊದಲು ವೈಕುಂಠದಲ್ಲಿ ವಿಷ್ಣುವಿನ ದ್ವಾರಪಾಲಕರು! ಬ್ರಾಹ್ಮಣಶಾಪದಿಂದ ಹೀಗೆ ಹುಟ್ಟಿದರು ಅವರಿಗೆ ಈಗ ವಿಮೋಚನಕಾಲವು ಬಂದುದರಿಂದ ಸ್ವಸ್ಥಾನವನ್ನು ಸೇರಿದರು" ಎಂದನು. ಅದಕ್ಕಾ ಧರ್ಮರಾಜನು "ಓ ಮಹರ್ಷೀ! ಈ ವಿಷಯವೂ ನನಗೆ ವಿರುದ್ಧವಾಗಿಯೇ ತೋರುವುದು. ಸಂಸಾರಮುಕ್ತರಾಗಿ ಪರಮಪದವನ್ನು ಸೇರಿದವರಿಗೆ ಪುನರ್ಜನ್ಮವಿಲ್ಲವೆಂ

---

* ಇಲ್ಲಿ ಭಕ್ತಿಯೋಗದಂತೆಯೇ ವಿಷ್ಣುವಿನಲ್ಲಿ ಕ್ರೋಧ. ದ್ವೇಷ ಭಯಾದಿಗಳೂ ಮುಕ್ತಿಕಾರಣವೆಂದು ನಿರೂಪಿಸಲ್ಪಟ್ಟಿತು. ಈ ಭಕ್ತಿಗಿಂತಲೂ ಕಾಮಾದಿಗಳೇ ಶೀಘ್ರವಾಗಿ ಮುಕ್ತಿದಾಯಕಗಳೆಂದೂ ಸ್ಥಾಪಿಸಲ್ಪಟ್ಟಿತು ಹಾಗಿದ್ದರೂ ಭಕ್ತಿಯೋಗದಲ್ಲಿ ವಿಶೇಷವೊಂದುಂಟು. 'ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೆ"ಎಂದಾರಂಭಿಸಿ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಅರ್ಜುನನಿಗೆ ಉಪದೇಶಿಸಿರುವಂತೆ ಭಕ್ತಿಯೆಂಬುದು ಈ ಜನ್ಮದಲ್ಲಿ ಪ್ರಾರಂಭವಾಗಿ, ನಡುವೆ ಕಾರಣಾಂತರದಿಂದ ವಿಚ್ಛಿತ್ತಿಹೊಂದಿದರೂ ಅದು ಉತ್ತರೋತ್ತರಜನ್ಮಗಳಲ್ಲಿ ಕ್ರಮಕ್ರಮಶಾಗಿ ವೃದ್ಧಿಹೊಂದಿ ಫಲಕಾರಿಯಾಗುವುದೇಹೊರತು ವ್ಯರ್ಥವಾಗುವುದಿಲ್ಲ ಕಾಮದ್ವೇಷಾದಿಗಳಾದರೋ ಯಾವ ಜನ್ಮದಲ್ಲಿ ಆರಂಭಿಸಲ್ಪಡುವುದೋ ಅದರಲ್ಲಿಯೇ ಪರಿಪಾಕಾವಸ್ಥೆಯನ್ನು ಹೊಂದುವವರೆಗೆ ಅನುಸ್ಯೂತವಾಗಿ ನಡೆದುಬರಬೇಕು. ಹಾಗಿದ್ದಾಗಲೇ ಅವು ಮುಕ್ತಿಕಾರಣಗಳಾಗುವುವೇ ಹೊರತು ನಡುವೆ ಬಿಟ್ಟುಹೋದರೆ ಸ್ವರೂಪನಾಶಕ್ಕೆ ಕಾರಣವಾಗಿ,ಮತ್ತಷ್ಟು ಕೇಡನ್ನುಂಟುಮಾಡುವುವು. ಇವು ಭಕ್ತಿಯಂತೆ ಉತ್ತರೋತ್ತರ ಜನ್ಮದಲ್ಲಿ ವೃದ್ಧಿಯನ್ನು ಹೊಂದಲಾರವು. ಈ ಕಾರಣದಿಂದಲೇ ವೇನನಿಗೆ ನರಕವುಂಟಾಯಿತೆಂದು ತಿಳಿಯಬೇಕು.

ದುಶ್ರುತಿಗಳು ಹೇಳುವುವು. ಹೀಗಿರುವಾಗ, ನಿತ್ಯಸಿದ್ಧರಾಗಿ ಭಗವಂತನ ಪಾ ರ್ಶ್ವದಲ್ಲಿಯೇ ಇದ್ದವರಿಗೆ, ಪುನರ್ಜನ್ಮವೆಂದರೇನು? ಅವರಿಗೆ ಶಾಪವನ್ನು ಕೊಟ್ಟವರಾರು? ಆ ಶಾಪವೆಂತದು? ವೈಕುಂಠವಾಸಿಗಳಿಗೆ ಕರ್ಮಾಧೀನವಾ ದ ದೇಹೇಂದ್ರಿಯಾದಿಗಳೊಂದೂ ಇಲ್ಲವಷ್ಟೆ? ಅಂತವರಿಗೆ ದೇಹಸಂಬಂ ಧವೂ, ಅದರಮೂಲಕವಾದ ರಾಗದ್ವೇಷಾದಿಗಳೂ ಉಂಟಾದುದು ಅಸಂಗ ತವಲ್ಲವೆ? ಇದನ್ನು ವಿವರಿಸಿತಿಳಿಸಬೇಕು" ಎಂದನು. ಅದಕ್ಕಾನಾರದನು "ಧ ರ್ಮರಾಜಾ! ಕೇಳು! ಹಿಂದೊಮ್ಮೆ ಬ್ರಹ್ಮಪುತ್ರರಾದ ಸನಕಸನಂದನಾದಿಗ ಳು, ತ್ರೈಲೋಕ್ಯವನ್ನೂ ಸಂಚರಿಸುತ್ತ ವಿಷ್ಣುದರ್ಶನಾರ್ಥವಾಗಿ ವೈಕುಂ ಠಕ್ಕೆ ಹೋದರು. ಅವರು ಹಿರಿಯರಿಗಿಂತಲೂ ಹಿರಿಯರೆನಿಸಿಕೊಂಡಿದ್ದರೂ, ಐದಾರುವರುಷದ ಕುಮಾರರಂತೆಯೇ ಕಾಣಬರುತಿದ್ದರು ಈ ಮುನಿಕು ಮಾರರು ಮೈಮೇಲೆ ಬಟ್ಟೆಯಿಲ್ಲದೆ, ದಿಗಂಬರರಾಗಿ,ವೈಕುಂಠದ ಬಾಗಿಲನ್ನು ಪ್ರವೇಶಮಾಡುವಷ್ಟರಲ್ಲಿ,ಅಲ್ಲಿ ಕಾವಲಿದ್ದ ಜಯವಿಜಯರೆಂಬ ದ್ವಾರಪಾಲ ಕರಿಬ್ಬರೂ ಅವರನ್ನು,ಯಾರೋ ಅರಿಯದ ಮಕ್ಕಳೆಂದು ತಿಳಿದು,ತಡೆದು ನಿ ಲ್ಲಿಸಿದರು ಆಗ ಆಮುನಿಕುಮಾರರು ಬಹಳ ಕೋಪಾವಿಷ್ಟರಾಗಿ "ಎಲೈ ದುರಾತ್ಮರೆ! ಈ ನಿಮ್ಮಹೆಮ್ಮೆಯನ್ನೂ, ಕೋಪವನ್ನೂ ನೋಡಿದರೆ, ನೀವು ಕೇವಲರಜಸ್ತಮೋಗುಣವುಳ್ಳವರಂತೆ ಕಾಣುವಿರಿ ರಜಸ್ತಮೋಗುಣಗಳ ಪ್ರಸಕ್ತಿಯೇ ಇಲ್ಲದ ಈ ಭಗವಂತನ ಪಾದಮೂಲದಲ್ಲಿ ವಾಸಮಾಡುವುದ ಕ್ಕೆ ನೀವು ಯೋಗ್ಯರಲ್ಲ-ಈಗಲೇ ನೀವು ಪಾಪಪ್ರಚುರವಾದ ರಾಕ್ಷಸಯೋನಿ ಯಲ್ಲಿಜನಿಸಿರಿ"ಎಂದರು. ಆಮೇಲೆ ಆ ದ್ವಾರಪಾಲಕರಿಬ್ಬರೂ ಅವರಪಾದಗ ಳಲ್ಲಿಬಿದ್ದು, ಕ್ಷಮೆಯನ್ನು ಬೇಡಲು, ಆ ಋಷಿಗಳು ಮೂರುಜನ್ಮಗಳಮೇಲೆ ತಿರುಗಿ ವೈಕುಂಠವನ್ನು ಸೇರುವಂತೆ ಅವರಿಗೆ ಶಾಪವಿಮೋಚನವನ್ನೂ ಅ ನುಗ್ರಹಿಸಿದರು ಅದರಂತೆ ಆ ಜಯವಿಜಯರೇ ಮೊದಲು ಹಿರಣ್ಯಾಕ್ಷ, ಹಿ ರಣ್ಯಕಶಿಪುಗಳೆಂಬ ಹೆಸರಿನಿಂದ ದಿತಿಯ ಗರ್ಭದಲ್ಲಿ ಜನಿಸಿದರು, ಅವರಲ್ಲಿ ಹಿರಿಯವನಾದ ಹಿರಣ್ಯಕಶಿಪುವನ್ನು, ಭಗವಂತನು ನರಸಿಂಹಾವತಾರದಿಂ ದಲೂ, ತಮ್ಮನಾದ ಹಿರಣ್ಯಾಕ್ಷನನ್ನು ವರಾಹಾವತಾರದಿಂದಲೂ ಸಂ ಹರಿಸಿದನು ಹಿರಣ್ಯಕಶಿಪುವನ್ನು ಸಂಹರಿಸುವುದಕ್ಕೆ ಕಾರಣವನ್ನು ತಿ



1266. ವೈಕುಂಠದ್ವಾರದಲ್ಲಿ ಸನಕಾದಿಮುನಿಗಳು ಜಯವಿಜಯರಿಗೆ ಶಾಪವನ್ನು ಕೊಟ್ಟುದು.

ಳಿಸುವೆನು ಕೇಳು. ಹಿರಣ್ಯಕಶಿಪುವು, ತನ್ನ ಮಗನಾದ ಪ್ರಹ್ಲಾದನು ಕೇವಲ ವಿಷ್ಣುಭಕ್ತನಾಗಿರುವುದನ್ನು ನೋಡಿ, ಅವನನ್ನು ಕೊಲ್ಲಬೇಕೆಂದು ಎಷ್ಟೋವಿಧದಿಂದ ಹಿಂಸಿಸಿದನು. ಭಗವಂತನ ತೇಜೋಬಲದಿಂದ ಸುರಕ್ಷಿತನಾಗಿದ್ದ ಆ ಕುಮಾರನನ್ನು, ಯಾವವಿಧದಿಂದಲೂ ಕೊಲ್ಲುವುದಕ್ಕೆ ಸಾಧ್ಯವಿಲ್ಲದೆ ಹೋಯಿತು. ಇದೇ ನೆವದಿಂದ ಭಕ್ತವತ್ಸಲನಾದ ಭಗವಂತನು,ನೃಸಿಂಹಾವತಾರವನ್ನೆತ್ತಿ ಅವನನ್ನು ಸಂಹರಿಸಿದನು ಆ ಹಿರಣ್ಯಾಕ್ಷಹಿರಣ್ಯಕಶಿಪುಗಳೇ ವಿಶ್ರವಸ್ಸಿನ ಪತ್ನಿಯಾದ ಕೇಕಸಿಯ ಗರ್ಭದಲ್ಲಿ ತಿರುಗಿ ರಾವಣ ಕುಂಭಕರ್ಣರಾಗಿ ಹುಟ್ಟಿ,ಸಮಸ್ತಲೋಕಗಳನ್ನೂ ಬಾಧಿಸುತಿದ್ದರು. ಆಗ ಭಗವಂತನು ರಾಮಾವತಾರವನ್ನೆತ್ತಿ ಅವರನ್ನುಕೊಂದು, ಆಜನ್ಮದಿಂದ ದಾಟಿಸಿದನು. ಧರ್ಮರಾಜಾ! ಆ ರಾಮಚರಿತ್ರವನ್ನು ಮಾರ್ಕಂಡೇಯಮಹರ್ಷಿಯು ಮುಂದೆ ನಿನಗೆ ವಿವರವಾಗಿ ತಿಳಿಸುವನು. ಆ ರಾವಣಕುಂಭಕರ್ಣರೇ ಶಿಶುಪಾಲದಂತವಕ್ತ್ರರೆಂಬ ಹೆಸರಿಂದ ನಿನ್ನ ಚಿಕ್ಕಮ್ಮನ ಮಕ್ಕಳಾಗಿ ಹುಟ್ಟಿ, ಈಗ ಕೃಷ್ಣನ ಚಕ್ರಾಯುಧದಿಂದ ಹತರಾಗಿ ಶಾಪವಿಮೋಚನವನ್ನು ಹೊಂದಿದರು. ಅವರಿಗೆ ಕೃಷ್ಣನಲ್ಲಿದ್ದ ಜನ್ಮದ್ವೇಷವೇ ಮುಕ್ತಿಗೆ ಕಾರಣವಾಯಿತೆಂದು ತಿಳಿ." ಎಂದನು ಆಗ ಧರ್ಮರಾಜನು "ಓ ಮುನೀಂದ್ರಾ! ಹಿರಣ್ಯಕಶಿಪುವಿಗೆ ತನ್ನಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲಿ ಅಷ್ಟುದ್ವೇಷಬುದ್ಧಿಯೇಕೆ? ತಂದೆಗೆ ಸಮ್ಮತವಿಲ್ಲದಿದ್ದರೂ ಪಿತೃಭಕ್ತಿಯುಳ್ಳ ಪ್ರಹ್ಲಾದನು ಹರಿಭಕ್ತಿಯನ್ನೇ ಸಾಧಿಸಿದುದೇಕೆ? ರಾಕ್ಷಸಕುಲದಲ್ಲಿ ಹುಟ್ಟಿದ ಪ್ರಹ್ಲಾದನಿಗೆ ಅಷ್ಟು! ನಿಶ್ಚಲವಾದ ಹರಿಭಕ್ತಿಯು ಯಾವ ಕಾರಣದಿಂದುಂಟಾಯಿತು? ಆಚರಿತ್ರವನ್ನು ನನಗೆ ತಿಳಿಸಬೇಕು" ಎಂದನು ಇದು ಮೊದಲನೆಯ ಅಧ್ಯಾಯವು

---

## ಹಿರಣ್ಯಾಕ್ಷನವಧವನ್ನು ಕೇಳಿ ಹಿರಣ್ಯಕಶಿಪುವು ವಿಷ್ಣುವನ್ನು ಕೊಲ್ಲುವುದಾಗಿ ರಾಕ್ಷಸರಮುಂದೆ ಪ್ರತಿಜ್ಞೆ ಮಾಡಿದುದು

ರಾಜೇಂದ್ರಾ! ಕೇಳು! ತನ್ನ ಸಹೋದರನಾದ ಹಿರಣ್ಯಾಕ್ಷನು ವರಾಹಮೂರ್ತಿಯಿಂದ ಹತನಾದುದನ್ನು ಕೇಳಿದೊಡನೆ, ಹಿರಣ್ಯಕಶಿಪುವು ದುಃಖದಿಂದಲೂ, ಕೋಪದಿಂದಲೂ ಕುದಿಯುತಿದ್ದನು ಅವನ ಆತ್ಯಾಕ್ರೋಶವನ್ನು ಕೇಳಬೇಕೆ? ಕಟಕಟನೆ ಹಲ್ಲುಗಳನ್ನು ಕಡಿಯುವನು! ಆಗಾಗ ತುಟಿಗಳನ್ನು ಕಚ್ಚುವನು' ಕೋಪದುರಿಯಿಂದ ಹೊಗೆಯಾಡುವಂತೆ ಧೂಮ್ರವರ್ಣವಾದ ಆಕಾಶವನ್ನು ಆಗಾಗ ಕಣ್ಣೆತ್ತಿನೋಡುವನು! ಭಯಂಕರವಾದಕಣ್ಣಾಲೆಗಳನ್ನು ತಿರುಗಿಸುವನು! ಕೋರೆದಾಡೆಗಳಿಂದಲೂ, ಕ್ರೂರದೃಷ್ಟಿಯಿಂದಲೂ,ಹಣೆಯಲ್ಲಿ ನಿಗುರಿನಿಂತ ಹುಬ್ಬುಗಂಟುಗಳಿಂದಲೂ ನೋಡುವವರನ್ನು ನಡುಗಿಸುತ್ತ ಆ ಹಿರಣ್ಯಕಶಿಪುವು, ತನ್ನಶೂಲವನ್ನು ಕೈಗೆತ್ತಿಹಿಡಿದು, ರಾಕ್ಷಸ ಸಭೆಯನಡುವೆ ನಿಂತು "ಎಲೈ ದೈತ್ಯರೆ! ಎಲೈ ದಾನವರೆ! ನೀವೆಲ್ಲರೂ ಸಾವಧಾನವಾಗಿ ಕೇಳಿರಿ!" ಎಂದು ಆಸಭೆಯಲ್ಲಿದ್ದ ಸಮಸ್ತ ದೈತ್ಯದಾನವರನ್ನೂ ಎಚ್ಚರಿಸಿ, ಅಲ್ಲಿ ಪ್ರಮುಖರಾದ ತನ್ನ ಮಂತ್ರಿಸೇನಾಧಿಪತಿಗಳಲ್ಲಿ ಒಬ್ಬೊಬ್ಬರ ಹೆಸರನ್ನೂ ಕರೆದು ಹೇಳುವನು. "ಓ ತ್ರಿಮೂರ್ಧಾ!ತ್ರ್ಯಕ್ಷಾ! ಶಂಬರಾ! ಶತಬಾಹೂ' ಹಯಗ್ರೀವಾ! ನಮುಚೀ! ಪಾಕಾ! ಇಲ್ವಲಾ! ವಿಪ್ರಚಿತ್ತೀ' ಪುಲೋಮಾ! ಶಕುನಾ! ನೀವೊಬ್ಬೊಬ್ಬರೂ ನನ್ನ ಮಾತನ್ನು ಸಾವಧಾನವಾಗಿ ಕೇಳಿರಿ'ನಾನು ಹೇಳುವ ಕಾರ್ಯವನ್ನು ನೀವೆಲ್ಲರೂ ವಿಳಂಬವಿಲ್ಲದೆ ಬಹಳಶೀಘ್ರವಾಗಿ ನೆರವೇರಿಸಬೇಕು ವಿಷ್ಣುವು ದೇವದಾನವರೆಲ್ಲರನ್ನೂ ಸಮದೃಷ್ಟಿಯಿಂದ ನೋಡಬೇಕಾಗಿದ್ದರೂ, ಅಲ್ಪರಾದ ದೇವತೆಗಳಲ್ಲಿ ಪಕ್ಷಪಾತವನ್ನುವಹಿಸಿ, ನನಗೆ ಪ್ರಿಯಸಹೋದರನಾಗಿಯೂ, ನಿಮ್ಮೆಲ್ಲರಿಗೂ ಪರಮಾಪ್ತನಾಗಿಯೂ ಇದ್ದ ಹಿರಣ್ಯಾಕ್ಷನನ್ನು ಕೊಂದಿರುವನು. ದೇವತೆಗಳ ಮುಖಸ್ತುತಿಗೆ ಮರುಳಾಗಿ, ಕರುಣೆಯಿಲ್ಲದೆ ನಮಗೆ ಕೇಡನ್ನು ಮಾಡುತ್ತಿರುವನು ತಾನು ಸೂರ್ಯನಂತೆ ತೇಜೋಮಯವಾದ ಶರೀರವುಳ್ಳವನಾಗಿದ್ದರೂ, ತನ್ನ ಸಹಜಸ್ಥಿತಿಯನ್ನು ಬಿಟ್ಟು, ಕಪಟದಿಂದ ಕಾಡು

ಹಂದಿಯಾಗಿ ಬಂದು, ಈ ಘೋರಕೃತ್ಯವನ್ನು ನಡೆಸಿರುವನು, ಎಳೆಮಕ್ಕಳಂತೆ ಚಂಚಲಮನಸ್ಸುಳ್ಳವನಾಗಿ, ಮುಖಸ್ತುತಿಗೆ ಮರುಳಾಗತಕ್ಕ ಆ ವಿಷ್ಣುವನ್ನು ಹಿಡಿದು, ಅವನ ಕೊಬ್ಬನ್ನು ಮುರಿಯಬೇಕಾದುದೇ ಈಗ ನಮ್ಮ ಮೊದಲನೆಯಕಾರ್ಯವು ಆಕಾರ್ಯಭಾರವು ನನಗಿರಲಿ! ಇದೋ! ಈ ಶೂಲದಿಂದ ಅವನಕಂಠವನ್ನು ಕತ್ತರಿಸಿ, ಅದರಿಂದ ಹರಿಯುವ ರಕ್ತಪ್ರವಾಹದಿಂದ ರಕ್ತಪ್ರಿಯನಾದ ನನ್ನ ತಮ್ಮನಿಗೆ ತರ್ಪಣವನ್ನು ಬಿಟ್ಟು, ನನ್ನ ದುಃಖವನ್ನು, ತೀರಿಸಿಕೊಳ್ಳುವೆನು ಆ ವಿಷ್ಣುವೇ ನಮ್ಮ! ಶತ್ರುಗಳಾದ ಸಮಸ್ತದೇವತೆಗಳಿಗೂ ಮುಖ್ಯಾಶ್ರಯನಾಗಿರುವನು ದೇವತೆಗಳೆಲ್ಲರಿಗೂ ಆತನೇ ಪ್ರಾಣದಂತಿರುವನು! ಮೊದಲು ಅವನನ್ನು ಕೊಂದರೆ, ಬುಡವನ್ನು ಕಡಿದ ಮರದಲ್ಲಿ ಕೊಂಬೆಗಳೆಲ್ಲವೂ ತಾನಾಗಿ ಒಣಗಿಬೀಳುವಂತೆ, ದೇವತೆಗಳೆಲ್ಲರೂ ಮೃತಪ್ರಾಯರಾಗುವರು. ಆದರೆ ನಾನು ಈ ಕಾರ್ಯವನ್ನು ನಡೆಸುವಷ್ಟರಲ್ಲಿ ನೀವು ನಡೆಸಬೇಕಾದ ಕೆಲವು ಕಾರ್ಯಗಳುಂಟು. ನೀವೆಲ್ಲರೂ ಈಗಲೇ ಭೂಲೋಕಕ್ಕೆ ಹೊರಡಿರಿ! ಅಲ್ಲಿ ಬ್ರಾಹ್ಮಣರೂ, ಕ್ಷತ್ರಿಯರೂ ತುಂಬಿರುವರು ಅವರೆಲ್ಲರೂ ತಪಸ್ಸು, ಯಜ್ಞ, ವೇದಾಧ್ಯಯನ, ವ್ರತ, ದಾನ, ಮೊದಲಾದ ವೈದಿಕಕರ್ಮಗಳಿಂದ, ದೇವತೆಗಳ ಹೆಮ್ಮೆಯನ್ನು ಹೆಚ್ಚಿಸುತ್ತಿರುವರು ಆದುದರಿಂದ ನೀವು ಅಲ್ಲಲ್ಲಿ ತಪಸ್ವಿಗಳಾದ ಬ್ರಾಹ್ಮಣರನ್ನೂ, ಯಜ್ಞಶೀಲರಾದ ಕ್ಷತ್ರಿಯರನ್ನೂ, ವ್ರತನಿಷ್ಠರನ್ನೂ ಹುಡುಕಿ ಕೊಲ್ಲುತ್ತ ಬನ್ನಿರಿ! "ಆದರೆ ನಮ್ಮಲ್ಲಿ ನಿರಪರಾಧಿಗಳಾದ ಗೋಬ್ರಾಹ್ಮಣರನ್ನು ಕೊಲ್ಲಬಹುದೆ?" ಎಂದು ನೀವು ಸಂದೇಹಿಸಬೇಡಿರಿ! ಆ ಬ್ರಾಹ್ಮಣರು ನಡೆಸತಕ್ಕ ಯಜ್ಞ, ಯಾಗ, ತಪಸ್ಸು ಮೊದಲಾದ ಕರ್ಮಗಳೇ ಆ ವಿಷ್ಣುವಿಗೆ ಶರೀರವೆನಿಸಿಕೊಂಡಿರುವುವು. ಸಮಸ್ತಧರ್ಮಗಳೂ ಅವನ ಸ್ವರೂಪವು. ದೇವತೆಗಳನ್ನೂ, ಪಿತೃದೇವತೆಗಳನ್ನೂ, ಋಷಿಗಳನ್ನೂ ಉದ್ದೇಶಿಸಿ ನಡೆಸತಕ್ಕ ಧರ್ಮಗಳೆಲ್ಲವೂ ಅವನನ್ನೇ ಸೇರುವುವು ಆದುದರಿಂದ ನೀವು ಬ್ರಾಹ್ಮಣರನ್ನೂ, ಅವರು ನಡೆಸತಕ್ಕ ಯಜ್ಞಾದಿಕರ್ಮಗಳನ್ನೂ ನಾಶಮಾಡುತ್ತಬಂದರೆ ವಿಷ್ಣುವಿನ ಶಕ್ತಿಯೂ ಕುಂದುತ್ತಬರುವುದು. ಯಜ್ಞಗಳನ್ನು ಕೆಡಿಸುವುದರಿಂದ ದೇವತೆಗಳೂ ಅನ್ನವಿಲ್ಲದೆ ಸಾಯುವರು. ಆದುದರಿಂದ ನೀವು ಭೂಲೋಕದಲ್ಲಿ ಎಲ್ಲೆಲ್ಲಿ

ಗೋಬ್ರಾಹ್ಮಣರಿರುವರೋ, ಎಲ್ಲೆಲ್ಲಿ ವೇದಾಧ್ಯಯನಗಳು ನಡೆಯುವುವೋ, ಎಲ್ಲೆಲ್ಲಿ ವರ್ಣಾಶ್ರಮಧರ್ಮಗಳೂ, ಯಜ್ಞಾದಿಕರ್ಮಗಳೂ ನಡೆಸಲ್ಪಡುವು ವೋ, ಆಯಾಸ್ಥಳಗಳನ್ನು ಹುಡುಕಿ, ಅವುಗಳನ್ನು ಧ್ವಂಸಮಾಡಿರಿ! ಅಂತಹ ಸ್ಥಳಗಳನ್ನು ಸುಟ್ಟುಬಿಡಿರಿ! ಕಣ್ಣಿಗೆ ಬಿದ್ದವರನ್ನು ಕತ್ತರಿಸಿರಿ!" ಎಂದನು ಈಮಾತನ್ನು ಕೇಳಿದೊಡನೆ ರಾಕ್ಷಸಭಟರೆಲ್ಲರೂ ಆ ರಾಜಾಜ್ಞೆಯನ್ನು ಶಿರಸಾ ವಹಿಸಿ, ಭೂಲೋಕಕ್ಕೆ ಹೊರಟುಬಂದರು ಅಲ್ಲಲ್ಲಿ ಕಂಡಕಂಡವರೊಡನೆ ಕಲಹವನ್ನು ತೆಗೆಯುತ್ತ ಪ್ರಜೆಗಳನ್ನು ಕೊಲ್ಲುತ್ತಬಂದರು ಕೆಲವರು ಪಟ್ಟಣಗಳನ್ನೂ, ಗ್ರಾಮಗಳನ್ನೂ, ಗೋಮಾಳಗಳನ್ನೂ, ತೋಟಗಳ ನ್ನೂ, ಪುಣ್ಯಕ್ಷೇತ್ರಗಳನ್ನೂ, ಹೊಲಗದ್ದೆಗಳನ್ನೂ, ಋಷ್ಯಾಶ್ರಮಗಳನ್ನೂ ಗಣಿಗಳನ್ನೂ, ತೋಪುಗಳನ್ನೂ, ಕೃಷಿಮಾಡತಕ್ಕವರ ನಿವಾಸಗಳನ್ನೂ, ಬೆ ಟ್ಟದ ತಪ್ಪಲಲ್ಲಿರುವ ಗ್ರಾಮಗಳನ್ನೂ, ಬೇಡರ ಹಳ್ಳಿಗಳನ್ನೂ, ರಾಜಧಾ ನಿಗಳನ್ನೂ, ಇನ್ನೂ ಅಲ್ಲಲ್ಲಿರುವ ಸಂದಿಗೊಂದಿಗಳನ್ನೂ ಪ್ರವೇಶಿಸಿ, ಕಂಡ ಕಂಡಕಡೆಗೆ ಬೆಂಕಿಯಿಟ್ಟು ಸುಡುತ್ತಬಂದರು. ಅಲ್ಲಲ್ಲಿ ಕೆಲವರು ಸೇತುವೆ ಗಳನ್ನೂ, ಪ್ರಾಕಾರಗಳನ್ನೂ, ಗೋಪುರಗಳನ್ನೂ ಇಡಿದು ಕೆಡಹುತ್ತಬಂ ದರು ಕೆಲವರು ಫಲವೃಕ್ಷಗಳನ್ನು ಕೊಡಲಿಯಿಂದ ಕತ್ತರಿಸಿಕೆಡಹಿದರು. ಕೆಲವರು ಮನೆಮನೆಗೆ ಬೆಂಕಿಯಿಡುತಿದ್ದರು ಕೆಲವರು ಕಂಡಕಂಡ ಜನರ ನ್ನು ಕೊಳ್ಳಿಗಳಿಂದ ಸುಡುತಿದ್ದರು ಹೀಗೆ ರಾಕ್ಷಸರೆಲ್ಲರೂ ಅಲ್ಲಲ್ಲಿ ಗುಂಪು ಕಟ್ಟಿ, ಲೋಕಕಂಟಕರಾಗಿ ತಿರುಗುತ್ತಿರುವುದನ್ನು ನೋಡಿ ದೇವತೆಗ ಳೆಲ್ಲರೂ ಭಯಪೀಡಿತರಾಗಿ, ಆ ಬಾಧೆಯನ್ನು ತಡೆಯಲಾರದೆ ಸ್ವರ್ಗವನ್ನು ಬಿಟ್ಟು ಭೂಮಿಗೆ ಬಂದು, ಯಾರ ಕಣ್ಣಿಗೂ ಬೀಳದೆ ಅದೃಶ್ಯರಾಗಿ ಸಂಚರಿ ಸುತಿದ್ದರು. ಇತ್ತಲಾಗಿ ಹಿರಣ್ಯಕಶಿಪುವು, ತನ್ನ ತಮ್ಮನ ಮರಣಕ್ಕಾ ಗಿ ದುಃಖಿಸುತ್ತ, ಅವನಿಗೆ ತಾನು ನಡೆಸಬೇಕಾದ ಪ್ರೇತಕಾರ್ಯಗಳೆಲ್ಲವ ನ್ನೂ ಮುಗಿಸಿದನು ಹಿರಣ್ಯಕಶಿಪುವು ಅಷ್ಟು ಕ್ರೂರಸ್ವಭಾವವುಳ್ಳವ ನಾದರೂ, ದೇಶಕಾಲಗಳನ್ನು ಬಲ್ಲವನಾದುದರಿಂದ, ತನ್ನ ತಮ್ಮನ ಮರ ಣಕ್ಕಾಗಿ ದುಃಖಿಸುತಿದ್ದ ಬಂಧುವರ್ಗದವರೆಲ್ಲರನ್ನೂ ತಾನೇ ಸಮಾ ಧಾನಗೊಳಿಸುವುದಕ್ಕೆ ತೊಡಗಿದನು ಶಕುನಿ, ಶಂಬರ, ಧೃಷ್ಟ, ಭೂತ

ಸಂತಾಪನ, ವೃಕ, ಕಾಲನಾಭ, ಮಹಾನಾಭ,ಹರಿಶ್ಮಶ್ರು, ಮದೋತ್ಕಟ ರೆಂಬ ಹಿರಣ್ಯಾಕ್ಷನ ಮಕ್ಕಳನ್ನೂ, ಅವರ ತಾಯಿಯಾದ ರುಷದ್ಭಾನುವ ನ್ನೂ,ಪುತ್ರಶೋಕದಿಂದ ದುಃಖಿಸುತಿದ್ದ ತನ್ನ ತಾಯಿಯಾದ ದಿತಿಯನ್ನೂ ಕರೆದು,ಅವರನ್ನು ಹೀಗೆಂದು ಸಾಂತ್ವವಚನಗಳಿಂದ ಸಮಾಧಾನಪಡಿಸುವನು "ಓ ಅಮ್ಮಾ!ಓ ನಾದಿನೀ!ಎಲೈ ಕುಮಾರರೆ! ವೀರಸ್ವರ್ಗವನ್ನು ಹೊಂದಿದ ಹಿರಣ್ಯಾಕ್ಷನಿಗಾಗಿ ನೀವು ಸ್ವಲ್ಪಮಾತ್ರವೂ ದುಃಖಿಸಬಾರದು! ಶತ್ರುವನ್ನಿ ದಿರಿಸಿ ಅವರ ಕೈಯಿಂದ ಸಾಯುವುದಕ್ಕಿಂತಲೂ ಶೂರರಿಗೆ ಪ್ರಿಯತಮವಾ ದುದು ಬೇರೊಂದಿಲ್ಲ ನನ್ನ ತಮ್ಮನಿಗೆ ಆವಿಧವಾದ ಮರಣವು ಸಂಭವಿಸಿದು ದಕ್ಕಾಗಿ ನಾವು ಸಂತೋಷಿಸಬೇಕೇಹೊರತು, ದುಃಖಿಸುವುದುಂಟೆ?ನಾನಾ ಕಡೆಗಳಿಂದ ಬರತಕ್ಕ ಪ್ರಯಾಣಿಕರು,ದಾರಿಯಲ್ಲಿರುವ ಅನ್ನಸತ್ರಗಳಲ್ಲಿಯೂ ಅರವಟಿಗೆಗಳಲ್ಲಿಯೂ ಕ್ಷಣಕಾಲದವರೆಗೆ ಒಂದಾಗಿ ಕಲೆತಿದ್ದು,ತಮ್ಮತಮ್ಮ, ಅನ್ನಪಾನಾದಿಗಳ ಆತುರವು ತೀರದಮೇಲೆ, ನಾನಾಕಡೆಗೆ ಚದರಿಹೋಗು ವರಲ್ಲವೆ?ಅದರಂತೆಯೇ ಪ್ರಾಣಿಗಳೂಕೂಡ,ತಮ್ಮತಮ್ಮ ಕರ್ಮಾನುಸಾರವಾ ಗಿ ಈಶ್ವರಸಂಕಲ್ಪದಿಂದ ಒಂದಾಗಿ ಸೇರಿಸಲ್ಪಟ್ಟಿದ್ದು, ಕರ್ಮಾವಸಾನದಲ್ಲಿ ಚ ದರಿಸಲ್ಪಡುವುವು. ತಂದೆಮಕ್ಕಳು, ಗಂಡಹೆಂಡಿರು ಮೊದಲಾದ ಸಂಸಾರ ಸಂಬಂಧಗಳೆಲ್ಲವೂ ಆಗಂತುಕವಾಗಿ ಬಂದು, ಸ್ವಲ್ಪಕಾಲವಿದ್ದು ತಪ್ಪಿಹೋ ಗತಕ್ಕವುಗಳೇಹೊರತು ಸ್ಥಿರವಲ್ಲ ! ಆತ್ಮವೆಂಬುದು ನಿತ್ಯವು. ಆ ಆತ್ಮ ನಿಗೆ ಕರ್ಮಾನುಸಾರವಾಗಿ ಬೇರೆಬೇರೆ ಶರೀರಗಳು ತಗುಲುಕಟ್ಟಿದಾಗ, ಈ ಸಂಬಂಧಗಳೆಲ್ಲವೂ ಏರ್ಪಡುವುವು. ಕರ್ಮಾಂತದಲ್ಲಿ ಆಶರೀರವು ಬಿಟ್ಟು ಹೋ ದಾಗ, ಈ ಸಂಬಂಧವೂ ಬಿಟ್ಟುಹೋಗುವುದು ದೇಹಕ್ಕೆ ಎಂದಿದ್ದರೂ ನಾಶವುಂಟು! ಆತ್ಮಕ್ಕೆ ಯಾವಾಗಲೂ ನಾಶವಿಲ್ಲ! ಹೀಗಿರುವಾಗ ದೇಹವ ನ್ನೇ ಆತ್ಮವೆಂದು ಭ್ರಮಿಸತಕ್ಕ ಮೂಢರಲ್ಲವೇ ಈ ದೇಹವಿಯೋಗಕ್ಕಾಗಿ ದುಃಖಿಸಬೇಕು! ಉತ್ಪತ್ತಿವಿನಾಶಗಳೆಂಬ ವಿಕಾರಗಳೆಲ್ಲವೂ ಪ್ರಕೃತಿಗೇಹೊ ರತು ಆತ್ಮನಿಗಿಲ್ಲ ಆತ್ಮವು ಆ ಪ್ರಕೃತಿಗಿಂತಲೂ ಬೇರೆಯಾಗಿ, ಆ ಪ್ರಕೃತಿ ಯವಿಕಾರಗಳೊಂದಕ್ಕೂ ಈಡಾಗದುದರಿಂದ ಶುದ್ಧವೆನಿಸಿರುವುದು ಆತ್ಮವು ಜ್ಞಾನಸ್ವರೂಪವಾದುದರಿಂದ ಎಲ್ಲಾಕಡೆಗೂ ವ್ಯಾಪಿಸಿ, ಎಲ್ಲವನ್ನೂ ತಿ

ಳಿಯಬಲ್ಲುದು. ಆತ್ಮವು ಸಹಜಸ್ಥಿತಿಯಲ್ಲಿ ಹೀಗೆ ಶುದ್ಧವಾಗಿದ್ದರೂ, ಕರ್ಮಾ
ನುಸಾರವಾಗಿ ಸತ್ವಾದಿಗುಣಗಳನ್ನು ಹೆಚ್ಚಿಸಿಕೊಂಡು, ಬೇರೆಬೇರೆ ಶರೀರಗ
ಳನ್ನು ಹೊಂದುವುದು. ಹೀಗೆ ಕರ್ಮಾನುಗುಣವಾಗಿ ತಗುಲುಕಟ್ಟಿದ ಮೇಲಿ
ನ ಶರೀರವನ್ನು ನೋಡಿ“ನಾನು ದೇವನು! ನಾನು ಮನುಷ್ಯನು”ಎಂದು ತಿಳಿ
ಯುವುದು ಕೇವಲಭ್ರಮವಲ್ಲವೆ? ಕೊಳದ ನೀರು ಕದಲಿದಾಗ, ಅದರಲ್ಲಿ ಪ್ರ
ತಿಫಲಿಸಿದ ವೃಕ್ಷಗಳೂ ಕದಲಿದಂತೆ ಕಾಣುವುವು. ಮನುಷ್ಯನು ಗಿರಗಿರನೆ
ಸುತ್ತುವಾಗ ಕಣ್ಣಾಲೆಗಳುಸುತ್ತುವುದರಿಂದ.ಭೂಮಿಯೆಲ್ಲವೂ ಸುತ್ತುವಂತೆ
ಕಾಣುವುದು. ಹೀಗೆ ಸ್ಥಿರವಾಗಿ ನಿಂತಿರುವ ವೃಕ್ಷಗಳಲ್ಲಿಯೂ, ಭೂಮಿಯಲ್ಲಿ
ಯೂ, ಮತ್ತೊಂದರ ಸಂಬಂಧದಿಂದ ಚಲನಭ್ರಾಂತಿಯುಂಟಾಗುವಂತೆ
ಜೀವನು ದೇಹಕ್ಕಿಂತಲೂ ತಾನು ಬೇರೆಯಾಗಿದ್ದರೂ ಯಾವಾಗಲೂ ವಿಷ
ಯಾಸಕ್ತವಾದ ಮನಸ್ಸಿನ ಸಂಬಂಧದಿಂದ ಆ ದೇಹವೇ ತಾನೆಂದು ತಿಳಿ
ದು “ನಾನು ದೇವನು, ನಾನು ಮನುಷ್ಯನು” ಎಂದು ಭ್ರಮಿಸುವನು.

ಶರೀರಕ್ಕಿಂತಲೂ ತಾನು ಬೇರೆಯಾಗಿದ್ದರೂ ಆ ಶರೀರವು ತನಗೆಸಹ
ಜವೆಂದೇ ಎಣಿಸುವನು ಹೀಗೆ ಭಾವಿಸುವುದು ಮನಸ್ಸಿನಲ್ಲಿ ಹುಟ್ಟಿದವಿಪ
ರೀತಭಾವನೆಯೇ ಹೊರತು ಬೇರೆಯಲ್ಲ ಈ ವಿಧವಾದ ಕೋರಿಕೆಯೇ ಕರ್ಮ
ಪ್ರಾಪ್ತವಾದ ಸಂಸಾರವೆನಿಸುವುದು ಈ ಭಾವನೆಯೇ ಇಷ್ಟಾನಿಷ್ಟವಸ್ತು
ಗಳ ಸಂಯೋಗವಿಯೋಗಗಳಲ್ಲಿ ಸುಖದುಃಖಗಳನ್ನುಂಟುಮಾಡುವುದು.
ಹುಟ್ಟು, ಸಾವು,ನಾನಾಬಗೆಯ ದುಃಖಗಳು,ವಿವೇಕಹೀನತೆ, ವಿಷಯಚಿಂತೆ,
ಸನ್ಮಿತ್ರರ ಬೋಧನೆಯಿಂದ ವಿವೇಕವು ಹುಟ್ಟಿದಮೇಲೆಯೂ ಅದನ್ನು
ಮರೆತು ವಿಪರೀತಕಾರ್ಯದಲ್ಲಿ ಪ್ರವರ್ತಿಸುವುದು, ಈ ಮೊದಲಾದುವೆಲ್ಲವೂ
ಕರ್ಮಪ್ರಾಪ್ತವಾದ ಸಂಸಾರದಲ್ಲಿಯೇ ಸೇರುವುವು. ಅಮ್ಮ! ಈ ವಿಷಯ
ದಲ್ಲಿ ಯಮನಿಗೂ, ಸತ್ತವನೊಬ್ಬನ ಬಂಧುಗಳಿಗೂ ನಡೆದ ಸಂವಾದರೂ
ಪವಾದ ಪೂರ್ವಕಥೆಯೊಂದುಂಟು ಅದನ್ನು ಹೇಳುವೆನು ಕೇಳಿರಿ!
“ಮೊದಲು ಉಶೀನರದೇಶಗಳಲ್ಲಿ ಸುಯಜ್ಞನೆಂದು ಪ್ರಸಿದ್ಧನಾದ ರಾಜ
ನೊಬ್ಬನಿದ್ದನು. ಅವನು ಒಂದಾನೊಂದು ಯುದ್ಧದಲ್ಲಿ ಶತ್ರುಗಳಿಂದ
ಹತನಾಗಿ ಸತ್ತುಬಿದ್ದನು ಅವನ ಬಂಧುಗಳೆಲ್ಲರೂ ಇದನ್ನು ಕೇಳಿ, ಆ ಶವದ

ಸುತ್ತುಮುತ್ತಲೂ ಸೇರಿ ಅಳುವುದಕ್ಕಾರಂಭಿಸಿದರು. ರಾಜನ ದೇಹವು ರಣರಂಗದಲ್ಲಿ ಮರದ ತುಂಡಿನಂತೆ ನಿಶ್ಚೇಷ್ಟವಾಗಿ ಬಿದ್ದಿದ್ದಿತು.ಅವನುತೊಟ್ಟಿದ್ದ ರತ್ನಕವಚಗಳು ಹರಿದುಹೋಗಿ, ಅವನು ಧರಿಸಿದ್ದ ಆಭರಣಗಳೂ, ಪುಷ್ಪಮಾಲಿಕೆಗಳೂ ಕದಲಿಬಿದ್ದಿದ್ದುವು ಎದೆಯಲ್ಲಿ ತೀಕ್ಷ್ಣಬಾಣಗಳು ನಾಟಿಕೊಂಡಿದ್ದುವು. ಅವನ ಸರ್ವಾವಯವಗಳಿಂದಲೂ ರಕ್ತವು ಸುರಿಯುತಿತ್ತು. ಹಲ್ಲುಗಳಿಂದ ತುಟಿಯನ್ನು ಕಚ್ಚಿ, ತಲೆಕೆದರಿ, ಕೆಳಗೆ ಬಿದ್ದಿದ್ದನು. ಕಣ್ಣಾಲೆಗಳು ಮೇಲೆನಾಟಿಕೊಂಡಿದ್ದುವು. ಕಮಲದಂತೆ ಮನೋಹರವಾದ ಅವನ ಮುಖವೆಲ್ಲವೂ ಧೂಳಿನಿಂದ ಮುಚ್ಚಿದ್ದಿತು ಆಯುಧಸಹಿತವಾಗಿದ್ದ ಅವನ ಭುಜವು ತುಂಡಾಗಿ ಬಿದ್ದಿದ್ದಿತು. ಹೀಗೆ ದೈವಗತಿಯಿಂದ ಮೃತನಾಗಿ ರಣರಂಗದಲ್ಲಿ ಆ ರಾಜನನ್ನು ನೋಡಿ, ಅವನ ಪತ್ನಿಯರೆಲ್ಲರೂ ದುಃಖದಿಂದ ಎದೆಯನ್ನು ಬಡಿದುಕೊಳ್ಳುತ್ತ "ಅಯ್ಯೋ ಕೆಟ್ಟೆವಲ್ಲಾ ! ಇನ್ನೇನುಗತಿ" ಎಂದು ಅವನ ಕಾಲ ಕೆಳಗೆ ಬಿದ್ದು ರೋದಿಸುವುದಕ್ಕೆ ತೊಡಗಿದರು ಧಾರೆಧಾರೆಯಾಗಿ ಹರಿಯುವ ಕಣ್ಣೀರಿನಿಂದ ಅವರ ಸ್ತನದ ಮೇಲಿನ ಕುಂಕುಮಗಳೆಲ್ಲವೂ ಕದಲಿ ಬೀಳುತಿದ್ದುವು ತಮ್ಮ ದುಃಖಬಾಷ್ಪದಿಂದಲೇ ಪತಿಯ ಪಾದವನ್ನು ತೊಳೆಯುವಂತೆ, ಆತನ ಪಾದಸಮೀಪದಲ್ಲಿಕುಳಿತು, ತಲೆಯನ್ನು ಬಿಚ್ಚಿ ಕದಲಿಬಿದ್ದ ವಸ್ತ್ರಾಭರಣಗಳನ್ನೂ ತಿಳಿಯದೆ, ತಮ್ಮ ರೋದನದಿಂದ ನೋಡುವವರಿಗೆ ಮತ್ತಷ್ಟು ದುಃಖವನ್ನು ಹೆಚ್ಚಿಸುತ್ತ ಹೀಗೆಂದು ವಿಲಪಿಸುವರು."ಹಾ!ನಾಥಾ'ನಿಷ್ಕರುಣವಾದ ದೈವವು ನಿನಗೆ ಈ ಅವಸ್ಥೆಯನ್ನು ತಂದಿಟ್ಟಿತೆ?ಕ್ರೂರದೈವವು ನಮ್ಮ ಕಣ್ಣಿಗೆ ಕಾಣಿಸದಂತೆ ನಿನ್ನನ್ನು ಸಾಗಿಸಿತಲ್ಲಾ? ಈ ಉಶೀನರದೇಶದ ಸಮಸ್ತಪ್ರಜೆಗಳಿಗೂ ಜೀವನವನ್ನು ಕಲ್ಪಿಸಿ ಸಂತೋಷಗೊಳಿಸುತಿದ್ದ ನೀನು,ಎಲ್ಲರನ್ನೂ ಹೀಗೆ ದುಃಖಸಾಗರದಲ್ಲಿ ಮುಳುಗಿಸಿ, ಬಿಟ್ಟುಹೋಗುವುದು ಯುಕ್ತವೆ ? ನಮ್ಮೆಲ್ಲರಿಗೂ ಅತ್ಯಂತಪ್ರಿಯನಾಗಿಯೂ,ಕೃತಜ್ಞನಾಗಿಯೂ ಇದ್ದ ನಿನ್ನನ್ನು ಬಿಟ್ಟು ಇನ್ನುಮೇಲೆ ನಾವು ಹೇಗೆ ಬದುಕಬಲ್ಲೆವು?ಹೇಪ್ರಭೋ'ನೀನೆಲ್ಲಿಗೆ ಹೋಗುವೆಯೋ! ನಾವೂ ಅಲ್ಲಿಗೇ ಬಂದು ನಿನ್ನಪಾದಸೇವೆಯನ್ನು ಮಾಡುತ್ತಿರುವೆವು. ನಮಗೂ ನಿನ್ನೊಡನೆ ಸಹಗಮನವನ್ನು ಕೊಡು" ಎಂದು ಹೇಳುತ್ತಾ

ಆ ರಾಜನ ಮೃತದೇಹವನ್ನು ಬಾರಿಬಾರಿಗೂ ಅಪ್ಪಿಕೊಂಡು, ಅದನ್ನು ಬಿಡ ಲಾರದೆ, ಅದಕ್ಕೆ ನಡೆಸಬೇಕಾದ ದಹನಸಂಸ್ಕಾರಗಳನ್ನೂ ನಡೆಸಲಾರದೆ ಅಳುತಿದ್ದರು ಇಷ್ಟರಲ್ಲಿ ಸೂರ್ಯನು ಅಸ್ತಂಗತನಾದನು. ಹೀಗೆ ಆ ರಾಜನ ಬಂಧುಗಳೆಲ್ಲರೂ ಉಚ್ಚಧ್ವನಿಯಿಂದ ಗೋಳಿಡುತ್ತಿರುವುದನ್ನು ಕೇ ಳಿ, ಯಮನು, ಬಬ್ಬಬಾಲಕನ ವೇಷದಿಂದ ಅಲ್ಲಿಗೆ ಬಂದು, ಅವರಮುಂದೆ ಹೀಗೆಂದು ಹೇಳುವನು “ಅಯ್ಯೋ ಇದೇನಾಶ್ಚರ್ಯವು! ಇವರೆಲ್ಲರೂ ವಯ ಸ್ಸಿನಲ್ಲಿ ನನಗಿಂತಲೂ ಎಷ್ಟೋ ದೊಡ್ಡವರು ಲೋಕದಲ್ಲಿ ಪ್ರತಿದಿನ ವೂ ನಡೆಯುತ್ತಿರುವ ಜನನಮರಣಗಳನ್ನು ಎಷ್ಟೋಕಡೆಯಲ್ಲಿ ನೋ ಡಿ ತಿಳಿದವರು. ಹೀಗೆ ಬಹುಕಾಲದ ಅನುಭವವುಳ್ಳವರಾಗಿದ್ದರೂ ಇ ವರಿಗೆ ಇನ್ನೂ ಮೋಹವು ತಪ್ಪಲಿಲ್ಲವಲ್ಲಾ ! ಆಹಾ ! ಇದಲ್ಲವೇ ಆಶ್ಚರ್ಯ ವು ! ಭೂಮಿಯಲ್ಲಿ ಹುಟ್ಟಿದಮೇಲೆ ಪ್ರಾಣಿಗಳಿಗೆ ಅಲ್ಲಿಯೇ ಸಾಯ ಬೇಕಾದುದು ಸಹಜಧರ್ಮವೆಂಬುದನ್ನೂ, ತಾವೂ ಇದರಂತೆಯೇ ಈ ಗಲೋ! ನಾಳೆಯೋ ಸಾಯತಕ್ಕವರೆಂಬುದನ್ನೂ, ಚೆನ್ನಾಗಿ ತಿಳಿದೂ ಇವರು ಈಗ ಸತ್ತ ಮನುಷ್ಯನಿಗಾಗಿ ದುಃಖಿಸುತ್ತಿರುವರಲ್ಲಾ!ಇದನ್ನು ನೋ ಡಿದರೆ ಅರಿಯದಮಕ್ಕಳಾಗಿದ್ದರೂ ನಾವೇ ಧನ್ಯರಲ್ಲವೆ?ತಂದೆತಾಯಿಗಳಿಲ್ಲದ ತಬ್ಬಲಿಗಳಾಗಿದ್ದರೂ ನಾವು ಸ್ವಲ್ಪಮಾತ್ರವೂ ದುಃಖಿಸದೆ,ಅವರ ಚಿಂತಯ ನ್ನೇ ಬಿಟ್ಟಿರುವೆವು ಇದೂ ಹಾಗಿರಲಿ! ನಾವು.ಕೈಲಾಗದ ಸಣ್ಣಮಕ್ಕಳಾಗಿ ದ್ದರೂ, ಹುಲಿ, ತೋಳ, ಮೊದಲಾದ ಕಾಡುಮೃಗಗಳ ಬಾಯಿಗೆ ತುತ್ತಾಗ ದೆ,ಈಅರಣ್ಯದಲ್ಲಿನಿರ್ಭಯವಾಗಿಸುತ್ತುತ್ತಿರುವೆವಲ್ಲವೆ?ತಾಯಿಯಗರ್ಭದಲ್ಲಿ ರ ಕ್ಷಿಸಿದ ಭಗವಂತನೇ ಈಗಲೂ ನಮ್ಮನ್ನು ರಕ್ಷಿಸುತ್ತಿರುವನು ಅವನಿಗೆ ಮನ ಸ್ಸು ಬಂದಾಗನಮ್ಮನ್ನು ತೀರಿಸಿಬಿಡುವನು ಇದಕ್ಕಾಗಿ ನಮಗೆವಿಚಾರವೇಕೆ? ಓಸ್ತ್ರೀಯರೆ! ಯಾವನು, ತಾನುಮಾತ್ರ ಎಂದೆಂದಿಗೂ ನಾಶವಿಲ್ಲದವನಾಗಿ ದ್ದು, ತನ್ನ ಸಂಕಲ್ಪದಿಂದಲೇ ಈ ಪ್ರಪಂಚವನ್ನು ಸೃಷ್ಟಿಸುವನೋ, ಸೃಷ್ಟಿಸಿದ ಪ್ರಪಂಚವನ್ನು ತಾನೇ ರಕ್ಷಿಸುತ್ತಿರುವನೋ, ಕೊನೆಗೆ ಅವೆಲ್ಲವನ್ನೂ ತಾನೇ ನಾಶಮಾಡುವನೋ ಆಭಗವಂತನು ಎಲ್ಲೆಲ್ಲಿಯೂ ಅಂತರ್ಯಾಮಿಯಾಗಿ ನೆಲೆಗೊಂಡಿರುವನು ಚರಾಚರಾತ್ಮಕವಾದಈಪ್ರಪಂಚ

ಪ್ರಪಂಚವೂ ಅವನಿಗೆಕ್ರೀಡಾಸಾಮಗ್ರಿಗಳಾಗಿರುವುವು.ನಿಗ್ರಹಿಸುವುದಕ್ಕೂ ಅನುಗ್ರಹಿಸುವುದಕ್ಕೂ ಅವನೊಬ್ಬನೇ ಸಮರ್ಥನು. ಹೀಗಿರುವಾಗ ನೀವು ಸತ್ತವರನ್ನು ನೋಡಿ ಅಳುವುದೇಕೆ! ಹುಟ್ಟಿದವರನ್ನು ನೋಡಿ ಸಂತೋಷಿಸುವುದೇಕೆ? ದಾರಿತಪ್ಪಿ ಘೋರಾರಣ್ಯದಲ್ಲಿ ಸಿಕ್ಕಿಬಿದ್ದವನೂಕೂಡ, ದೈವಬಲವಿದ್ದರೆ ಅಪಾಯವಿಲ್ಲದೆ ಹಿಂತಿರುಗಿಬರುವನು ಮನೆಯಲ್ಲಿ ಬಚ್ಚಿಟ್ಟವಸ್ತುವೂ ಕೂಡ ದೈವವು ವಿಪರೀತವಾದಾಗ ನಷ್ಟವಾಗುವುದು. ದೈವಾನುಗ್ರಹವಿದ್ದರೆ ದಿಕ್ಕಿಲ್ಲದೆ ಕಾಡಿನಲ್ಲಿದ್ದವನೂ ಸುಖದಿಂದ ಜೀವಿಸಬಲ್ಲನು. ದೈವಕೃಪೆಯು ತಪ್ಪಿದರೆ ಮನೆಯಲ್ಲಿ ಅನೇಕಬಂಧುವರ್ಗಗಳಿಂದ ರಕ್ಷಿಸಲ್ಪಡುತ್ತಿದ್ದವನೂ ಬದುಕಲಾರನು ಸಮಸ್ತಭೂತಗಳೂ ತಮ್ಮತಮ್ಮ ಕರ್ಮಾನುಸಾರವಾದ ಯೋನಿಯಲ್ಲಿ ಹುಟ್ಟಿ, ಆ ಕರ್ಮಫಲವು ತೀರುವವರೆಗೆ ಬದುಕಿದ್ದು, ಅವಸಾನಕಾಲವು ಬಂದಕೂಡಲೇ ನಾಶಹೊಂದುವುದು ಕರ್ಮಾನುಗುಣವಾಗಿ ಈಫಲಗಳನ್ನು ತಂದಿಡುವುದಕ್ಕೂ ಆ ಈಶ್ವರನೇ ಕಾರಣನು ಈ ಉತ್ಪತ್ತಿವಿನಾಶಗಳೆಲ್ಲವೂ ಅವನ ಸಂಕಲ್ಪದಿಂದಲೇ ನಡೆಯುವುವು ಆ ಈಶ್ವರನು ಒಂದೊಂದುಶರೀರದಲ್ಲಿಯೂ ಜೀವಾಂತರ್ಯಾಮಿಯಾಗಿ ಸೇರಿದ್ದರೂಕೂಡ, ಅತನು ಸರ್ವಶಕ್ತನಾದುದರಿಂದ, ಅವುಗಳಿಗುಂಟಾಗತಕ್ಕ ಸುಖದುಃಖಾದಿಗುಣದೋಷಗಳಿಗೆ ತಾನು ಗುರಿಯಾಗಲಾರನು. ಅದೇಶರೀರದಲ್ಲಿ ಸೇರಿರತಕ್ಕಜೀವನಾದರೋ, ಆಶರೀರಸಂಬಂಧವಿರುವವರೆಗೆ ಸಂಸಾರದಲ್ಲಿ ಕಟ್ಟಿಡಲ್ಪಡುವನು ಹೀಗೆ ಒಂದೇಶರೀರದಲ್ಲಿ ಸೇರಿರತಕ್ಕ ಜೀವಾತ್ಮಪರಮಾತ್ಮರಿಬ್ಬರಲ್ಲಿ, ಒಬ್ಬನು ತನ್ನ ಅಜ್ಞತೆಯಿಂದ ಸಂಸಾರದಲ್ಲಿ ಸಿಕ್ಕಿ ಬೀಳುವನು ಮತ್ತೊಬ್ಬನು ಅದರ ಸಂಬಂಧವಿಲ್ಲದಿರುವನು ಮಣ್ಣು, ನೀರು ಮೊದಲಾದುವುಗಳನ್ನು ಕಲೆಸಿ ಕಟ್ಟಿದ ಮನೆಯಂತೆ,ದೇಹವೆಂಬುದು ಪಂಚಭೂತಗಳಿಂದೇರ್ಪಟ್ಟಿರುವುದು. ಅವರವರ ಶಿಲ್ಪಚಾತುರ್ಯಕ್ಕೆ ತಕ್ಕಂತೆ ಕಟ್ಟಡಗಳೂ ಚಿತ್ರವಿಚಿತ್ರವಾಗಿರುವಹಾಗೆ, ಅಯಾ ಜೀವಗಳು, ತಮ್ಮ ಕರ್ಮಾನುಸಾರವಾಗಿ ದೇವಮನುಷ್ಯಾದಿಶರೀರ ಭೇದಗಳನ್ನು ಹೊಂದುವುವು. ಹೀಗೆ ದೇಹಕ್ಕೂ ಅದರಲ್ಲಿರತಕ್ಕ ಜೀವನಿಗೂ ಇರುವಸಂಬಂಧವು, ಒಂದು ಮನೆಗೂ ಅಲ್ಲಿನ ನಿವಾಸಿಗೂ ಇರುವ ಸಂಬಂಧದಷ್ಟೇಹೊರತು ಅದ

ಕ್ಕಿಂತಲೂ ಹೆಚ್ಚಲ್ಲ ಈ ದೃಷ್ಟಾಂತದಿಂದಲೇ ನೀವು ದೇಹಾತ್ಮಗಳಿಗೆ ಸ್ಪ ಷ್ಟವಾದ ಭೇದವನ್ನು ತಿಳಿಯಬಹುದು ಕಲ್ಲು, ಮಣ್ಣು, ಮರ ಮುಂತಾ ದುವುಗಳಿಂದ ನಿರ್ಮಿತವಾದ ಕಟ್ಟಡವು, ಕಾಲಕ್ರಮದಿಂದ ಜೀರ್ಣವಾಗಿ ಬಿದ್ದು ಹೋಗುವಂತೆಯೇ, ಪಂಚಭೂತಗಳ ಸಮುದಾಯದಿಂದೇರ್ಪಟ್ಟಿ ರುವ ಈ ದೇಹವೂ ಕೂಡ, ಕಾಲಕ್ರಮದಿಂದ, ಬಾಲ್ಯ ಯೌವನಾ ದಿ ವಿಕಾರಗಳನ್ನು ಹೊಂದಿ, ಕೊನೆಗೆ ಬಿದ್ದುಹೋಗುವುದು ಹಳೇ ಕಟ್ಟ ಡವು ಕುಸಿದುಬಿದ್ದಾಗ, ಅದರಲ್ಲಿದ್ದವನು ಅದನ್ನು ಬಿಟ್ಟು ಬೇರೊಂದು ಹೊಸಮನೆಗೆ ಹೋಗುವಂತೆ,ಜೀವನೂ ಕೂಡ, ಒಂದುಶರೀರವು ಜೀರ್ಣವಾ ಗಿ ಬಿದ್ದುಹೋದಮೇಲೆ, ಮತ್ತೊಂದು ಹೊಸಶರೀರದಲ್ಲಿ ಸೇರುವನು ಬಿ ದ್ದು ಹೋದ ಮನೆಯನ್ನು ನೋಡಿ, ಮನುಷ್ಯನೇ ಸತ್ತನೆಂದು ಭಾವಿಸುವು ದು ಹುಚ್ಚಲ್ಲವೆ?ಇದೂಅಲ್ಲದೆ, ಬೆಂಕಿಯು ಬೇರೆಬೇರೆ ಕಟ್ಟಿಗೆಗಳಲ್ಲಿ ಸೇರಿದಾ ಗ, ಬೇರೆಬೇರೆ ಆಕಾರದಿಂದ ಕಾಣಿಸುತಿದ್ದರೂ, ಅದಕ್ಕೆ ಆ ವಿಕಾರಗಳುಸಹ ಜವಲ್ಲ. ದೇಹದಲ್ಲಿರುವ ವಾಯುವೂಕೂಡ ದೇಹಕ್ಕಿಂತಲೂ ಬೇರೆಯಾ ಗಿಯೇ ಇರುವುದು ಆಕಾಶವು ಎಲ್ಲಾಕಡೆಯಲ್ಲಿಯೂ ವ್ಯಾಪಿಸಿದ್ದರೂ, ಆಯಾ ವಸ್ತುವಿಕಾರಗಳನ್ನು ಹೊಂದದೆ ಅವಕ್ಕಿಂತಲೂ ಭಿನ್ನವಾಗಿರುವು ದು. ಇವುಗಳಂತೆಯೇ ಜೀವನು, ಸತ್ವಾದಿಗುಣಗಳಿಂದ ಪರಿಣಮಿಸಿದ ದೇಹೇಂದ್ರಿಯಾದಿಗಳಲ್ಲಿ ಸೇರಿ, ಅವುಗಳೊಡನೆ ಒಂದಾಗಿರುವಂತೆ ಕಾ ಣುತ್ತಿದ್ದರೂ, ಆ ದೇಹಕ್ಕುಂಟಾಗುವ ಜನನಮರಣಾದಿವಿಕಾರಗಳಿಗೊಳಪ ಡದೆ, ಅದಕ್ಕಿಂತಲೂ ಬೇರೆಯಾಗಿಯೇ ಇರುವನು ಮೂಢಬುದ್ಧಿಯುಳ್ಳ ಓ ಜನರೇ! ನೀವು ಯಾವುದಕ್ಕೋಸ್ಕರ ವಿಲಪಿಸುತ್ತಿರುವಿರೋ ಆದೇಹವು ನಿಮ್ಮ ಕಣ್ಣಮುಂದೆಯೇ ಬಿದ್ದಿರುವುದಲ್ಲವೆ? ಇನ್ನು ನೀವು ರೋದಿಸುವುದೇ ಕೆ? ಈ ದೇಹಕ್ಕಾಗಿ ನಾವು ಅಳುವುದಿಲ್ಲ ನಮ್ಮ ಗೋಳಾಟವನ್ನು ಕೇಳಿ ನಮಗೆ ಪ್ರತ್ಯುತ್ತರವನ್ನು ಕೊಡಬಲ್ಲ ಜೀವನು ಇದನ್ನು ಬಿಟ್ಟುಹೋದುದ ಕ್ಕಾಗಿಯೇ ಅಳುತ್ತಿರುವೆವು" ಎಂದು ಹೇಳುವಿರೇನು ? ಜೀವನು ಎಂದಿ ದ್ದರೂ ನಿಮ್ಮಕಣ್ಣಿಗೆ ಬೀಳತಕ್ಕವನಲ್ಲ, ಹಿಂದೆಯೂ ನೀವು ಅವನನ್ನು ಕಂಡವರಲ್ಲ. ಈಗಲೂ ಅವನನ್ನು ಕಾಣಲಾರಿರಿ. ಎಷ್ಟೇ ಸೂಕ್ಷ್ಮದೃಷ್ಟಿ

ಯಿಂದ ನೋಡಿದರೂ ಅವನು ಗೋಚರಿಸಲಾರನು. ಹಿಂದೆಯಾಗಲಿ, ಮುಂದೆಯಾಗಲಿ ನಿಮಗೆ ಗೋಚರಿಸದಿದ್ದವನು, ಈಗ ನಿಮ್ಮ ಗೋಳಾಟವನ್ನು ಕೇಳಿದಮಾತ್ರಕ್ಕೆ ನಿಮ್ಮ ಮುಂದೆ ಬಂದು ನಿಲ್ಲುವನೇನು? ''ಜೀವಸ್ವರೂಪವು ಗೋಚರಿಸದಿದ್ದರೂ! ಹೋಗಲಿ! ನಮಗೆ ಕಾಣುವಂತೆ ಈ ದೇಹದಲ್ಲಿ ಉಸಿರಾಡುತ್ತಿತ್ತಲ್ಲವೆ? ಆ ಪ್ರಾಣಗಳಿಗಾಗಿ ನಾವು ದುಃಖಿಸುವೆವು" ಎಂದು ಹೇಳುವಿರಾ ! ನೀವು ಹೇಳುವಂತೆ ಪ್ರಾಣವೇ ಮುಖ್ಯವಾಗಿದ್ದರೂ, ಅದೂ ನಿಮ್ಮ ವಿಲಾಪವನ್ನು ಕಿವಿಯಿಂದ ಕೇಳುವುದಕ್ಕಾಗಲಿ, ಪ್ರತ್ಯುತ್ತರವನ್ನು ಕೊಡುವುದಕ್ಕಾಗಲಿ ಶಕ್ತವಲ್ಲ ನಿಮ್ಮ ಮಾತುಗಳನ್ನು ಕೇಳುವುದಕ್ಕೂ, ನಿಮಗೆ ಪ್ರತ್ಯುತ್ತರವನ್ನು ಕೊಡುವುದಕ್ಕೂ ಸಮರ್ಥನಾಗಿದ್ದವನು ಜೀವಾತ್ಮನು. ಅವನು ಈ ಶರೀರಕ್ಕಿಂತಲೂ, ಪ್ರಾಣಕ್ಕಿಂತಲೂ ಬೇರೆಯಾಗಿದ್ದು ಪಂಚಭೂತಗಳಿಂದಲೂ, ಇಂದ್ರಿಯಗಳಿಂದಲೂ, ಮನಸ್ಸಿನಿಂದಲೂ, ನಿರ್ಮಿತವಾದ ಈ ಬಗೆಯ ಉತ್ತಮನೀಚದೇಹಗಳನ್ನು ತನ್ನ ಕರ್ಮಾನುಗುಣವಾಗಿ ಹೊಂದಿದ್ದು. ಆ ಕರ್ಮಫಲವು ತೀರಿದೊಡನೆ ಅದನ್ನುಬಿಟ್ಟು ಸಹಜವಾದ ಜ್ಞಾನಸ್ವರೂಪದೊಡನೆ ಹೊರಟುಹೋಗುವನು ಹೀಗೆ ದೇಹವನ್ನು ಹೊಂದುವುದೂ, ಬಿಡುವುದೂ, ಕರ್ಮವಶನಾದ ಜೀವನಿಗೆ ಸಹಜವಾಗಿರುವುದು ಹೀಗೆ ಕರ್ಮಬದ್ಧನಾದ ಜೀವನು, ತನಗೆ ಸಹಜವಾದ ರೀತಿಯಲ್ಲಿ ದೇಹವನ್ನುಬಿಟ್ಟುಹೋದುದಕ್ಕಾಗಿ ನೀವು ದುಃಖಿಸುವುದೇಕೆ? ಶರೀರಕ್ಕೆ ಕಾರಣವಾದ ಕರ್ಮವಿರುವವರೆಗೆಮಾತ್ರವೇ ಆ ಶರೀರವಿರುವುದು, ಆ ಶರೀರಸಂಬಂಧವೇ ಸಂಸಾರವು. ಅದರಿಂದಲೇ ದೇಹಾತ್ಮಭ್ರಮವೂ,ಕ್ಲೇಶವೂ ಹಿಂಬಾಲಿಸುವುದು. ಎಲೈ ಸ್ತ್ರೀಯರೆ! ಯಾವುದೋ ಒಂದು ಜೀವಕ್ಕೆ ಕರ್ಮಸಂಬಂಧದಿಂದ ಈ ರಾಜದೇಹವು ತಗುಲುಕಟ್ಟಿತು. ಆ ಶರೀರದಮೂಲಕವಾಗಿಯೇ ನಿಮ್ಮಿಬ್ಬರಿಗೂ ಸಂಬಂಧವೂ ಏರ್ಪಟ್ಟಿತು. ದೇಹಾತ್ಮಭ್ರಮವಿರುವವರೆಗೆ ಈಸಂಬಂಧವೆಲ್ಲವೂ ತೋರುವುದೇಹೊರತು,ದೇಹಾಭಿಮಾನವನ್ನು ಬಿಟ್ಟುಬಿಟ್ಟರೆ ಆಗ ಒಬ್ಬರಿಗೊಬ್ಬರಿಗೆ ಯಾವ ಸಂಬಂಧವೂ ತೋರಲಾರದು ಸತ್ವಾದಿಗುಣಗಳ ಪರಿಣಾಮದಿಂದುಂಟಾಗುವ ಈ ದೇಹಾದಿ

ಗಳನ್ನಾಗಲಿ, ಶಬ್ದಾದಿವಿಷಯಗಳನ್ನಾಗಲಿ,ತಮಗೆ ಭೋಗ್ಯವಸ್ತುಗಳೆಂದು ತಿಳಿದು, ಅವುಗಳನ್ನು ಅಭಿಮಾನಿಸಬಾರದು. ಇವೆಲ್ಲವೂ ಕ್ಷಣಕಾಲ ವಿದ್ದು ಹೋಗತಕ್ಕವುಗಳು. ಇವುಗಳಲ್ಲಿ ಅಭಿಮಾನವನ್ನಿಡುವುದು, ಕನಸಿ ನಲ್ಲಿ ಕಂಡ ಪದಾರ್ಥಗಳಿಗೆ ಆಸೆಪಡುವಂತೆ ಅವಿವೇಕವಲ್ಲದೆ ಬೇರೆ ಯಲ್ಲ. ಎಲೈ ಸ್ತ್ರೀಯರೆ! ದೇಹಾತ್ಮಗಳ ನಿಜಸ್ಥಿತಿಯನ್ನು ತಿಳಿದ ಮಹಾತ್ಮ ರು,ನಿತ್ಯವಾದ ಆತ್ಮವನ್ನು ಕುರಿತಾಗಲಿ,ಅನಿತ್ಯವಾದ ದೇಹಾದಿಗಳನ್ನು ಕುರಿ ತಾಗಲಿ ಸ್ವಲ್ಪಮಾತ್ರವೂ ದುಃಖಿಸಲಾರರು. ಆ ದೇಹಕ್ಕಾಗಲಿ,ಆತ್ಮಕ್ಕಾ ಗಲಿ, ಆಯಾಗುಣಗಳು ಸಹಜವಾದುದರಿಂದ, ಅದನ್ನು ತಪ್ಪಿಸುವುದಕ್ಕೆ ಯಾರಿಂದಲೂ ಸಾಧ್ಯವಲ್ಲ.ಅಗ್ನಿಗೆ ಸಹಜವಾದ ಉಷ್ಣವನ್ನು ತಪ್ಪಿಸುವುದ ಕ್ಕೆ ಯಾರಿಂದ ತಾನೇ ಸಾಧ್ಯವು? ಜೀವಾತ್ಮಗಳಿಗೆ ಶರೀರಸಂಬಂಧವನ್ನು ಹೊಂದುವುದೂ, ಅದರಿಂದಗಲುವುದೂ ಸಹಜವು.ತಿಳಿಯದ ಮೂಢರು ಈ ಸಂಯೋಗವಿಯೋಗಗಳಿಂದ ಸುಖದುಃಖಗಳನ್ನು ಹೊಂದುವರು ಇದೇ ವಿಷ ಯವು ಇನ್ನೂ ಚೆನ್ನಾಗಿತಿಳಿಯುವಂತೆ ಮತ್ತೊಂದು ಸಣ್ಣಕಥೆಯನ್ನು ಹೇಳು ವೆನು ಕೇಳಿರಿ!ಒಂದಾನೊಂದು ಕಾಡಿನಲ್ಲಿ ಒಬ್ಬಬೇಡನು ಹಕ್ಕಿಗಳನ್ನು ಹಿಡಿದು ಜೀವಿಸುತಿದ್ದನು ಪಕ್ಷಿಕುಲಕ್ಕೆ ಮೃತ್ಯುವಾಗಿದ್ದ ಆವ್ಯಾಧನು,ಒಮ್ಮೆ ಪಕ್ಷಿಗ ಳನ್ನು ಹಿಡಿಯುವುದಕ್ಕಾಗಿ ಕಾಡಿನಲ್ಲಿ ಬಲೆಯನ್ನು ಬೀಸಿ, ಅಲ್ಲಲ್ಲಿ ಆಸೆ ತೋರಿಸುತಿದ್ದನು. ಆ ಅಡವಿಯ ಸಮೀಪದಲ್ಲಿ ಗಂಡುಹೆಣ್ಣುಹಕ್ಕಿಗಳೆರ ಡು ಜತೆಯಾಗಿ ತಿರುಗುತಿದ್ದುವು. ಅವುಗಳಲ್ಲಿ ಹೆಣ್ಣುಹಕ್ಕಿಯು ಆ ಬೇಡನ ಮೋಸಕ್ಕೆ ಮರುಳಾಗಿ, ಬಲೆಯಲ್ಲಿ ಸಿಕ್ಕಿಬಿದ್ದು, ಅದನ್ನು ತಪ್ಪಿಸಿ ಕೊಂಡು ಬರಲಾರದೆ, ರೆಕ್ಕೆಗಳನ್ನೊದರುತಿತ್ತು. ಆಗ ಪುರುಷಪಕ್ಷಿಯು, ಕೂಗಿಕೊಳ್ಳುತಿದ್ದ ತನ್ನಪ್ರಿಯೆಯನ್ನು ನೋಡಿ, ದುಃಖದಿಂದ ತಪಿಸು ತ್ತ, ಅದನ್ನು ಬಿಡಿಸಿಕೊಳ್ಳುವುದಕ್ಕೂ ಶಕ್ತಿಯಿಲ್ಲದೆ, ದೈವವೆ ! ಎಂತ ಅಳುವುದಕ್ಕಾರಂಭಿಸಿತು “ಹಾ ದಯಾಶೂನ್ಯವಾದ ಹೀಗೆಂದು ! ಎಂತ ವರಿಗೂ ಕನಿಕರವನ್ನು ಹುಟ್ಟಿಸತಕ್ಕ ಅಬಲೆಯರಾದ ಹೆಂಗಸರಲ್ಲಿಯೂ ನಿನಗೆ ಇಷ್ಟೊಂದು ಕ್ರೌರ್ಯವೆ? ಅಯ್ಯೋ! ಮಹಾವಿಪತ್ತಿನಲ್ಲಿ ಸಿಕ್ಕಿಬಿದ್ದು ನನ್ನನ್ನು ನೋಡಿ ನೋಡಿ ಕೂಗಿಡುತ್ತಿರುವ ಈಕೆಯನ್ನು ನೋಡಿಯೂ

ನಿನಗೆ ಕನಿಕರವಿಲ್ಲವೆ? ಅನ್ಯಾಯವಾಗಿ ಅವಳನ್ನು ನನ್ನಿಂದ ಅಗಲಿಸಿಬಿಟ್ಟೆ ಯಲ್ಲಾ! ಅಯ್ಯೋ! ಇದರಿಂದ ನಿನಗೆ ಬಂದ ಪ್ರಯೋಜನವೇನು? ಆಕೆಯ ವಿಯೋಗವನ್ನು ನಾನು ಹೇಗೆ ಸಹಿಸಲಿ! ಅರ್ಧದೇಹದಂತಿದ್ದ ಆ ನನ್ನಪತ್ನಿಯು ಹೋದಮೇಲೆ, ಈ ನನ್ನ ಅರ್ಧದೇಹದಿಂದ ನನಗೇನು ? ನಿ ಷ್ಕರುಣನಾದ ನೀನು ಈ ನನ್ನ ಅರ್ಧದೇಹವನ್ನೂ ಸಾಗಿಸಬಾರದೆ? ಪತ್ನಿ ಯನ್ನು ಕಳೆದುಕೊಂಡಮೇಲೆ, ನಾನು ಕಷ್ಟಕ್ಕೊಳಗಾದ ಪ್ರಾಣಗಳನ್ನಿ ಟ್ಟು ಕೊಂಡು ಫಲವೇನು? ಅಕ್ಕಟಾ!ಇನ್ನೂ ರೆಕ್ಕೆಹುಟ್ಟುವುದಕ್ಕೆ ಮೊದ ಲೇ ತಾಯಿಲ್ಲದ ತಬ್ಬಲಿಗಳಾಗಿ, ಗೂಡಿನಲ್ಲಿ ಬಿದ್ದುಹೊರಳುತ್ತಿರುವಈಸಣ್ಣ ಮರಿಗಳನ್ನು ನಾನು ಹೇಗೆ ಕಾಪಾಡಲಿ! ಹಾಕಷ್ಟವೆ? ಏನೂ ತಿಳಿಯದ ಈ ಮರಿಗಳು,ತಮ್ಮ ತಾಯಿಯು ತಮಗೆ ಗುಟುಕನ್ನುತಂದು ಕೊಡುವಳೆಂದು ಬಾಯಿಬಾಯಿಬಿಡುತ್ತ ಆ ಕಡೆಯನ್ನೇ ಇದಿರುನೋಡುತ್ತಿರುವುವಲ್ಲಾ ! ಮಂದಭಾಗ್ಯಗಳಾದ ಈ ಮರಿಗಳ ದುಸ್ಥಿತಿಯನ್ನು ನೋಡಿ ಹೇಗೆ ಸಹಿಸಲಿ!" ಎಂದು ಗೋಳಿಡುತಿತ್ತು. ಹೀಗೆ ಪುರುಷಪಕ್ಷಿಯು ತನ್ನ ಹೆಂಡಿರುಮಕ್ಕಳ ಕಷ್ಟವನ್ನು ನೋಡಿ ದುಃಖಿಸಿ,ಗದ್ಗದಸ್ವರದಿಂದ ಕೂಗಿಡುತ್ತಿರುವಷ್ಟರಲ್ಲಿ, ಆದೇ ಬೇಡನು ಕಾಲಪ್ರೇರಿತನಾಗಿ ಹಿಂದಿನಿಂದ ಮರೆಯಾಗಿ ಬಂದು, ಒಂ ದೇಬಾಣದಿಂದ ಆಹಕ್ಕಿಯನ್ನೇ ಮೊದಲು ಕೊಂದುಬಿಟ್ಟನು ಎಲೈ ಸ್ತ್ರೀಯ ರೆ! ಆ ಪಕ್ಷಿಯ ಸ್ಥಿತಿಯೇನಾಯಿತು ನೋಡಿದಿರಾ! ಆ ಪುರುಷಪಕ್ಷಿಯು ತನ್ನ ಬೆನ್ನಹಿಂದೆ ಕಾದಿದ್ದ ಮೃತ್ಯುವನ್ನು ಕಾಣದೆ, ತನ್ನ ಪತ್ನಿಯು ಬಲೆಯಲ್ಲಿ ಸಿಕ್ಕಿ ಬಿದ್ದಳೆಂದೂ, ತನ್ನ ಮರಿಗಳಿಗೆ ಪೋಷಕರಿಲ್ಲವೆಂದೂ,ವಿಲಪಿಸುತ್ತಿರು ವಾಗ, ಅವರಿಗಿಂತಲೂ ತಾನೇ ಮೊದಲು ಮೃತ್ಯುವಿನಪಾಲಾಯಿತು ಅದ ರಂತೆಯೇ ಈಗ ನೀವೂ ನಿಮ್ಮ ಬೆನ್ನಹಿಂದೆ ಕಾದಿರುವ ಮೃತ್ಯುವನ್ನು ಕಾ ಣದೆ ನಿಮ್ಮ ಪತಿಗಾಗಿ ಮರುಗುತ್ತಿರುವಿರಿ! ಹೀಗೆಯೇ ನೀವು ನೂರಾರುವ ರ್ಷಗಳವರೆಗೆ ಗೋಳಿಡುತ್ತಿದ್ದರೂ ತಿರುಗಿ ನಿಮ್ಮಪತಿಯನ್ನು ಕಾಣಲಾರಿರಿ! ಆದುದರಿಂದ ಸುಮ್ಮನಿರಿ!" ಎಂದನು. ಆ ಬಾಲಕನ ಮಾತನ್ನು ಕೇಳಿ ಅಲ್ಲಿ ದ್ದ ಬಂಧುಗಳೆಲ್ಲರೂ ಆಶ್ಚರ್ಯಪಡುತ್ತ, ಈ ದೇಹಾದಿಗಳೆಲ್ಲವೂ ಅನಿತ್ಯವೆಂ ದು ನಿಶ್ಚಯಿಸಿ, ದುಃಖಸಮಾಧಾನವನ್ನು ಹೊಂದಿದರು ಇತ್ತಲಾಗಿ ಬಾಲ

ವೇಷದಿಂದ ಬಂದಿದ್ದ ಯಮನೂ, ಆ ಕ್ಷಣವೇ ಅವರ ಕಣ್ಣಿಗೆ ಕಾಣದಂತೆ ಅದೃಶ್ಯನಾದನು ಆ ಜ್ಞಾತಿಗಳೆಲ್ಲರೂ ರಾಜನ ಮೃತದೇಹಕ್ಕೆ ದಹನಸಂಸ್ಕಾರಗಳನ್ನು ನಡೆಸಿ, ಶಾಂತಚಿತ್ತರಾಗಿದ್ದರು ಆದುದರಿಂದ ಅಮ್ಮಾ! ಹೀಗೆ ದೇಹಾತ್ಮಗಳೆರಡೂ ಸೇರಿದ್ದಾಗ, ಆಗಾಗಬಬ್ಬರನ್ನೊ೭ ರುಅಗಲಿಹೋಗುವುದೂ, ಒಬ್ಬರಿಗೊಬ್ಬರು ಸೇರುವುದೂ ಸಹಜವಾದುದರಿಂದ ಹಿರಣ್ಯಾಕ್ಷನ ಮರಣವನ್ನು ಕುರಿತು,ನಿಮ್ಮ ಸ್ಥಿತಿಗಾಗಲಿ.ಅವನ ಸ್ಥಿತಿಗಾಗಲಿ ನೀವು ಶೋಕಿಸಬಾರದು! ತನ್ನವನೆಂದೂ,ಇತರನೆಂದೂ ಭೇದಬುದ್ಧಿಯು ಕರ್ಮಮೂಲಕವಾದ ಅಜ್ಞಾನದಿಂದ ಹುಟ್ಟುವುದೇಹೊರತು, ಆ ಅಜ್ಞಾನವು ಬಿಟ್ಟುಹೋದಮೇಲೆ ತನ್ನವರಾರು? ಹೆರವರಾರು! ಎಲ್ಲರೂ ಒಂದೇ! ಆದುದರಿಂದ ನೀವು ಸತ್ತವನಲ್ಲಿ ಸ್ವಾಭಿಮಾನವನ್ನು ಬಿಟ್ಟು ನಿಶ್ಚಿಂತರಾಗಿರಿ!"ಎಂದನು. ಓಧರ್ಮರಾಜಾ! ದಿತಿಯು ಹಿರಣ್ಯಕಶಿಪುವಿನ ಈ ವಾಕ್ಯವನ್ನು ಕೇಳಿ, ಪುತ್ರಶೋಕವನ್ನುಬಿಟ್ಟು, ತತ್ವಜ್ಞಾನದಲ್ಲಿ ಮನಸ್ಸಿಟ್ಟಳು ಹಾಗೆಯೇ ಹಿರಣ್ಯಾಕ್ಷನ ಪತ್ನಿಯೂ ದುಃಖವನ್ನುಬಿಟ್ಟು ಧೈರ್ಯದಿಂದ ತತ್ವಜ್ಞಾನದಲ್ಲಿ ದೃಷ್ಟಿಯಿಟ್ಟಳು ಇಲ್ಲಿಗೆ ಎರಡನೆಯ ಅಧ್ಯಾಯವು

---

**{ ಹಿರಣ್ಯಕಶಿಪುವು ಬ್ರಹ್ಮನನ್ನು ಕುರಿತು ತಪಸ್ಸುಮಾಡಿದುದು. ಬ್ರಹ್ಮನು ಪ್ರತ್ಯಕ್ಷನಾದುದು. }**

ಓ ಧರ್ಮರಾಜಾ ಕೇಳು! ಆಮೇಲೆ ಹಿರಣ್ಯಕಶಿಪುವಿಗೆ ಮನಸ್ಸಿನಲ್ಲಿ ಒಂದಾನೊಂದು ಆಲೋಚನೆಯು ಹುಟ್ಟಿತು. ಲೋಕದಲ್ಲಿ ತನ್ನನ್ನು ಜಯಿಸತಕ್ಕ ಬಲಶಾಲಿಗಳೊಬ್ಬರೂ ಇರಬಾರದೆಂದೂ, ತನಗೆ ಜರಾಮರಣಗಳಿಲ್ಲದಿರಬೇಕೆಂದೂ, ತನಗೆ ಬೇರೊಬ್ಬರೂ ಇದಿರಿಲ್ಲದೆ, ತಾನೊಬ್ಬನೇ ಏಕಾಧಿಪತ್ಯದಿಂದ ತ್ರೈಲೋಕ್ಯವನ್ನೂ ಆಳಬೇಕೆಂದೂ ನಿಶ್ಚಯಿಸಿಕೊಂಡನು. ಇವೆಲ್ಲವನ್ನೂ ಸಾಧಿಸುವುದಕ್ಕೆ ತಕ್ಕ ಪ್ರಯತ್ನವೇನೆಂದು ಯೋಚಿಸಿದಾಗ, ತಪಸ್ಸುಮಾಡಿ ಬ್ರಹ್ಮನನ್ನು ಮೆಚ್ಚಿಸಿ ಈ ವರಗಳನ್ನು ಪಡೆಯಬೇಕೆಂದು ಅವನಿಗೆ ತೋರಿತು. ತನ್ನ ರಾಜ್ಯವನ್ನು ಮಂತ್ರಿಗಳ ವಶಕ್ಕೊಪ್ಪಿಸಿ, ಮಂದರಪರ್ವತದ ತಪ್ಪಲಿಗೆ ಬಂದು, ಅಲ್ಲಿ ಕಠಿನವಾದ ತಪಸ್ಸನ್ನು

ಮಾಡತೊಡಗಿದನು. ತೋಳುಗಳೆರಡನ್ನೂ ಮೇಲಕ್ಕೆ ನೀಡಿ, ಆಕಾ ಶದಲ್ಲಿ ದೃಷ್ಟಿಯಿಟ್ಟು, ಕಾಲಿನ ಹೆಬ್ಬೆರಳನ್ನುಮಾತ್ರ ನೆಲದಮೇಲೂರಿ ಧ್ಯಾನಿಸುವುದಕ್ಕೆ ನಿಂತನು. ರಕ್ತವರ್ಣವುಳ್ಳ ಆತನ ಜಟೆಗಳು ಪ್ರ ಳಯಕಾಲಸೂರ್ಯನಂತೆ ಕಾಂತಿಯಿಂದ ಜ್ವಲಿಸುತಿದ್ದುವು. ಹೀಗೆ ಲೋ ಕಕಂಟಕನಾದ ಹಿರಣ್ಯಕಶಿಪುವು ತಪಸ್ಸಿನಲ್ಲಿದ್ದಾಗ, ಇತ್ತಲಾಗಿ ಸ್ವಲ್ಪ ಕಾಲದವರೆಗೆ ತ್ರೈಲೋಕ್ಯವೂ ನೆಮ್ಮದಿಯಿಂದಿತ್ತು. ಹಿಂದೆ ಇವನ ಬಾಧೆಗೆ ಭಯಪಟ್ಟು, ಸ್ವರ್ಗವನ್ನು ಬಿಟ್ಟು, ಭೂಮಿಯಲ್ಲಿ ತಲೆತಪ್ಪಿಸಿಕೊಂ ಡು ತಿರುಗುತಿದ್ದ ದೇವತೆಗಳೆಲ್ಲರೂ ತಿರುಗಿ ಸ್ವಸ್ಥಾನವನ್ನು ಬಂದು ಸೇರಿದ ರು ಆದರೇನು! ಇಷ್ಟರಲ್ಲಿಯೇ ಆ ಹಿರಣ್ಯಕಶಿಪುವಿನ ತಪೋಜ್ವಾಲೆಯು ಅವನ ನೆತ್ತಿಯಿಂದ ಮೇಲೆ ಹೊರಟು, ಹೊಗೆಯಾಡುತ್ತ, ಊರ್ಧ್ವಮುಖ ವಾಗಿಯೂ, ಕೆಳಮುಖವಾಗಿಯೂ, ಅಡ್ಡಲಾಗಿಯೂ ವ್ಯಾಪಿಸಿ, ಸಮಸ್ತ ಲೋಕವನ್ನೂ ದಹಿಸಲಾರಂಭಿಸಿತು. ನದೀನದಸಮುದ್ರಗಳೆಲ್ಲವೂ ಕುದಿ ಯುತಿದ್ದುವು ಪರ್ವತದ್ವೀಪಗಳೊಡಗೂಡಿದ ಸಮಸ್ತಭೂಮಂಡಲವೂ ಕಂಪಿಸಿತು ಗ್ರಹನಕ್ಷತ್ರಗಳೆಲ್ಲವೂ ಅಕಾಶದಿಂದ ಕದಲಿ ಬೀಳುತಿದ್ದುವು. ಹತ್ತುದಿಕ್ಕುಗಳೂ ಜ್ವಲಿಸುತಿದ್ದುವು. ಈ ತಪೋಜ್ವಾಲೆಯಿಂದ ದೇವತೆಗ ಳೆಲ್ಲರೂ ಸಂತಪ್ತರಾಗಿ,ಸತ್ಯಲೋಕಕ್ಕೆ ಹೋಗಿ,ಅಲ್ಲಿ ಬ್ರಹ್ಮನಮುಂದೆ ಮೊ ರೆಯಿಡುವರು “ಓ ದೇವದೇವಾ! ಹೇ ಲೋಕನಾಥಾ!ಇನ್ನು ನಮ್ಮೊಬ್ಬರಿ ಗೂ ಉಳಿಗಾಲವಿಲ್ಲ!ಹಿರಣ್ಯಕಶಿಪುವಿನ ತಪೋಜ್ವಾಲೆಯಿಂದ ಲೋಕವೆಲ್ಲವೂ ದಗ್ಧವಾಗುತ್ತಿರುವುದು. ನಾವು ತಡೆಯಲಾರೆವು.ಹೇಪ್ರಭೂ! ನಿನಗೆ ಲೋ ಕಕ್ಷೇಮವನ್ನುಂಟುಮಾಡಬೇಕೆಂಬ ಉದ್ದೇಶವಿದ್ದರೆ, ಒಡನೆಯೇ ಇದಕ್ಕೆ ತಕ್ಕ ಪ್ರತೀಕಾರವನ್ನು ಯೋಚಿಸು! ನಿನಗೆ ಪೂಜೆಯನ್ನೊಪ್ಪಿಸುತ್ತಿರುವ ಲೋಕವೆಲ್ಲವೂ ನಿಶ್ಶೇಷವಾಗಿ ನಾಶಹೊಂದುವುದಕ್ಕೆ ಮೊದಲೇ ಆ ತಪೋ ಜ್ವಾಲೆಯನ್ನಡಗಿಸು!ಆ ಹಿರಣ್ಯಕಶಿಪುವು ಈಗ ಬೇರೊಬ್ಬರಿಗೆ ಸಾಧ್ಯವಲ್ಲದ ಕ್ರೂರತಪಸ್ಸನ್ನುಮಾಡುತ್ತಿರುವನು. ಅವನ ಉದ್ದೇಶವೇನೆಂಬುದು ನ ಮಗೆ ಚೆನ್ನಾಗಿ ತಿಳಿಯದಿದ್ದರೂ ಸರ್ವಜ್ಞನಾದ ನಿನಗೆ ತಿಳಿಯದುದೊಂದೂ ಇಲ್ಲ. ಆದರೂ ನಮ್ಮಮನಸ್ಸಿಗೆ ತೋರಿದುದನ್ನು ನಿನ್ನಲ್ಲಿ ವಿಜ್ಞಾಪಿಸುವೆವು.

ಹಿಂದೆ ನೀನು ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವನ್ನೂ ತಪೋಬಲ ದಿಂದಲೇ ಸೃಷ್ಟಿಸಿ,ಇಂದ್ರಾದಿದೇವತೆಗಳ ಪದವಿಗಿಂತಲೂ ಮೇಲಾದಷ್ಟದವಿ ಯನ್ನು ಹೊಂದಿರುವೆಯಲ್ಲವೆ?ಇದನ್ನು ನೋಡಿ ಹಿರಣ್ಯಕಶಿಪುವಿಗೆ ನಿನ್ನಮೇಲೆ ಯೂ ಮಾತ್ಸರ್ಯವು ಹುಟ್ಟಿದಂತಿದೆ ತಾನೂ ದೊಡ್ಡ ತಪಸ್ಸನ್ನು ಮಾಡಿ ನಿ ನ್ನಂತೆ ಉತ್ತಮಪದವಿಯನ್ನು ಸಾಧಿಸಬೇಕೆಂದು ಯೋಚಿಸಿದಂತಿದೆ. ಆತ್ಮ ವೂ, ಕಾಲವೂ ನಿತ್ಯವಾದುದರಿಂದ,ಈ ತಪಸ್ಸನ್ನಾರಂಭಿಸಿ,ಅನೇಕಜನ್ಮಗಳ ನ್ನೆತ್ತಿಯಾದರೂ ಆ ಪದವಿಯನ್ನು ಸಾಧಿಸಿಯೇ ತೀರಬೇಕೆಂಬ ದೃಢಸಂಕ ಲ್ಪವನ್ನು ಮಾಡಿರುವಂತಿದೆ ಮತ್ತು ಅವನು ತನ್ನ ತಪೋಬಲದಿಂದಲೇ ಲೋಕವೆಲ್ಲವನ್ನೂ ತಲೆಕೆಳಗಾಗಿ ಮಾಡುವುದಕ್ಕೂ ಸ್ವರ್ಗಮರ್ತ್ಯಪಾತಾ ಳಗಳೆಲ್ಲವನ್ನೂ ಆಯಾಸ್ಥಾನಗಳಿಂದ ಕದಲಿಸಿ ಹಿಂದುಮುಂದು ಮಾ ಡುವುದಕ್ಕೂ ಸಂಕಲ್ಪಿಸಿರುವನು ಅವನು ಕೇವಲತಾಮಸಸ್ವಭಾವವು ಳ್ಳವನಾದುದರಿಂದ, ಎಲ್ಲಕ್ಕಿಂತಲೂ ಮೇಲಾಗಿ ಎಂದೆಂದಿಗೂ ನಾಶವಿ ಲ್ಲದ ವೈಕುಂಠವನ್ನೂಕೂಡ ಕಲ್ಪಾಂತದಲ್ಲಿ ನಾಶಹೊಂದತಕ್ಕದೆಂದು ಭ್ರಮಿಸಿ, ಅದನ್ನೂ ನಿರಾಕರಿಸಿ, ನಿನ್ನ ಸ್ಥಾನವಾದ ಸತ್ಯಲೋಕ ವನ್ನೇ ಸಾಧಿಸಬೇಕೆಂದು ದೃಢಸಂಕಲ್ಪವನ್ನು ಮಾಡಿ ಈ ಘೋರತಪಸ್ಸ ನ್ನಾರಂಭಿಸಿರುವುದಾಗಿ ಕೇಳುವೆವು ತಾತಾ! ಈಗಲೂ ನೀನು ತಕ್ಕ ಪ್ರತೀ ಕಾರವನ್ನು ಯೋಚಿಸದಿದ್ದರೆ,ನಿನ್ನ ಪದವಿಗೇ ಮೋಸಬರುವುದು ಹೇ ಲೋ ಕನಾಥಾ! ಇದುವರೆಗೆ ನಿನ್ನಸ್ಥಾನವು ಗೋಬ್ರಾಹ್ಮಣರ ಶ್ರೇಯಸ್ಸಿಗೂ, ಅವರ ಪುರೋವೃದ್ಧಿಗೂ, ಪುರುಷಾರ್ಥಗಳಿಗೂ,ಐಶ್ವರ್ಯಕ್ಕೂ, ಜಯಕ್ಕೂ ನೆಲೆಯಾಗಿರುವುದು. ಇದೇ ಅನ್ಯಾಕ್ರಾಂತವಾದಮೇಲೆ ಲೋಕಕ್ಕೆ ಕ್ಷೇಮವೆಲ್ಲಿ?" ಎಂದರು. ಹೀಗೆ ದೇವತೆಗಳು ದೈನ್ಯದಿಂದ ಪ್ರಾರ್ಥಿಸಿದುದ ನ್ನು ಕೇಳಿದೊಡನೆ, ಪೂಜ್ಯನಾದ ಬ್ರಹ್ಮನು,ಭೃಗು, ದಕ್ಷಪ್ರಜಾಪತಿ ಮೊದ ಲಾದ ತನ್ನ ಪರಿವಾರಗಳೊಡಗೂಡಿ ಹಿರಣ್ಯಕಶಿಪುವಿನ ತಪೋವನಕ್ಕೆ ಬಂದ ನು ಆದರೇನು? ಆ ಹಿರಣ್ಯನು ಅಲ್ಲಿ ಬಹುಕಾಲದಿಂದ ತನ್ನ ಸರ್ವೇಂದ್ರಿಯ ವ್ಯಾಪಾರಗಳನ್ನೂ ಅಡಗಿಸಿ, ಏಕಾಗ್ರಚಿತ್ತನಾಗಿ ತಪಸ್ಸಿನಲ್ಲಿದ್ದುದರಿಂದ, ಅವನ ಮೈಮೇಲೆ ದೊಡ್ಡಹುತ್ತವು ಬೆಳೆದು ಹೋಯಿತು. ಆ ಹುತ್ತವೂ

ಕಾಣದಂತೆ ಅದರಮೇಲೆ ಹುಲ್ಲುಪೊದೆಗಳೂ, ಬಿದಿರುಮೆಳೆಗಳೂ, ಬೆಳೆದಿದ್ದುವು ಮೊದಲು ಆ ಹಿರಣ್ಯಕಶಿಪುವು ಎಲ್ಲಿರುವನೆಂದು ಯಾರಿಗೂ ತಿಳಿಯಲಿಲ್ಲ. ಆದರೆ ಆ ಹುತ್ತದ ರಂಧ್ರಗಳಿಂದ ಅಲ್ಲಲ್ಲಿ ಇರುವೆಗಳು ರಕ್ತಮಾಂಸಗಳನ್ನೂ ಚರ್ಮದ ತುಂಡುಗಳನ್ನೂ, ಕೊಬ್ಬನ್ನೂ ಕಚ್ಚಿಕೊಂಡು ಬರುತಿದ್ದುವು ಇದರಿಂದ ಬ್ರಹ್ಮಾದಿಗಳು ಹಿರಣ್ಯಕಶಿಪುವಿರತಕ್ಕ ಸ್ಥಳವನ್ನು ಅನುಮಾನಿಸಿ ತಿಳಿದು ಕೊಂಡರು. ಹೀಗೆ ಹಿರಣ್ಯಕಶಿಪುವು ಕ್ರೂರವಾದ ತಪಸ್ಸನ್ನು ಹಿಡಿದು, ತನ್ನ ಮೈಮೇಲಿನ ಚರ್ಮಮಾಂಸಗಳನ್ನು ಕ್ರಿಮಿಕೀಟಗಳು ಕಚ್ಚಿತಿನ್ನುತಿದ್ದರೂ ಕದಲದೆ, ಮೇಘದಿಂದ ಮರೆಸಲ್ಪಟ್ಟ ಸೂರ್ಯನಂತೆ ಅದೃಶ್ಯನಾಗಿ, ತನ್ನ ತಪೋಜ್ವಾಲೆಯನ್ನು ಮಾತ್ರ ಹೊರಕ್ಕೆ ಹೊರಡಿಸುತ್ತಿರುವುದನ್ನು ನೋಡಿ,ಚತುರ್ಮುಖನಿಗೆ ಅತ್ಯಾಶ್ಚರ್ಯವು ಹುಟ್ಟಿತು. ಅವನ ದೃಢತಪಸ್ಸಿಗಾಗಿ ಸಂತೋಷಪಟ್ಟು, ಮುಂದೆ ಹೋಗಿ ಮಂದಹಾಸದಿಂದ ಹೀಗೆಂದು ಹೇಳುವನು "ಓ ಕಶ್ಯಪಕುಮಾರಾ! ಏಳೇಳು! ನಿನ್ನ ತಪಸ್ಸನ್ನು ನಿಲ್ಲಿಸು! ನಿನಗೆ ಕ್ಷೇಮವಾಗಲಿ! ನಿನ್ನ ತಪಸ್ಸು ಸಿದ್ಧಿಸಿತು ! ಬೇಕಾದ ವರಗಳನ್ನು ಕೊಡುವುದಕ್ಕೆ ಸಮರ್ಥನಾದ ನಾನು ನಿನ್ನ ಮುಂದೆ ಬಂದು ನಿಂತಿರುವುದನ್ನು ಕಾಣೆಯಾ? ಇಷ್ಟವರಗಳನ್ನು ಕೇಳು ! ಕೊಡುವೆನು. ಪಿಪೀಲಿಕಾದಿಗಳು ನಿನ್ನ ದೇಹವನ್ನು ಕಿತ್ತು ತಿನ್ನುತಿದ್ದರೂ, ನಿನ್ನ ಪ್ರಾಣಗಳು ಅಸ್ತಗತವಾಗಿದ್ದರೂ, ಸ್ವಲ್ಪಮಾತ್ರವೂ ಕದಲದೆ ತಪಸ್ಸಿನಲ್ಲಿ ಕುಳಿತಿರುವ ನಿನ್ನ ಧೈರ್ಯವು ಸಮಸ್ತಲೋಕಕ್ಕೂ ಆಶ್ಚರ್ಯವನ್ನುಂಟುಮಾಡುತ್ತಿರುವುದು ಹಿಂದೆ ಎಷ್ಟೋಮಂದಿ ಮಹಾತ್ಮರು ತಪಸ್ಸನ್ನು ಮಾಡಿ ಸಿದ್ಧಿಯನ್ನು ಹೊಂದಿರುವರು.ಯಾರೂ ನಿನಗೆ ಸಮಾನರಿಲ್ಲ. ಭೃಗು ಮೊದಲಾದ ಮಹರ್ಷಿಗಳೂಕೂಡ ನಿನ್ನಂತೆ ದೃಢಮನಸ್ಕರಾಗಿ ನಿಂತು ತಪಸ್ಸುಮಾಡಲಾರರು ಇನ್ನು ಇತರರ ವಿಷಯವನ್ನು ಕೇಳಬೇಕೆ? ನೂರು ದೇವವರುಷಗಳವರೆಗೆ ಜಲಪಾನವೂ ಇಲ್ಲದೆ ಪ್ರಾಣಗಳನ್ನುಳಿಸಿಕೊಳ್ಳಬೇಕೆಂದರೆ, ನೀನೊಬ್ಬನು ಹೊರತು ಬೇರೆಯಾರು ತಾನೇ ಸಮರ್ಥರು? ಓ ದಿತಿಕುಮಾರಾ! ಮಹಾಯೋಗಿಗಳಿಗೂ ದುಷ್ಕರವಾದ ಈ ನಿನ್ನ ದೃಢವ್ಯವಸಾಯದಿಂದಲೇ ನಾನು ನಿನ್ನಲ್ಲಿ ಪ್ರೀತನಾದೆನು ಇದರಮೇಲೆ ನಿನ್ನ ತಪೋನಿಷ್ಠೆಯು

ಸಂಪೂರ್ಣವಾಗಿ ನನ್ನನ್ನು ನಿನ್ನ ವಶಮಾಡಿತು. ಕೇಳಿದ ವರಗಳನ್ನು ಕೊಡುವೆನು ಬೇಕಾದುದನ್ನು ಕೇಳು! ಓ ದೈತ್ಯೇಂದ್ರಾ! ಮರಣಶೀಲನಾದ ನಿನಗೆ, ಅಮರಶ್ರೇಷ್ಠನಾದ ನನ್ನದರ್ಶನವು ಲಭಿಸಿದಮೇಲೆ ಎಂದಿಗಾದರೂ ವಿಫಲವಾಗುವುದುಂಟೆ?" ಎಂದನು, ಬ್ರಹ್ಮನು ಹೀಗೆಂದು ಹೇಳಿ ದಿವ್ಯಪ್ರಭಾವವುಳ್ಳ ತನ್ನ ಕಮಂಡಲಜಲವನ್ನು ಕೈಗೆತ್ತಿ,ಕ್ರಿಮಿ ಕೀಟಗಳಿಂದ ಭಕ್ಷಿತವಾದ ಆ ಹಿರಣ್ಯಕಶಿಪುವಿನ ಮೈಮೇಲೆ ಪ್ರೋಕ್ಷಿಸಿದನು. ಈ ಕಮಂಡಲುತೀರ್ಥವುಮೈಮೇಲೆ ಬಿದ್ದೊಡನೆ,ಅವನಿಗೆ ಇಂದ್ರಿಯಶಕ್ತಿಯೂ, ದೇಹಬಲವೂ, ದಿವ್ಯವಾದ ತೇಜಸ್ಸೂ ಉಂಟಾಯಿತು ಅಲ್ಲಲ್ಲಿ ಕ್ರಿಮಿಗಳಿಂದ ಭಕ್ಷಿತವಾದ ಸರ್ವಾವಯವಗಳೂ ಕೂಡಿಕೊಂಡುವು ಒಡನೆಯೇ ಅವನು ವಜ್ರದಂತೆ ದೃಢವಾದ ದೇಹದಿಂದಲೂ, ನವಯೌವನದಿಂದಲೂ ಒಪ್ಪುತ್ತ,ಅರಣಿಕಾಷ್ಠದಿಂದ ಹೊರಟ ಬೆಂಕಿಯಂತೆ,ಆಗ ಬಿದಿರುಮೆಳೆಯ ನಡುವೆ ಇರುವ ಹುತ್ತದಿಂದ ಮೇಲೆದ್ದು, ಪುಟಹಾಕಿದ ಚಿನ್ನದಂತಿರುವ ದೇಹಕಾಂತಿಯೊಡನೆ ಹೊರಕ್ಕೆ ಬಂದು, ಅಂತರಿಕ್ಷದಲ್ಲಿ ಹಂಸಾರೂಢನಾಗಿದ್ದ ಚತುರ್ಮುಖನನ್ನು ಕಂಡನು ಆತನ ದರ್ಶನದಿಂದ ಅತ್ಯಾನಂದಭರಿತನಾಗಿ ತಲೆಯನ್ನು ನೆಲಕ್ಕೆ ಸೋಕಿಸಿ ಸಾಷ್ಟಾಂಗಪ್ರಣಾಮವನ್ನುಮಾಡಿ ಮೇಲೆದ್ದು ನಿಂತು ಬದ್ಧಾಂಜಲಿಯಾಗಿ ಆ ಬ್ರಹ್ಮದೇವನನ್ನು ಎವೆಮುಚ್ಚದೆ ನೋಡುತಿದ್ದನು ಸಂತೋಷಾತಿಶಯದಿಂದ ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ಸುರಿಯುತಿತ್ತು, ದೇಹವೆಲ್ಲವೂ ಪುಳಕಿತವಾಯಿತು. ಈ ಆನಂದದಿಂದ ಕಂಠದಲ್ಲಿ ಸ್ವರವು ಚೆನ್ನಾಗಿ ಹೊರಡದೆ ಹೋದರೂ, ಗದ್ಗದಕಂಠದಿಂದಲೇ ಹೀಗೆಂದು ಸ್ತೋತ್ರಮಾಡುವನು. "ಓ ದೇವಾ! ದೈನಂದಿನಪ್ರಳಯದಲ್ಲಿ, ಕಾಲವಶದಿಂದ ಸಮಸ್ತಲೋಕಗಳೂ ಅಂಧಕಾರಮಯವಾಗಿದ್ದಾಗಲೂ, ಯಾವನೊಬ್ಬನು ಮಾತ್ರ, ಸ್ವಯಂಪ್ರಕಾಶರೂಪನಾಗಿ,ತನ್ನ ಕಾಂತಿಯಿಂದಲೇ ತಿರುಗಿ ಆ ಲೋಕವೆಲ್ಲವನ್ನೂ ಬೆಳಗುವನೋ, ಯಾವನು ಸತ್ವರಜಸ್ತಮಸ್ಸುಗಳೆಂಬ ಮೂರುಗುಣಗಳನ್ನವಲಂಬಿಸಿ, ಮೂರುವಿಧವಾದ ಶಕ್ತಿಯಿಂದ ಈ ಲೋಕದ ಸೃಷ್ಟಿಸ್ಥಿತಿಸಂಹಾರಗಳನ್ನು ನಡೆಸುವನೋ,ಅಂಶಹ ಮಹಾತ್ಮನಾದ ಲೋಕಕಾರಣನಾದ ಸರ್ವೇಶ್ವರನೇ ನೀನು! ಇದೋ!

ನಿನಗೆ ವಂದನವನ್ನು ಮಾಡುವೆನು. ಓ ಕಮಲಾಸನಾ! ನೀನು ಸಮಸ್ತಕಾರಣಗಳಿಗೂ ಆದಿಕಾರಣನು, ಜ್ಞಾನೈಕವೇದ್ಯನು, ನೀನು ಪ್ರಾಣಗಳೊಡನೆಯೂ, ಜ್ಞಾನಕರ್ಮೇಂದ್ರಿಯಗಳೊಡನೆಯೂ, ಮನಸ್ಸಿನೊಡನೆಯೂ, ಬುದ್ಧಿಯೊಡನೆಯೂ, ಪಂಚಭೂತಗಳೊಡನೆಯೂ ಸೇರಿ ಕಾರ್‍ಯರೂಪವನ್ನು ಹೊಂದುವೆ. ಚರಾಚರಾತ್ಮಕವಾದ ಸಮಸ್ತಜಗತ್ತಿಗೂ ಅಂತರ್ಯಾಮಿಯಾಗಿ ನಿಯಮಿಸತಕ್ಕವನೂ ನೀನೇ! ಸಮಸ್ತಪ್ರಜೆಗಳಿಗೂ ನೀನೇ ಅಧಿಪತಿಯು ಚಿತ್ತ, ಬುದ್ಧಿ, ಮನಸ್ಸು, ಇಂದ್ರಿಯಗಳು, ಇವುಗಳಲ್ಲಿ ಸೇರಿ ಆಯಾ ಕಾರ್‍ಯಗಳಿಂದ ಅವುಗಳ ಶಕ್ತಿಯನ್ನು ನಿರ್ವಹಿಸತಕ್ಕವನೂ ನೀನೇ. ಪೃಥಿವಿ ಮೊದಲಾದ ಪಂಚಭೂತಗಳಿಗೂ, ಅವುಗಳಲ್ಲಿಯ ಶಬ್ದಾದಿಗುಣಗಳನ್ನು ಗ್ರಹಿಸತಕ್ಕ ಇಂದ್ರಿಯಗಳಿಗೂ, ಅಂತಃಕರಣಕ್ಕೂ ಅಂತರ್ಯಾಮಿಯಾಗಿ ನಿಯಮಿಸತಕ್ಕವನೂ ನೀನೇ! ದೇವಾ ! ನೀನೇ ಸರ್ವಾಂತರ್ಯಾಮಿಯಾಗಿದ್ದು, ಚಾತುರ್ಹೋತ್ರವೇ ಮೊದಲಾದ ಮಂತ್ರವಿದ್ಯೆಗಳಿಂದ ಕೂಡಿದ ವೇದತ್ರಯರೂಪವಾದ ಶರೀರದಿಂದ, ಯಜ್ಞಾದಿಕರ್ಮಗಳನ್ನು ವಿಸ್ತರಿಸುವೆ! ನೀನೊಬ್ಬನೇ ಯೋಗಿಗಳಲ್ಲಿ ಅಂತರಾತ್ಮನಾಗಿದ್ದು ಯೋಗಮಾರ್ಗವನ್ನೂ ವಿಸ್ತರಿಸುವೆ! ನೀನು ದೇಶ ಕಾಲ ವಸ್ತು ಪರಿಚ್ಛೇದವಿಲ್ಲದೆ, ಎಲ್ಲಾ ಸ್ಥಳಗಳಲ್ಲಿಯೂ, ಎಲ್ಲಾ ಕಾಲಗಳಲ್ಲಿಯೂ, ಎಲ್ಲಾವಸ್ತುಗಳಲ್ಲಿಯೂ ನೆಲೆಗೊಂಡಿರತಕ್ಕವನು. ನೀನು ಸರ್ವಜ್ಞನು. ನೀನು ಸರ್ವಾಂತರ್ಯಾಮಿಯಾಗಿದ್ದರೂ, ಆಯಾವಸ್ತುಗತವಾದ ದೋಷಕ್ಕೆ ಗುರಿಯಾಗುವವನಲ್ಲ. ನೀನೇ ಕಾಲಶರೀರಕನಾಗಿ, ಎಚ್ಚರತಪ್ಪದೆ, ಲವ, ನಿಮಿಷ, ಕ್ಷಣ ಮುಹೂರ್ತ, ಮೊದಲಾದ ಕಾಲವಿಭಾಗಗಳಿಂದ ಪ್ರಾಣಿಗಳ ಆಯುಸ್ಸನ್ನು ಅಳೆದಳೆದು ತಗ್ಗಿಸುತ್ತಿರುವೆ ನೀನು ವಿಕಾರವಿಲ್ಲದವನು.ನೀನು ಆತ್ಮಗಳಿಗೂ ಅಂತರಾತ್ಮನಾದುದರಿಂದ, ಪರಮಾತ್ಮನೆನಿಸಿಕೊಂಡವನು ನೀನು ಎಲ್ಲಕ್ಕಿಂತಲೂ ಉತ್ತಮಸ್ಥಾನದಲ್ಲಿ ನೆಲೆಗೊಂಡಿರತಕ್ಕವನು. ನಿನಗೆ ಕರ್ಮಾಧೀನವಾದ ಉತ್ಪತ್ತಿಯಿಲ್ಲ. ನೀನೇ ಸಮಸ್ತ ಲೋಕಗಳಿಗೂ ಜೀವಭೂತನು. ಹೆಚ್ಚೇನು ? ದೇವಾ ! ಚರಾಚರಾತ್ಮಕವಾದ ಈ ಸಮಸ್ತಪ್ರಪಂಚವನ್ನು ಹುಡುಕಿದರೂ, ನಿನಗಿಂತಲೂ ಮೇಲಾದವರಾಗಲಿ, ನಿನಗೆ

ಸಮಾನರಾಗಲಿ ಬೇರೊಬ್ಬರಿಲ್ಲ ನಿನ್ನನ್ನು ಬಿಟ್ಟ ವಸ್ತುವೊಂದಾದರೂ ಇಲ್ಲ ವೇದಗಳು, ಉಪವೇದಗಳು, ಮೊದಲಾದ ಶಬ್ದಜಾಲಗಳೆಲ್ಲವೂ ನಿನ್ನ ಶರೀರವಲ್ಲದೆ ಬೇರೆಯಲ್ಲ ನೀನೇ ಮೊದಲು ಸುವರ್ಣಮಯವಾದ ಬ್ರಹ್ಮಾಂಡವನ್ನು ಗರ್ಭದಲ್ಲಿ ಧರಿಸಿದ್ದವನು. ನೀನು ಸ್ವರೂಪದಿಂದಲೂ, ಗುಣಗಳಿಂದಲೂ ಮೇಲೆನಿಸಿದವನು ಮೂರುಲೋಕಗಳ ಒಳಗೂ ಹೊರಗೂ ಪ್ರಕಾಶಿಸತಕ್ಕವನು. ಇಲ್ಲಿ ಕಾಣುವ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ನಿನ್ನ ಶರೀರವು ಜೀವಗಳಿಗೆ ಇಂದ್ರಿಯಗಳನ್ನೂ, ಪ್ರಾಣಗಳನ್ನೂ ಮನಸ್ಸನ್ನೂ, ಅವುಗಳಿಂದ ಅನುಭವಿಸತಕ್ಕ ಶಬ್ದಾದಿವಿಷಯಗಳನ್ನೂ ಕಲ್ಪಿಸಿ, ಆಯಾಜೀವಗಳು ನಡೆಸತಕ್ಕ ವ್ಯಾಪಾರಗಳೆಲ್ಲವನ್ನೂ, ನೀನು ಯಾವ ಶರೀರದಿಂದ ಲೀಲಾರ್ಥವಾಗಿ ಅನುಭವಿಸುತ್ತಿರುವೆಯೋ, ಯಾವುದು ಪಾರಮೇಷ್ಠ್ಯವೆಂಬ ಉತ್ತಮಸ್ಥಾನದಲ್ಲಿ ನೆಲೆಗೊಂಡಿರುವುದೋ ಅದು ನಿನ್ನ ಸೂಕ್ಷ್ಮಶರೀರವು ಓ ಲೋಕನಾಯಕಾ! ನೀನು ಸರ್ವಗತನಾಗಿದ್ದರೂ ಪ್ರಾಕೃತವಾದ ಇಂದ್ರಿಯಗಳಿಗೆ ಗೋಚರಿಸತಕ್ಕವನಲ್ಲ ನೀನು ಪುರಾಣಪುರುಷನು. ಅನಂತವಾಗಿಯೂ, ಅವ್ಯಕ್ತವಾಗಿಯೂ ಇರುವ ರೂಪದಿಂದ ಎಲ್ಲೆಲ್ಲಿಯೂ ವ್ಯಾಪಿಸಿ, ಚೇತನಾಚೇತನಗಳೆಲ್ಲವನ್ನೂ ಶರೀರವಾಗಿ ಉಳ್ಳ ನಿನಗೆ ನಮಸ್ಕಾರವು "ಹೀಗೆಂದು ಹಿರಣ್ಯಕಶಿಪುವು, ತಾನುಸಸ್ವಭಾವದಿಂದ ವಿಪರೀತಬುದ್ಧಿಯುಳ್ಳವನಾಗಿ, ಆ ಚತುರ್ಮುಖನನ್ನೇ ಸರ್ವೇಶ್ವರನೆಂದೂ, ಸರ್ವಸ್ವತಂತ್ರನೆಂದೂ ಭಾವಿಸಿ ಸ್ತುತಿಸಿದನು ಆಮೇಲೆ ತನ್ನ ಇಷ್ಟವರಗಳನ್ನು ಕೇಳುವುದಕ್ಕಾಗಿ ಅವನನ್ನು ಕುರಿತು "ಓ ದೇವಾ! ನೀನು ನನ್ನಲ್ಲಿ ಪ್ರಸನ್ನನಾಗಿ ಇಷ್ಟವರಗಳನ್ನು ಕೊಡುವುದಾದರೆ, ನಿನ್ನಿಂದ ಸೃಷ್ಟಿಸಲ್ಪಟ್ಟ ಯಾವ ಭೂತಗಳಿಂದಲೂ ನನಗೆ ಸಾವಿಲ್ಲದಂತೆ ಅನುಗ್ರಹಿಸು! ಮತ್ತು ಆವರಣದ ಒಳಗಾಗಲಿ, ಹೊರಗಾಗಲಿ, ರಾತ್ರಿಯಲ್ಲಿಯಾಗಲಿ, ಹಗಲಲ್ಲಿಯಾಗಲಿ, ಭೂಮಿಯಲ್ಲಿಯಾಗಲಿ, ಅಂತರಿಕ್ಷದಲ್ಲಿಯಾಗಲಿ, ನನಗೆ ಮರಣವಿಲ್ಲದಂತೆ ವರವನ್ನು ಕೊಡು! ನಿನ್ನಿಂದ ಸೃಷ್ಟಿಸಲ್ಪಟ್ಟ ಭೂತಗಳಿಂದಮಾತ್ರವಲ್ಲದೆ, ನಿನ್ನಿಂದಲೂ ನನಗೆ ಮರಣವಿಲ್ಲದಿರಬೇಕು. ಮತ್ತು ಆಯುಧಗಳಿಂದಾಗಲಿ, ಮನುಷ್ಯರಿಂದಾಗಲಿ, ಮೃಗಗಳಿಂದಾಗಲಿ, ದೇವಾಸುರ ಪನ್ನಗ ಜಾತಿಯವ

ರಿಂದಾಗಲಿ, ಪ್ರಾಣವುಳ್ಳವುಗಳಿಂದಾಗಲಿ, ಪ್ರಾಣವಿಲ್ಲದವುಗಳಿಂದಾಗಲಿ. ನನಗೆ ಸಾವಿಲ್ಲದಂತೆ ವರವನ್ನು ಕೊಡು.ಯುದ್ಧದಲ್ಲಿ ನನಗೆ ಯಾವುದೂ ಇದಿರಿಲ್ಲದೆ, ಸಮಸ್ತಪ್ರಾಣಿಗಳಿಗೂ ನಾನೇ ಏಕಾಧಿಪತಿಯೆನಿಸಿಕೊಳ್ಳಬೇಕು! ಇಂದ್ರಾದಿಲೋಕಪಾಲಕರಲ್ಲಿರುವ ಎಲ್ಲಾವಿಧವಾದ ಶಕ್ತಿಯೂ ನನಗೆ ಲಭಿಸಬೇಕು! ತಪಸ್ಸಿನಿಂದಲೂ, ಯೋಗಬಲದಿಂದಲೂ ಮಹಾಯೋಗಿಗಳಿಗೆ ಲಭಿಸತಕ್ಕ ಅಣಿಮಾದಿಸಿದ್ಧಿಗಳೆಲ್ಲವೂ ನನಗೆ ಕೈಸೇರಬೇಕು! ಹೀಗೆ ಅಮರತ್ವ,ಅಜಯ್ಯತ್ವ, ದಿವ್ಯಶಕ್ತಿ,ಯೋಗೀಶ್ವರರಿಗೆ ಲಭಿಸಬಹುದಾದ ಸಿದ್ಧಿ,ಈ ನಾಲ್ಕುವರಗಳನ್ನೂ ನನಗೆ ಅನುಗ್ರಹಿಸಬೇಕು" ಎಂದು ಕೇಳಿಕೊಂಡನು. ಇಲ್ಲಿಗೆ ಮೂರನೆಯ ಅಧ್ಯಾಯವು

---

ವರಬಲದಿಂದ ಕೊಬ್ಬಿದ ಹಿರಣ್ಯಕಶಿಪುವು, ದಿಗ್ವಿಜಯಕ್ಕೆ ಹೊರಟು, ಸ್ವರ್ಗಸಿಂಹಾಸನವನ್ನು ವಶಮಾಡಿ ಕೊಂಡುದು. ದೇವತೆಗಳು ವಿಷ್ಣುವಿನಲ್ಲಿ ಮೊರೆಯಿಟ್ಟುದು.

ಧರ್ಮರಾಜಾ ಕೇಳು! ಹಿರಣ್ಯಕಶಿಪುವು ಹೀಗೆ ದುರ್ಲಭವಾದ ವರಗಳನ್ನು ಕೇಳುತಿದ್ದರೂ, ಬ್ರಹ್ಮನು, ಅವನ ದೃಢತಪಸ್ಸಿಗಾಗಿ ಬಹಳ ಸಂತೋಷಪಟ್ಟು ಮುಂದಾಲೋಚನೆಯಿಲ್ಲದೆ,ಅವನು ಕೇಳಿದ ವರಗಳೆಲ್ಲವನ್ನೂ ಕೊಡುವುದಕ್ಕೆ ಸಮ್ಮತಿಸಿ, ಹೀಗೆಂದು ಹೇಳುವನು "ವತ್ಸಾ! ನೀನು ಕೇಳತಕ್ಕ ವರಗಳಾದರೋ ಯಾರಿಗೂ ದುರ್ಲಭವು,ಹಾಗಿದ್ದರೂ ನನ್ನ ಅನುಗ್ರಹವು ವ್ಯರ್ಥವಾಗಬಾರದು ಅವೆಲ್ಲವನ್ನೂ ನಾನು ನಿನಗೆ ಕೊಟ್ಟಿರುವೆನು." ಎಂದು ಹೇಳಿ, ಆ ದಾನವೇಂದ್ರನ ಪೂಜೆಗಳನ್ನು ಕೈಕೊಂಡು,ದಕ್ಷನೇ ಮೊದಲಾದ ಪ್ರಜಾಧಿಪತಿಗಳಿಂದ ಸ್ತುತಿಸಲ್ಪಡುತ್ತ, ತನ್ನ ಲೋಕಕ್ಕೆ ಹಿಂತಿರುಗಿದನು. ಇತ್ತಲಾಗಿ ಹಿರಣ್ಯಕಶಿಪುವು ಬ್ರಹ್ಮನಿಂದ ಇಷ್ಟವರಗಳನ್ನು ಪಡೆದೊಡನೆ, ಬಂಗಾರದ ಗಟ್ಟಿಯಂತೆ ಕಾಂತಿವಿಶೇಷದಿಂದ ಹೊಳೆಯುವ ದೇಹವುಳ್ಳವನಾಗಿ, ಲೋಕದಲ್ಲಿ ತನ್ನನ್ನು ಮೀರಿದವರಿಲ್ಲವೆಂಬ ಹೆಮ್ಮೆಯಿಂದುಕ್ಕುತಿದ್ದನು. ಒಡನೆಯೇ ಆವನಿಗೆತನ್ನತಮ್ಮನಾದಹಿರಣ್ಯಾಕ್ಷನಮರಣವು ಸ್ಮರಣೆಗೆಬರಲು ವಿಷ್ಣುವಿನಲ್ಲಿ ಮಹತ್ತಾದದ್ವೇಷವನ್ನಿಟ್ಟು,ಸಮಸ್ತ ದೇವಗ

ಣಗಳೊಡನೆ ಆವಿಷ್ಣುವನ್ನು ಜಯಿಸಬೇಕೆಂಬ ಸಂಕಲ್ಪದಿಂದ ದಿಗ್ವಿಜಯಕ್ಕಾಗಿ ಹೊರಟನು. ಕ್ರಮವಾಗಿ ಹತ್ತು ದಿಕ್ಕುಗಳನ್ನೂ ಜಯಿಸುತ್ತ ಬಂದನು. ತ್ರೈಲೋಕ್ಯವನ್ನೂ ತನ್ನ ವಶಮಾಡಿಕೊಂಡನು ದೇವತೆಗಳು, ದಾನವರು, ಮನುಷ್ಯರು, ಲೋಕಾಧಿಪತಿಗಳು, ಗರುಡರು, ಗಂಧರ್ವರು, ಪನ್ನಗರು, ಸಿದ್ಧರು, ಚಾರಣರು, ವಿದ್ಯಾಧರರು, ಋಷಿಗಳು, ಪಿತೃದೇವತೆಗಳು, ಮಹಾಮುನಿಗಳು, ಯಕ್ಷರು, ರಾಕ್ಷಸರು, ಪಿಶಾಚರು, ಭೂತಪ್ರೇತಗಳು, ಮುಂತಾಗಿ ಸಮಸ್ತಪ್ರಾಣಿವರ್ಗಗಳನ್ನೂ, ಆಯಾವರ್ಗದ ಪ್ರಧಾನನಾಯಕರೊಡನೆ ತನ್ನ ವಶಪಡಿಸಿಕೊಂಡನು ಎಲ್ಲಾ ದಿಕ್ಪಾಲಕರ ಐಶ್ವರ್ಯವನ್ನೂ, ಅವರವರ ಸ್ಥಾನಗಳನ್ನೂ ತನ್ನ ವಶಮಾಡಿಕೊಂಡನು.ನಂದನವನದ ಸೌಭಾಗ್ಯದಿಂದ ಬೆಳಗುತ್ತಿರುವ ಅಮರಾವತಿಗೆ ಪ್ರವೇಶಿಸಿ, ಅಲ್ಲಿ ಸಾಕ್ಷಾದ್ವಿಶ್ವಕರ್ಮನಿಂದ ನಿರ್ಮಿತವಾಗಿಯೂ, ಮೂರುಲೋಕಗಳ ಸೌಭಾಗ್ಯಕ್ಕೂ ಮುಖ್ಯಾಶ್ರಯವಾಗಿಯೂ, ಸಕಲಸಂಪತ್ಸಮೃದ್ಧವಾಗಿಯೂ ಇದ್ದ ದೇವೇಂದ್ರನ ಅರಮನೆಯನ್ನೇ ತನ್ನ ವಾಸಗೃಹವನ್ನಾಗಿ ಮಾಡಿಕೊಂಡು,ಸ್ವರ್ಗಸಿಂಹಾಸನವನ್ನೇರಿ ತ್ರೈಲೋಕ್ಯವನ್ನೂ ಏಕಾಧಿಪತ್ಯದಿಂದ ಆಳುವುದಕ್ಕೆ ತೊಡಗಿದನು. ಆ ಇಂದ್ರಭವನದಲ್ಲಿರುವ ಭೋಗಭಾಗ್ಯಸಮೃದ್ಧಿಗಳನ್ನು ಕೇಳಬೇಕೆ? ಎಲ್ಲಿ ನೋಡಿದರೂ ಹವಳದ ಸೋಪಾನಗಳು! ಮರಕತದ ನೆಲಗಟ್ಟುಗಳು!ಸ್ಫಟಿಕದ ಗೋಡೆಗಳು! ವೈಡೂರ್ಯದ ಕಂಬಗಳು!ಚಿತ್ರವಿಚಿತ್ರಗಳಾದ ಮೇಲು ಕಟ್ಟುಗಳು! ಪದ್ಮರಾಗದ ಆಸನಗಳು! ಹಾಲಿನನೊರೆಯಂತೆ ಶುಭ್ರವಾಗಿ ಮುತ್ತಿನ ಕುಚ್ಚುಗಳಿಂದಲಂಕೃತವಾದ ಹಾಸಿಗೆಗಳು! ಹೀಗೆ ಕೇವಲ ರತ್ನಮಯವಾಗಿ ಕಾಂತಿಯಿಂದ ಜ್ವಲಿಸುತ್ತಿರುವ ಆ ಅರಮನೆಯಲ್ಲಿ ಎಲ್ಲಿ ನೋಡಿದರೂ ದೇವಾಂಗನೆಯರು ಘಲ್ಘಲನೆ ಧ್ವನಿಮಾಡುವ ಕಾಲಂದುಗೆಗಳೊಡನೆ ಅತ್ತಿತ್ತ ಸಂಚರಿಸುವರು. ನಡುನಡುವೆ ಅಲ್ಲಲ್ಲಿ ಕಾಣುವ ರತ್ನಸ್ತಂಭಗಳಲ್ಲಿ ಅಂದವಾದ ತಮ್ಮ ಮುಖವನ್ನು ನೋಡಿಕೊಳ್ಳುತ್ತ, ಕ್ಷಣಕ್ಷಣಕ್ಕೂ ತಮ್ಮ ತಿಲಕಾದಿಗಳನ್ನು ತಿದ್ದುತ್ತಿರುವರು ಹೀಗೆ ಸರ್ವ ಸೌಭಾಗ್ಯವಿಶಿಷ್ಟವಾದ ಆ ಮಹೇಂದ್ರಭವನದಲ್ಲಿ, ಹಿರಣ್ಯಕಶಿಪುವು, ತನ್ನ ಮಹಾಬಲದಿಂದ ಮೂರುಲೋಕಗಳಿಗೂ ಏಕಾಧಿಪತಿಯೆನಿಸಿಕೊಂಡು, ಕ್ರೂರಶಾಸ

ನದಿಂದ ಸಮಸ್ತದೇವತೆಗಳನ್ನೂ ತನ್ನ ಪಾದಸೇವಕರನ್ನಾಗಿ ಮಾಡಿಕೊಂಡು, ತಾನೇ ತಾನಾಗಿ ರಾಜ್ಯಭೋಗಗಳನ್ನನುಭವಿಸುತಿದ್ದನು. ತಪೋಬಲದಿಂದಲೂ, ದೇಹಬಲದಿಂದಲೂ, ಇಂದ್ರಿಯಬಲದಿಂದಲೂ ಕೊಬ್ಬಿದ ಆ ದಾನವೇಂದ್ರನು, ಕ್ರೂರಗಂಧವುಳ್ಳ ಮದ್ಯವನ್ನು ಕಂಠಪೂರ್ತಿಯಾಗಿ ಕುಡಿದು, ಯಾವಾಗಲೂ ಆ ಮದ್ಯಮದದಿಂದ ಮತ್ತನಾಗಿ, ಕೆಂಪೇರಿದ ಕಣ್ಣಾಲೆಗಳನ್ನು ತೊಳಲಿಸುತ್ತ ಕುಳಿತಿರುವನು. ಹರಿಹರಬ್ರಹ್ಮರೆಂಬ ತ್ರಿಮೂರ್ತಿಗಳು ಹೊರತು, ಇತರದೇವತೆಗಳೆಲ್ಲರೂ ಕ್ಷಣಕ್ಷಣಕ್ಕೂ ಅವನಿಗೆ ಬೇಕುಬೇಕಾದ ಭೋಗ್ಯವಸ್ತುಗಳನ್ನು ತಾವಾಗಿ ತಂದು, ಪಾದಕಾಣಿಕೆಯನ್ನಾಗಿ ಸಮರ್ಪಿಸುತ್ತಿರುವರು ಓ ಧರ್ಮರಾಜ ಇವೆಲ್ಲವೂ ಹಾಗಿರಲಿ! ತನ್ನ ವೀರ್ಯದಿಂದ ತ್ರೈಲೋಕ್ಯವನ್ನೂ ಜಯಿಸಿದ ಆ ರಾಕ್ಷಸನು, ಇಂದ್ರಸಿಂಹಾಸನವನ್ನೇರಿ ಕುಳಿತಿರುವಾಗ, ವಿಶ್ವಾವಸು, ತುಂಬುರ, ಮೊದಲಾಗಿ ನಾವೆಲ್ಲರೂ ಆ ದುರಾತ್ಮನ ಮುಂದೆ ನಿಂತು ಅವನ ಚರಿತ್ರಗಳನ್ನು ಗಾನಮಾಡಬೇಕಾಯಿತು. ಗಂಧರ್ವರೂ, ಸಿದ್ಧರೂ, ಮಹರ್ಷಿಗಳೂ, ವಿದ್ಯಾಧರರೂ, ಅಪ್ಸರಸ್ಸುಗಳೂ, ಅವನನ್ನು ಸುತ್ತಮುಸ್ತುತಿಸುತಿದ್ದರು ಆ ರಾಕ್ಷಸನ ಆಳ್ವಿಕೆಯಲ್ಲಿ, ವರ್ಣಾಶ್ರಮಧರ್ಮನಿರತರಾದ ಜನರು ಅಲ್ಲಲ್ಲಿ ನಡೆಸತಕ್ಕ ಕ್ರತುಗಳಿಂದಲೂ, ಭೂರಿದಕ್ಷಿಣೆಯುಳ್ಳ ಯಾಗಗಳಿಂದಲೂ ತಾನೇ ಆರಾಧಿಸಲ್ಪಡುತ್ತ, ದೇವತೆಗಳಿಗೆ ಸಲ್ಲತಕ್ಕ ಹವಿರ್ಭಾಗಗಳನ್ನೆಲ್ಲಾ ತಾನೇ ಗ್ರಹಿಸುತಿದ್ದನು ಅ ರಾಕ್ಷಸನ ಭಯಕ್ಕಾಗಿ ಭೂಮಿಯೆಲ್ಲವೂ ಕೃಷಿಯಿಲ್ಲದೆ ಬೆಳೆಯುತಿತ್ತು. ಸ್ವರ್ಗಲೋಕವು ಅವನು ಕೋರಿದ ವಸ್ತುಗಳೆಲ್ಲವನ್ನೂ ಆಗಾಗಲೇ ಒದಗಿಸುತಿತ್ತು. ಅಂತರಿಕ್ಷದೇವತೆಗಳು ಚಿತ್ರವಿಚಿತ್ರವಸ್ತುಗಳನ್ನು ತಾವಾಗಿ ವರ್ಷಿಸುತಿದ್ದರು. ಲವಣ, ಇಕ್ಷು, ಸುರಾ, ಸರ್ಪಿಃ, ದಧಿ, ಕ್ಷೀರ, ಜಲಾರ್ಣವಗಳೆಂಬ ಸಪ್ತಸಮುದ್ರಗಳೂ, ಸಮುದ್ರ ಪತ್ನಿಯರಾದ ನದಿಗಳೂ, ತಮ್ಮೊಳಗಿನ ರತ್ನಗಳನ್ನು ತಾವಾಗಿಯೇ ಆಲೆಗಳೆಂಬ ಕೈಗಳಿಂದ ಅವನ ಪಾದಮೂಲಕ್ಕೆ ತಂದೊಪ್ಪಿಸುತಿದ್ದುವು ಸಮಸ್ತಪರ್ವತಗಳೂ ತಮ್ಮೊಳಗಿನ ವೃಕ್ಷಗಳಿಂದ ಬೇರೆಬೇ ಋತುಗಳಲ್ಲಿ ಹುಟ್ಟತಕ್ಕ ಫಲಪುಷ್ಪಗಳೆಲ್ಲವನ್ನೂ ಕಾಲನಿಯಮವಿಲ್ಲದೆ

ಯಾವಾಗಲೂ ಒದಗಿಸಿಕೊಡುತ್ತ, ಆತನಿಗೆ ಉತ್ತಮವಾದ ಕ್ರೀಡಾಸ್ಥಾನಗಳಾಗಿ ಕಂಗೊಳಿಸುತಿದ್ದುವು ಇಂದ್ರಾದಿಲೋಕಪಾಲಕರ ಆಳ್ವಿಕೆಯಲ್ಲಿ ಕಾಲನಿಯಮದಿಂದ ಋತುಧರ್ಮವನ್ನನುಸರಿಸಿ ಫಲವನ್ನು ಕೊಡುತಿದ್ದ ಒಂದೊಂದು ವೃಕ್ಷವೂ ಇವನ ಭಯಕ್ಕಾಗಿ ಯಾವಾಗಲೂ, ತನ್ನಲ್ಲಿ ಎಲ್ಲಾ ಋತುಧರ್ಮಗಳನ್ನೂ ಕಾಣಿಸುತಿತ್ತು ಹೀಗೆ ಆ ಹಿರಣ್ಯಕಶಿಪುವು ಸಮಸ್ತ ದಿಕ್ಕುಗಳನ್ನೂ ಜಯಿಸಿ,ಏಕಾಧಿಪತ್ಯದಿಂದಾಳುತ್ತ,ಯಥೇಷ್ಟವಾಗಿ ವಿಷಯ ಸುಖಗಳನ್ನನುಭವಿಸುತ್ತಿದ್ದನು ಹಾಗಿದ್ದರೂ ಜಿತೇಂದ್ರಿಯನಲ್ಲದಕಾರಣ ದಿಂದ, ಶಬ್ದಾದಿವಿಷಯಗಳನ್ನನುಭವಿಸಿದಷ್ಟೂ ಅವನಿಗೆ ಮೇಲೆಮೇಲೆ ಆಸೆ ಹೆಚ್ಚುತಿತ್ತೇಹೊರತು ತೃಪ್ತಿಯುಂಟಾಗಲಿಲ್ಲ ಅವನಿಗೆ ಮೇಲೇಮೇಲೆ ಐಶ್ವರ್ಯಮದವು ಹೆಚ್ಚಿ ಗರ್ವದಿಂದ ಬೀಗಿ ಬೆರೆಯುತಿದ್ದನು ಶಾಸ್ತ್ರ ಮರ್ಯಾದೆಗಳೆಲ್ಲವನ್ನೂ ಮೀರಿ ಉನ್ಮಾರ್ಗದಲ್ಲಿಯೇ ಪ್ರವರ್ತಿಸುತಿದ್ದನು. ಹೀಗೆ ಬಹುಸಂವತ್ಸರಗಳ ಕಾಲವು ಕಳದು ಹೋಯಿತು ಪೂರ್ವಜನ್ಮದಲ್ಲಿ ಅವನಿಗೆ ಸನಕಾದಿಮಹರ್ಷಿಗಳು ಕೊಟ್ಟ ಶಾಪಕ್ಕೆ ಕೊನೆಗಾಲವು ಸಮೀಪಿಸುತ್ತಬಂದಿತು,ಅದಕ್ಕೆ ಗುರುತಾಗಿ ಅಲ್ಲಲ್ಲಿ ಪ್ರಜೆಗಳಿಗೂ, ದೇವತೆ[illegible]ೂ, ದಿಕ್ಪಾಲರಿಗೂ ಮನಸ್ಸಿನಲ್ಲಿ ಭಯವೂ, ಕೋಪವೂ ಹುಟ್ಟುತ್ತಬಂದಿತು ಲೋಕದಲ್ಲಿ ಯಾರಿಂದಲೂ ಆವನ ಬಾಧೆಯನ್ನು ತಡೆಯುವುದಕ್ಕಾಗದೆ ಹೋಯಿತು. ಲೋಕಪಾಲರೊಡಗೂಡಿದ ಸಮಸ್ತಲೋಕವೂ, ಅವನ ಚಂಡಶಾಸನಕ್ಕೆ ಹೆದರಿ,ಆಶ್ರಿತರಕ್ಷಕನಾದ ಶ್ರೀಮಹಾವಿಷ್ಣುವಲ್ಲದೆ ತಮಗೆ ಬೇರೆ ದಿಕ್ಕಿಲ್ಲವೆಂದು ನಿಶ್ಚಯಿಸಿ,ಆಭಗವಂತನಿಗೆ ನಿವಾಸಸ್ಥಾನವಾದ ಕ್ಷೀರಾಬ್ಧಿಯಕಡೆಗೆ ತಿರುಗಿ ನಿಂತು ಕೈಮುಗಿದು, “ಯಾವ ದಿಕ್ಕಿನಲ್ಲಿ ಸರ್ವನಿಯಾಮಕನಾಗಿಯೂ, ಆಶ್ರಿತದುಃಖನಿವಾರಕನಾಗಿಯೂ, ಇರತಕ್ಕ ಶ್ರೀಮನ್ನಾರಾಯಣನು ನೆಲೆಗೊಂಡಿರುವನೋ, ಸರ್ವಸಂಗಪರಿತ್ಯಾಗಮಾಡಿ ರಾಗದ್ವೇಷಾದಿಗಳನ್ನು ಬಿಟ್ಟು ಶುದ್ಧಮನಸ್ಕರಾದ ಯೋಗಿಗಳು, ಯಾವ ಕಡೆಗೆ ಹೋದಮೇಲೆ ತಿರುಗಿ ಜನ್ಮವಿಲ್ಲದೆ ನಿತ್ಯಸುಖವನ್ನನುಭವಿಸುತ್ತಿರುವರೋ ಆ ದಿಕ್ಕಿಗೆ ನಮಸ್ಕಾರವು ”ಎಂದು, ಎಲ್ಲರೂ ಆಕಡೆಗೆ ನಮಸ್ಕಾರವನ್ನು ಮಾಡಿ, ಜಿತೇಂದ್ರಿಯರಾಗಿ, ನಿದ್ರಾಹಾರಗಳೆಲ್ಲವನೂ ಬಿಟ್ಟು, ಕೆಲವು



1291. ಕ್ಷೀರಾಬ್ಧಿಯಲ್ಲಿ ಮಹಾವಿಷ್ಣುವು ಬ್ರಹ್ಮಾದಿದೇವತೆಗಳಿಗೆ
ಅಭಯವನ್ನು ಕೊಟ್ಟದ್ದು.

ದಿನಗಳವರೆಗೆ ಕೇವಲ ವಾಯುಭಕ್ಷಣದಿಂದಲೇ ಜೀವಧಾರಣೆಮಾಡುತ್ತ, ಶುದ್ಧ ಮನಸ್ಕರಾಗಿ ದೃಢಧ್ಯಾನದಿಂದ ಆ ಭಗವಂತನನ್ನು ಬಾರಿಬಾರಿಗೂ ಸ್ತೋತ್ರಮಾಡುತಿದ್ದರು "ಷಾಡ್ಗುಣ್ಯ ಪರಿಪೂರ್ಣನಾಗಿಯೂ, ಸರ್ವಾಂತರಾತ್ಮನಾಗಿಯೂ ಇರುವ ಪರಮಪುರುಷನಿಗೆ ನಮಸ್ಕಾರವು. ಕೇವಲ ಶುದ್ಧಜ್ಞಾನಾನಂದಸ್ವರೂಪನಾದ ಭಗವಂತನಿಗೆ ನಮಸ್ಕಾರವು. ಆ ಪರಮಪುರುಷನೊಬ್ಬನಿಂದಲ್ಲದೆ ನಮ್ಮ ಭಯವು ನೀಗದು" ಎಂದು ಎಲ್ಲರೂ ಬದ್ಧಾಂಜಲಿಗಳಾಗಿ ಸ್ತೋತ್ರಮಾಡುತಿದ್ದರು ಇಷ್ಟರಲ್ಲಿ ದಿಕ್ಕುಗಳೆಲ್ಲವನ್ನೂ ಮೊಳಗಿಸುವಂತೆ ಮೇಘಗಂಭೀರವಾದ ಸ್ವರದಿಂದ ಆಕಾಶದಲ್ಲಿ ಒಂದಾನೊಂದು ಅಶರೀರವಾಕ್ಯ ಕೇಳಿಸಿತು "ಓ ದೇವಶ್ರೇಷ್ಠರೆ! ಭಯಪಡಬೇಡಿರಿ! ನಿಮ್ಮೆಲ್ಲರಿಗೂ ಕ್ಷೇಮವಾಗಲಿ! ನನ್ನ ಸಂದರ್ಶನವು ಸಮಸ್ತಭೂತಗಳಿಗೂ, ಎಲ್ಲಾ ಶ್ರೇಯಸ್ಸುಗಳನ್ನೂ ಕೈಗೂಡಿಸುವುದು ರಾಕ್ಷಸಾಧಮನಾದ ಆ ಹಿರಣ್ಯಕಶಿಪುವಿನ ದುಶ್ಚೇಷ್ಟೆಯನ್ನು ನಾನೂ ಬಲ್ಲೆನು! ಅದಕ್ಕೆ ತಕ್ಕ ಪ್ರತೀಕಾರವನ್ನೂ ಆಗಲೇ ನಿಶ್ಚಯಿಸಿರುವೆನು ಆದರೆ ನೀವು ಸ್ವಲ್ಪಕಾಲದವರೆಗೆ ನಿರೀಕ್ಷಿಸುತ್ತಿರಬೇಕು. ಎಲೈ ಸುರಶ್ರೇಷ್ಠರೆ! ಯಾವನಿಗೆ ದೇವತೆಗಳಲ್ಲಿಯೂ, ವೇದಗಳಲ್ಲಿಯೂ, ಗೋಬ್ರಾಹ್ಮಣರಲ್ಲಿಯೂ,ಸಜ್ಜನರಲ್ಲಿಯೂ, ಧರ್ಮದಲ್ಲಿಯೂ, ನನ್ನಲ್ಲಿಯೂ ದ್ವೇಷವು ಹೆಚ್ಚುತ್ತಬರುವುದೋ,ಅವನು ಶೀಘ್ರದಲ್ಲಿಯೇ ನಾಶಹೊಂದುವುದರಲ್ಲಿ ಸಂದೇಹವಿಲ್ಲ ನಾನು ಹಿರಣ್ಯಕಶಿವುವಿನಲ್ಲಿ ಆ ಅವಕಾಶವನ್ನೇ ನಿರೀಕ್ಷಿಸುತ್ತಿರುವೆನು. ಸಮಸ್ತಭೂತಗಳಿಗೂ ಹಿತನಾಗಿಯೂ, ರಾಗದ್ವೇಷಾದಿಗಳನ್ನು ಬಿಟ್ಟು ಶಾಂತನಾಗಿಯೂ, ಮಹಾತ್ಮನಾಗಿಯೂ,ನನ್ನ ಭಕ್ತನಾಗಿಯೂ ಇರುವ ತನ್ನ ಮಗನಾದ ಪ್ರಹ್ಲಾದನಿಗೆ, ಆ ರಾಕ್ಷಸನು ಯಾವಾಗ ದ್ರೋಹಮಾಡುವುದಕ್ಕೆಣಿಸುವನೋ, ಆಕ್ಷಣವೇ ನಾನು ಅವನ ತಲೆಯನ್ನು ಕತ್ತರಿಸುವೆನು ಬ್ರಹ್ಮನಿಂದ ಅವನು ಎಷ್ಟೋ ವರಗಳನ್ನು ಪಡೆದಿದ್ದರೂ, ನನ್ನ ಮುಂದೆ ಆ ವರಗಳೊಂದೂ ರಕ್ಷಿಸಲಾರವು" ಎಂಬೀ ವಾಕ್ಯಗಳು ಕೇಳಿ ಬಂದುವು ಕರ್ಣಾನಂದಕರವಾದ ಈ ಮಾತು ಕಿವಿಗೆ ಬಿದ್ದೊಡನೆ ದೇವತೆಗಳೆಲ್ಲರೂ ಸಂತೋಷದಿಂದ ಭಗವಂತನಿಗೆ ನಮಸ್ಕರಿಸಿ

ತಮ್ಮ ಮನಸ್ಸಿನಲ್ಲಿದ್ದ ಭಯವನ್ನು ಬಿಟ್ಟು, ಆ ದುರಾತ್ಮನು, ಸತ್ತನೆಂದೇ ನಿಶ್ಚಯಿಸಿ ಹಿಂತಿರುಗಿದರು. ಓ ಧರ್ಮರಾಜಾ! ಇತ್ತಲಾಗಿ ಹಿರಣ್ಯಕಶಿಪುವಿನ ವೃತ್ತಾಂತವನ್ನು ತಿಳಿಸುವೆನು ಕೇಳು ಆ ಹಿರಣ್ಯಕಶಿಪುವಿಗೆ ಆಶ್ಚರ್ಯಕರವಾದ ವೀರ್ಯಾದಿಗುಣಗಳುಳ್ಳ ನಾಲ್ಕುಮಂದಿ ಮಕ್ಕಳಿದ್ದರು. ಆ ನಾಲ್ವರಲ್ಲಿ ಪ್ರಹ್ಲಾದನೆಂಬವನು ಸೌಶೀಲ್ಯಾದಿಗುಣಗಳಿಂದಲೂ, ಭಗವದ್ಭಕ್ತಿಯಿಂದಲೂ ಎಲ್ಲರಿಗೂ ಮೇಲೆನಿಸಿಕೊಂಡನು. ಅವನು ಗುರುಹಿರಿಯರಲ್ಲಿ ವಿನಯವುಳ್ಳವನು ಮಹಾತ್ಮರನ್ನು ಪೂಜಿಸತಕ್ಕವನು. ಬ್ರಾಹ್ಮಣಪ್ರಿಯನು ಸಾಧುಗುಣಸಂಪನ್ನನು ಸತ್ಯಸಂಧನು. ಇಂದ್ರಿಯಗಳನ್ನು ಜಯಿಸಿದವನು. ಸಮಸ್ತಭೂತಗಳನ್ನೂ ತನ್ನಂತೆಯೇ ನೋಡತಕ್ಕವನು ಎಲ್ಲರಲ್ಲಿಯೂ ಅಸಾಧಾರಣವಾದ ಸ್ನೇಹವುಳ್ಳವನು ಸರ್ವಲೋಕಪ್ರಿಯನು. ಹಿರಿಯರನ್ನು ಕಂಡಾಗ ದಾಸನಂತೆ ಅವರ ಪಾದಗಳನ್ನು ಹಿಡಿದು ನಮಸ್ಕರಿಸುವನು ದೀನರನ್ನು ಕಂಡಾಗ ತಂದೆ ತಾಯಿಗಳನ್ನು ಕಂಡಂತೆ ಅವರಲ್ಲಿ ವಾತ್ಸಲ್ಯವನ್ನು ತೋರಿಸುವನು. ತನಗೆ ಸಮಾನರನ್ನು ಸಹೋದರಪ್ರೀತಿಯಿಂದ ಮನ್ನಿಸುವನು ಗುರುಗಳನ್ನು ಪರದೈವವೆಂದೇ ಭಾವಿಸಿ ಪೂಜಿಸುವನು ಕುಲ, ರೂಪ, ವಯಸ್ಸು, ವಿದ್ಯೆ, ಧನ, ಮುಂತಾದ ಭಾಗ್ಯಗಳೆಲ್ಲವೂ ತನಗೆ ಕೈಗೂಡಿದ್ದರೂ ಸ್ವಲ್ಪಮಾತ್ರವೂ ಗರ್ವವಿಲ್ಲದಿದ್ದನು, ವ್ಯಸನಕಾಲಗಳಲ್ಲಿ ಭಯಪಡತಕ್ಕವನಲ್ಲ ಇಹಲೋಕ, ಪರಲೋಕಗಳ ಸುಖಗಳೆಲ್ಲವನ್ನೂ ಅನಿತ್ಯವೆಂದು ತಿಳಿದು, ಮೋಕ್ಷವೊಂದನ್ನುಹೊರತು ಬೇರೆ ಸುಖಗಳೆಲ್ಲವನ್ನೂ ತೃಣಪ್ರಾಯವಾಗಿ ಭಾವಿಸುತಿದ್ದನು ಇಂದ್ರಿಯಗಳನ್ನೂ, ಪ್ರಾಣಗಳನ್ನೂ ಶರೀರವನ್ನೂ, ಮನಸ್ಸನ್ನೂ ವಶಪಡಿಸಿಕೊಂಡು, ಯಾವಾಗಲೂ, ಶಾಂತಚಿತ್ತನಾಗಿದ್ದನು. ರಾಕ್ಷಸಕುಲದಲ್ಲಿ ಹುಟ್ಟಿದ್ದರೂ ಆ ಜಾತಿಗೆ ಸಹಜವಾದ ತಾಮಸಗುಣಗಳಿಲ್ಲದೆ, ಸಾಧುಶಿರೋಮಣಿಯೆನಿಸಿಕೊಂಡಿದ್ದನು. ಓ ಧರ್ಮರಾಜಾ! ಆ ಮಹಾತ್ಮನ ಗುಣಗಳು ಈಗಲೂ ಅನೇಕ ಕವಿಗಳಿಂದ ನಾನಾವಿಧವಾಗಿ ಸ್ತುತಿಸಲ್ಪಡುತ್ತಿರುವುವು. ಸರ್ವೇಶ್ವರನಲ್ಲಿರುವ ಗುಣಾತಿಶಯಗಳಂತೆ,ಅವನ ಗುಣಗಳು ಎಂತವರ ಮನಸ್ಸನ್ನಾದರೂ

ಆಕರ್ಷಿಸುವುವು ಮಹಾಸಭೆಗಳಲ್ಲಿ ಸತ್ಪುರುಷರ ಪ್ರಶ್ನೆಸೆಯು ಬಂದಾಗ, ಶತ್ರುವಾದರೂ ಆ ಪ್ರಹ್ಲಾದನನ್ನೇ ನಿದರ್ಶನವಾಗಿ ತೆಗೆದುಕೊಳ್ಳದಿರಲಾರನು. ಇನ್ನು ನಿಮ್ಮಂತವರು ಅವನ ಗುಣಗಳನ್ನಭಿನಂದಿಸುವುದರಲ್ಲಿ ಸಂದೇಹವೇನಿದೆ! ಅವನ ಅಸಂಖ್ಯಾತಗುಣಗಳೇ ಅವನ ಮಹಿಮೆಯನ್ನು ಸೂಚಿಸುವುವು. ಅವನ ಗುಣಗಳೆಲ್ಲವನ್ನೂ ವರ್ಣಿಸುವುದಕ್ಕೆ ನನ್ನಿಂದಲೂ ಸಾಧ್ಯವಲ್ಲ. ಅವನಿಗೆ ವಿಷ್ಣುಭಕ್ತಿಯೆಂಬುದು ಜನ್ಮಸಿದ್ಧವಾದುದೇ ಹೊರತು, ಬೇರೊಬ್ಬರ ಉಪದೇಶದಿಂದ ಬಂದುದಲ್ಲ. ಹುಟ್ಟಿದುದು ಮೊದಲು, ಅವನ ಮನಸ್ಸು ಆ ಭಗವಂತನಲ್ಲಿಯೇ ನೆಲೆಗೊಂಡುದರಿಂದ ತನ್ನ ಆಟಪಾಟಗಳೆಲ್ಲವನ್ನೂ ಬಿಟ್ಟು ಯಾವಾಗಲೂ ಆ ಭಗವಂತನನ್ನೇ ಧ್ಯಾನಿಸುತ್ತ, ನೋಡಿದವರಿಗೆ ಜಡನಂತೆ ಕಾಣುತಿದ್ದನು, ಅವನ ಮನಸ್ಸು ಪ್ರಪಂಚವ್ಯಾಪಾರವನ್ನೇ ಮರೆತು ಆ ಭಗವಂತನಲ್ಲಿಯೇ ನೆಲೆಗೊಂಡಿದ್ದುದರಿಂದ, ಪಿಶಾಚ ಹಿಡಿದವನಂತೆ ತೋರುತಿದ್ದನು ಕುಳ್ಳಿರುವಾಗಲೂ, ಸಂಚರಿಸುವಾಗಲೂ, ಊಟಮಾಡುವಾಗಲೂ, ಮಲಗಿರುವಾಗಲೂ, ನೀರುಕುಡಿಯುವಾಗಲೂ, ಮಾತಾಡುವಾಗಲೂ, ಆ ಭಗವಂತನನ್ನೇ ಚಿಂತಿಸುತ್ತ, ನಿದ್ರೆ, ಆಹಾರ, ಮೊದಲಾದ ದೇಹಧರ್ಮಗಳನ್ನೂ ಗಮನಿಸದಿದ್ದನು ಆ ಭಗವಂತನ ಧ್ಯಾನದಿಂದ ಒಮ್ಮೊಮ್ಮೆ ಮೈಮರೆತು ನಿಲ್ಲುವನು! ಎಂದಾದರೂ ಒಮ್ಮೆ ಆ ಭಗವದ್ಧ್ಯಾನಕ್ಕೆ ವಿಘ್ನವುಂಟಾದಾಗ, ತನಗೆ ತಾನೇ ಅಳುವನು ಮತ್ತೊಮ್ಮೆ ತನ್ನಲ್ಲಿಯೇ ತಾನು ಆ ಭಗವದ್ಧ್ಯಾನಾನಂದದಿಂದ ಗಟ್ಟಿಯಾಗಿ ನಗುವನು. ಇನ್ನೊಮ್ಮೆ ಉಚ್ಚಸ್ವರದಿಂದ ಹರಿಗುಣಗಳನ್ನು ಗಾನಮಾಡುವನು! ಮತ್ತೊಮ್ಮೆ ಆ ಭಗವಂತನ ಹೆಸರನ್ನು ಹಿಡಿದು ಗಟ್ಟಿಯಾಗಿ ಕೂಗಿಕೊಳ್ಳುವನು. ಮತ್ತೊಮ್ಮೆ ವಿಷ್ಣುಧ್ಯಾನದಿಂದ ಬೇರೆಲ್ಲವನ್ನೂ ಮರೆತು, ತನ್ಮಯನಾಗಿ, ಆ ಭಗವಂತನ ವ್ಯಾಪಾರಗಳನ್ನು ತಾನೇ ಅನುಕರಿಸುವನು ಒಮ್ಮೊಮ್ಮೆ ಆ ಭಗವಂತನ ನಿರಂತರಧ್ಯಾನದಿಂದ, ಆನಂದಪರವಶನಾಗಿ ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತ, ಪುಳಕಿತಗಾತ್ರನಾಗಿ ಸುಮ್ಮನೆ ನಿಂತುಬಿಡುವನು. ಹೀಗೆ ಆ ರಾಕ್ಷಸಕುಮಾರನು, ನಿಷ್ಕಾಮವಾದ ಭಕ್ತಿಯಿಂದ, ಭಗವಂತನ ಪಾದಾರವಿಂದಗಳಲ್ಲಿ

ನಟ್ಟ ಮನಸ್ಸುಳ್ಳವನಾಗಿ. ವಿಷಯಾಭಿಲಾಷೆಯಲ್ಲಿಯೇ ಕಳವಳಿಸತಕ್ಕ ಸ್ವ ಭಾವವುಳ್ಳ ಆ ಮನಸ್ಸನ್ನು ನಿರತಿಶಯವಾದ ಮಹಾನಂದದಲ್ಲಿ ಸೇರಿಸಿ,ಶಾಂ ತನಾಗಿದ್ದನು ಓ ಧರ್ಮರಾಜಾ ! ಹೀಗೆ ಭಗವದ್ಭಕ್ತರಲ್ಲಿ ಪ್ರಮುಖನಾಗಿ ಯೂ, ಮಹಾತ್ಮನಾಗಿಯೂ ಇದ್ದ ತನ್ನ ಕುಮಾರನ ಸ್ಥಿತಿಯನ್ನು ನೋಡಿ ಹಿರಣ್ಯಕಶಿಪುವಿಗೆ ನಿರಪರಾಧಿಯಾದ ಅವನಲ್ಲಿ ಮೇಲೆಮೇಲೆ ದ್ವೇಷವು ಬೆಳೆ ಯುತ್ತಬಂದಿತು ಈ ದ್ವೇಷಬುದ್ಧಿಯಿಂದ ಆ ರಾಕ್ಷಸನು ಪುತ್ರಪ್ರೇಮ ವನ್ನೂ ತೊರೆದು, ಅವನನ್ನು ನಾನಾವಿಧದಿಂದ ಪೀಡಿಸತೊಡಗಿದನು" ಎಂ ದನು. ಅದಕ್ಕಾ ಧರ್ಮರಾಜನು, "ಓ ಮುನೀಂದ್ರಾ! ಏನಾಶ್ಚರ್ಯವಿ ದು! ನಿರಪರಾಧಿಯಾಗಿಯೂ, ಪರಮಸಾಧುವಾಗಿಯೂ ಇದ್ದ ತನ್ನ ಮಗ ನಿಗೆ,ಹೆತ್ತತಂದೆಯೇ ದ್ರೋಹವನ್ನೆಣಿಸಿದನೆಂಬುದು ಲೋಕವಿರುದ್ಧವಲ್ಲವೆ? ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು, ಕೇವಲಮೂರ್ಖರಾಗಿ, ಸಾಕ್ಷಾತ್ತಾಗಿ ತಮಗೇ ದ್ರೋಹವನ್ನೆಣಿಸತಕ್ಕವರಾಗಿದ್ದರೂ,ಹೆತ್ತವರಿಗೆ ಅವರಲ್ಲಿ ವಾತ್ಸ ಲ್ಯವು ತಪ್ಪುವುದಿಲ್ಲ ಒಂದುವೇಳೆ ಆಮಕ್ಕಳೇ ತಪ್ಪಿನಡೆದರೂ,ತಂದೆತಾಯಿ ಗಳು ಅವರನ್ನು ನಯಭಯಗಳಿಂದ ಶಿಕ್ಷಿಸಿ ಸನ್ಮಾರ್ಗಕ್ಕೆತರುವರೇ ಹೊರ ತು, ಶತ್ರುಗಳಂತೆ ಭಾವಿಸಿ ದ್ರೋಹವನ್ನೆಣಿಸಲಾರರು ವಿಧೇಯರಾಗಿ ಯೂ, ಸಾಧುಗಳಾಗಿಯೂ, ತಂದೆತಾಯಿಗಳನ್ನೇ ದೈವವೆಂಬ ಭಾವದಿಂದ ಪೂಜಿಸತಕ್ಕವರಾಗಿಯೂ ಇರುವ ಸತ್ಪುತ್ರರು ಆ ತಾಯ್ತಂದೆಗಳಿಗೆ ಎಷ್ಟು ಮಟ್ಟಿಗೆ ವಿಶ್ವಾಸಪಾತ್ರರಾಗಿರಬೇಕು? ಹೀಗಿರುವಾಗ ಹಿರಣ್ಯಕಶಪುವಿಗೆ ಪ ರಮಸಾಧುವಾದ ತನ್ನಮಗನಲ್ಲಿ ಅಷ್ಟು ದ್ರೋಹಬುದ್ಧಿಯು ಹೇಗೆ ಹುಟ್ಟಿ ತು? ಈ ದ್ವೇಷವು ಅವನ ಮರಣಕ್ಕೆ ಕಾರಣವಾದುದು ಹೇಗೆ" ಈ ವೃ ತ್ತಾಂತವನ್ನು ತಿಳಿಸಬೇಕು" ಎಂದನು ಇಲ್ಲಿಗೆ ನಾಲ್ಕನೆಯ ಅಧ್ಯಾಯವು.

---

ಹಿರಣ್ಯಕಶಿಪುವು ಗುರುಪುತ್ರರಮೂಲಕವಾಗಿ ಪ್ರಹ್ಲಾದನಿಗೆ ವಿದ್ಯಾಭ್ಯಾಸಮಾಡಿಸಿದುದು. ಮತ್ತು ಆತನ ದೃಢವಾದ ವಿಷ್ಣುಭಕ್ತಿಗಾಗಿ ಕೋಪಿಸಿದುದು.

ಧರ್ಮರಾಜಾ! ಕೇಳು ಶುಕ್ರಾಚಾರ್ಯನು ದಾನವರಿಗೆ ಪುರೋಹಿತ ನೆಂಬುದನ್ನು ನೀನೂ ಕೇಳಿಬಲ್ಲೆಯಷ್ಟೆ? ಚಂಡಾಮರ್ಕರೆಂಬ ಆವನ ಮಕ್ಕ

ಳಿಬ್ಬರೂ, ಹಿರಣ್ಯಕಶಿಪುವಿನ ಅರಮನೆಯ ಬಳಿಯಲ್ಲಿಯೇ ವಾಸಮಾಡುತ್ತಿದ್ದರು. ಹಿರಣ್ಯಕಶಿಪುವು ತನ್ನ ಕುಮಾರನಾದ ಪ್ರಹ್ಲಾದನಿಗೆ ವಿದ್ಯೆಯನ್ನು ಕಲಿಸಿ, ನೀತಿಶಾಸ್ತ್ರಪಾರಂಗತನನ್ನಾಗಿ ಮಾಡಬೇಕೆಂದೆಣಿಸಿ, ಅವನನ್ನು ವಿದ್ಯಾಭ್ಯಾಸಕ್ಕಾಗಿ ಚಂಡಾಮರ್ಕರ ವಶದಲ್ಲಿ ಬಿಟ್ಟನು ಆ ಗುರುಪುತ್ರರಿಬ್ಬರೂ, ಬೇರೆ ಕೆಲವು ರಾಕ್ಷಸಬಾಲಕರೊಡನೆ ಸೇರಿಸಿ ಪ್ರಹ್ಲಾದನಿಗೆ ವಿದ್ಯೆಗಳನ್ನು ಕಲಿಸುತಿದ್ದರು ಪ್ರಹ್ಲಾದನು ಬಹಳ ಸೂಕ್ಷ್ಮಬುದ್ಧಿಯುಳ್ಳವನಾಗಿದ್ದುದರಿಂದ, ಗುರುಗಳು ಹೇಳಿಕೊಟ್ಟ ಪಾಠಗಳೆಲ್ಲವನ್ನೂ ಸಹಪಾಠಿಗಳೆಲ್ಲರಿಗಿಂತಲೂ ಮೊದಲು ಆಗಾಗಲೇ ಒಪ್ಪಿಸಿಬಿಡುತಿದ್ದನು. ಆದರೇನು? ಅವರು ಹೇಳಿಕೊಟ್ಟ ಪಾಠಗಳೊಂದೂ ಅವನ ಮನಸ್ಸಿಗೆ ಸಮಂಜಸವಾಗಿತೋರಲಿಲ್ಲ. ಅವರು ಹೇಳತಕ್ಕ ವಿಷಯಗಳೆಲ್ಲವೂ, ತನ್ನವರೆಂದೂ ಪರರೆಂದೂ ಭೇದಬುದ್ಧಿಯನ್ನು ಕಲ್ಪಿಸಿ, ಹೆಚ್ಚಾಗಿ ಸ್ವಾಭಿಮಾನವನ್ನೇ ಹೊರಪಡಿಸುವಂತಿದ್ದುವು. ಹೀಗೆ ವ್ಯರ್ಥಾಭಿಮಾನವನ್ನು ಹುಟ್ಟಿಸಿ, ಮೇಲೆಮೇಲೆ ಅಹಂಕಾರಮಮಕಾರಗಳನ್ನು ಹೆಚ್ಚಿಸತಕ್ಕ ಆ ಗುರುಗಳ ಪಾಠವನ್ನು, ಕಿವಿಯಿಂದ ಕೇಳಿ, ಬಾಯಿಂದ ಹೊರಕ್ಕೆ ಬಿಟ್ಟುಬಿಡುತಿದ್ದನೇ ಹೊರತು, ಅವೊಂದನ್ನೂ ಮನಸ್ಸಿನಲ್ಲಿ ಧಾರಣಮಾಡಿಡಲಿಲ್ಲ ಹೀಗೆಯೇ ಕೆಲವು ದಿನಗಳು ಕಳೆಯುತ್ತ ಬಂದಮೇಲೆ ಒಮ್ಮೆ ದೈತ್ಯರಾಜನು, ತನ್ನ ಮುದ್ದುಮಗನಾದ ಪ್ರಹ್ಲಾದನನ್ನು ಕರೆದು, ತೊಡೆಯಮೇಲೆ ಕುಳ್ಳಿರಿಸಿಕೊಂಡು ಮೃದುವಾಕ್ಯದಿಂದ ಪ್ರಶ್ನೆಮಾಡುವನು "ಕುಮಾರಾ! ನೀನು ಇದುವರೆಗೆ ಗುರುಮುಖವಾಗಿ ಕಲಿತ ವಿಷಯದಲ್ಲಿ, ನಿನಗೆ ಸಾರವೆಂದು ತೋರಿದ ಯಾವುದಾದರೂ ಒಂದು ವಿಷಯವನ್ನು ಹೇಳು" ಎಂದನು, ಅದಕ್ಕಾ ಪ್ರಹ್ಲಾದನು "ಜನಕಾ ! ಅದರಲ್ಲಿ ಸಾರವೇನುಂಟು ಇವೆಲ್ಲವೂ ನಿಸ್ಸಾರಗಳು ! ದೇಹವುಳ್ಳವರಿಗೆ ಆ ದೇಹದಲ್ಲಿ ಅಭಿಮಾನವೂ, ಸ್ವತಂತ್ರಾಭಿಮಾನವೂ ಸಹಜವಾದುದು ಸಂಸಾರದಲ್ಲಿ ಕಟ್ಟುಬಿದ್ದು, ಮನೆಯಲ್ಲಿದ್ದಮೇಲೆ, ವಿಷಯಾಭಿಲಾಷೆಯು ಎಂತವರಿಗೂ ತಪ್ಪಿದುದಲ್ಲ. ಆ ವಿಷಯಾಭಿಲಾಷೆಯಿಂದ, ಕಾಮ, ಕ್ರೋಧ, ಭಯ, ಮುಂತಾದುವು ಮನಸ್ಸನ್ನು ಪೀಡಿಸುತ್ತಿರುವುವು. ಆದುದರಿಂದ, ಅಂಧಕೂಪಕ್ಕೆ ಸಮಾನವಾಗಿ ಅಧೋಗತಿಯ

ನ್ನು ಹೊಂದಿಸತಕ್ಕ ಮನೆಮಂದಿಗಳೆಲ್ಲವನ್ನೂ ಬಿಟ್ಟು, ಕಾಡಿಗೆ ಹೋಗಿ, ಶ್ರೀಹರಿಯನ್ನು ಧ್ಯಾನಿಸುತ್ತಿರುವುದೇ ಈ ಶರೀರವನ್ನು ಹೊತ್ತುದಕ್ಕೆ ಸಾರ್ಥಕವಲ್ಲದೆ ಬೇರೆಯಲ್ಲ ಇದೊಂದೇ ಸಾರವಾದ ವಿಷಯವೆಂದು ನನಗೆ ತೋರಿರುವುದು" ಎಂದನು. ಹೀಗೆ ಪ್ರಹ್ಲಾದನು, ತಮ್ಮ ಕುಲಕ್ಕೆ ಶತ್ರುವಾದ ವಿಷ್ಣುವನ್ನು ಸ್ತುತಿಸಿ ಹೇಳಿದ ಮಾತನ್ನು ಕೇಳಿ, ಹಿರಣ್ಯಕಶಿಪುವಿಗೆ ಅತ್ಯಾಶ್ಚರ್ಯವುಂಟಾಯಿತು. ಆ ಆಶ್ಚರ್ಯದಿಂದ ಬೆಜ್ಜರಬಿದ್ದು, ತನಗೆ ತಾನೇ ನಗುತ್ತ "ಆಹಾ! ಬಾಲಕರ ಬುದ್ಧಿಯು ಇತರರು ಹೇಳಿಕೊಟ್ಟ ಮಾರ್ಗವನ್ನೇ ಅನುಸರಿಸುವುದು, ಉಪಾಧ್ಯಾಯರ ಮನೆಯಲ್ಲಿ ವೇಷಧಾರಿಗಳಾಗಿ ಬಂದು ಸೇರಿದ ಯಾರೋ ಬ್ರಾಹ್ಮಣರು, ಇವನಿಗೆ ಈ ದುರ್ಬೋಧನೆಗಳನ್ನು ಮಾಡಿರಬೇಕು ಇನ್ನು ಮೇಲೆ ಈ ವಿಧವಾದ ಮೋಸಕ್ಕೆ ಅವಕಾಶಕೊಡದಂತೆ ಎಚ್ಚರದಿಂದ ನೋಡಿಕೊಳ್ಳಬೇಕು" ಎಂದು ಯೋಚಿಸಿ' ಚಂಡಾಮರ್ಕರನ್ನು ನೋಡೀ "ಎಲೈ ಗುರುಪುತ್ರರೆ'ನಿಮಗೂ ತಿಳಿಯದಂತೆ ಬೇರೆ ಯಾರೋ ಈಬಾಲಕನ ಬುದ್ಧಿಯನ್ನು ಕೆಡಿಸಿ ದಂತಿದೆ.ಇನ್ನು ಮೇಲಾದರೂ ನೀವು ಇವನನ್ನು ಅತ್ತಿತ್ತ ಕದಲದಹಾಗೆ, ನಿಮ್ಮ ಬಳಿಯಲ್ಲಿಯೇ ಇಟ್ಟುಕೊಂಡು, ಸರಿಯಾದ ಮಾರ್ಗಕ್ಕೆ ತರಬೇಕು" ಎಂದು ಹೇಳಿ ಕಳುಹಿಸಿಬಿಟ್ಟನು ಆಮೇಲೆ ಚಂಡಾಮರ್ಕರಿಬ್ಬರೂ ಪ್ರಹ್ಲಾದನನ್ನು ತಮ್ಮ ಮನೆಗೆ ಕರೆತಂದು ಒಳ್ಳೆಯಮಾತುಗಳಿಂದ ಲಾಲಿಸುತ್ತ "ವತ್ಸಾ! ಪ್ರಹ್ಲಾದಾ! ಸುಳ್ಳಾಡಬೇಡ! ಸತ್ಯವನ್ನು ಹೇಳು! ನಿನಗೆಕ್ಷೇಮವುಂಟು. ನಿನ್ನ ಸಹಪಾಠಿಗಳಾದ ಈ ರಾಕ್ಷಸಬಾಲಕರಿಗೊಬ್ಬರಿಗೂ ಇಲ್ಲದ ಈ ದುರ್ಬುದ್ಧಿಯು ನಿನಗೇಕೆ ಹುಟ್ಟಿತು? ಈ ವಿಪರೀತಬುದ್ಧಿಯು ನಿನಗೆ ತಾನಾಗಿ ಹುಟ್ಟಿತೆ? ಬೇರೆ ಯಾರಾದರೂ ವಿಷ್ಣುಭಕ್ತರು ಮೋಸದಿಂದ ನಿನಗೆ ಈ ದುರ್ಬೋಧನೆಯನ್ನು ಮಾಡಿರುವರೆ? ಕುಮಾರಾ! ಇದರ ನಿಜಾಂಶವನ್ನು ತಿಳಿಯಬೇಕೆಂದಿರುವೆವು. ಯಥಾರ್ಥವನ್ನು ತಿಳಿಸು! ನೀನು ನಿಜವನ್ನು ಹೇಳಿದರೆ ನಿಮ್ಮ ತಂದೆಗೂ ಕೋಪವುಂಟಾಗದು" ಎಂದರು ಅದಕ್ಕಾ ಪ್ರಹ್ಲಾದನು ಎಲೈ ಆಚಾರ್ಯರೆ!" ಈಬುದ್ಧಿಯು ತನಗೆ ತಾನೇ ಹುಟ್ಟಿತೆ? ಅಥವಾ ಬೇರೊಬ್ಬರು ಹೇಳಿಕೊಟ್ಟರೆ?" ಎಂದು ಪ್ರಶ್ನೆಮಾಡಿದಿರಲ್ಲವೆ ? ಈ ನಿಮ್ಮ ಪ್ರಶ್ನೆಯೇ

ನನಗೆ ಸಮಂಜಸವಾಗಿ ತೋರುವುದಿಲ್ಲ ತಾನೆಂದೂ, ಇತರನೆಂದೂ, ಶತ್ರು ವೆಂದೂ ಮಿತ್ರನೆಂದೂ, ಮನುಷ್ಯನೆಂದೂ ದೇವನೆಂದೂ, ತೋರುವ ಭೇದಬುದ್ಧಿಗಳೆಲ್ಲವೂ ಭಗವಂತನ ಮಾಯೆಯಿಂದ ಮೋಹಿತರಾದ ನಿಮ್ಮಂ ತವರಿಗೇಹೊರತು ತತ್ವಜ್ಞರಿಗೆ ಹುಟ್ಟಲಾರದು ಯಾವನು ಹೀಗೆ ತನ್ನ ಮಾಯೆಯೆಂಬ ವಿಚಿತ್ರಶಕ್ತಿಯಿಂದ ಜಗತ್ತನ್ನು ಮೋಹಗೊಳಿಸುವನೋ ಅಂತಹ ಸರ್ವೇಶ್ವರನಾದ ಶ್ರೀಹರಿಯನ್ನು ನಮಸ್ಕರಿಸಿರಿ ! ಮನುಷ್ಯರು ಆ ಭಗವಂತನ ಪಾದಪದ್ಮಗಳನ್ನು ಯಾವಾಗ ಆಶ್ರಯಿಸುವರೋ, ಆಗಲೇ ಅವರಿಗೆ ಆ ಭಗವದನುಗ್ರಹದಿಂದ ಈ ವಿಧವಾದ ಅಜ್ಞಾನವು ಬಿಟ್ಟು ಹೋಗುವುದು ಸಮಸ್ತಭೂತಗಳೂ ಆ ಪರಮಾತ್ಮನಿಗೆ ಶರೀರವಾ ಗಿರುವುದರಿಂದ "ಎಲ್ಲವೂ ಒಂದೇ" ಎಂಬ ಸಮಬುದ್ಧಿಯೂ ಹುಟ್ಟುವುದು ಶರೀರ ಸಂಬಂಧದಿಂದ ತಾನೆಂದೂ, ಇತರನೆಂದೂ ತೋರುವ ಭೇದಬು ದ್ಧಿಗಳೆಲ್ಲವೂ ಬಿಟ್ಟುಹೋಗುವುವು "ತಾನು ಬೇರೆ ಇತರರು ಬೇರೆ" ಎಂ ಬ ಭೇದಬುದ್ಧಿಯು, ದೇಹವನ್ನೇ ಆತ್ಮವೆಂದು ತಿಳಿಯತಕ್ಕ ಭ್ರಮದಿಂ ದುಂಟಾಗುವುದೇಹೊರತು ಬೇರೆಯಲ್ಲ ಇದು ಆ ಭಗವಂತನ ಮಾಯೆ ಯಿಂದಲೇ ಕಲ್ಪಿತವಾದುದರಿಂದ, ಈ ಬುದ್ಧಿಭ್ರಾಂತಿಯನ್ನು ನೀಗಿಸಬೇಕಾದ ರೆ, ಆ ಭಗವಂತನ ಅನುಗ್ರಹವೊಂದಲ್ಲದೆ ಬೇರೆ ಉಪಾಯವಿಲ್ಲ. ಆ ಪರ ಮಾತ್ಮನೊಬ್ಬನೇ ತನ್ನವರೆಂದೂ, ಹೆರವರೆಂದೂ ಭೇದಬುದ್ಧಿಯನ್ನು ಬಿಟ್ಟು, ಸರ್ವಸಮನಾಗಿರತಕ್ಕವನು ವೇದವಾದಿಗಳಾದ ಬ್ರಹ್ಮಾದಿಗಳೂ ಆತನ ವ್ಯಾಪಾರವನ್ನು ಕಾಣಲಾರರು. ಎಲೈ ಗುರುಪುತ್ರರೆ ! ನನಗೆ ಈ ಬುದ್ಧಿಯುಂಟಾದುದಕ್ಕೂ ಆ ಭಗವಂತನೇ ಕಾರಣವೆಂದು ತಿಳಿಯಿರಿ ! ಕ ಬ್ಬಿಣ ಮೊದಲಾದ ಲೋಹಗಳು, ಮತ್ತೊಬ್ಬರ ಪ್ರೇರಣೆಯಿಲ್ಲದೆ ಅಯ ಸ್ಕಾಂತ (ಸೂಜಿಗಲ್ಲು) ವಿದ್ದಕಡೆಗೆ, ತನಗೆತಾನೇ ತಿರುಗುವಂತೆ, ನನ್ನ ಬು ದ್ಧಿಯೂ ತಾನಾಗಿಯೇ ಆ ಶ್ರೀಹರಿಯ ಪಾದಾರವಿಂದಗಳಲ್ಲಿ ಪ್ರವ ರ್ತಿಸುತ್ತಿರುವುದು ಇದಕ್ಕೂ ಆ ಭಗವಂತನ ಅನುಗ್ರಹವೇ ಕಾರಣವಾಗಿ ರಬೇಕಲ್ಲದೆ ಬೇರೆಯಲ್ಲ" ಎಂದು ಹೇಳಿ, ಮಹಾಧೀಮಂತನಾದ ಆ ಪ್ರಹ್ಲಾ ದನು, ಬೇರೆ ಯಾವ ಮಾತನ್ನೂ ಆಡದೆ ಸುಮ್ಮನಾದನು ಚಂಡಾಮರ್ಕ

ರಿಗೆ ಯಾವಯಾವ ಉಪಾಯಾಂತರಗಳಿಂದಲೂ, ಅವನ ಬುದ್ಧಿಯನ್ನು ತಿರುಗಿಸುವುದಕ್ಕೆ ಸಾಧ್ಯವಾಗಲಿಲ್ಲ ಇದರಿಂದ ಅವರಿಗೆ ಮೇಲೆಮೇಲೆ ಕೋಪವು ಹೆಚ್ಚುತ್ತಬಂದಿತು ಒಡನೆಯೇ ಆ ಇಬ್ಬರಲ್ಲಿ ಚಂಡನೆಂಬವನು ಕೋಪದಿಂದ ಹಲ್ಲುಗಳನ್ನು ಕಡಿಯುತ್ತ "ಎಲಾ! ಯಾರಲ್ಲಿ! ಬೆತ್ತವನ್ನು ತಂದಿಡು! ರಾಕ್ಷಸಕುಲಕ್ಕೆ ಕಂಟಕನಾಗಿ, ನಮಗೂ ಅಪಕೀರ್ತಿಯನ್ನು ತರತಕ್ಕ ಈ ದುರಾತ್ಮನನ್ನು ಶಿಕ್ಷಿಸದೆ ತೀರದು! ಇವನಲ್ಲಿ ಸಾಮೋಪಾಯವು ಕೆಲಸಕ್ಕೆ ಬಾರದು ದಂಡೋಪಾಯದಿಂದಲೇ ಇವನನ್ನು ದಾರಿಗೆ ತರಬೇಕು ಈ ದುರಾತ್ಮನು ದೈತ್ಯಕುಲವೆಂಬ ಚಂದನವನದ ನಡುವೆ ಮುಳ್ಳುಗಿಡದಂತೆ ಹುಟ್ಟಿರುವುದಲ್ಲದೆ, ಆ ಚಂದನವನಕ್ಕೆ ಕೊಡಲಿಯಂತಿರುವ ವಿಷ್ಣುವಿಗೆ ಈತನೇ ಆ ಕೊಡಲಿಯ ಕಾವಿನಂತೆ ಸಹಕಾರಿಯಾಗಿಯೂ ನಿಂತಿರುವನು.ಇರಲಿ!ಇವನನ್ನು ತಕ್ಕ ರೀತಿಯಿಂದ ದಂಡಿಸಿ ಮಾರ್ಗಕ್ಕೆ ತರುವೆವು" ಎಂದು ಹೇಳಿ, ಆಗುರುಪುತ್ರರಿಬ್ಬರೂ ಬೇರೆಬೇರೆ ಉಪಾಯಗಳಿಂದ ಅವನನ್ನು ಹೆದರಿಸುತಿದ್ದರು ಆಮೇಲೆ ಅವನಿಗೆ ಸಮಾಧಾನಗಳನ್ನು ಹೇಳಿ ಕರೆತಂದು, ತಿರುಗಿ ವಿದ್ಯಾಭ್ಯಾಸವನ್ನಾರಂಭಿಸಿ, ಧರ್ಮಾರ್ಥಕಾಮಗಳೆಂಬ ಪುರುಷಾರ್ಥತ್ರಯವನ್ನೇ ಮುಖ್ಯವಾಗಿ ತಿಳಿಸತಕ್ಕ ಅನೇಕಶಾಸ್ತ್ರಗಳನ್ನೋದಿಸಿದರು. ಅವರು ಹೇಳಿಕೊಟ್ಟ ಒಂದೊಂದು ವಿಷಯವನ್ನೂ ಪ್ರಹ್ಲಾದನು ತನ್ನ ಸೂಕ್ಷ್ಮಬುದ್ಧಿಯಿಂದ ಗ್ರಹಿಸಿ, ಆಗಾಗಲೇ ಒಪ್ಪಿಸಿಬಿಡುತಿದ್ದನು. ಆ ಗುರುಪುತ್ರರಿಗೂ ಇವನ ಬುದ್ಧಿಚಾತುರ್ಯವನ್ನು ನೋಡಿ ಸಂತೋಷಹುಟ್ಟಿತು ರಾಜಕುಲಕ್ಕೆ ಅತ್ಯವಶ್ಯಕವಾಗಿ ಬೇಕಾದ ಸಾಮ ದಾನ ಭೇದ ದಂಡಗಳೆಂಬ ಚತುರುಪಾಯಗಳನ್ನೂ, ರಾಜರೀತಿಯನ್ನೂ ಕಲಿಸಿದರು ಇವೆಲ್ಲವನ್ನೂ ಅಕ್ಕರೆಯಿಂದೋದುತಿದ್ದ ಆ ಪ್ರಹ್ಲಾದನಿಗೆ, ಇನ್ನುಮೇಲೆ ಬೇರೆ ವಿಷಯದಲ್ಲಿ ಬುದ್ಧಿಯು ತಿರುಗಲಾರದೆಂಬ ನಂಬಿಕೆಯು ಹುಟ್ಟಿದಮೇಲೆ, ಅವನನ್ನು ತಾಯಿಯ ಬಳಿಗೆ ಕರೆತಂದು ಬಿಟ್ಟರು ಆಕೆಯು ಪುತ್ರನನ್ನು ನೋಡಿ ಸಂತೋಷಿಸಿ, ಅವನಿಗೆ ರಾಜಯೋಗ್ಯವಾದ ಅಲಂಕಾರಗಳೆಲ್ಲವನ್ನೂ ಮಾಡಿದಳು. ಆಮೇಲೆ ಚಂಡಾಮಾರ್ಕರಿಬ್ಬರೂ ಅವನನ್ನು ತಂದೆಯ ಬಳಿಗೆ ಕರೆತಂದ

ರು ಪ್ರಹ್ಲಾದನು! ತಂದೆಯ ಪಾದಗಳನ್ನು ಹಿಡಿದು ವಿನಯದಿಂದ ನಮ ಸ್ಕರಿಸಿದನು. ಆತನ ವಿನಯವನ್ನು ನೋಡಿ ಹಿರಣ್ಯಕಶಿಪುವು ಪರಮಸಂತು ಷ್ಟನಾಗಿ, ಆತನನ್ನು ಕೈಗಳಿಂದೆತ್ತಿ ಪ್ರೇಮದಿಂದಾಲಿಂಗಿಸಿದನು ಆ ಪು ತ್ರಾಲಿಂಗನಸುಖದಿಂದ ಸ್ವಲ್ಪಕಾಲದವರೆಗೆ ಮೈಮರೆತಿದ್ದು, ಆತನನ್ನು ಕರೆದು ತೊಡೆಯಮೇಲೆ ಕುಳ್ಳಿರಿಸಿಕೊಂಡನು ಅವನ ತಲೆಯನ್ನಾಘ್ರಾ ಣಿಸಿದನು. ಕಣ್ಣುಗಳಿಂದ ಆನಂದಬಾಷ್ಪವನ್ನು ತುಳುಕಿಸುತ್ತ, ಮಂದ ಹಾಸದಿಂದ ಅರಳಿದ ಮುಖವುಳ್ಳವನಾಗಿ ಪ್ರಶ್ನೆಮಾಡುವನು. "ಓ ಆ ಯುಷ್ಮಂತಾ! ಪ್ರಹ್ಲಾದಾ! ನೀನು ಗುರುಕುಲಕ್ಕೆ ಹೋಗಿ ಬಹುದಿನಗ ಳಾದುವು ಇಷ್ಟರಲ್ಲಿ ನೀನು ಅನೇಕಶಾಸ್ತ್ರಗಳನ್ನು ಚೆನ್ನಾಗಿ ಕಲಿತಿರಬೇ ಕು. ಇದುವರೆಗೆ ನೀನು ಕಲಿತ ವಿಷಯಗಳಲ್ಲಿ ನಿನಗೆ ಯಾವುದು ಉತ್ತಮ ವೆಂದು ತೋರುವುದೋ, ಅದನ್ನು ನನ್ನಮುಂದೆ ಹೇಳಿ, ನನಗೆ ಕರ್ಣಾನಂದ ವನ್ನುಂಟುಮಾಡುವೆಯಾ?" ಎಂದನು. ಅದಕ್ಕಾ ಪ್ರಹ್ಲಾದನು "ಜನಕಾ ಕೇಳು! ಯಾವಾಗಲೂ ವಿಷ್ಣುಕಥೆಗಳನ್ನು ಕಿವಿಯಿಂದ ಕೇಳುತ್ತಿರುವುದು! ಅವನ ಗುಣಗಳನ್ನೇ ಬಾಯಿಂದ ನುಡಿಯುತ್ತಿರುವುದು! ಆತನನ್ನೇ ಮನ ಸ್ಸಿನಲ್ಲಿ ಸ್ಮರಿಸುತ್ತಿರುವುದು ! ಯಾವಾಗಲೂ ಅವನ ಪಾದಸೇವೆಯನ್ನು ನಡೆಸುತ್ತಿರುವುದು! ಆ ಭಗವಂತನ ಪಾದಾರವಿಂದಗಳನ್ನು ಪೂಜಿಸುವು ದು! ಬಾರಿಬಾರಿಗೂ ಅವನ ಪಾದಗಳನ್ನು ಹಿಡಿದು ನಮಸ್ಕರಿಸುವುದು. ಆತನನ್ನುಪಚರಿಸುವುದು! ಅವನಲ್ಲಿಯೇ ಮೈತ್ರಿಯನ್ನು ಬೆಳೆಸುವುದು. ತನ್ನ ಸಮಸ್ತ ಭಾರವನ್ನೂ ಅವನಲ್ಲಿಯೇ ಅರ್ಪಿಸುವುದು ಈ ನವವಿಧ ಭಕ್ತಿಗಳ ನ್ನು ಹಿಡಿದು, ಫಲಾಪೇಕ್ಷೆಯಿಲ್ಲದೆ ಆ ಭಗವಂತನನ್ನು ಆಶ್ರಯಿಸುವುದೊಂದೇ ಪ್ರತಿಯೊಬ್ಬರೂ ಅವಶ್ಯವಾಗಿ ನಡೆಸಬೇಕಾದ ಕಾರ್ಯವು. ಅನೇಕಶಾ ಸ್ತ್ರಗಳನ್ನೋದಿದುದಕ್ಕೂ ಇದೇ ಫಲವು ಈ ಭಕ್ತಿಯೋಗವನ್ನು ತಿಳಿಸ ತಕ್ಕ ವಿದ್ಯೆಯೇ ಉತ್ತಮವಿದ್ಯೆಯೆಂದು ನನ್ನ ಮತವು" ಎಂದನು. ಧರ್ಮ ರಾಜಾ! ಈ ಮಾತುಗಳು ಕಿವಿಗೆ ಬಿದ್ದೊಡನೆ ಹಿರಣ್ಯಕಶಿಪುವಿಗೆ ತಡೆಯ ಲಾರದ ಕೋಪವುಂಟಾಯಿತು ! ಈ ಕೋಪಾವೇಶದಿಂದ ತುಟಿಗಳನ್ನು ನಡುಗಿಸುತ್ತ, ಸಮೀಪದಲ್ಲಿದ್ದ ಗುರುಪುತ್ರನನ್ನು ನೋಡಿ "ಎಲೆಲಾ! ಬ್ರಾ

ಹ್ಮಣಾಧಮಾ! ಇದಲ್ಲವೇ ನೀನು ನನ್ನ ಮಗನಿಗೆ ಕಲಿಸಿದುದು! ನನ್ನ ಮನೆಯ ಅನ್ನವನ್ನು ತಿಂದ ನೀನು ನನ್ನನ್ನೇ ತಿರಸ್ಕರಿಸಿ, ನನ್ನ ಶತ್ರುವಾದ ವಿಷ್ಣುವಿನ ಪಕ್ಷವನ್ನು ಹಿಡಿದು, ಈ ಅರಿಯದ ಬಾಲಕನಿಗೆ ದುರ್ಬೋಧನೆಯನ್ನು ಮಾಡುವೆಯಾ? ಎಲೆ ದುರಾತ್ಮಾ! ನಿನ್ನಂತೆ ಲೋಕದಲ್ಲಿ ಕಪಟಸ್ನೇಹವನ್ನು ನಟಿಸುತ್ತ, ಅದಕ್ಕೆ ತಕ್ಕ ವೇಷದಿಂದ ತಿರುಗುತ್ತಿರುವ ದುರಾತ್ಮರೆಷ್ಟೋ ಮಂದಿಯನ್ನು ನೋಡಿರುವೆನು. ಇಂತಹ ಕಪಟಿಗಳ ದ್ರೋಹವು ತತ್ಕಾಲಕ್ಕೆ ತಿಳಿಯದೆ ಹೋದರೂ, ಅವರ ಮೋಸವು ಕಾಲಾಂತರದಲ್ಲಿ ಹೊರಕ್ಕೆ ಬಾರದಿರದು. ಪಾಪಾತ್ಮರಿಗೆ ಅವರವರ ಪಾಪದ ಬಲವು ಆಗಾಗಲೇ ಕಾಣಿಸದಿದ್ದರೂ, ಕಾಲಾಂತರದಲ್ಲಿ ಕುಷ್ಠಾದಿರೋಗಗಳಿಂದ ಅವರು ಹಿಂದೆ ಮಾಡಿದ ಪಾಪಗಳು ಹೊರಕ್ಕೆ ಕಾಣುವಂತೆ,ನಿನ್ನ ಮೋಸವು ಈಗೀಗ ಸ್ಪಷ್ಟವಾಗಿ ಹೊರಕ್ಕೆ ಬರುತ್ತಿರುವುದು" ಎಂದನು ಅದಕ್ಕಾ ಗುರುಪುತ್ರರು "ದೈತ್ಯೇಂದ್ರಾ! ನಿಷ್ಕಾರಣವಾಗಿ ನಮ್ಮಮೇಲೆ ಕೋಪಿಸಬೇಡ! ನಿನ್ನ ಮಗನಿಗೆ ಈ ದುರ್ಬುದ್ಧಿಯು ನಮ್ಮಿಂದ ಬಂದುದಲ್ಲ ಬೇರೆಯಾರೂ ಹೇಳಿಕೊಟ್ಟುದಲ್ಲ ಈ ವಿಪರೀತಬುದ್ಧಿಯು ಇವನಿಗೆ ಸಹಜವಾಗಿ ಹುಟ್ಟಿರುವುದು ತನ್ನ ಮನಸ್ಸಿಗೆ ತೋರಿದಂತೆ ಬೊಗುಳುತ್ತಿರುವನು. ದೀನರಾದ ನಮ್ಮಮೇಲೆ ಕೋಪಿಸಿ ನಮ್ಮನ್ನು ಹಿಂಸಿಸಬೇಡ" ಎಂದರು ಅದನ್ನು ಕೇಳಿ ಹಿರಣ್ಯಕಶಿಪುವು, ಪ್ರಹ್ಲಾದನಕಡೆಗೆ ತಿರುಗಿ "ಎಲೆ ಬಾಲಕಾ! ನಿನಗೆ ಈ ಕೆಟ್ಟಬುದ್ಧಿಯನ್ನು ಯಾರು ಕಲಿಸಿದರು ಹೇಳು!"ಎಂದನು ಅದಕ್ಕಾ ಪ್ರಹ್ಲಾದನು "ಓ ಜನಕಾ! ಭಗವದ್ಭಕ್ತಿರೂಪವಾದ ಈ ಬುದ್ಧಿಯು, ಮತ್ತೊಬ್ಬರು ಹೇಳಿ ಕೊಡುವುದರಿಂದ ಬಾರದು ! ತಾನಾಗಿಯೂ ಹುಟ್ಟದು ! ನರಕದ ಬಾಯಿಗೆ ಸಮಾನವಾದ ಸಂಸಾರದಲ್ಲಿ ಆಗಾಗ ಬಿದ್ದೇಳುತ್ತ, ಇಂದ್ರಿಯಗಳಿಗೆ ವಶರಾಗಿ, ಒಂದಾವರ್ತಿ ಅನುಭವಿಸಿಬಿಟ್ಟ ವಸ್ತುವನ್ನೇ ತಿರುಗಿತಿರುಗಿ ಆಶಿಸುತ್ತ,ವಿಷಯಲಂಪಟರಾಗಿ, ಕುಟುಂಬಧರ್ಮದಲ್ಲಿರತಕ್ಕ ನಿಮ್ಮಂತವರಿಗೆ ಈಬುದ್ಧಿಯು ಹುಟ್ಟುವುದೇನೋ ಕಷ್ಟವು. ಶಬ್ದಾದಿವಿಷಯಗಳನ್ನೇ ಪುರುಷಾರ್ಥವೆಂದು ತಿಳಿದು, ಆ ದಾರಿಯನ್ನೇ ಅನುಸರಿಸಿ ಹೋಗತಕ್ಕ ಮೂಢರು, ಆ ಶ್ರೀಹರಿಯೇ ತಮಗೆ ಉತ್ತಮಪ್ರ




1300. ಹಿರಣ್ಯಕಶಿಪುವು ಹರಿನಾಮೋಚ್ಚಾರಣವನ್ನು ಮಾಡಿದ ಪ್ರಹ್ಲಾದನನ್ನು ಹೊರಕ್ಕೆ ನೂಕಿ, ಗುರುಪುತ್ರರಾದ ಚಂಡಾಮರ್ಕರನ್ನು ನಿಂದಿಸಿದುದು.

ರುಷಾರ್ಥವೆಂಬುದನ್ನೂ, ಆ ಪುರುಷಾರ್ಥವನ್ನು ಪಡೆಯುವುದಕ್ಕೂ ಅವನೇ ಉಪಾಯವೆಂಬುದನ್ನೂ ತಿಳಿಯದೆ, ಕೆಟ್ಟುಹೋಗುವರು. ವೇದವೆಂಬ ಹಗ್ಗದಿಂದ ಸೆಳೆಯಲ್ಪಟ್ಟು,ಕಾಮ್ಯಕರ್ಮಪ್ರವಣರಾಗಿರುವ ಜನರ ಭೋಧನೆಗೆ ಮರುಳಾಗಿ,ಅದೇ ದಾರಿಯನ್ನು ಹಿಡಿಯುತಕ್ಕವರು. ಕುರುಡರ ಕೈಯನ್ನು ಹಿಡಿದು ನಡೆಯುವ ಕುರುಡರಂತೆ,ಅಧೋಗತಿಯನ್ನು ಹೊಂದುವುದರಲ್ಲಿಸಂದೇಹವಿಲ್ಲ. ವಿಷಯಾಸಕ್ತರಾದ ಇಂತವರ ಬುದ್ಧಿಯು. ಅನರ್ಥನಿವಾರಕವಾದ ಆ ಭಗವಂತನ ಪಾದಾರವಿಂದವನ್ನು ಎಂದಿಗೂ ಸ್ಪರ್ಶಿಸಲಾರದು ಆ ವಿಷ್ಣುವಿನಲ್ಲಿ ತಮ್ಮ ಬುದ್ಧಿಯನ್ನು ನೆಲೆಗೊಳಿಸಬೇಕೆಂಬ ಅಪೇಕ್ಷೆಯುಳ್ಳವರು, ಇತರಪ್ರಯೋಜನಗಳಾವುವನ್ನೂ ಅಪೇಕ್ಷಿಸದೆ, ಗುರುಭಕ್ತನಿರತರಾದ ಮಹಾತ್ಮರ ಪಾದಸೇವೆಯನ್ನು ಮಾಡುತ್ತಬರಬೇಕು. ಆ ಮಹಾತ್ಮರ ಸೇವೆಯನ್ನು ಮಾಡಿ, ಅವರ ಅನುಗ್ರಹಕ್ಕೆ ಪಾತ್ರರಾದಹೊರತು ಭಗವದ್ಭಕ್ತಿಯು ಹುಟ್ಟಲಾರದು" ಎಂದನು. ಈ ಮಾತುಗಳನ್ನು ಹೇಳಿಯೂ, ನಿರ್ಭಯವಾಗಿ ಮುಂದೆ ನಿಂತಿದ್ದ ತನ್ನ ಮಗನನ್ನು ನೋಡಿ, ಹಿರಣ್ಯಕಶಿಪುವು ಕೋಪದಿಂದ ತನ್ನ ಮೈಯನ್ನೇ ತಾನು ಮರೆತು, ಯುಕ್ತಾಯುಕ್ತವಿವೇಚನೆಯಿಲ್ಲದೆ, ತೊಡೆಯಮೇಲೆ ಕುಳಿತಿದ್ದ ಆ ಬಾಲಕನನ್ನು ವೇಗದಿಂದ ಕೆಳಕ್ಕೆ ನೂಕಿಬಿಟ್ಟನು. ಆ ರಾಕ್ಷಸನ ಕಣ್ಣುಗಳೆರಡೂ ಕೆಂಡದಂತೆ ಕೆಂಪಾದುವು. ಮೀರಿದ ಕ್ರೋಧದಿಂದುರಿಯುತ್ತ ಸಮೀಪದಲ್ಲಿದ್ದ ಭಟರನ್ನು ನೋಡಿ "ಎಲಾ ಯಾರಲ್ಲಿ! ಎಲೈ ದೈತ್ಯಭಟರೆ! ಇವನನ್ನು ಈಗಲೇ ಹೊರಗೆ ತಳ್ಳಿರಿ!ನೀವು ಇವನಲ್ಲಿ ಸಣ್ಣಮಗುವೆಂಬ ಕನಿಕರವಿಡದೆ ಕೊಂದುಬಿಡಿರಿ.ಈತನು ಪರಮದುಷ್ಟನು ಬಂಧು ಮಿತ್ರರೆಲ್ಲರನ್ನೂ ಲಕ್ಷ್ಯಮಾಡದೆ, ತನ್ನ ಚಿಕ್ಕಪ್ಪನನ್ನು ಕೊಂದ ವಿಷ್ಣುವಿಗೆ ಪಾದಸೇವಕನಂತೆ ಅವನನ್ನು ಗೌರವಿಸುತ್ತಿರುವನು ತತ್ವವನ್ನು ಪರ್ಯಾಲೋಚಿಸಿದರೆ, ಇವನೇ, ನನ್ನ ತಮ್ಮನನ್ನು ಕೊಲ್ಲಿಸಿರಬಹುದೆಂದೂ ಹೇಳಬಹುದು ಈತನು ತನ್ನ ಕುಲಕ್ಕೇ ದ್ರೋಹಿಯು, ಚಪಲಚಿತ್ತನು ಇಂತಹ ಅಸಮಂಜಸಸ್ವಭಾವವುಳ್ಳ ಈತನನ್ನು ತನ್ನ ಕಡೆಗೆ ಸೇರಿಸಿಕೊಂಡಮಾತ್ರಕ್ಕೆ ಆ ವಿಷ್ಣುವಿಗೆತಾನೇ ಲಾಭವೇನು? ಇವನು ಆವಿಷ್ಣುವಿಗೂ ಅನರ್ಥವನ್ನು ತಂದಿಡುವುದರಲ್ಲಿ ಸಂದೇಹವಿಲ್ಲ.

ಐದು ವರುಷಗಳು ತುಂಬುವುದಕ್ಕೆ ಮೊದಲೇ, ತಂದೆ ತಾಯಿಗಳ ನ್ನು ಬಿಟ್ಟುಹೋದವನಲ್ಲಿ, ಯಾರಿಗೆ ತಾನೇ ನಂಬಿಕೆ ಹುಟ್ಟುವುದು?"ಇಂತ ಹ ನೀಚನನ್ನು ಕತ್ತರಿಸಿ ಕೊಲ್ಲಬೇಕಾದುದೇ ನ್ಯಾಯ್ಯವು.ನನ್ನ ಮಗನೆಂದು ನೀವು ದಾಕ್ಷಿಣ್ಯವನ್ನಿಡಬೇಕಾದುದಿಲ್ಲ ರೋಗನಿವಾರಣೆಮಾಡತಕ್ಕ ಮೂಲಿಕೆಯು ಕಾಡುಗುಡ್ಡಗಳಲ್ಲಿ ಹುಟ್ಟಿದರೂ ನಮಗೆ ಪರಿಗ್ರಾಹ್ಯವಾಗು ವಂತೆ ಶತ್ರುಕುಲದವನಾದರೂ ಅನುಕೂಲನಾದವನನ್ನು ಪುತ್ರನೆಂದೇ ಭಾವಿಸಬಹುದು. ನಮ್ಮ ದೇಹದಲ್ಲಿ ಹುಟ್ಟಿದ ರೋಗದಂತೆ, ನಮಗೆ ಅನಿ ಷ್ಟವನ್ನು ಕೋರತಕ್ಕವನು ಹೊಟ್ಟೆಯಲ್ಲಿ ಹುಟ್ಟಿದ ಮಗನಾಗಿದ್ದರೂ, ಅವನನ್ನು ತೊರೆದುಬಿಡಬೇಕಾದುದೇ ಯುಕ್ತವು, ಅಷ್ಟು ಮಾತ್ರವೇ ಅಲ್ಲ. ನಮ್ಮ ದೇಹದಲ್ಲಿರುವ ಕೈ, ಕಾಲು ಮೊದಲಾದ ಅವಯವಗಳಲ್ಲಿ, ಯಾವುದಾದರೂ ಒಂದು ಭಾಗಕ್ಕೆ ಹುಣ್ಣುಗಾಯಗಳುಂಟಾಗಿ, ಅದು ಕ್ರಮಕ್ರಮವಾಗಿ ಪ್ರಬಲಿಸುತ್ತ ಬಂದಾಗ, ಆ ಅವಯವವನ್ನೇ ಕತ್ತರಿಸಿ ಹಾಕಿದಹೊರತು ಬೇರೆ ಅವಯವಗಳಿಗೆ ಸುಖವಿರದಲ್ಲವೆ? ಅದರಂತೆ ಪುತ್ರರೂಪದಿಂದ ಹುಟ್ಟಿದ ಈ ಶತ್ರುವನ್ನು ಕೊಂದಹೊರತು ನಮ್ಮರಾ ಕ್ಷಸಕುಲಕ್ಕೆ ಕ್ಷೇಮವಿಲ್ಲ ದುರ್ವ್ಯಾಪಾರದಲ್ಲಿ ಪ್ರವರ್ತಿಸುವ ಇಂದ್ರಿ ಯವು,ಯೋಗಿಯನ್ನು ಕೆಡಿಸುವಂತೆ,ಈತನು ಬದುಕಿರುವವರೆಗೆ ನಮಗೆ ಕೇ ಡನ್ನೇ ಮಾಡುತ್ತಿರುವನು ಆದುದರಿಂದ ನೀವೆಲ್ಲರೂ ಪ್ರಯತ್ನಪೂರ್ವಕ ವಾಗಿ ಈಗಲೇ ಇವನನ್ನು ಶೂಲಾದ್ಯಾಯುಧಗಳಿಂದಾಗಲಿ, ವಿಷದಿಂದಲಾ ಗಲಿ, ಯಾವುದಾದರೂ ಉಪಾಯದಿಂದ ಕೊಂದುಬರಬೇಕು" ಎಂದನು. ಈ ರಾಜಾಜ್ಞೆಯನ್ನು ಕೇಳಿದೊಡನೆ ರಾಕ್ಷಸಭಟರೆಲ್ಲರೂ ಭಯಂಕರವಾದ ಶೂಲಗಳನ್ನು ತಿರುಗಿಸುತ್ತ, ಆ ಪ್ರಹ್ಲಾದಕುಮಾರನನ್ನು ಮುತ್ತಿನಿಂತರು. ತೀಕ್ಷ್ಣವಾದ ಕೋರೆದಾಡೆಗಳಿಂದಲೂ ವಕ್ರವಾದ ಮುಖದಿಂದಲೂ, ಕೆಮ್ಮೀಸೆಗಳಿಂದಲೂ, ಕೆಂಜೆಡೆಗಳಿಂದಲೂ ಭಯಂಕರರೂಪವುಳ್ಳ ಆರಾ ಕ್ಷಸಭಟರೆಲ್ಲರೂ, ಪ್ರಹ್ಲಾದನನ್ನು ಸುತ್ತಿಮುತ್ತಿ, ಒಬ್ಬರಿಗೊಬ್ಬರು "ಎಲಾ! ಪಿತೃದ್ರೋಹಿಯಾದ ಈ ದುರಾತ್ಮನನ್ನು ಕೊಲ್ಲು! ಕಡಿ! ತಿವಿ! ತುಂಡು ತುಂಡಾಗಿ ಕತ್ತರಿಸು" ಎಂದು ಆರ್ಭಟಿಸಿ ಕೂಗುತ್ತ ಬಂದರು ಆಗಲೂ

ನಿರ್ಭಯವಾಗಿ ಕುಳಿತಿದ್ದ ಆ ಕುಮಾರನಮೇಲೆ ಬಿದ್ದು, ತಾವು ಹಿಡಿದಿದ್ದ ಶೂಲಗಳಿಂದ ಆತನ ಮರ್ಮಸ್ಥಾನಗಳನ್ನು ತಿವಿಯುತ್ತಿದ್ದರು. ಆದರೇನು? ಸರ್ವಾಂತರಾತ್ಮನಾಗಿಯೂ,ಅಗೋಚರಸ್ವರೂಪನಾಗಿಯೂ, ಷಾಡ್ಗುಣ್ಯ ಪರಿಪೂರ್ಣನಾಗಿಯೂಇರುವ ಪರಮಾತ್ಮನನ್ನು ಧ್ಯಾನಿಸುತ್ತ,ನಿಶ್ಚಲನಾಗಿ ನಿಂತಿದ್ದ ಪ್ರಹ್ಲಾದನವಿಷಯದಲ್ಲಿ ಈ ರಾಕ್ಷಸರ ಪ್ರಯತ್ನಗಳೆಲ್ಲವೂ ವಿಫ ಲವಾದುವು ಪಾಪಿಗಳು ನಡೆಸತಕ್ಕ ಧರ್ಮಕಾರ್ಯಗಳಂತೆ, ಹೀಗೆ ಪ್ರಹ್ಲಾದನಲ್ಲಿ ರಾಕ್ಷಸರ ಪ್ರಯತ್ನಗಳೆಲ್ಲವೂ ವ್ಯರ್ಥವಾದುದನ್ನು ಕಂಡು ಹಿರಣ್ಯಕಶಿಪುವು,ಮತ್ತಷ್ಟು ಕೋಪದಿಂದುರಿಯುತ್ತ ‘ ಅಯ್ಯೋ! ಈ ನೀಚ ನನ್ನು ಕೊಲ್ಲುವುದಕ್ಕೆ ಬೇರೆ ಯಾವ ಉಪಾಯವನ್ನು ಹುಡಕಲಿ” ಎಂದು ಚಿಂತಿಸಿ, ಬೇರೆಬೇರೆ ಉಪಾಯಗಳಿಂದ ಅವನನ್ನು ನಿರ್ಬಂಧಿಸಿ ಹಿಂಸಿಸುವು ದಕ್ಕೆ ತೊಡಗಿದನು. ಆನೆಗಳಿಂದ ತುಳಿಸಿದನು! ಹಾವುಗಳಿಂದ ಕಚ್ಚಿಸಿದನು. ಮಾರಣಹೋಮ (ಶೂನ್ಯ) ವನ್ನು ಮಾಡಿಸಿದನು ಪರ್ವತಗಳಿಂದ ಕೆಳಕ್ಕೆ ನೂಕಿಸಿದನು!ತನ್ನ ಮಾಯೆಯಿಂದ ಕಲ್ಮಳೆ,ಸಿಡಿಲು,ಮುಂತಾದುವುಗಳನ್ನು ಅವನಮೇಲೆ ಪ್ರಯೋಗಿಸಿದನು ಆ ಪ್ರಹ್ಲಾದನ ದೇಹದಲ್ಲಿರುವ ನವದ್ವಾ ರಗಳನ್ನೂ ಮುಚ್ಚಿಸಿ, ಉಸಿರು ಕಟ್ಟುವಹಾಗೆ ಮಾಡಿದನು!ವಿಷವನ್ನು ಕುಡಿ ಸಿದನು! ಬಹುದಿನಗಳವರೆಗೆ ಆಹಾರವಿಲ್ಲದೆ ಕೆಡಹಿದನು! ಹಿಮದಲ್ಲಿ ಮಲ ಗಿಸಿದನು! ಸುಳಿಗಾಳಿಲಿಯಲ್ಲಿ ಸಿಕ್ಕಿಸಿದನು! ಅಗ್ನಿಕುಂಡದಲ್ಲಿ ತಳ್ಳಿದನು! ನೀ ರಿನಲ್ಲಿ ಮುಳುಗಿಸಿದನು ! ದೊಡ್ಡ ಪರ್ವತಗಳನ್ನು ಅವನಮೇಲೆ ತಂದು ಹಾಕಿದನು ಹೀಗೆ ಎಷ್ಟೆಷ್ಟೋ ಉಪಾಯಗಳನ್ನು ಮಾಡಿದರೂ. ಪುಣ್ಯಶೀಲನಾದ ಆ ಮಗುವನ್ನು ಕೊಲ್ಲುವುದಕ್ಕೆ ಸಾಧ್ಯವಾಗಲಿಲ್ಲ. ಎ ಷ್ಟಾದರೂ ತನ್ನ ಮಗನು ಸಾಯದಿರುವುದನ್ನು ನೋಡಿ ಹಿರಣ್ಯಕಶಿಪುವಿಗೆ ಮಹತ್ತಾದ ಚಿಂತೆಯು ಹುಟ್ಟಿತು. ಅವನನ್ನು ಕೊಲ್ಲುವುದಕ್ಕೆ ಬೇರೆ ಯಾ ವ ಉಪಾಯವೂ ತೋರದೆ, ಮಹಾವ್ಯಸನದಿಂದ ತನ್ನಲ್ಲಿ ತಾನು “ಅ ಯ್ಯೋ! ಏನು ಮಾಡಲಿ! ಈ ನೀಚನಿಗೆ ಎಷ್ಟೆಷ್ಟೋವಿಧದಿಂದ ಬುದ್ಧಿ ವಾದವನ್ನು ಹೇಳಿದೆನು. ಅನೇಕವಿಧವಾಗಿ ನಿಂದಿಸಿದೆನು! ಧಿಕ್ಕರಿಸಿದೆನು! ಇವನ್ನು ಕೊಲ್ಲುವುದಕ್ಕಾಗಿ ಎಷ್ಟೆಷ್ಟೋ ಉಪಾಯಗಳನ್ನು ಮಾಡಿದೆನು

ಇಷ್ಟಾದರೂ ಇವನು ಸ್ವಲ್ಪಮಾತ್ರವೂ ನೋವಿಲ್ಲದೆ, ತನ್ನ ಮಹಿಮೆಯಿಂದ ಎಳ್ಳಷ್ಟಾದರೂ ಕದಲದೆ ಕುಳಿತಿರುವನಲ್ಲಾ ! ಇದಲ್ಲದೆ ನಾನು ಇವನಿಗೆ ಇಷ್ಟೊಂದುವಿಧದಿಂದ ದ್ರೋಹಮಾಡಿದರೂ ಅವನು ನನ್ನ ವಿಷಯದಲ್ಲಿ ದ್ರೋಹಬುದ್ಧಿಯಿಲ್ಲದೆ ಶಾಂತನಾಗಿಯೇ ಕುಳಿತಿರುವನು. ಹಿಂದೆ ಶುನಶ್ಶೇಫನೆಂಬ ಬಾಲಕನು, ತನ್ನ ತಂದೆತಾಯಿಗಳಿಂದಲೇ ಹರಿಶ್ಚಂದ್ರನೆಂಬ ರಾಜನಿಗೆ ನರಬಲಿಗಾಗಿ ವಿಕ್ರಯಿಸಲ್ಪಟ್ಟು, ಯೂಪಸ್ತಂಭಕ್ಕೆ ಕಟ್ಟಲ್ಪಟ್ಟಿದ್ದಾಗಲೂ, ಆ ತಂದೆತಾಯಿಗಳ ಅಪಕಾರವನ್ನೆಣಿಸದೆ, ಜಿತೇಂದ್ರಿಯನಾಗಿ, ದೃಢಮನಸ್ಸಿನಿಂದಲೇ ಕುಳಿತಿದ್ದುದಾಗಿ ಕೇಳಿಬಲ್ಲೆವು. ಆದರೇನು? ಆಗ ಶುನಶ್ಶೇಫನಿಗಾದರೋ ವಿಶ್ವಾಮಿತ್ರನು ರಕ್ಷಕನಾಗಿ ಬಂದನು ಈಗ ಈ ದುರಾತ್ಮನು ಯಾರಬಲದಿಂದ ಸಾಯದೆ ಬದುಕಿರುವನು? ಆಹಾ! ಇವನ ಪ್ರಭಾವವು ಊಹಿಸಲಸಾಧ್ಯವಾಗಿರುವುದು ಯಾವುದಕ್ಕೂ ಭಯಪಡದೆ ಮಹಾವಿಪತ್ತಿನಲ್ಲಿಯೂ ಸಾಯದೆ ಬದುಕಿರುವನಲ್ಲಾ ! ಇಂತಹ ಮಹಾಮಹಿಮೆಯುಳ್ಳವನೊಡನೆ ವಿರೋಧಿಸುವುದರಿಂದ ನಾನೇ ಸಾಯಬೇಕಾಗಿ ಬಂದರೂ ಬರಬಹುದು ನಾನು ಬ್ರಹ್ಮನಿಂದ ಪಡೆದಿರುವ ವರಗಳನ್ನು ಯೋಚಿಸಿದರೆ, ನನಗೆ ಯಾವವಿಧದಿಂದಲೂ ಮರಣವಿಲ್ಲ ಆದರೇನು? ಇವನೇ ನನಗೆ ಮೃತ್ಯುವಾಗಿರಬೇಕು" ಎಂದನು ಹೀಗೆ ಚಿಂತಾಕುಲನಾಗಿ, ಮುಖದಲ್ಲಿ ಕಳೆಗೆಟ್ಟು, ತಲೆಯೆತ್ತದೆ ನಿಂತಿದ್ದ ಹಿರಣ್ಯಕಶಿಪುವನ್ನು ನೋಡಿ, ಚಂಡಾಮರ್ಕರಿಬ್ಬರೂ ಅವನನ್ನು ಸಮಾಧಾನಪಡಿಸುತ್ತ, ಅವನನ್ನು ಏಕಾಂತಸ್ಥಳಕ್ಕೆ ಕರೆತಂದು ಹೀಗೆಂದು ಹೇಳುವರು "ಓ ದೈತ್ಯೇಂದ್ರಾ! ನಿನ್ನ ಪರಾಕ್ರಮವೇನು? ನಿನ್ನ ಮಹಿಮೆಯೇನು? ನಿನ್ನ ಶಕ್ತಿಯೇನು? ಇಂದೊಂದನ್ನೂ ಯೋಚಿಸದೆ.ನೀನೂ ಹೀಗೆ ದುಃಖಿಸುವುದುಂಟೆ? ನೀನೊಬ್ಬನೇ ಅಸಹಾಯನಾಗಿ ತ್ರೈಲೋಕ್ಯವನ್ನೂ ಜಯಿಸಿರುವೆ! ನಿನ್ನ ಹುಬ್ಬಿನಾಟಗಳಿಗೆ ಲೋಕಪಾಲಸಹಿತವಾದ ಸಮಸ್ತಲೋಕವೂ ಭಯಪಟ್ಟು ನಡುಗುವುದು. ಇಂತಹ ಲೋಕೈಕವೀರನಾದ ನಿನಗೆ ದುಃಖಕಾರಣವೇನಿರುವುದು? ಏನೂ ತಿಳಿಯದ ನಿನ್ನ ಕುಮಾರನ ವಿಷಯವಾಗಿ ನೀನು ಇಷ್ಟೊಂದು ಚಿಂತೆಪಡಬಹುದೆ?ಮಕ್ಕಳ ಸ್ವಭಾವವೇ

ಹೀಗೆ! ಒಮ್ಮೊಮ್ಮೆ ಗುಣಾಢ್ಯರಾಗಿ ವರ್ತಿಸುವರು.ಮತ್ತೊಮ್ಮೆ ಎಷ್ಟೋ ತಪ್ಪುಗಳನ್ನು ಮಾಡುವರು. ಈ ಅಲ್ಪವಿಷಯಕ್ಕಾಗಿ ಧೀರನಾದ ನಿನ್ನಂತ ವನು ಚಿಂತಿಸುವುದೆಂದರೇನು?ರಾಜೇಂದ್ರಾ!ಈಗಲೂ ನಾವೊಂದುಪಾಯವ ನ್ನು ಹೇಳುವೆವು. ಈತನು! ನಿನ್ನ ವಿಷಯದಲ್ಲಿ ಬಹಳ ಭಯಪಟ್ಟಿರುವ ನು.ಆ ಭಯದಿಂದ ಮನೆಯನ್ನು ಬಿಟ್ಟು ಓಡಿ ಹೋಗದಂತೆ ಇವನನ್ನುವರು ಣಪಾಶಗಳಿಂದ ಕಟ್ಟಿಸಿ ಸೆರೆಯಲ್ಲಿಟ್ಟಿರು! ನಮ್ಮ ತಂದೆಯಾದ ಶುಕ್ರಾಚಾ ರ್ಯನು ಶೀಘ್ರದಲ್ಲಿಯೇ ಬರಬಹುದು ಕೆಲವು ದಿವಸಗಳವರೆಗೆ ಅವನ ವಶದಲ್ಲಿ ಬಿಟ್ಟರೆ,ಇವನ ಬುದ್ಧಿಯು ಸರಿಯಾದಮಾರ್ಗಕ್ಕೆ ತಿರುಗಬಹುದು. ವಯಸ್ಸಿನಿಂದಲೂ, ಸತ್ಪುರುಷರ ಸೇವೆಯಿಂದಲೂ, ಮನುಷ್ಯನ ಬುದ್ಧಿ ಯು ತಾನಾಗಿ ಕ್ರಮಪಡುವುದರಲ್ಲಿ ಸಂದೇಹವಿಲ್ಲ" ಎಂದರು ಹಿರಣ್ಯಕಶಿಪು ವು ಅವರ ಮಾತಿಗೆ ಸಮ್ಮತಿಸಿ, "ಎಲೈ ಬ್ರಾಹ್ಮಣರೆ! ನೀವು ಹೇಳಿದಂ ತೆಯೇ ಆಗಲಿ! ಮುಖ್ಯವಾಗಿ ಈ ಬಾಲಕನಿಗೆ ರಾಜರೀತಿಗಳನ್ನೂ, ಗೃಹ ಧರ್ಮಗಳನ್ನೂ ಉಪದೇಶಿಸಿ. ಇವನನ್ನು ದಾರಿಗೆ ತರಬೇಕು. ಇವನಿಗೆ ವಿ ಶೇಷವಾಗಿ, ಧರ್ಮ, ಅರ್ಥ, ಕಾಮಗಳೆಂಬ ಮೂರು ಪುರುಷಾರ್ಥಗಳಲ್ಲಿ ಯೇ ಬುದ್ಧಿಯು ಪ್ರವರ್ತಿಸುವಂತೆ ಮಾಡಬೇಕೇಹೊರತು, ಇವನ ಮುಂ ದೆ ಮೋಕ್ಷವೆಂಬ ಮಾತನ್ನೇ ಎತ್ತಕೂಡದು" ಎಂದನು ಆದರಂತೆಯೇ ಗುರುಪುತ್ರರಿಬ್ಬರೂ ಪ್ರಹ್ಲಾದನನ್ನು ತಮ್ಮ ಗೃಹದಲ್ಲಿ ನಿರ್ಬಂಧಿಸಿಟ್ಟು, ವಿನೀತನಾದ ಆ ಬಾಲಕನಿಗೆ ಕ್ರಮವಾಗಿ ತ್ರಿವರ್ಗಗಳ ಸ್ವರೂಪ ವನ್ನೂ, ಅದನ್ನು ಸಾಧಿಸತಕ್ಕ ಉಪಾಯವನ್ನೂ ಎಷ್ಟೆಷ್ಟೋವಿಧದಿಂದ ಬೋಧಿಸುತ್ತ ಬಂದರು. ಎಷ್ಟು ಹೇಳಿದರೇನು? ಅವರ ಉಪದೇಶವೊಂ ದೂ ಅವನಿಗೆ ಸಮಂಜಸವಾಗಿ ತೋರಲಿಲ್ಲ ಸುಖದುಃಖಗಳಿಗೂ ರಾಗ ದ್ವೇಷಗಳಿಗೂ ಕಾರಣವಾದ ಆ ಉಪದೇಶಗಳೆಲ್ಲವನ್ನೂ ಅವನು ಹೀನವಾಗಿ ಯೇ ಭಾವಿಸುತಿದ್ದನು ಹೀಗಿರುವಾಗ ಒಮ್ಮೆ, ಆ ಉಪಾಧ್ಯಾಯರು, ತ ಮ್ಮ ಗೃಹಕೃತ್ಯವನ್ನು ನೋಡುವುದಕ್ಕಾಗಿ ಪಾಠಶಾಲೆಯನ್ನು ಬಿಟ್ಟು ಮನೆಗೆ ಹೋಗಿ, ಕಾರ್ಯಾಂತರದಲ್ಲಿದ್ದರು. ಈ ಸಮಯದಲ್ಲಿ ಇತ್ತ ಲಾಗಿ ಪ್ರಹ್ಲಾದನು, ಅಲ್ಲಲ್ಲಿ ಆಡುತ್ತ ಸಂತೋಷದಿಂದ ಕುಳಿತಿದ್ದ ತನ್ನ ಸಹ

ಪಾಠಿಗಳೆಲ್ಲರನ್ನೂ ಸಮೀಪಕ್ಕೆ ಕರೆದು, ಮೃದುವಾಕ್ಯದಿಂದ ಅವರನ್ನು ಲಾ
ಲಿಸುತ್ತ, ಅವರ ಸ್ಥಿತಿಗಾಗಿ ನಗುವಂತೆ ಮಂದಹಾಸವನ್ನು ತೋರಿಸುತ್ತ, ಅ
ವರಿಗೂ ತಾನೇ ಜ್ಞಾನಮಾರ್ಗವನ್ನುಪದೇಶಿಸುವುದಕ್ಕಾಗಿ ಕರೆದನು
ಈ ಪ್ರಹ್ಲಾದನು ಕರೆದೊಡನೆ, ಆ ಬಾಲಕರೆಲ್ಲರೂ ರಾಜಕುಮಾರನೆಂಬ
ಗೌರವದಿಂದ ತಮ್ಮ ಆಟಪಾಟಗಳೆಲ್ಲವನ್ನೂ ಬಿಟ್ಟು ಅವನ ಮುಂದೆ ಬಂ
ದು ಕುಳಿತರು. ಒಬ್ಬೊಬ್ಬರೂ ಏಕಾಗ್ರಚಿತ್ತರಾಗಿ ಅವನ ಮುಖವನ್ನೇ ಕ
ಣ್ಣಿಟ್ಟು ನೋಡುತಿದ್ದರು ಅವನ ಮುಂದೆ ಕುಳಿತೊಡನೆ ಹಿಂದೆ ತಾವು
ಗುರುಮುಖವಾಗಿ ತಿಳಿದಿದ್ದ ರಾಗದ್ವೇಷಾದಿದೋಷಪ್ರಚುರವಾದ ದು
ಬೋಧೆಗಳೆಲ್ಲವನ್ನೂ ಮರೆತು, ಸಾವಧಾನಚಿತ್ತರಾಗಿದ್ದರು. ಮಹಾಭಾಗ
ವತೋತ್ತಮನಾದ ಪ್ರಹ್ಲಾದನು ಆ ಬಾಲಕರಲ್ಲಿ ಕನಿಕರದಿಂದ, ಭಗವದ್ಧ
ರ್ಮವನ್ನು ಉಪದೇಶಮಾಡತೊಡಗಿದನು ಇಲ್ಲಿಗೆ ಐದನೆಯ ಅಧ್ಯಾಯವು

---

{ ಪ್ರಹ್ಲಾದನು ತನ್ನ ಸಂಗಡಿಗರಾದ ಬಾಲಕರಿಗೆ ಭಕ್ತಿಮಾರ್ಗವನ್ನುಪದೇಶಿಸಿದುದು. }

“ಎಲೈ ಬಾಲಕರೆ! ನೀವು ಬುದ್ಧಿವಂತರಾಗಿದ್ದಪಕ್ಷದಲ್ಲಿ, ಈ ಸ
ಣ್ಣವಯಸ್ಸಿನಿಂದಲೇ ಭಗವಂತನಾದ ಶ್ರೀಹರಿಯನ್ನು ಸಂತೋಷಗೊ
ಳಿಸತಕ್ಕ ಭಾಗವತಧರ್ಮಗಳನ್ನು ನಡೆಸುತ್ತ ಬರಬೇಕು ಪ್ರಾಣಿಗಳಿಗೆ ಈ
ಮನುಷ್ಯಜನ್ಮವೇ ದುರ್ಲಭವು. ನಾವು ಮುಂದೆ ಇದೇ ಜನ್ಮವ
ನ್ನೆತ್ತುವೆವೆಂಬ ನಿಶ್ಚಯವಿಲ್ಲ, ನಮಗೆ ಪುಣ್ಯವಶದಿಂದ ಲಭಿಸಿರುವ ಈ ಮ
ನುಷ್ಯಜನ್ಮವಿರುವಾಗಲೇ, ನಾವು ಆ ಭಗವಂತನನ್ನೊಲಿಸಿ ಅವನ ಅನು
ಗ್ರಹವನ್ನು ಸಂಪಾದಿಸಬೇಕು. ಆದರೆ “ಬಾಲ್ಯಯೌವನಗಳಲ್ಲಿ ಲೌ
ಕಿಕಸುಖಗಳೆಲ್ಲವನ್ನೂ ಅನುಭವಿಸುತಿದ್ದು, ಆಮೇಲೆ ಮುಪ್ಪಿನಲ್ಲಿ ಭಗ
ವದಾರಾಧನವನ್ನು ನಡೆಸಬಾರದೆ!” ಎಂದು ನೀವು ಕೇಳಬಹುದು. ಅ
ದುವರೆಗೆ ನಾವು ಬದುಕಿರುವೆವೆಂಬ ನಿಶ್ಚಯವೇನು? ಈ ದೇಹವು ಅಸ್ಥಿರ
ವಾದುದರಿಂದ, ನಾವು ಮಾಡಬೇಕಾದ ಕಾರ್ಯಗಳನ್ನು ಆಲಸ್ಯವಿಲ್ಲದೆ
ಆಗಾಗ ಮಾಡಿಬಿಡುವುದೇ ಮೇಲು! ಪುರುಷಾರ್ಥಸಾಧನೆಗೆ ಅನುಕೂಲ

ವಾದ ಈ ದೇಹವಿರುವಾಗ, ಕಾಲನಿರೀಕ್ಷಣೆಯಿಲ್ಲದೆ, ಬಾಲ್ಯದಿಂದಲೇ ಆ ಪರಮಪುರುಷನನ್ನಾರಾಧಿಸುತ್ತ ಬರಬೇಕು. ಸರ್ವಭೂತಗಳಿಗೂ ಅಂತರಾತ್ಮನಾಗಿಯೂ, ಸರ್ವಭೂತಸುಹೃತ್ತನಾಗಿಯೂ, ಸರ್ವೇಶ್ವರನಾಗಿಯೂ, ಆನಂದಸ್ವರೂಪನಾಗಿಯೂ ಇರುವ ಆ ಪರಮಪುರುಷನ ಪಾದಾರವಿಂದವನ್ನು ಅನವರತವೂ ಸೇವಿಸುತ್ತಿರಬೇಕಾದುದೇ ಮಾನವಜನ್ಮಕ್ಕೆ ಅವಶ್ಯಕಾರ್ಯವು "ಆದರೆ ಬಾಲ್ಯಯೌವನಗಳೆಲ್ಲವನ್ನೂ ಭಗವದ್ಧ್ಯಾನದಿಂದಲೇ ಕಳೆದುಬಿಟ್ಟರೆ, ವಿಷಯಸುಖಗಳನ್ನನುಭವಿಸುವುದಕ್ಕೆ ಅವಕಾಶವೆಲ್ಲಿ?" ಎಂದು ನೀವು ಕೇಳಬಹುದು. ಎಲೈ ಬಾಲಕರೆ! ಆ ವಿಷಯಸುಖಗಳನ್ನನುಭವಿಸುವುದಕ್ಕೆ ಈ ಮನುಷ್ಯಜನ್ಮವೇ ಇರಬೇಕಾದುದಿಲ್ಲ ಪಶುಪಕ್ಷಿಮೃಗಾದಿಜನ್ಮಗಳಲ್ಲಿಯೂ ಆ ಸುಖವನ್ನನುಭವಿಸಬಹುದು ಆ ಇಂದ್ರಿಯಸುಖಗಳೆಲ್ಲವೂ ಪ್ರಾಣಿಗಳಿಗೆ ದೇಹಸಂಬಧದಿಂದಲೇ ಉಂಟಾಗುವುವು ಆದುದರಿಂದ ದೇಹವನ್ನು ಹೊತ್ತ ಸಮಸ್ತಪ್ರಾಣಿಗಳಿಗೂ ಇದು ಸಮಾನವಾಗಿರುವುದು ಇದಲ್ಲದೆ ಈ ವಿಧವಾದ ಸುಖಗಳನ್ನು ಪ್ರಯತ್ನ ಪಟ್ಟು ಸಂಪಾದಿಸಬೇಕಾದುದೂ ಇಲ್ಲ. ದಾರಿದ್ರ್ಯ, ರೋಗ, ಮರಣಾದಿದುಃಖಗಳಂತೆ ನಾವು ಕೋರದಿದ್ದರೂ ಇವು ನಮ್ಮ ಅನುಭವಕ್ಕೆ ಬಾರದಿರವು. ಏಕೆಂದರೆ, ಸುಖದುಃಖಗಳೆರಡೂ ಕರ್ಮಾಧೀನವಾಗಿ ಬಂದೇ ತೀರಬೇಕು ಆದುದರಿಂದ ಅದಕ್ಕಾಗಿ ನಮ್ಮ ಪ್ರಯತ್ನವೇ ಬೇಕಾದುದಿಲ್ಲ ಈ ವಿಷಯಸುಖಕ್ಕಾಗಿ ಪ್ರಯಾಸಪಡುವುದರಿಂದ,ನಮ್ಮ ಆಯುಸ್ಸನ್ನು ವ್ಯರ್ಥವಾಗಿ ಕಳೆದಂತಾಗುವುದೇಹೊರತು ಬೇರೆಯಲ್ಲ ಒಂದುವೇಳೆ ಪ್ರಯತ್ನಪಟ್ಟು ಸಾಧಿಸಿದರೂ, ದುಃಖಬಹುಳವಾದ ಅಲ್ಪಸುಖವನ್ನು ಸಂಪಾದಿಸಿದಂತಾಗುವುದೇ ಹೊರತು, ಅದು ಪರಮೇಶ್ವರನ ಪಾದಾರವಿಂದವನ್ನು ಸೇವಿಸುವುದರಿಂದುಂಟಾಗಬಹುದಾದ ನಿರತಿಶಯಾನಂದಕ್ಕೆ ಸಮಾನವಾಗಲಾರದು ಆದುದರಿಂದ ಲೋಕದಲ್ಲಿ ಬುದ್ಧಿಶಾಲಿಯಾದ ಪುರುಷನು, ಅನರ್ಥಹೇತುವಾದ ಸಂಸಾರಮಾರ್ಗವನ್ನು ಹಿಡಿಯದೆ, ಈ ದೇಹವು ಜೀರ್ಣವಾಗುವುದಕ್ಕೆಮೊದಲೇ, ಉತ್ತಮಸುಖವನ್ನು ಪಡೆಯುವುದಕ್ಕೆ ಯತ್ನಿಸಬೇಕು ಮನುಷ್ಯನ ಆಯುಃಪ್ರಮಾಣವೆಲ್ಲವೂ ನೂರೇ ವರುಷಗಳು ಇಂ

ದ್ರಿಯಗಳನ್ನು ವಶಮಾಡಿಕೊಳ್ಳಲಾರದ ಮನುಷ್ಯನಿಗೆ, ರಾತ್ರಿಯೆಲ್ಲವೂ ನಿದ್ರೆಗಳಿಂದ ವ್ಯರ್ಥವಾಗಿ ಕಳೆದು ಹೋಗುವುದು ಬಾಲ್ಯದಲ್ಲಿ ಬುದ್ಧಿಹುಟ್ಟುವುದಕ್ಕೆ ಮೊದಲೇ ಹತ್ತುವರ್ಷಗಳು ಕಳೆದು ಹೋಗುವುವು ಅದರಿಂದಾಚೆಗೆ ಆಟಪಾಟಗಳಲ್ಲಿ ಮನಸ್ಸನ್ನೆಳೆಯತಕ್ಕ ಕೌಮಾರಾವಸ್ಥೆಯಲ್ಲಿ ಹತ್ತುವರ್ಷಗಳು ಕಳೆದು ಹೋಗುವುವು. ಕೊನೆಗೆ ಮುಪ್ಪು ತಲೆದೋರಿದೊಡನೆ, ಅದರಿಂದ ದೇಹವೆಲ್ಲವೂ ಜೀರ್ಣವಾಗಿ, ಇಂದ್ರಿಯಶಕ್ತಿಯು ತಗ್ಗಿ,ಯಾವ ಕಾರ್ಯಕ್ಕೂ ಸಾಮರ್ಥ್ಯವಿಲ್ಲದೆ,ಇಪ್ಪತ್ತುವರ್ಷಗಳನ್ನು ವ್ಯರ್ಥವಾಗಿ ಕಳೆಯಬೇಕಾಗುವುದು ಇವೆಲ್ಲವನ್ನೂ ಕಳೆದುಳಿಯತಕ್ಕ ಯೌವನಕಾಲವೆಂಬುದು, ಅತ್ಯಲ್ಪವಾಗಿರುವುದಲ್ಲವೆ! ತಕ್ಕ ದೇಹಬಲದಿಂದಲೂ, ಬುದ್ಧಿಬಲದಿಂದಲೂ ಕಾರ್ಯಸಾಧನೆಗೆ ಯೋಗ್ಯವಾದ ಈ ಸ್ವಲ್ಪಕಾಲವನ್ನೂ ಪುರುಷನು. ಎಷ್ಟೆಷ್ಟುವಿಧದಿಂದ ಅನುಭವಿಸಿದರೂ ತೃಪ್ತಿಯಿಲ್ಲದ ಕಾಮಗಳಿಂದಲೂ,ಮೋಹದಿಂದಲೂಕಳೆಯುತ್ತ,ಕುಟುಂಬಪೋಷಣೆಯಲ್ಲಿಯೇ ಆಸಕ್ತನಾಗಿದ್ದರೆ, ಭಗವಂತನನ್ನೊಲಿಸಿ, ಅವನ ಅನುಗ್ರಹವನ್ನು ಪಡೆಯುವುದಕ್ಕೆ ಅವಕಾಶವೆಲ್ಲಿ? ಇಂತವನ ಆಯುಃಕಾಲವೆಲ್ಲವೂ ವ್ಯರ್ಥವೆಂದೇಹೇಳಬೇಕಲ್ಲವೆ? ದುದರಿಂದ ದೇಹಬಲವಿರುವಾಗಲೇ ಭಾಗವತಧರ್ಮವನ್ನು ಹಿಡಿದು, ಭಗವದನುಗ್ರಹವನ್ನು ಸಂಪಾದಿಸುದೆದಕ್ಕೆ ಯತ್ನಿಸಬೇಕು " ಕುಟುಂಬಿಯಾಗಿದ್ದೇ ಈ ಕಾರ್ಯವನ್ನು ಸಾಧಿಸಬಾರದೆ?" ಎಂದು ನೀವು ಕೇಳಬಹುದು ವಿರಕ್ತರಿಗೆಳೆಹೊರತು ಕುಗುಂಬಿಗಳಿಗೆ ಎಂದಿಗೂ ಇದು ಸಾಧ್ಯವಲ್ಲ ಆದುದರಿಂದ ಮೊದಲು ವೈರಾಗ್ಯವನ್ನು ಹಿಡಿದೇ ಈ ಭಕ್ತಿಮಾರ್ಗವನ್ನು ಸಾಧಿಸಬೇಕು ಮನೆಮುಂದಿಮಕ್ಕಳೊಡನೆ ಸೇರಿ ಅವರ ಮೋಹಪಾಶದಲ್ಲಿ ಸಿಕ್ಕಿಬಿದ್ದವನು, ಎಂದಿಗೂ ಅ ಪಾಶದಿಂದ ಬಿಡಿಸಿಕೊಳ್ಳಲಾರನು ತನ್ನ ಇಂದ್ರಿಯಗಳನ್ನೂ ಜಯಿಸಲಾರನು ಲೋಕದಲ್ಲಿ ಸಂಸಾರಿಗಳಿಗೆ ಹಣವೆಂಬುದು ಪ್ರಾಣಕ್ಕಿಂತಲೂ ಪ್ರಿಯವೆನಿಸುವುದು ಈ ಹಣದಾಸೆಯಿಂದಲ್ಲವೇ, ಕಳ್ಳರೂ ರಾಜಸೈನಿಕರೂ, ನಾವಿಕರೂ, ತಮ್ಮ ಪ್ರಾಣಗಳನ್ನೇ ಒತ್ತೆಯಿಟ್ಟು ಕೆಲಸಮಾಡುವರು. ಕುಟುಂಬಿಗಳಿಗೆ ಈ ಧನದಾಸೆಯು ಹೇಗೆತಾನೇ ತಪ್ಪುವುದು? ಇದೂ ಅಲ್ಲದೆ, ತನ್ನ ಪುತ್ರ

ಮಿತ್ರ ಕಳತ್ರಾದಿಗಳಲ್ಲಿ ಮೋಹವಿಟ್ಟು, ಅವರಲ್ಲಿ ಸ್ನೇಹಪಾಶದಿಂದ ಕಟ್ಟ ಲ್ಪಟ್ಟ ಮನುಷ್ಯನು. ತನ್ನ ಪತ್ನಿಯರು ರಹಸ್ಯದಲ್ಲಿ ತನಗೆ ತೋರಿಸತಕ್ಕ ಸಂಭೋಗಸೌಖ್ಯವನ್ನಾಗಲಿ, ಅವರ ಮಧುರಾಲಾಪಗಳನ್ನಾಗಲಿ, ತನ್ನ ಮಕ್ಕಳಾಡುವ ಮುದ್ದುಮಾತುಗಳನ್ನಾಗಲಿ, ಹೇಗೆತಾನೇ ಮರೆಯುವನು? ಹೀಗೆ ತನ್ನ ಪುತ್ರಕಳತ್ರಾದಿಮೋಹಪಾಶದಲ್ಲಿ ಸಿಕ್ಕಿಬಿದ್ದವನು, ತನ್ನ ಮನಸ್ಸನ್ನೆಳೆಯತಕ್ಕ ಹೆಣ್ಣುಮಕ್ಕಳನ್ನೂ, ಗಂಡುಮಕ್ಕಳನ್ನೂ, ಅಣ್ಣ ತಮ್ಮಂದಿರನ್ನೂ ಅಕ್ಕತಂಗಿಯರನ್ನೂ, ತಂದೆತಾಯಿಗಳನ್ನೂ, ಭೋಗಸಾ ಮಗ್ರಿಗಳಿಂದ ತುಂಬಿದ ಮನೆಮಠಗಳನ್ನೂ ಪಶುಗಳನ್ನೂ, ಭೃತ್ಯವರ್ಗಗ ಳನ್ನೂ ಹೇಗೆ ತಾನೇ ಅನಾದರಿಸುವನು? ಅವೆಲ್ಲವನ್ನೂ ಬಿಡುವುದಕ್ಕೆ ಯಾ ವನಿಗೆತಾನೇ ಮನಸ್ಸು ಬರುವುದು?ತನ್ನನ್ನು ತಾನೇ ನೂಲಿನಿಂದ ಬಿಗಿದು,ಆ ಬಲೆಯಲ್ಲಿ ಸಿಕ್ಕಿಬಿದ್ದು, ಅದರಿಂದ ಹೊರಗೆ ಬರುವುದಕ್ಕೂ ದಾರಿಯನ್ನು ಮಾಡಿಕೊಳ್ಳದೆ, ಅಲ್ಲಿಯೇ ಸಿಕ್ಕಿ ನರಳುವ ಪಟ್ಟೆಯ ಹುಳುವಿನಂತೆ, ಮ ನುಷ್ಯನು ತನ್ನನ್ನು ತಾನೇ ಕರ್ಮಗಳಿಂದ ಕಟ್ಟಿಹಾಕಿಕೊಂಡು, ಅ ದನ್ನು ತಪ್ಪಿಸಿಕೊಂಡು ಬರಲಾರದೆ ಅದರಲ್ಲಿಯೇ ಬಿದ್ದು ನರಳುವನು ಇಂದ್ರಿಯಸುಖಗಳನ್ನನುಭವಿಸುವುದರಲ್ಲಿ ಎಷ್ಟಾದರೂ ತೃಪ್ತಿಯಿಲ್ಲದೆ ಅ ದನ್ನೇ ಸರ್ವೋತ್ತಮವಾದ ಸುಖವೆಂದು ಭಾವಿಸುವನು. ಹೀಗೆ ಪುತ್ರಕ ಳತ್ರಾದಿ ಮೋಹದಲ್ಲಿ ಸಿಕ್ಕಿಬಿದ್ದವನಿಗೆ, ಹೇಗೆತಾನೇ ವಿರಕ್ತಿಹುಟ್ಟುವುದು ಇದಲ್ಲದೆ ಸಂಸಾರದಲ್ಲಿ ಸಿಕ್ಕಿ ಬಿದ್ದ ಮನುಷ್ಯನು,ಕುಟುಂಬಪೋಷಣೆಗಾಗಿ ಹಗಲುರಾತ್ರಿಯೂ ಶ್ರಮಪಡುವುದರಲ್ಲಿಯೇ ತನ್ನ ಆಯುಸ್ಸೆಲ್ಲವನ್ನೂ ವ್ಯ ರ್ಥವಾಗಿ ಕಳೆಯಬೇಕಾಗುವುದರಿಂದ,ತನಗೆ ಹಿತವಾದ ಪುರುಷಾರ್ಥವೇನೆಂ ಬುದನ್ನು ತಿಳಿಯುವುದಕ್ಕೂ ಅವನಿಗೆ ಅವಕಾಶವು ಸಿಕ್ಕದು. ಈ ಕುಟುಂಬ ಪೋಷಣೆಗಾಗಿ ಯಾವಾಗಲೂ, ಎಲ್ಲಾಕಡೆಗಳಲ್ಲಿಯೂ ತಾಪತ್ರಯದಲ್ಲಿ ಸಿಕ್ಕಿ ಸಂಕಟಪಡುತ್ತಿದ್ದರೂ, ಆಗಲೂ ಅವನಿಗೆ ಸಂಸಾರದಲ್ಲಿ ಜಿಹಾಸೆ ಹುಟ್ಟದು ಆಹಾ! ಇದಲ್ಲವೇ ಆಶ್ಚರ್ಯವು! ಪರದ್ರವ್ಯವನ್ನು ಕದ್ದರೆ, ಇಲ್ಲಿ ರಾಜದಂಡನೆಗೂ, ಪರಲೋಕದಲ್ಲಿ ಯಮದಂಡನೆಗೂ ಗುರಿಯಾ ಗಬೇಕೆಂದು ತಿಳಿದವನೂಕೂಡ, ಧನದಾಸೆಯಿಂದ ಇಂದ್ರಿಯಗಳನ್ನು ಜ

ಯಿಸಲಾರದೆ, ಕುಟುಂಬಪೋಷಣೆಗಾಗಿ ಪರಧನವನ್ನು ಕಳುವುದಕ್ಕೆ ಯ
ತ್ನಿಸುವನು ಹೀಗೆ ಪ್ರಾಣಮಾನಗಳಮೇಲೆಯೂ ದೃಷ್ಟಿಯಿಡದೆ, ಕು
ಟುಂಬಭರಣವನ್ನೇ ಮುಖ್ಯವೆಂದು ಭಾವಿಸತಕ್ಕವರಿಗೆ, ಆ ಸಂಸಾರದಲ್ಲಿ
ಹೇಗೆ ತಾನೇ ವಿರಕ್ತಿಯು ಹುಟ್ಟುವುದು ? ಎಲೈ ಬಾಲಕರೆ ಹೀಗೆ ಸಂ
ಸಾರದಲ್ಲಿರುವ ಅನೇಕದೋಷಗಳನ್ನು ಬಲ್ಲ ವಿದ್ವಾಂಸರೂಕೂಡ,ಸಂಸಾರ
ದಲ್ಲಿ ಸಿಕ್ಕಿ ಬಿದ್ದಾಗ, ಅದೇ ವ್ಯಸನದಿಂದ ಆತ್ಮತತ್ತ್ವವನ್ನು ತಿಳಿಯು
ವುದರಲ್ಲಿ ದೃಷ್ಟಿಯಿಡಲಾರರು ! ಮತ್ತು ಪರಮಪುರುಷನಿಗೆ ಎಲ್ಲರೂ ಒಂ
ದೇವಿಧವಾಗಿ ಶೇಷ (ದಾಸ) ಭೂತರೆಂಬುದನ್ನು ತಿಳಿದವನೂಕೂಡ, ತನ್ನ
ವರೆಂದೂ, ಪರರೆಂದೂ ಭೇದಬುದ್ಧಿಯನ್ನು ತೋರಿಸುತ್ತ, ಏನೂ ತಿಳಿಯದ
ಮೂಢಜನರಂತೆ, ಕೊನೆಗೆ ಅಂಧತಮಸ್ಸೆಂಬ ನರಕದಲ್ಲಿ ಬೀಳುವನು ಎಷ್ಟು
ಪಂಡಿತನಾಗಿದ್ದರೇನು ?" ಮನೆಮಂದಿಮಕ್ಕಳನ್ನು ಕಟ್ಟಿಕೊಂಡಿರುವವರೆಗೆ
ಯಾವನೂ, ಯಾವಕಾಲದಲ್ಲಿಯೂ, ಯಾವಸ್ಥಳದಲ್ಲಿಯೂ ಆ ಸಂಸಾ
ರದ ಬಲೆಯನ್ನು ತಪ್ಪಿಸಿಕೊಳ್ಳಲಾರನು, ಶಬ್ದಾದಿವಿಷಯಗಳಲ್ಲಿಯೇ ತೊಳ
ಲಿತೊಳಲಿ ಸಂಕಟಕ್ಕೆ ಗುರಿಯಾಗುವನು. ಅಂತವನು ಸ್ತ್ರೀಯರ ಮೋಹ
ಪಾಶದಲ್ಲಿ ಬಿಗಿಯಲ್ಪಟ್ಟು, ಅವರ ಕೈಯಾಟದ ಕಪಿಗಳಂತೆ ಕುಣಿಯುತ್ತಿ
ರುವನು ಆದುದರಿಂದ ಅಸತ್ಸಹವಾಸವನ್ನು ಬಿಟ್ಟು,ಸತ್ಸಹವಾಸವನ್ನು ಮಾ
ಡಿದಹೊರತು, ಈ ಸಂಸಾರದಲ್ಲಿ ಎಂದಿಗೂ ವಿರಕ್ತಿಯು ಹುಟ್ಟಲಾರದು.
ಎಲೈ ರಾಕ್ಷಸಬಾಲಕರೆ ! ಸಂಸಾರದಲ್ಲಿರುವ ಅನರ್ಥಗಳನ್ನು ಕೇಳಿದಿರಷ್ಟೆ?
ಇನ್ನುಮೇಲಾದರೂ ನೀವು ಕೇವಲ ವಿಷಯಾಸಕ್ತರಾದ ದೈತ್ಯಕುಲದವರ
ಸಹವಾಸವನ್ನು ಬಿಟ್ಟು, ಆದಿದೇವನಾಗಿಯೂ, ಸೃಷ್ಟಿಸ್ಥಿತಿಲಯಕಾರಣನಾ
ಗಿಯೂ ಇರುವ ಶ್ರೀಮನ್ನಾರಾಯಣನ ಪಾದಾರವಿಂದಗಳನ್ನಾಶ್ರಯಿಸಿರಿ!
ಇದರಲ್ಲಿ ನಿಮಗೆ ಅಭಿರುಚಿಯುಂಟಾಗಬೇಕಾದರೆ ಮೊದಲು ಭಗವದ್ಭಕ್ತ
ರಾದ ಸಾಧುಗಳ ಸಹವಾಸದಲ್ಲಿರಬೇಕು ಸರ್ವಸಂಗಪರಿತ್ಯಾಗಮಾಡಿದ ಮ
ಹಾತ್ಮರೆಲ್ಲರಿಗೂ ಆ ಭಗವಂತನೇ ಮುಖ್ಯವಾದ ಪ್ರಾಪ್ಯವಸ್ತುವೆನಿಸಿರುವ
ನು. ಆ ಶ್ರೀ ಹರಿಯ ಪಾದಾಶ್ರಯವೇ ಉತ್ತಮಪುರುಷಾರ್ಥವು ಆ ಭಗ
ವಂತನನ್ನು ಸಂತೋಷಪಡಿಸುವುದಕ್ಕಾಗಿ ನೀವು ಬಹಳ ಶ್ರಮಪಡಬೇಕಾ

ದುದೂ ಇಲ್ಲ! ವಿಷಯಸುಖಗಳನ್ನು ಸಂಪಾದಿಸುವುದಕ್ಕಾಗಿ ಪಡಬೇಕಾದ ಶ್ರಮಕ್ಕಿಂತಲೂ ಬಹು ಸುಲಭವಾಗಿಯೇ ಇದನ್ನು ಸಾಧಿಸಬಹದು. ಅವನು ಸರ್ವಾಂತರ್ಯಾಮಿಯಾದುದರಿಂದ, ನಿಮ್ಮ ಹೃದಯದಲ್ಲಿಯೇ ನೆಲೆಗೊಂಡು, ಎಲ್ಲರಿಗೂ ಸುಲಭನಾಗಿರುವನು ಆದುದರಿಂದ ನೀವು ಅವನನ್ನು ಹುಡುಕುವುದಕ್ಕಾಗಿ ಬೇರೆಲ್ಲಿಯೂ ಹೋಗಬೇಕಾದುದಿಲ್ಲ. ಆ ಪರಮಾತ್ಮನು ಬ್ರಹ್ಮನುಮೊದಲು ಕ್ರಿಮಿಕೀಟಗಳವರೆಗಿರುವ ಸಮಸ್ತ ಚೇತನಗಳಲ್ಲಿಯೂ, ಪೃಥಿವ್ಯಾದಿಭೂತಗಳ ಪರಿಣಾಮರೂಪಗಳಾದ ಎಲ್ಲಾ ಅಚೇತನಪದಾರ್ಥಗಳಲ್ಲಿಯೂ, ಭೂಮಿ ಮೊದಲಾದ ಪಂಚಮಹಾಭೂತಗಳಲ್ಲಿಯೂ. ಸತ್ವರಜಸ್ತಮೋಗುಣಗಳ ಸಮಸ್ಥಿತಿಯನ್ನು ಹೊಂದಿರುವ ಮೂಲಪ್ರಕೃತಿಯಲ್ಲಿಯೂ, ಆ ಗುಣಗಳ ವ್ಯತ್ಯಾಸದಿಂದುಂಟಾಗತಕ್ಕ ಮಹತ್ತು ಅಹಂಕಾರ ಮೊದಲಾದ ತತ್ವಗಳಲ್ಲಿಯೂ, ಒಳಹೊಕ್ಕು, ಅವೆಲ್ಲಕ್ಕೂ ಧಾರಕನಾಗಿರುವನು. ಈ ಚಿದಚಿತ್ತುಗಳೆಲ್ಲವೂ ಅವನಿಗೆ ಶರೀರವು ಹಾಗಿದ್ದರೂ ಅವನು ಆ ಶರೀರಗತವಾದ ವಿಕಾರಗಳಿಗಾಗಲಿ, ದೋಷಗಳಿಗಾಗಲಿ ಈಡಾಗಲಾರನು. ಅವನಿಗೆ ಸಮಾನವಾದುದು ಲೋಕದಲ್ಲಿ ಬೇರೊಂದಿಲ್ಲ. ಆತನು ಜ್ಞಾನ ಶಕ್ತಿ ಮೊದಲಾದ ಷಡ್ಗುಣಗಳಿಂದ ಪರಿಪೂರ್ಣನು, ಆತನೇ ಎಲ್ಲಕ್ಕೂ ನಿಯಾಮಕನು ಅವನ ಸ್ವರೂಪವು ಆ ಬ್ರಹ್ಮಸ್ತಂಬಪರ್ಯಂತವಾಗಿ ಎಲ್ಲಾವಸ್ತುಗಳ ಹೊರಗೂ, ಒಳಗೂ ತುಂಬಿರುವುದು. ಅವನ ಸ್ವರೂಪವು ಅನುಭವಜ್ಞಾನದಿಂದಲ್ಲದೆ ಬೇರೆವಿಧದಿಂದ ತಿಳಿಯಲಾರದು. ಅವನು ಜಾತಿಗುಣಾದಿಗಳಿಲ್ಲದೆ ಕೇವಲ ಜ್ಞಾನಾನಂದಸ್ವರೂಪನಾಗಿ ಪ್ರಕಾಶಿಸುತ್ತಿರುವನು, ಅಂತಹ ಪರಮೇಶ್ವರನೇ ಮೋಹಾದಿಗುಣಗಳನ್ನುಂಟುಮಾಡತಕ್ಕ ತನ್ನ ಮಾಯೆಯೆಂಬ ತೆರೆಯಿಂದ, ಸಂಸಾರಿಗಳಿಗೆ ತನ್ನ ಮಹಿಮೆಯನ್ನು ಕಾಣಿಸದಂತೆ ಮರೆಸಿಕೊಂಡಿರುವನು. ಸದಾಚಾರ್ಯರ ಉಪದೇಶದಿಂದಲ್ಲದೆ ಅವನು ಗೋಚರಿಸಲಾರನು. ಆದುದರಿಂದ ಎಲೈ ಬಾಲಕರೆ ! ನೀವೆಲ್ಲರೂ ಇತರಭೂತಗಳಿಗೆ ದ್ರೋಹಕರವಾದ ನಿಮ್ಮ ರಾಕ್ಷಸಸ್ವಭಾವವನ್ನು ಬಿಟ್ಟು, ಆ ಪರಮಾತ್ಮನಿಗೆ ಶರೀರಭೂತವಾದ ಸಮಸ್ತ ಭೂತಗಳಲ್ಲಿಯೂ ದಯೆಯನ್ನು ತೋರಿ

ಸಿರಿ ! ಸತ್ಪುರುಷರ ಸಹವಾಸವನ್ನು ಮಾಡಿರಿ ! ಇದರಿಂದ ಭಗವಂತ
ನು ನಿಮ್ಮಲ್ಲಿ ಪ್ರಸನ್ನನಾಗುವನು ಜಗತ್ಕಾರಣನಾದ ಆ ಭಗವಂತನು
ಪ್ರಸನ್ನನಾದಪಕ್ಷದಲ್ಲಿ, ನಿಮಗೆ ಯಾವುದೂ ದುರ್ಲಭವಲ್ಲ ಆದರೆ ಆ
ವನ ಅನುಗ್ರಹವನ್ನು ಪಡೆದಮೇಲೆಯೂ ನೀವು ಅಲ್ಪಫಲಗಳಿಗಾಗಿಮಾತ್ರ
ಆಸೆಪಡಕೂಡದು. ಆತನ ಪಾದಾಶ್ರಯವನ್ನು ಮಾಡಿದವರಿಗೆ ಧರ್ಮಾರ್ಥ
ಕಾಮಾದಿಗಳಲ್ಲಿ ಯಾವುದು ಬೇಕಾದರೂ ಕೈವಶವಾಗುವುದರಲ್ಲಿ ಸಂದೇಹ
ವಿಲ್ಲ. ಹಾಗಿದ್ದರೂ ಅವೆಲ್ಲವನ್ನೂ ಹುಲ್ಲಿಗಿಂತಲೂ ಕಡೆಯಾಗಿ ಭಾವಿಸಬೇ
ಕು. ಅವುಗಳಿಂದ ಏನೇನೂ ಪ್ರಯೋಜನವಿಲ್ಲ ನಮ್ಮನಮ್ಮ ಕರ್ಮಾನುಗುಣ
ವಾಗಿಯೇ ಆ ಅರ್ಥಕಾಮಾದಿಪುರುಷಾರ್ಥಗಳೆಲ್ಲವೂ, ನಮ್ಮ ಪ್ರಯತ್ನ
ವಿಲ್ಲದೆ ಬಂದು ಸೇರುವುವು ಆ ಮೂರು ಗುಣಗಳ ಸಂಬಂಧವಿಲ್ಲದ ಮೋ
ಕ್ಷವನ್ನಾದರೂ ನಾವು ಅವನ ಅನುಗ್ರಹದಿಂದ ಸಂಪಾದಿಬಹುದು ಹಾ
ಗಿದ್ದರೂ ಅವೊಂದಕ್ಕೂ ನಾವು ಆಸೆಪಡಬಾರದು ಮನೋವಾಕ್ಕಾಯ
ಗಳೆಂಬ ತ್ರಿಕರಣಗಳಿಂದಲೂ ಆ ಭಗವಂತನನ್ನು ಸೇವಿಸುತ್ತ, ಆಗಾಗ
ಅವನ ಗುಣಾಮೃತವನ್ನು ಕಿವಿಯಿಂದ ಪಾನಮಾಡುವವರಿಗೆ, ಆ ಧ
ಧರ್ಮಾರ್ಥಕಾಮಗಳಾಗಲಿ, ಕೈವಲ್ಯವಾಗಲಿ, ಉಪ್ಪುನೀರಿನಂತೆ ಹೇಯ
ವಾಗಿರುವವೇ ಹೊರತು, ಅವುಗಳಿಂದ ಏನೇನೂ ಪ್ರಯೋಜನವು ತೋ
ರುವುದಿಲ್ಲ. "ಆದರೆ ನೀನು ಹೇಳಿದ ಈ ವಿಚಾರಗಳೆಲ್ಲವೂ ನಮ್ಮ
ಗುರುಗಳಿಗೆ ತಿಳಿದಿದ್ದರೂ, ಅವರು ಧರ್ಮಾರ್ಥಕಾಮಗಳನ್ನೇ ಮುಖ್ಯಪುರು
ಷಾರ್ಥವೆಂದು ಹೇಳುವುದೇಕೆ ? ಅವರು ಇದುವರೆಗೆ ಹೇಳಿದ ದಂಡನೀತಿ
ಮೊದಲಾದ ಯಾವ ಶಾಸ್ತ್ರಗಳಲ್ಲಿಯೂ, ನೀನು ಹೇಳಿದಂತೆ ಭಗವದ್ಭಕ್ತಿ
ರೂಪವಾದ ಧರ್ಮಕ್ಕೆ ಪ್ರಾಧಾನ್ಯವನ್ನು ಹೇಳಲಿಲ್ಲ. ಹೀಗಿರುವಾಗ ನಿನ್ನ
ಮಾತಿನಲ್ಲಿ ಪ್ರಮಾಣವೇನು?" ಎಂದು ನೀವು ಆಕ್ಷೇಪಿಸಬಹುದು ಎಲೈ
ಬಾಲಕರೆ ! ಅವರು ಹೇಳಿದ ಧರ್ಮಾರ್ಥಕಾಮಗಳಾಗಲಿ, ತರ್ಕಶಾಸ್ತ್ರವಾಗ
ಲಿ, ವೇದದಲ್ಲಿ ಹೇಳಲ್ಪಟ್ಟ ಕರ್ಮಕಾಂಡವಾಗಲಿ, ದಂಡನೀತಿಶಾಸ್ತ್ರಗಳಾ
ಗಲಿ, ಕೃಷಿ, ವಾಣಿಜ್ಯ ಮೊದಲಾದ ಜೀವನವ್ಯಾಪಾರಗಳನ್ನು ವಿವರಿಸ
ತಕ್ಕ ಶಾಸ್ತ್ರಗಳಾಗಲಿ, ಇವೆಲ್ಲವೂ ನನಗೆ ತಿಳಿಯದ ವಿಷಯಗಳಲ್ಲ. ಹಾಗಿ

ದ್ದರೂ ನನಗೆ ಅವೊಂದರಲ್ಲಿಯೂ ರುಚಿಯಿಲ್ಲ. ಅವೆಲ್ಲವೂ ಪುರುಷಾರ್ಥಗ ಳಲ್ಲವೆಂಬುದೇ ನನ್ನ ಮತವು. ನಮಗೆ ಸರ್ವವಿಧಬಂಧುವಾದ ಆ ಪರಮ ಪುರುಷನ ಪಾದಾರವಿಂದಗಳಲ್ಲಿ ಆತ್ಮಸಮರ್ಪಣವನ್ನು ಮಾಡಬೇಕೆಂದು ಬೋಧಿಸುವ ವೇದಾಂತವಾಕ್ಯಗಳಲ್ಲಿಮಾತ್ರವೇ ನನಗೆ ನಂಬಿಕೆಯುಂಟು ಅದರಂತೆ ನಡೆಯುವವರಿಗೆಮಾತ್ರವೇ ಉತ್ತಮವಾದ ಶಾಶ್ವತಪುರುಷಾ ರ್ಥವು ಕೈಗೂಡುವುದು. “ಆದರೆ ಗುರೂಪದೇಶವಿಲ್ಲದೆ ನೀನು ಈ ವಿಷಯ ವನ್ನು ತಿಳಿದುದು ಹೇಗೆ?” ಎಂದು ಕೇಳುವಿರಾ! ಅದರ ಕಾರಣವನ್ನು ತಿಳಿ ಸುವೆನು ಕೇಳಿರಿ! ಸಾಮಾನ್ಯಜನರಿಗೆ ದುರ್ಲಭವಾದ ಈ ಜ್ಞಾನವನ್ನು ಪೂರ್ವದಲ್ಲಿ ನರಸಖನಾದ ನಾರಾಯಣನು, ಬದರಿಕಾಶ್ರಮದಲ್ಲಿ ನಾರದ ಮಹರ್ಷಿಗೆ ಉಪದೇಶಿಸಿದನು ನಿಷ್ಕಾಮರಾಗಿ ಭಗವಂತನ ಪಾದಾಶ್ರಯ ವೆಂಬ ಪುಣ್ಯತೀರ್ಥದಲ್ಲಿ ಮುಳುಗಿ ಶುದ್ಧರಾದವರೆಲ್ಲರೂ ಈ ಜ್ಞಾನವನ್ನು ಅನಾಯಾಸವಾಗಿ ಪಡೆಯಬಹುದು ವಿವೇಕಜ್ಞಾನದಿಂದಲೂ, ಶಾಸ್ತ್ರಜ ನ್ಯಜ್ಞಾನದಿಂದಲೂ ಕೂಡಿದ ಈ ಭಾಗವತಧರ್ಮವನ್ನು ನಾನೂ ಆ ನಾ ರದಮುನಿಯ ಮೂಲಕವಾಗಿಯೇ ಕೇಳಿ ತಿಳಿದುಕೊಂಡೆನು” ಎಂದನು ಈ ಮಾತನ್ನು ಕೇಳಿ ದೈತ್ಯಬಾಲಕರು ಆಶ್ಚರ್ಯಪಡುತ್ತ “ಪ್ರಹ್ಲಾದಾ ! ಇದೇ ನಾಶ್ಚರ್ಯವು! ನಾವೆಲ್ಲರೂ ಒಂದಾಗಿ ಹುಟ್ಟಿ, ಒಂದೇಕಡೆಯಲ್ಲಿ ಬೆಳೆದವರ ಲ್ಲವೆ? ನಾವೆಲ್ಲರೂ ಹುಟ್ಟಿದ್ದುಮೊದಲು ಈ ಗುರುಪುತ್ರರ ಶಿಕ್ಷೆಯಲ್ಲಿರು ವೆವೇ ಹೊರತು, ಬೇರೆ ಉಪಾಧ್ಯಾಯರ ಮುಖವನ್ನೇ ಕಂಡವರಲ್ಲ. ಹೀ ಗಿರುವಾಗ ನೀನುಮಾತ್ರ ನಾರದನನ್ನು ಕಂಡುದೆಲ್ಲಿ ಕೇವಲಬಾಲ ನಾಗಿ, ಅಂತಃಪುರವನ್ನು ಬಿಟ್ಟು ಕದಲದಿರುವ ನಿನಗೆ, ಅಂತಹ ಮಹಾತ್ಮರ ಸಹವಾಸಕ್ಕೆ ಅವಕಾಶವೆಲ್ಲಿ? ಈ ವಿಷಯದಲ್ಲಿ ನಮಗೆ ದೊಡ್ಡ ಸಂದೇಹ ವಿರುವುದು ತಕ್ಕ ಸಮಾಧಾನದಿಂದ ನಮ್ಮ ಸಂದೇಹವನ್ನು ನೀಗಿ ಸಬಲ್ಲೆಯಾದರೆ, ನಿಜವನ್ನು ತಿಳಿಸು” ಎಂದರು. ಇಲ್ಲಿಗೆ ಆರನೆಯ ಅಧ್ಯಾ ಯವು

---

{ ಪ್ರಹ್ಲಾದನು ತನ್ನ ಜ್ಞಾನೋದಯಕ್ಕೆ ಕಾರಣವಾದ ಪೂರ್ವವೃತ್ತಾಂತವನ್ನು ತಿಳಿಸಿದುದು. }

ಪರಮಭಾಗವತೋತ್ತಮನಾದ ಪ್ರಹ್ಲಾದನು. ದೈತ್ಯಬಾಲಕರ ಸಮಂಜಸವಾದ ಪ್ರಶ್ನೆಗೆ ಸಂತೋಷಪಟ್ಟು, ಹಿಂದೆ ಅವನು ತಾಯಿಯ ಗರ್ಭದಲ್ಲಿರುವಾಗ ನನ್ನಿಂದ ಕೇಳಿದ ಮಾತುಗಳನ್ನು ಸ್ಮರಿಸಿಕೊಂಡು, ಮುಗುಳ್ನಗೆಯೊಡನೆ ಹೀಗೆಂದು ಹೇಳುವನು "ಎಲೈ ಮಿತ್ರರೆ! ಕೇಳಿರಿ! ಹಿಂದೆ ನಮ್ಮ ತಂದೆಯು ತಪಸ್ಸಿಗೋಸ್ಕರ ಮಂದರಪರ್ವತಕ್ಕೆ ಹೋಗಿ, ಬಹುದಿನಗಳವರೆಗೆ ಹಿಂತಿರುಗಿಬಾರದೆ, ಅಲ್ಲಿಯೇ ನಿಂತುಬಿಟ್ಟನು ಆಗರಾಕ್ಷಸರಾಜ್ಯವು ಅನಾಯಕವಾಗಿರುವುದನ್ನು ನೋಡಿ, ದೇವತೆಗಳು ದೈತ್ಯರನ್ನು ಕೊಲ್ಲುವುದಕ್ಕೆ ಇದೇ ಸಮಯವೆಂದು ನಿಶ್ಚಯಿಸಿ, ಯುದ್ಧಸನ್ನಾಹವನ್ನು ಮಾಡಿದರು ನನ್ನ ತಂದೆಯು ತಪಸ್ಸಿನಲ್ಲಿರುವುದನ್ನು ತಿಳಿಯದೆ, ಆ ಇಂದ್ರಾದಿದೇವತೆಗಳೆಲ್ಲರೂ ತಮ್ಮೊಳಗೆ ತಾವು "ಲೋಕಕಂಟಕನಾದ ಹಿರಣ್ಯಕಶಿಪುವು ತನ್ನ ಪಾಪಕ್ಕೆ ಫಲವಾಗಿ ಇರುವೆಗಳಿಂದ ಕಚ್ಚಿ ತಿನ್ನಲ್ಪಡುವ ಸರ್ಪದಂತೆ, ಕಾಡುಮೃಗಗಳ ಬಾಯಿಗೆ ತುತ್ತಾಗಿರುವುದರಲ್ಲಿ ಸಂದೇಹವಿಲ್ಲ ಆದುದರಿಂದ ರಾಕ್ಷಸರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಇದೇ ಸಮಯ"ವೆಂದು ದಂಡೆತ್ತಿಬಂದರು ಈ ದೇವತೆಗಳ ಪ್ರಯತ್ನವನ್ನು ತಿಳಿದು ಸ್ವರ್ಗವನ್ನಾಕ್ರಮಿಸಿಕೊಂಡಿದ್ದ ದೈತ್ಯರೆಲ್ಲರೂ ಭಯದಿಂದ ನಾನಾಕಡೆಗೆ ಪಲಾಯನಮಾಡಲಾರಂಭಿಸಿದರು ದೇವತೆಗಳು ಅಗಲೂ ಅವರನ್ನು ಬಿಡದೆ, ಬೆನ್ನಟ್ಟಿ ಕೊಲ್ಲುತ್ತಿದ್ದರು. ಅಲ್ಲಲ್ಲಿ ರಾಕ್ಷಸರು ಇವರ ಭಯದಿಂದ ತಮ್ಮತಮ್ಮ ಹೆಂಡಿರನ್ನೂ, ಮಕ್ಕಳನ್ನೂ, ಬಂಧುಗನ್ನೂ, ಮಿತ್ರರನ್ನೂ, ತಮ್ಮ ಧನವನ್ನೂ, ಮನೆಗಳನ್ನೂ, ಪಶುಗಳನ್ನೂ, ಇತರಭೋಗಸಾಮಗ್ರಿಗಳನ್ನೂ ಲಕ್ಷ್ಯಮಾಡದೆ,ಪ್ರಾಣವುಳಿದರೆ ಸಾಕೆಂದು ನಿಶ್ಚಯಿಸಿ, ಬಿಟ್ಟುದು ಬಿಟ್ಟಹಾಗೆ ನಾನಾಕಡೆಗೆ ಓಡಿದರು. ಆಗ ಜಯಶಾಲಿಗಳಾದ ದೇವತೆಗಳು,ನಿರಾತಂಕವಾಗಿ ನಮ್ಮಪಟ್ಟಣವನ್ನು ಪ್ರವೇಶಿಸಿ, ಅಲ್ಲಿನ ಸಮಸ್ತವಸ್ತುಗಳನ್ನೂ ನಾಶಮಾಡಿಬಿಟ್ಟರು. ಇದೇಸಮಯದಲ್ಲಿ ದೇವೇಂದ್ರನು, ನಿರ್ಭಯವಾಗಿ ನನ್ನ ತಂದೆಯ ಅರಮನೆಗೆ ಪ್ರವೇಶಿಸಿ, ಅಂತಃಪುರ

ದಲ್ಲಿದ್ದ ರಾಜಮಹಿಷಿಯಾದ ನನ್ನ ತಾಯಿಯನ್ನು ಸೆರೆಹಿಡಿದನು ಹೀಗೆ ನನ್ನ ತಾಯಿಯು ಇಂದ್ರನ ಕೈಗೆ ಸಿಕ್ಕಿ ಭಯದಿಂದ ತತ್ತಳಿಸುತ್ತ, ಕುರರ ಪಕ್ಷಿಯಂತೆ ಕೂಗಿಡುತ್ತಿರುವಾಗ,ದೈವಿಕವಾಗಿ ನಾರದಮಹರ್ಷಿಯು ಮಾರ್ಗವಶದಿಂದ ಆ ಸ್ಥಳಕ್ಕೆ ಬಂದನು. ನನ್ನ ತಾಯಿಯು ದೈನ್ಯದಿಂದ ಮೊರೆಯಿಡುವುದನ್ನೂ,ಇಂದ್ರನು ಬಲಾತ್ಕರಿಸಿ ಆವಳನ್ನು ಸೆರೆಹಿಡಿದುಕೊಂಡು ಹೋಗುತ್ತಿರುವುದನ್ನೂ ನೋಡಿ, ಪರಮದಯಾಳುವಾದ ಆ ಮಹರ್ಷಿಯು, ಕನಿಕರಗೊಂಡು, ಆ ದೇವೇಂದ್ರನನ್ನು ತಡೆದು,ಅವನಿಗೆ ಬುದ್ಧಿವಾದವನ್ನು ಹೇಳುವನು "ದೇವೇಂದ್ರಾ! ಈ ಕಾರ್ಯವು ನಿನಗೆ ಸರಿಯಲ್ಲ! ನಿರಪರಾಧಿನಿಯಾದ ಈ ಸತೀಮಣಿಯನ್ನು ಸೆರೆಹಿಡಿದುಕೊಂಡು ಹೋಗುವುದು ನಿನಗೆ ಯುಕ್ತವೆ? ಲೋಕದಲ್ಲಿ ಮಹಾಮಹಿಮೆಯುಳ್ಳವನೆಂದು ಪ್ರಸಿದ್ಧಿಗೊಂಡಿರುವ ನಿನಗೆ ಈ ಕಾರ್ಯವು ತರವಲ್ಲ ಈಕೆಯನ್ನು ಬಿಟ್ಟುಬಿಡು. ಈಕೆಯು ಮಹಾಪತಿವ್ರತೆ! ಇಂತಹ ಪತಿವ್ರತೆಯಾದ ಪರಸ್ತ್ರೀಯನ್ನು ಬಲಾತ್ಕರಿಸಿ ಸೆಳೆಯಬಾರದು" ಎಂದನು ಅದಕ್ಕಾ ಇಂದ್ರನು, "ಓ, ಮಹರ್ಷೀ! ನಾನು ಯಾವ ದುರುದ್ದೇಶದಿಂದಲೂ ಈಕೆಯನ್ನು ಹಿಡಿದವನಲ್ಲ ಇವಳಿಗೆ ನಾನು ಯಾವ ದ್ರೋಹವನ್ನೂ ಮಾಡುವುದಿಲ್ಲ. ನನ್ನ ಉದ್ದೇಶವೇ ಬೇರೆ! ದುರಾತ್ಮನಾದ ಆ ಹಿರಣ್ಯಕಶಿಪುವಿನ ವೀರ್ಯವು ಈಕೆಯ ಗರ್ಭದಲ್ಲಿ ಬೆಳೆಯುತ್ತಿರುವುದು. ನಮ್ಮೆಲ್ಲರಿಗೂ ಮುಂದೆ ಅನರ್ಥಕ್ಕೆ ಕಾರಣವಾದ ಆ ಶತ್ರುಶೇಷವನ್ನು ಬೆಳೆಬಿಟ್ಟರೆ, ಮುಂದೆ ನಮಗೇ ಕಷ್ಟವಲ್ಲವೆ? ಆದುದರಿಂದ ಗರ್ಭಿಣಿಯಾದ ಈಕೆಯನ್ನು ಪ್ರಸವವಾಗುವವರೆಗೂ ನನ್ನ ಮನೆಯಲ್ಲಿಟ್ಟುಕೊಂಡಿದ್ದು, ಆ ಶಿಶುವು ಹುಟ್ಟಿದೊಡನೆ ಅದನ್ನು ಕೊಂದು, ನನ್ನ ಉದ್ದೇಶವನ್ನು ತೀರಿಸಿಕೊಂಡು, ಈಕೆಯನ್ನು ಬಿಟ್ಟುಬಿಡುವೆನು" ಎಂದನು, ಅದಕ್ಕಾ ನಾರದನು "ದೇವೇಂದ್ರಾ! ಈಕೆಯ ಗರ್ಭದಲ್ಲಿ ಬೆಳೆಯುತ್ತಿರುವ ಶಿಶುವು ನಿನಗೆ ಶತ್ರುವೆಂದೆಣಿಸಬೇಡ! * ಆ ಪುತ್ರನು

---

* ನಾರದನ ತತ್ವೋಪದೇಶಕ್ಕೆ ಮೊದಲು ಆ ಗರ್ಭಶಿಶುವು ಕೇವಲ ರಾಕ್ಷಸಸ್ವಭಾವದಲ್ಲಿದ್ದರೂ ಇಲ್ಲಿ ನಾರದನು ಮುಂದಿನ ವೃತ್ತಾಂತವನ್ನು ಧ್ಯಾನದೃಷ್ಟಿಯಿಂದ

ಪರಮಭಾಗವತೋತ್ತಮನು. ಅವನಲ್ಲಿ ಲೇಶಮಾತ್ರವೂ ಪಾಪವನ್ನೆಣಿಸ ಬಾರದು. ಆತನು ಮಹಾತ್ಮನು ಗುಣಗಳಿಂದ ಮೇಲೆನಿಸಿದವನು. ಎಷ್ಟೆಷ್ಟೋ ಪ್ರಯತ್ನಪಟ್ಟರೂ ಭಗವದ್ಭಕ್ತಿಯೆಂಬ ಮಹಾಬಲವುಳ್ಳ ಇವನನ್ನು ಕೊಲ್ಲುವುದಕ್ಕೆ ನಿನ್ನಿಂದ ಸಾಧ್ಯವಾಗದು" ಎಂದನು. ನಾರದನ ಮಾತನ್ನು ಕೇಳಿ ದೇವೇಂದ್ರನು, ಗರ್ಭಸ್ಥನಾದ ನನ್ನಲ್ಲಿ ಗೌರವಜ್ಞಾನವನ್ನಿಟ್ಟು,ನನ್ನ ತಾಯಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ,ಅವಳ ಮನ್ನಣೆಯನ್ನು ಬೇಡಿ ಸ್ವರ್ಗಕ್ಕೆ ಹಿಂತಿರುಗಿಬಿಟ್ಟನು ಇತ್ತಲಾಗಿ ನಾರದಮಹರ್ಷಿಯು ನನ್ನ ತಾಯಿಯನ್ನು ಸಮಾಧಾನಪಡಿಸಿ, ತನ್ನ ಪುಣ್ಯಾಶ್ರಮಕ್ಕೆ ಕರೆತಂದು "ಎಲೆ ವತ್ಸೆ! ನಿನ್ನ ಪತಿಯು ಹಿಂತಿರುಗಿಬರುವವರೆಗೂ ಇಲ್ಲಿಯೇ ಸುಖದಿಂದಿರು" ಎಂದನು ಅದಕ್ಕೆ ನನ್ನ ತಾಯಿಯು ಸಮ್ಮತಿಸಿ, ನಿರ್ಭಯಳಾಗಿ ಅಲ್ಲಿಯೇ ಇರುತಿದ್ದಳು ಆಕೆಯು ನಾರದಾಶ್ರಮದಲ್ಲಿರುವಾಗ, ಗರ್ಭದಲ್ಲಿ ಬೆಳೆಯುತಿದ್ದ ನನ್ನ ಕ್ಷೇಮಕ್ಕಾಗಿಯೂ, ತನ್ನ ಪತಿಯು ತಪೋವನದಿಂದ ಹಿಂತಿರುಗಿ ಬಂದಮೇಲೆ ತನಗೆ ಇಷ್ಟಬಂದಾಗ ಪ್ರಸವಿಸತಕ್ಕ ಶಕ್ತಿಯನ್ನು ಪಡೆಯುವುದಕ್ಕಾಗಿಯೂ, ಪರಮಭಕ್ತಿಯಿಂದ ಆ ನಾರದನನ್ನು ಶುಶ್ರೂಷೆಮಾಡುತ್ತಿದ್ದಳು ಹೀಗೆ ನನ್ನ ತಾಯಿಯು ತನ್ನ ಗರ್ಭಾಯಾಸವನ್ನೂ ಲಕ್ಷ್ಯಮಾಡದೆ, ಭಕ್ತಿಯಿಂದ ಶುಶ್ರೂಷೆಮಾಡುತ್ತಿರುವುದನ್ನು ನೋಡಿ, ನಾರದನಿಗೆ ಅವಳಲ್ಲಿ ಪೂರ್ಣಾನುಗ್ರಹವುಂಟಾಯಿತು. ಪರಮಕಾರುಣಿಕನಾದ ಆ ಮಹರ್ಷಿಯು, ಈ ನಡುವೆ ನನ್ನ ತಾಯಿಗೂ, ಆಕೆಯ ಗರ್ಭದಲ್ಲಿ ಬೆಳೆಯುತಿದ್ದ ನನಗೂ, ಭಕ್ತಿಯೋಗವನ್ನೂ, ಜ್ಞಾನಯೋಗವನ್ನೂ ಆಗಾಗ ಉಪದೇಶಿಸುತಿದ್ದನು ಆದರೆ ಬಹುಕಾಲವು ಕಳೆದುಹೋದುದರಿಂದಲೂ, ಹೆಂಗಸಾದುದರಿಂದಲೂ ನನ್ನ ತಾಯಿಗೆ ಆ ಉಪದೇಶಗಳೆಲ್ಲವೂ ಮರೆತುಹೋದುವು. ನಾನುಮಾತ್ರ ಆ ಮಹರ್ಷಿಯ ಪೂರ್ಣಾನುಗ್ರಹಕ್ಕೆ ಪಾತ್ರನಾದುದರಿಂದ, ಈಗಲೂ ಅದು ನನ್ನ ಸ್ಮರಣೆಯಲ್ಲಿರುವುದು. ಎಲೈ ಬಾಲಕರೆ! ನನ್ನ ಮಾತುಗಳನ್ನು ನೀವು ಶ್ರದ್ಧೆಯಿಂದ

---

ತಿಳಿದು' ಮುಂದ ೞ ೭ಿಶುವು ತನ್ನ ಅನುಗ್ರಹಕ್ಕೆ ಪಾತ್ರನಾಗಿ ಪರಮಭಾಗವತೋತ್ತಮನೆನಿಸುವನೆಂದು ಹೇಳಿದುದಾಗಿ ಗ್ರಾಹ್ಯವು.

ಕೇಳುವುದಾದರೆ, ನಾರದನು ಹಿಂದೆ ನನಗೆ ಹೇಳಿದ ಭಕ್ತಿರೂಪವಾದ ಧ ರ್ಮವನ್ನೂ, ಆತ್ಮಪರಮಾತ್ಮಜ್ಞಾನವನ್ನೂ, ನಿಮಗೂ ನಾನು ಬಹಳ ಸುಲಭಮಾರ್ಗದಿಂದ ತಿಳಿಸುವೆನು ಮುಗ್ಧರಾದ ಸ್ತ್ರೀಯರಿಗಾಗಲಿ, ನ ಮ್ಮಂತಹ ಬಾಲಕರಿಗ್ಗಾಗಲಿ, ಪೂರ್ಣವಾದ ಶ್ರದ್ಧೆಯಿದ್ದಪಕ್ಷದಲ್ಲಿ ಈ ಜ್ಞಾನೋಪದೇಶವು ದೃಢವಾಗಿ ನಿಲ್ಲುವುದು. ಶಾಸ್ತ್ರಜ್ಞರಾಗಿದ್ದರೂ ಶ್ರದ್ಧೆಯಿಲ್ಲದವರಿಗೆ ಅದು ಸ್ಥಿರವಾಗಿ ನಿಲ್ಲಲಾರದು ನನ್ನ ತಾಯಿಗೆ ಶ್ರದ್ಧೆ ಯಿಲ್ಲದುದರಿಂದಲೇ ಆ ನಾರದನ ಉಪದೇಶಗಳೆಲ್ಲವೂ ಅವಳಲ್ಲಿ ನಿಷ್ಫಲ ವಾದುವು. ನಾನು ಶ್ರದ್ಧಾಳುವಾಗಿದ್ದುದರಿಂದಲೇ ಈ ಭಕ್ತಿಜ್ಞಾನಗಳೆ ರಡೂ ನನ್ನಲ್ಲಿ ವೃದ್ಧಿಹೊಂದುವಂತಾದುವು ಆದುದರಿಂದ ನೀವೆಲ್ಲರೂ ಶ್ರದ್ಧೆಯಿಂದ ಇದನ್ನು ಕೇಳಬೇಕು. ಎಲೈ ಮಿತ್ರರೆ! ಮೊದಲು ದೇಹ ಕ್ಕೂ, ಆತ್ಮಕ್ಕೂ, ಪರಮಾತ್ಮನಿಗೂ ಇರುವ ಸ್ವರೂಪಭೇದವನ್ನು ತಿಳಿ ಸುವೆನು ಕೇಳಿರಿ

ನಮಗೆ ಪ್ರತ್ಯಕ್ಷವಾಗಿ ಈ ಪ್ರಪಂಚದಲ್ಲಿ ಕಂಡುಬರುವ ಹು ಟ್ಟು, ಸ್ಥಿತಿ, ಬೆಳೆವಳಿಕೆ, ವಿಕಾರಹೊಂದುವುದು, ಕ್ಷಯಿಸುವುದು, ನಾ ಶಹೊಂದುವುದು, ಎಂಬೀ ಆರುಬಗೆಯ ಸ್ಥಿತಿಭೇದಗಳೂ ಶರೀರಕ್ಕೇ ಹೊರತು ಜೀವಾತ್ಮನಿಗಿಲ್ಲ. ಭಗವಂತನ ಶರೀರವೆನಿಸಿಕೊಂಡ ಕಾಲದಿಂ ದ ಈ ವಿಕಾರಗಳೆಲ್ಲವೂ ಕಾಣುವುವು ಆ ಕಾಲವೆಂಬುದು ಸತ್ವಾದಿಗು ಣಗಳನ್ನು ಕದಲಿಸಿ, ತನ್ಮೂಲಕವಾಗಿ ಈ ವಿಕಾರಗಳನ್ನು ತೋರಿಸುವುದು. ಒಂದೇ ನೆಲೆಯಲ್ಲಿರುವ ಮರದಲ್ಲಿ, ಆಯಾ ಕಾಲಾನುಗುಣವಾಗಿ, ಹಣ್ಣುಗ ಳು ಹುಟ್ಟಿಬೆಳೆದು, ಪಕ್ವವಾಗಿ, ಕೆಳಗೆ. ಬಿದ್ದುಹೋಗುವಂತೆ, ಒಂದೇನೆಲೆ ಯಲ್ಲಿರುವ ಆತ್ಮನಿಗೆ ತಗುಲುಕಟ್ಟಿದ ಈ ದೇಹಾದಿಗಳಲ್ಲಿಯೇ ಜನನಮರ ಣಾದಿವಿಕಾರಗಳೆಲ್ಲವೂ ಕಾಣುವುವು. ಆತ್ಮವೆಂಬುದು ಆ ದೇಹಕ್ಕಿಂತಲೂ, ಬೇರೆಯಾಗಿರುವುದು. ಅದರ ಲಕ್ಷಣಗಳೇ ಬೇರೆ! ಆ ಆತ್ಮಕ್ಕೆ ಉತ್ಪತ್ತಿ ವಿನಾಶಗಳಿಲ್ಲ! ಕ್ಷಯವಿಲ್ಲ! ವಿಕಾರವಿಲ್ಲ. ರಾಗದ್ವೇಷಾದಿಗುಣಗಳಿಂದಕ ಲಡದೆ, ಶುದ್ಧವಾಗಿ ಪ್ರಕಾಶಿಸುವುದು! ಎಲ್ಲಾ ಕಡೆಯಲ್ಲಿಯೂ, ಜ್ಞಾನವೆಂಬ ಒಂ ದೇ ರೂಪದಿಂದಿರುವುದು ! ದೇಹೇಂದ್ರಿಯಾದಿಗಳಿಗೆಲ್ಲಾ ತಾನೇ ಆಶ್ರ

ಯವಾಗಿರುವುದು. ಅವುಗಳ ಸ್ವರೂಪವನ್ನೂ ಚೆನ್ನಾಗಿ ತಿಳಿಯಬಲ್ಲುದು. ಆ ದೇಹೇಂದ್ರಿಯಾದಿಗಳ ವ್ಯಾಪಾರಕ್ಕೂ ತಾನೇ ಕಾರಣವೆನಿಸಿರುವುದು. ತನ್ನ ಧರ್ಮವಾದ ಜ್ಞಾನದಿಂದ ಎಲ್ಲೆಲ್ಲಿಯೂ ವ್ಯಾಪಿಸಬಲ್ಲುದು ಅದಕ್ಕೆ ಬೇರ ಜೀವನೊಡನೆ ಯಾವವಿಧವಾದ ಸಂಬಂಧವೂ ಇಲ್ಲ ಸ್ವರೂಪದಲ್ಲಿಯೂ, ಸ್ವಭಾವದಲ್ಲಿಯೂ ಮುಚ್ಚುಮರೆಯಿಲ್ಲದುದು ದೇಹದಲ್ಲಿಲ್ಲದ ಈ ಹನ್ನೆರಡು ಬಗೆಯ ಅಸಾಧಾರಣ ಗುಣಗಳಿಂದ ಆತ್ಮಸ್ವರೂಪವನ್ನು ನಿಶ್ಚಯಿಸಿ ತಿಳಿದವನೇ ವಿದ್ವಾಂಸನು ಈ ದೇಹಾತ್ಮತತ್ವವನ್ನು ತಿಳಿದವನು, ಶರೀರದಲ್ಲಿಯಾಗಲಿ, ಆ ಶರೀರ ಸಂಬಂಧಿಗಳಲ್ಲಿಯಾಗಲಿ, ತಾನೆಂದೂ, ತನ್ನವರೆಂದೂ ಅಹಂಕಾರಮಮಕಾರಗಳನ್ನಿಡಲಾರನು. ಮೊದಲು ಈ ಅಜ್ಞಾನವನ್ನು ನೀಗಿಸಬೇಕಾದುದೇ ನಮ್ಮೆಲ್ಲರ ಕರ್ತವ್ಯವು. ಗಣಿಗಳಿಂದ ಚಿನ್ನವನ್ನು ತೆಗೆಯತಕ್ಕವರು, ಮೊದಲು ಬಂಗಾರವಿರತಕ್ಕ ಸ್ಥಳವನ್ನು ಹುಡುಕಿ, ಅಲ್ಲಿ ಸುವರ್ಣಮಿಶ್ರವಾದ ಕಲ್ಲುಗಳನ್ನು ಕಂಡು ಹಿಡಿದು, ಆ ಕಲ್ಲುಗಳನ್ನು ತಕ್ಕ ಉಪಾಯಗಳಿಂದ ಬೆಂಕಿಯಲ್ಲಿ ಕರಗಿಸಿ, ಆ ಕಶ್ಮಲಗಳಲ್ಲಿ ಮರೆಯಾಗಿದ್ದ ಬಂಗಾರವನ್ನುಮಾತ್ರ ಹೊರಕ್ಕೆ ತೆಗೆಯುವಂತೆ, ಆತ್ಮತತ್ವವನ್ನು ತಿಳಿದವರು, ದೇಹಕ್ಕೂ ಆತ್ಮಕ್ಕೂ ಇರುವ ಈ ಲಕ್ಷಣಭೇದಗಳನ್ನು ಮೊದಲು ಚೆನ್ನಾಗಿ ಪರ್ಯಾಲೋಚಿಸಿ, ಅದರಮೇಲೆ, ಸ್ವರೂಪಗಳಿಂದಲೂ, ಗುಣಗಳಿಂದಲೂ, ಮೇಲೆನಿಸಿಕೊಂಡ ಪರಮಾತ್ಮನ ಸ್ವರೂಪವನ್ನು ಸಾಕ್ಷಾತ್ಕರಿಸುವರು ಈವಿಧವಾದ ಜ್ಞಾನಯೋಗವೇ ಭಗವಂತನ ಸಾಕ್ಷಾತ್ಕಾರರೂಪವಾದ ಭಕ್ತಿಯೋಗಕ್ಕೆ ಅಂಗವೆನಿಸಿರುವುದು ಎಲೈ ಬಾಲಕರೆ! ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ, ಇವೆಂಟೂ ಪ್ರಕೃತಿಭೇದಗಳೆನಿಸುವುವು. ಸತ್ವ, ರಜಸ್ಸು, ತಮಸ್ಸು ಎಂಬಿವು ಮೂರೂ ಆಪ್ರಕೃತಿಯ ಗುಣಗಳು! ಐದು ಜ್ಞಾನೇಂದ್ರಿಯಗಳೂ, ಐದು ಕರ್ಮೇಂದ್ರಿಯಗಳೂ, ಪಂಚಪ್ರಾಣಗಳೂ, ಮನಸ್ಸೂ, ಇವು ಹದಿನಾರೂ ಆ ಪ್ರಕೃತಿಯ ವಿಕಾರಗಳೆನಿಸುವುವು. ಶರೀರವೆಂಬುದು ಇವೆಲ್ಲವುಗಳಿಂದಲೂ ಏರ್ಪಡುವುದು ಆಯಾ ಶರೀರದಲ್ಲಿರುವ ಜೀವನನ್ನು, ಬದ್ಧನೆಂದೂ, ಮುಕ್ತನೆಂದೂ, ಆಚಾರ್ಯನೆಂದೂ, ಶಿಷ್ಯನೆಂದೂ,

ಕರ್ಮಾನುಸಾರವಾಗಿ ಬೇರೆಬೇರೆ ವ್ಯವಸ್ಥೆಮಾಡಬಹುದಾದುದರಿಂದ, ಒಂದೊಂದು ಶರೀರದಲ್ಲಿಯೂ ಬೇರೆಬೇರೆಯಾಗಿ ಒಬ್ಬೊಬ್ಬ ಜೀವನೇ ಸೇರಿ ರುವನೆಂದು ತತ್ವಜ್ಞರು ನಿರ್ಣಯಿಸಿರುವರು ಹೀಗೆ ಪ್ರಕೃತಿಗಳೆನಿಸಿಕೊಂ ಡ ಭೂಮ್ಯಾದಿಗಳಿಂದಲೂ, ವಿಕೃತಿಗಳೆನಿಸಿಕೊಂಡ ಇಂದ್ರಿಯಾದಿಗಳಿಂದ ಲೂ ಏರ್ಪಟ್ಟದೇ ದೇಹವು! ಈ ದೇಹದಲ್ಲಿ ಸ್ಥಾವರಗಳೆಂದೂ, ಜಂ ಗಮಗಳೆಂದೂ ಎರಡು ಭೇದವುಂಟು ಹೀಗೆ ಸ್ಥಾವರಜಂಗಮರೂಪವಾದ ಪ್ರಕೃತಿಯಲ್ಲಿ,ರೂಪ,ಗಂಧ,ಮೊದಲಾದ ಗುಣಗಳಿಂದ ಭೂಮ್ಯಾದಿಗಳನ್ನು ವಿಭಾಗಿಸಿ, ಆಯಾ ಪದಾರ್ಥಗಳನ್ನು ಆತ್ಮವಲ್ಲವೆಂದು ಬಿಟ್ಟುಬಿಟ್ಟು ಇವೆಲ್ಲ ಕ್ಕಿಂತಲೂ ವಿಲಕ್ಷಣವಾದ ಆತ್ಮಸ್ವರೂಪವನ್ನು ಕಂಡುಕೊಳ್ಳಬೇಕು. ನಾನು ಬಳಿಯುವೆನು, ನಾನು ಅಪೇಕ್ಷಿಸುವೆನು, ನಾನು ದ್ವೇಷಿಸುವೆನು. ಎಂಬೀ ವ್ಯವಹಾರಕ್ರಮದಿಂದ, ಬುದ್ಧಿ, ಇಚ್ಛೆ, ದ್ವೇಷ. ಇವೇಮೊದಲಾದ ಜ್ಞಾನಕಾರ್ಯಗಳೆಲ್ಲವೂ“ಅಹಂ”ಶಬ್ದವಾಚ್ಯವಾದ ಆತ್ಮನಲ್ಲಿಯೇ ನೇರವಾ ಗಿ ಅನ್ವಯಿಸುವುದು. ತನ್ನ ಕೈ, ತನ್ನ ಕಾಲು, ತನ್ನ ತಲೆ ಎಂಬಂ ತೆ ಶರೀರಾವಯವಯವಗಳೆಲ್ಲವೂ, ಆ ಆತ್ಮಕ್ಕಿಂತ ಬೇರೆಯಾಗಿಯೇ ವ್ಯವಹರಿಸಲ್ಪಡುವುದು. ಈ ವಿವೇಚನೆಯಿಂದ, ಆತ್ಮಸ್ವರೂಪವನ್ನೂ, ಆ ತ್ಮವಲ್ಲದ ಇತರವಸ್ತುಗಳನ್ನೂ ಪ್ರತ್ಯೇಕಿಸಿ, ಶುದ್ಧಾತ್ಮಸ್ವರೂಪವ ನ್ನು ಕಂಡುಕೊಳ್ಳಬೇಕು ಮತ್ತು ಸೃಷ್ಟಿ, ಸ್ಥಿತಿ, ಲಯಾದಿಗಳ ಸ್ವ ರೂಪವನ್ನು ವಿವರಿಸತಕ್ಕ ವೇದಾಂತವಾಕ್ಯಗಳ ತತ್ವಾರ್ಥವನ್ನು ವಿಮರ್ಶಿ ಸುವುದರಿಂದಲೂ, ಆತ್ಮವು ದೇಹಾದಿಗಳಿಗಿಂತಲೂ ವಿಲಕ್ಷಣವಾಗಿಯೂ,ಪರ ಮಾತ್ಮನಿಗೆ ಶೇಷಭೂತವಾಗಿಯೂ,ಆವನಿಗೆ ಶರೀರವಾಗಿಯೂ ಇರುವುದೆಂ ಬುದನ್ನು ತಿಳಿಯಬೇಕು ಈ ಉಪಾಯಗಳಿಂದ ಸಾವಧಾನಮನಸ್ಕರಾಗಿಯೋ ಚಿಸಿದರೆ ಆತ್ಮಸ್ವರೂಪವನ್ನು ಕಂಡುಕೊಳ್ಳಬಹುದು. ಎಲೈ ಬಾಲಕರೆ ! ಎಚ್ಚರ, ಕನಸು,ನಿದ್ರೆ, ಎಂಬಿವು ಮೂರೂ ಬುದ್ಧಿವ್ಯಾಪಾರಗಳು ಈ ಬು ದ್ಧಿವ್ಯಾಪಾರಗಳನ್ನು ಅನುಭವಿಸತಕ್ಕವನೇ ದೇಹಕ್ಕಿಂತಲೂ ವಿಲಕ್ಷಣನಾದ ಪ್ರತ್ಯಗಾತ್ಮನೆಂದೂ, ಪುರುಷನೆಂದೂ ತಿಳಿಯಿರಿ! ಆ ಪ್ರತ್ಯಗಾತ್ಮನೇ ದೇ ಹಾದಿಗಳನ್ನು ಧರಿಸಿರತಕ್ಕವನು.ಅವನೇ ಅವುಗಳಿಗೆ ಸಾಕ್ಷಿಯಾಗಿಯೂ ನೊ

ಡತಕ್ಕವನು ಬುದ್ಧಿವ್ಯಾಪಾರವು ಹೊರಗಿನ ಇಂದ್ರಿಯವ್ಯಾಪಾರಗಳೊಡನೆ ಕಲೆತಿರುವುದೇ ಜಾಗರಾವಸ್ಥೆಯೆನಿಸುವುದು ಆ ಬುದ್ಧಿಯು ಬಾಹ್ಯೇಂದ್ರಿಯವ್ಯಾಪಾರಗಳನ್ನು ಬಿಟ್ಟಿರುವುದೇ ಸ್ವಪ್ನಾವಸ್ಥೆಯು ಆ ಬುದ್ಧಿಯು ಏನೂ ತಿಳಿಯದೆ ಶಾಂತವಾಗಿರುವುದೇ ಸುಷುಪ್ತಿಯು. ಈ ಮೂರು ಬಗೆಯ ಬುದ್ಧಿವ್ಯಾಪಾರಕ್ಕೂ ಆಶ್ರಯನಾಗಿ ತೋರುವವನೇ ಜೀವನು ಈ ಬುದ್ಧಿಭೇದಗಳೆಲ್ಲವೂ ಸತ್ವಾದಿಗುಣಗಳ ಸಂಬಂಧದಿಂದುಂಟಾಗುವುವು ಇವು ಒಂದು ನೆಲೆಯಲ್ಲಿ ನಿಲ್ಲದೆ, ಕ್ಷಣಕ್ಷಣಕ್ಕೂ ಬದಲಾಯಿಸುತ್ತಿರುವುವು. ಈ ವಿಕಾರಗಳೆಲ್ಲಕ್ಕೂ ಪುಣ್ಯಪಾಪಕರ್ಮಗಳೇ ಮೂಲವು ಗಾಲಿಯು ತನ್ನ ಸಂಚಾರರೂಪವಾದ ಕರ್ಮದಿಂದ ಅಲ್ಲಲ್ಲಿರುವ ಸುಗಂಧದುರ್ಗಂಧಗಳೊಡನೆ ಕಲೆತುಬರುವಂತೆ, ಜೀವನು ತನ್ನ ಕರ್ಮಾನುಸಾರವಾಗಿ ಮೇಲೆ ಹೇಳಿದ ಬುದ್ಧಿವ್ಯಾಪಾರಗಳೊಡನೆ ಕಲೆತಿರುವನು. ವಾಯುವಿಗೆ ಕೇವಲ ಸ್ಪರ್ಶಗುಣವೂ, ಭೂಮಿಗೆ ಗಂಧಗುಣವೂ ಸಹಜವಾಗಿದ್ದರೂ, ಗಂಧಗುಣವುಳ್ಳ ಪಾರ್ಥಿವವಸ್ತುಗಳ ಸಂಬಂಧವಿದ್ದಾಗ, ವಾಯುವಿನಲ್ಲಿಯೂ ಆಗುಣವು ಕಾಣುವುದಲ್ಲವೆ? ಆದರಂತೆಯೇ ಶುದ್ಧಾತ್ಮಸ್ವರೂಪದಲ್ಲಿ ಕರ್ಮಾನುಸಾರವಾಗಿ ಈ ಬುದ್ಧಿಭೇದಗಳು ಕಲೆತುಬರುವುವೇಹೊರತು, ಅವು ಆತ್ಮನಿಗೆ ಸ್ವಾಭಾವಿಕಗಳಲ್ಲ. ಗಂಧಸಂಬಂಧವಿಲ್ಲದ ವಾಯುವಿನ ಶುದ್ಧಸ್ವರೂಪವನ್ನು ಕಂಡುಕೊಳ್ಳುವಂತೆ, ಸತ್ವಾದಿಗುಣತ್ರಯಮೂಲಕವಾದ ಬುದ್ಧಿವ್ಯಾವಾರವಿಲ್ಲದ ಆತ್ಮಸ್ವರೂಪವನ್ನು ಪ್ರತ್ಯೇಕಿಸಿ ತಿಳಿದುಕೊಳ್ಳಬೇಕು. ಹೀಗೆ ತ್ರಿಗುಣಗಳ ಮತ್ತು, ಕರ್ಮಗಳ ಸಂಬಂಧದಿಂದುಂಟಾಗುವ ಈಬುದ್ಧಿವ್ಯಾಪಾರವೇ ಸಂಸಾರಕ್ಕೆ ದ್ವಾರವೆನಿಸಿರುವುದು. ಸಂಸಾರವೆಂಬುದು, ಮನುಷ್ಯರಿಗೆ, ಅವರವರ.ಅಜ್ಞಾನದಿಂದಲೇ ಪ್ರಾಪ್ತವಾಗುತ್ತ, ಪುರುಷಾರ್ಥವೆನಿಸಿಕೊಳ್ಳದಿದ್ದರೂ ಅವರವರಕರ್ಮಾನುಸಾರವಾಗಿಸ್ವಪ್ನದಂತೆ ಅನುಭವಕ್ಕೆಬರುವುದು ಮುಖ್ಯವಾಗಿ ಆತ್ಮವೆಂಬುದು, ನಿತ್ಯವಾಗಿಯೂ, ವಿಕಾರವಿಲ್ಲದುದಾಗಿಯೂ, ಶುದ್ಧವಾಗಿಯೂ ಇದ್ದರೂ, ಅದಕ್ಕೆ ಅನಾದಿಯಾಗಿ ಅಂಟಿಬರುವ ಕರ್ಮವಾಸನೆಯಿಂದ, ಸತ್ವಾದಿಗುಣಗಳ ಸಂಬಂಧವೂ, ಅದರಿಂದ ಆತ್ಮಸ್ವರೂಪವನ್ನು ಮರೆಸತಕ್ಕ ಅಜ್ಞಾನವೂ, ಅದರ

ಮೇಲೆ ಆಯಾಗುಣಗಳಿಗೂ, ಕರ್ಮಗಳಿಗೂ ತಕ್ಕಂತೆ ಬುದ್ಧಿಪ್ರವೃತ್ತಿ ಯೂ, ಅದರಿಂದ ಸಂಸಾರಸಂಬಂಧವೂ ಉಂಟಾಗುವುದು. ಈ ಸಂಸಾರ ಸಂಬಂಧವೇ ತಿರುಗಿ ದೇಹಾಭಿಮಾನವನ್ನು ಹುಟ್ಟಿಸುವುದು. ಈ ಅಭಿಮಾ ನದಿಂದ ಮನುಷ್ಯನು ತಿರುಗಿ ಕರ್ಮಗಳನ್ನು ನಡೆಸುವನು. ಈಕರ್ಮದಿಂದ ತಿರುಗಿ ಸತ್ವಾದಿಗುಣಗಳಿಗೆ ಉದ್ರೇಕವುಂಟಾಗುವುದು. ಕರ್ಮವಾಸನೆಯು ಅಂಟಿಬರುತ್ತಿರುವವರಗೆ ಹೀಗೆಯೇ ಸಂಸಾರಚಕ್ರದಲ್ಲಿ ಸುತ್ತಿಸುತ್ತಿ ನರಳ ಬೇಕಾಗುವುದು. ಆದುದರಿಂದ ಎಲೈ ಬಾಲಕರೆ! ನೀವು ತ್ರಿಗುಣಾತ್ಮಕಗ ಳಾದ ಕರ್ಮಗಳಿಗೆ ಬೀಜದಂತಿರುವ ಆ ಅಜ್ಞಾನವನ್ನು ನಿರ್ಮೂಲವಾಗಿನೀ ಗಿಸುವುದಕ್ಕೆ ಯತ್ನಿಸಬೇಕು. ದೇಹಾತ್ಮಭ್ರಮರೂಪವಾದ ಈ ಅಜ್ಞಾ ನವನ್ನು ನೀಗಿಸಬೇಕಾದರೆ, ಬುದ್ಧಿಯನ್ನು ಶಬ್ದಾದಿವಿಷಯಗಳಲ್ಲಿ ಯಥೇಚ್ಛ ವಾಗಿ ಪ್ರವರ್ತಿಸದಂತೆ ತಡೆದು ನಿಲ್ಲಿಸತಕ್ಕ ಯೋಗವನ್ನು ಸಾಧಿಸಬೇಕು. ಈ ಯೋಗಸಾಧನೆಗೆ ಸಾವಿರಾರುಮಾರ್ಗಗಳಿದ್ದರೂ, ಭಗವಂತನಲ್ಲಿ ಪ್ರೀ ತಿಯನ್ನು ಬೆಳೆಸತಕ್ಕ ಭಕ್ತಿಯೋಗವೇ ಎಲ್ಲಕ್ಕಿಂತಲೂ ಉತ್ತಮವಾದ ಉ ಪಾಯವು. ಈ ವಿಷಯವನ್ನು ಭಗವಂತನು ಸಾಕ್ಷಾತ್ತಾಗಿ ತನ್ನ ಬಾಯಿಂದ ಲೇ ಉಪದೇಶಿಸಿರುವನು. ಈ ಭಕ್ತಿಯೋಗವನ್ನು ಸಾಧಿಸತಕ್ಕ ಉಪಾಯ ಗಳನ್ನು ತಿಳಿಸುವೆನು ಕೇಳಿರಿ ! ಗುರುಗಳನ್ನು ಪಚರಿಸುವುದು, ಆ ಗುರುಗಳಲ್ಲಿ ಭಕ್ತಿಯಿಟ್ಟು ಉಪಾಸನೆಮಾಡುವುದು, ಆ ಗುರುಗಳು ಕೋರಿದ ವಸ್ತು ಗಳಲ್ಲಿ ತನಗೆ ಲಭ್ಯವಾದುದೆಲ್ಲವನ್ನೂ ಅವರಿಗೆ ಸಮರ್ಪಿಸುವುದು, ಭಗವದ್ಭ ಕ್ತರೊಡನೆ ಸಹವಾಸಮಾಡುವುದು, ವಿಷ್ಣುಮೂರ್ತಿಗಳನ್ನು ಪೂಜಿಸು ವುದು, ವಿಷ್ಣುಕಥೆಗಳನ್ನು ಶ್ರದ್ಧೆಯಿಂದ ಕೇಳುವುದು, ಆತನ ಗುಣಗಳ ನ್ನೂ, ಕಾರ್ಯಗಳನ್ನೂ ಕೊಂಡಾಡುವುದು, ಆತನ ಪಾದಪದ್ಮಗಳನ್ನು ಯಾವಾಗಲೂ ಧ್ಯಾನಿಸುತ್ತಿರುವುದು, ಆತನ ಅರ್ಚಾವಿಗ್ರಹಗಳನ್ನು ದರ್ಶ ನಮಾಡುವುದು, ಆ ಮೂರ್ತಿಗಳನ್ನು ಅರ್ಚಿಸುವುದು, ಭಗವಂತನು ಸ ರ್ವಾಂತರಾತ್ಮನಾದುದರಿಂದ, ಸಮಸ್ತ ಭೂತಗಳನ್ನೂ ಭಗವತ್ಸ್ವರೂಪ ವೆಂದೇ ಭಾವಿಸುತ್ತ, ಆಯಾ ಭೂತಗಳ ಕೋರಿಕೆಗಳೆಲ್ಲವನ್ನೂ ತನ್ನಿಂದ ಸಾಧ್ಯವಾದಷ್ಟು ಈಡೇರಿಸಿ, ಅವುಗಳನ್ನು ಮನ್ನಿಸುವುದು, ಈ ಸಾಧನಗ

ಳಿಂದ, ಅಂತ ಶ್ಶತ್ರುಗಳೆನಿಸಿಕೊಂಡ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿ ಷಡ್ವರ್ಗಗಳನ್ನೂ ಜಯಿಸಿ, ನಿರಂತರವಾಗಿ ಪರಮೇಶ್ವರನನ್ನು ಧ್ಯಾನಿಸುತ್ತಿರಬೇಕು. ಇವುಗಳಿಂದ ಭಗವಂತನಲ್ಲಿ ಪ್ರೀತಿರೂಪವಾದ ಭಕ್ತಿಯು ತಾನಾಗಿಯೇ ಹುಟ್ಟುವುದು, ಈ ಪ್ರೀತಿಯು ಮನಸ್ಸಿನಲ್ಲಿ ಬೇರೂರಿದಹಾಗೆಲ್ಲಾ, ಆ ಭಗವಂತನ ಅಸಾಧಾರಣಗುಣಗಳನ್ನೂ, ಆತನ ಅವತಾರಚರಿತ್ರಗಳನ್ನೂ ಕೇಳಿ ಕೇಳಿ ಪುರುಷನು, ಸಂತೋಷಾತಿಶಯದಿಂದ ಮೈಮರೆತಂತಾಗುವನು ! ಅವನ ಕಣ್ಣುಗಳಲ್ಲಿ ಆನಂದ ಬಾಷ್ಪವು ತುಳುಕುವುದು ! ಮೈಯಲ್ಲಿ ರೋಮಾಂಚವು ಹುಟ್ಟುವುದು ! ಕಂಠಸ್ವರವು ಕುಗ್ಗುವುದು! ಭಕ್ತಿಯಿಂದ ಮೈಮರೆತು ಆ ಭಗವದ್ಗುಣಗಳನ್ನು ಉಚ್ಚಸ್ವರದಿಂದ ಕೂಗಿಕೂಗಿ ಕೊಂಡಾಡುವನು! ಆ ಭಗವಂತನ ಹೆಸರನ್ನು ಹಿಡಿದು ಗಟ್ಟಿಯಾಗಿ ಕೂಗಿಕೊಳ್ಳುವನು! ಸಂತೋಷದಿಂದಕುಣಿದಾಡುವನು! ಗ್ರಹಗ್ರಸ್ತನಂತೆ ಇದ್ದಕ್ಕಿದ್ದಹಾಗೆ ಒಮ್ಮೊಮ್ಮೆ ನಗುವನು! ಒಮ್ಮೊಮ್ಮೆ ಅಳುವನು ! ಒಮ್ಮೊಮ್ಮೆ ಧ್ಯಾನಿಸುತ್ತ ಸುಮ್ಮನೆ ನಿಂತುಬಿಡುವನು! ಕಂಡಕಂಡಪ್ರಾಣಿಗಳಿಗೆಲ್ಲಾ ತಲೆಬಗ್ಗಿ ನಮಸ್ಕರಿಸುವನು. ಆಗಾಗ ನಿಟ್ಟುಸಿರನ್ನು ಬಿಡುತ್ತ "ಓ ಹರೀ! ಓ ಜಗತ್ಪತೀ! ಓ ನಾರಾಯಣಾ!" ಎಂದು ಕೂಗಿಕೊಳ್ಳುವನು. ಮನುಷ್ಯನು ಹೀಗೆ ಹುಚ್ಚನಂತೆ ಮೈಮರೆತು ನಿರ್ಲಜ್ಜನಾಗಿ ಯಾವಾಗ ಭಗವನ್ನಾಮಗಳನ್ನು ಹಿಡಿದು ಕೂಗಿಕೊಳ್ಳುವನೋ, ಆಗಲೇ ಅವನಲ್ಲಿ ಭಕ್ತಿಯೋಗವು ಪರಿಪಕ್ವವಾಯಿತೆಂದು ತಿಳಿಯಬಹುದು. ಹೀಗೆ ಭಕ್ತಿಯೋಗವು ಪೂರ್ಣಾವಸ್ಥೆಯನ್ನು ಹೊಂದಿದಾಗಲೇ, ಅದರ ಮಹಿಮೆಯಿಂದ ಮನುಷ್ಯನ ಪಾಪಗಳೆಲ್ಲವೂ ಬಿಟ್ಟುಹೋಗುವುವು. ಸಂಸಾರಕ್ಕೆ ಬೀಜಭೂತವಾದ ಕರ್ಮವಾಸನೆಯೂ ಪೂರ್ಣವಾಗಿ ದಗ್ಧವಾಗುವುದು. ಯಾವಾಗಲೂ ಭಗವನ್ಮೂರ್ತಿಯನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತ, ಆ ಭಗವಂತನೊಡನೆ ಸಮಾನರೂಪ (ಸಾರೂಪ್ಯ)ವನ್ನು ಹೊಂದಿದಂತಾಗುವನು. ಕೊನೆಗೆ ಭಗವಂತನ ಸಾನ್ನಿಧ್ಯವನ್ನೂ ಸೇರುವನು. ಈ ಭಗವತ್ಪ್ರಾಪ್ತಿಯೇ ಮನುಷ್ಯನು ಸಾಧಿಸಬೇಕಾದ ಉತ್ತಮಪುರುಷಾರ್ಥವು. ಈ ಲೋಕದಲ್ಲಿ, ತಾಪತ್ರಯಕ್ಕೆ ಸಿಕ್ಕಿ ನರಳುವ ಸಂಸಾರಿಗಳಿಗೆ, ಆ

ಸಂಸಾರಬಂಧವನ್ನು ತಪ್ಪಿಸುವುದಕ್ಕೂ ಇದೇ ಕಾರಣವು. "ನಿರತಿಶಯ ವಾದ ಬ್ರಹ್ಮಾನಂದವೂ ಇದೇ" ಎಂದು ವಿದ್ವಾಂಸರು ನಿಶ್ಚಯಿಸಿರುವರು. ಆದುದರಿಂದ ಎಲೈ ಬಾಲಕರೆ ! ನೀವೆಲ್ಲರೂ ನಿಮ್ಮ ಹೃದಯಾಂತರಾತ್ಮ ನಾದ ಭಗವಂತನನ್ನು ಮನಸ್ಸಿನಲ್ಲಿ ಧ್ಯಾನಿಸಿರಿ! ಈ ಕಾರ್ಯವನ್ನು ನಡೆಸು ವುದೇನೂ ನಿಮಗೆ ಕಷ್ಟವಲ್ಲ. ಅವನು ಆಕಾಶದಂತೆ ನಿಮ್ಮನಿಮ್ಮಹೃದಯ ಗುಹೆಯಲ್ಲಿಯೇ ನೆಲೆಗೊಂಡಿರುವನು. ಸತ್ಯರೂಪನಾಗಿ, ಸಮಸ್ತ ಪ್ರಾಣಿಗಳಿಗೂ ಮಿತ್ರನಂತೆ ಕ್ಷೇಮಚಿಂತಕನಾಗಿ, ನಿಮ್ಮಲ್ಲಿಯೇ ನೆಲೆಗೊಂ ಡಿರುವ ಆ ಪರಮಾತ್ಮನನ್ನು ಧ್ಯಾನಿಸುವುದರಲ್ಲಿ ನಿಮಗೇನೂ ಪ್ರಯಾಸ ವಿರದು ! ಭಗವದುಪಾಸನವೆಂಬುದು ಇಷ್ಟು ಸುಲಭಸಾಧ್ಯವಾಗಿ, ಸರ್ವೋ ತ್ತಮಫಲವನ್ನು ಕೊಡುತ್ತಿರುವಾಗ, ಶ್ರಮಪಟ್ಟು ಸಾಧಿಸಿಯೂ ಅಲ್ಪ ಸುಖವನ್ನು ಕೊಡತಕ್ಕ ಶಬ್ದಾದಿವಿಷಯಗಳಿಂದೇನು" ಧನಸಮೃದ್ಧಿ, ಪಶು ಸಮೃದ್ಧಿ, ಹೆಂಡಿರುಮಕ್ಕಳು ಮುಂತಾದ ಬಂಧುವರ್ಗಗಳು, ಮನೆ, ಭೂ ಸ್ಥಿತಿ, ಆನೆ ಕುದುರೆ ಮುಂತಾದ ಸೈನ್ಯಸಮೃದ್ಧಿ, ಬೊಕ್ಕಸ ಮುಂತಾದ ಸಂಪತ್ತುಗಳೆಲ್ಲವೂ, ಕ್ಷಣಕಾಲವಿದ್ದು ಹೋಗತಕ್ಕವುಗಳೇಹೊರತು ಸ್ಥಿರವ ಲ್ಲ. ಅವು ಒಂದು ನೆಲೆಯಲ್ಲಿ ನಿಲ್ಲತಕ್ಕವುಗಳಲ್ಲ. ಅಲ್ಪಾಯುಸ್ಸುಳ್ಳ ಮನು ಷ್ಯನಿಗೆ ಅವುಗಳಿಂದ ಯಾವ ಸುಖವುಂಟು ? ಇದರಂತೆಯೇ ಯಾಗಾದಿ ಕರ್ಮಗಳಿಂದ ಪಡೆಯತಕ್ಕ ಸ್ವರ್ಗಾದಿಲೋಕಗಳೂಕೂಡ,ಕ್ಲ್ಪಪ್ತಕಾಲದ ವರೆಗಿದ್ದು ನಾಶಹೊಂದತಕ್ಕವುಗಳೇಹೊರತು ಶಾಶ್ವತಗಳಲ್ಲ! ಅವೆಲ್ಲಕ್ಕಿಂ ತಲೂ ಮೇಲೆ ಉತ್ತಮಲೋಕವೊಂದಿರುವುದರಿಂದ, ಅವುಗಳನ್ನೂ ಅಧೋ ಲೋಕಗಳೆಂದೇ ಹೇಳಬಹುದು. ಅಲ್ಲಿನ ಸುಖವೂ ದುಃಖಮಿಶ್ರವಾಗಿಯೇ ಇರುವುದು. ಆದುದರಿಂದ ಎಲೈ ಬಾಲಕರೆ! ನೀವು ಆತ್ಮೋಜ್ಜೀವನವನ್ನು ಪಡೆಯಬೇಕಾದರೆ, ಶ್ರುತಿಸ್ಮೃತಿಗಳಿಂದ ಕೀರ್ತಿಸಲ್ಪಟ್ಟ ಮಹಾಮಹಿಮೆ ಯುಳ್ಳವನಾಗಿಯೂ, ಭಕ್ತಿಯೆಂಬ ಒಂದೇ ಉಪಾಯದಿಂದ ಸುಲಭವಾಗಿ ವಶವಾಗತಕ್ಕವನಾಗಿಯೂ ಇರುವ ಪರಮಪುರುಷನನ್ನೇ ಭಜಿಸಿರಿ ! ಹಾಗಿ ಲ್ಲದಪಕ್ಷದಲ್ಲಿ ನೀವು ಎಂದೆಂದಿಗೂ ಸಂಸಾರಪಾಶದಲ್ಲಿಯೇ ಬಿದ್ದು ನರಳು ತ್ತ, ಕೊನೆಗೆ ಸ್ಥಾವರಜನ್ಮವನ್ನು ಹೊಂದಿ ಕೆಟ್ಟುಹೋಗುವಿರಿ! ವೇದದ

ಪೂರ್ವಭಾಗದಲ್ಲಿರುವ ಕರ್ಮಕಾಂಡವನ್ನೋದಿ, ಅದರಿಂದಲೇ ತನ್ನನ್ನು ಸ
ರ್ವಜ್ಞನನ್ನಾಗಿ ತಿಳಿದು ಗರ್ವಪಡುವ ಮನುಷ್ಯನು, ಶಬ್ದಾದಿವಿಷಯಸು
ಖಗಳಿಗಾಗಿ ಆಸೆಪಟ್ಟು, ಅದಕ್ಕಾಗಿ ಅಡಿಗಡಿಗೆ ಯಾಗಾದಿಕರ್ಮಗಳನ್ನೇ
ನಡೆಸುತ್ತಬಂದರೆ, ಅವನು ತನ್ನ ಕೋರಿಕೆಗೆ ವಿರುದ್ಧವಾಗಿ ದುಃಖವನ್ನೇ
ಸಂಪಾದಿಸಿಕೊಂಡಂತಾಗುವುದು ! ವಿಷಯಸುಖಗಳಲ್ಲಿ ಆಸೆಹುಟ್ಟುವುದ
ಕ್ಕೆ ಮೊದಲು,ಯಾವ ಕರ್ಮಗಳಿಗೂ ಕೈಯಿಕ್ಕದೆ ನಿಶ್ಚಿಂತನಾಗಿದ್ದ ಮನು
ಷ್ಯನು,ವಿಷಯಾಭಿಲಾಷೆಯಿಂದ ಕರ್ಮಗಳಲ್ಲಿ ಪ್ರವರ್ತಿಸಿದರೆ, ಅವುಗಳನ್ನು
ಆರಂಭಿಸುವುದಕ್ಕೆ ಮೊದಲೇ ಎಷ್ಟೋ ಕಷ್ಟಪಡಬೇಕು ಆರಂಭಿಸಿದಮೇಲೆ
ಆ ಕರ್ಮಗಳನ್ನು ಮುಗಿಸುವವರೆಗೂ ದುಃಖವನ್ನನುಭವಿಸಬೇಕು ಆದುದ
ರಿಂದ ವಿಷಯಸುಖವೆಂಬುದು, ಆರಂಭದಿಂದ ಕೊನೆಯವರೆಗೂ ದುಃಖಮಿ
ಶ್ರವಾಗಿಯೇ ಇರುವುದು ಈ ವಿಷಯಾಭಿಲಾಷೆಯನ್ನು ಬಿಟ್ಟು,ಭಕ್ತಿಯೋಗ
ವನ್ನೇ ಅನುಷ್ಠಿಸತಕ್ಕವನಾದರೋ,ಎಂದಿಗೂ ಯಾವವಿಧವಾದ ದುಃಖವೂ
ಇಲ್ಲದೆ ಮೊದಲಿಂದ ಕೊನೆಯವರೆಗೂ ಭಗವದನುಭವದಿಂದಲೇ ಆನಂದಿ
ಸುತ್ತಿರಬಹುದು ಆ ಭಕ್ತಿಯೋಗವು ಪರಿಪಕ್ವವಾದಮೇಲೆ, ಎಣೆಯಿಲ್ಲದ
ಬ್ರಹ್ಮಾನಂದವೆಂಬ ಅಮೃತಸಮುದ್ರದಲ್ಲಿ ಮುಳುಗಿ ತೇಲಬಹುದು ಜೀವ
ನು ತನಗೆ ಆಗಂತುಕವಾಗಿ ಬಂದು ಸೇರಿದ ದೇಹಕ್ಕೆ ಸುಖವನ್ನಪೇಕ್ಷಿಸಿ,
ಅದಕ್ಕೆ ಬೇಕಾದ ಶಬ್ದಾದಿವಿಷಯಗಳನ್ನು ಪಡೆಯುವುದಕ್ಕಾಗಿ ಎಷ್ಟೋ
ಶ್ರಮಪಡುವನು. ಇಷ್ಟು ಶ್ರಮಪಟ್ಟು ಆ ದೇಹವನ್ನು ಪೋಷಿಸಿಟ್ಟರೂ
ಕೊನೆಗೆ ಸ್ವಲ್ಪಕಾಲದಲ್ಲಿಯೇ ಅದು ನಾಯಿನರಿಗಳ ಆಹಾರಯೋಗ್ಯವಾಗ
ಬೇಕೇಹೊರತು ಸ್ಥಿರವಾಗಿ ನಿಲ್ಲತಕ್ಕುದಲ್ಲ

ದೇಹವೆಂಬುದು ಕ್ಷಣಕಾಲದವರೆಗೆ ಆತ್ಮವನ್ನು ಮರೆಸಿಕೊಂಡಿದ್ದು,
ಆಮೇಲೆ ಅದನ್ನು ಬಿಟ್ಟುಹೋಗುವುದು. ಅಲ್ಲದೆ ದೇಹದ ಸುಖಕ್ಕಾಗಿ ವಿ
ವೇಕಿಯಾದ ಮನುಷ್ಯನು ವೃಥಾಶ್ರಮಪಡಬಾರದು. ಜೀವಾತ್ಮನನ್ನು
ಸಾಕ್ಷಾತ್ತಾಗಿ ತನ್ನಲ್ಲಿ ಮುಚ್ಚಿಟ್ಟುಕೊಳ್ಳುವ ದೇಹದ ಸ್ಥಿತಿಯೇ ಹೀಗಿ
ರುವಾಗ,ಆ ದೇಹದ ಮೂಲಕವಾಗಿ ಬಂದು ಸೇರುವ ಹೆಂಡಿರು, ಮಕ್ಕಳು,
ಮನೆ, ಮರ ಮುಂತಾದ ಇತರಪರಿವಾರಗಳ ವಿಷಯವನ್ನು ಹೇಳಬೇಕಾ

ದುದೇನು? ಆತ್ಮಕ್ಕೂ, ಅವುಗಳಿಗೂ, ಎಷ್ಟೋ ದೂರವು ಬಿಟ್ಟುಹೋಗು ವುದಲ್ಲವೆ? ಪುತ್ರ, ಮಿತ್ರ ಕಳತ್ರಾದಿಗಳೂ, ರಾಜ್ಯಕೋಶಗಳೂ, ಚತುರಂಗ ಸೈನ್ಯಗಳೂ, ಮಂತ್ರಿಗಳೂ, ಪರಿಜನರೂ, ಇವೆಲ್ಲವೂ ಸ್ವಲ್ಪಕಾಲದವರೆಗಿ ದ್ದು, ತನ್ನದೆಂಬ ಮಮತೆಯನ್ನು ಹುಟ್ಟಿಸಿ, ಬಿಟ್ಟುಹೋಗತಕ್ಕವುಗಳೇ ಹೊರತು ಸ್ಥಿರವಾಗಿ ನಿಲ್ಲತಕ್ಕುವಲ್ಲ. ನಿತ್ಯಾನಂದಸ್ವರೂಪನಾದ ಆತ್ಮನಿ ಗೂ ಇವುಗಳಿಗೂ ಏನೇನೂ ಸಂಬಂಧವಿಲ್ಲ ಅತ್ಯಲ್ಪಗಳಾಗಿಯೂ, ಆಯಾ ದೇಹದೊಡನೆ ತಾವೂ ಸಂಬಂಧವನ್ನು ತೊರೆಯತಕ್ಕವುಗಳಾಗಿಯೂ,ಅನರ್ಥ ಹೇತುಗಳಾಗಿಯೂ ಇರುವ ಈ ಶಬ್ದಾದಿವಿಷಯಗಳೆಲ್ಲವೂ ಅವಿವೇಕಿಗಳಿಗೆಸು ಖಭ್ರಾಂತಿಯನ್ನು ಹುಟ್ಟಿಸಿ ಪುರುಷಾರ್ಥಗಳಂತೆ ತೋರುವುವು. ಇವುಗಳಿಂದ ಪ್ರಯೋಜನವಿಲ್ಲ ಇವೆಲ್ಲವೂ ದೇಹಸೌಖ್ಯಕ್ಕಾಗಿಯೇಹೊರತು ಆತ್ಮ ಸುಖಕ್ಕಲ್ಲ ಆದುದರಿಂದ ಅತ್ಯಲ್ಪವಾದ ದೇಹಸುಖಕ್ಕಾಗಿ ಶಬ್ದಾ ದಿವಿಷಯಗಳನ್ನು ಹುಡುಕುತ್ತ,ಅದಕ್ಕಾಗಿ ಶ್ರಮಪಡದೆ, ಆತ್ಮೋಜ್ಜೀವನವ ನ್ನುಂಟುಮಾಡತಕ್ಕ ಭಕ್ತಿಯೋಗದಿಂದ, ಮಹಾನಂದಸ್ವರೂಪನಾದ ಭಗ ವಂತನನ್ನಾಶ್ರಯಿಸುವುದೇ ನಮಗೆ ಉತ್ತಮಕಾರ್ಯವು. ಈ ಲೋಕದಲ್ಲಿ ಜನ್ಮಾಂತರಕರ್ಮಗಳಿಂದ ಅನೇಕದುಃಖಗಳನ್ನನುಭವಿಸುತ್ತಿರುವ ಜೀವನಿಗೆ ಸ್ತ್ರೀಸಂಭೋಗಾದಿಗಳಿಂದುಂಟಾಗತಕ್ಕ ಸುಖವೆಷ್ಟುಮಾತ್ರವೆಂಬುದನ್ನು ಯೋಚಿಸಿ ನೋಡಿರಿ! ಆ ಸ್ತ್ರೀಯರಲ್ಲಿ ಮೋಹಗೊಂಡು ಅವಳ ಪೋಷಣಾ ದಿ ಕಾರ್ಯಗಳಿಗಾಗಿ ಮನುಷ್ಯನು ಎಷ್ಟು ಕಷ್ಟವನ್ನನುಭವಿಸಬೇಕೋ ಆ ಕಷ್ಟಕ್ಕೆ ತಕ್ಕ ಸುಖವೂ ಅವಳಿಂದ ಲಭಿಸಲಾರದು. ಆ ಕಷ್ಟಸುಖಗಳೆರ ಡನ್ನೂ ಹೋಲಿಸಿ ನೋಡಿದರೆ ಸುಖವು ಅತ್ಯಲ್ಪವಾಗಿರುವುದು ಮತ್ತು ತಾಯಿಯ ಗರ್ಭದಲ್ಲಿ ತಂದೆಯ ವೀರ್ಯದಿಂದ ಪಿಂಡೋತ್ಪತ್ತಿಯಾ ದುದು ಮೊದಲು, ಮರಣಾಂತದವರೆಗೆ ಎಲ್ಲಾ ಅವಸ್ಥೆಗಳಲ್ಲಿಯೂ ಕರ್ಮಾ ನುಸಾರವಾಗಿ ದುಃಖಪರಂಪರೆಗಳನ್ನೇ ಅನುಭವಿಸುತ್ತಿರುವ ಜೀವನಿಗೆ ಈ ಲೋಕದಲ್ಲಿ ಸುಖವೆಂದರೇನು? ವಿವೇಕಿಗಳು ಇದನ್ನು ಸುಖವೆಂದೇ ಭಾವಿ ಸಲಾರರು. ಜೀವನು ತನಗೆ ಒಂದು ದೇಹವಿರುವವರೆಗೂ ಮುಂದೆ ಮತ್ತೊಂದು ದೇಹವನ್ನು ಪಡೆಯುವುದಕ್ಕೆ ಬೇಕಾದ ಪುಣ್ಯಪಾಪಕರ್ಮ

ಗಳಲ್ಲಿಯೇ ಪ್ರವರ್ತಿಸುತ್ತಿರುವನು ಆ ಕರ್ಮಗಳಿಗೆ ತಕ್ಕಂತೆ ದೇಹಾಂತರ ಗಳನ್ನು ಹೊಂದುವನು ತಿರುಗಿ ಆ ದೇಹದಲ್ಲಿಯೂ, ಮತ್ತೊಂದು ದೇಹ ವನ್ನು ಹೊಂದಿಸತಕ್ಕಕರ್ಮಗಳನ್ನೇ ನಡೆಸುವನು. ಹೀಗೆ ದೇಹದಿಂದ ದೇ ಹಕ್ಕೆ ಹೋಗುತ್ತಲೇ ಇರುವನು ಜೀವನಿಗೆ ಈ ಕರ್ಮಬಂಧವು ಎಂದೆಂ ದಿಗೂ ಬಿಟ್ಟುಹೋಗದು.ದೇಹಸಂಬಂಧದಿಂದ ಕರ್ಮಗಳನ್ನು ನಡೆಸುವುದೂ, ಆ ಕರ್ಮದಿಂದ ತಿರುಗಿ ದೇಹವನ್ನು ಹೊಂದುವುದೂ,ಇವೆರಡೂ ದೇಹಾತ್ಮ ಭ್ರಮರೂಪವಾದ ಅಜ್ಞಾನದಿಂದಲೇ ಉಂಟಾಗುವುದು ಆದುದರಿಂದ ಸಂಸಾರಬಂಧಕ್ಕೆ ಕಾರಣವಾದ ಆ ಅಜ್ಞಾನವನ್ನು ನಿರ್ಮೂಲವಾಗಿ ನಾಶಮಾಡುವಂತೆ ಸರ್ವೇಶ್ವರನನ್ನು ಭಜಿಸಿರಿ' ಆ ಭಗವಂತನು ಧರ್ಮಾ ರ್ಥಕಾಮಗಳೆಂಬ ಮೂರು ಪುರುಷಾರ್ಥಗಳಲ್ಲಿ ಯಾವುದನ್ನಪೇಕ್ಷಿಸಿದರೂ ಆವರವರಿಗೆ ಆದನ್ನು ಕೊಡಬಲ್ಲನು ಹಾಗಿದ್ದರೂ ನೀವು ಯಾವ ಪ್ರ ಯೋಜನವನ್ನೂ ಆಪೇಕ್ಷಿಸದೆ ಅವನನ್ನು ಭಜಿಸಬೇಕು. ಆ ಭಗವಂತನು ಪೂರ್ಣಕಾಮನಾದುದರಿಂದ, ಅವನು ಸ್ವಪ್ರಯೋಜನಕ್ಕಾಗಿ ಯಾವ ಕೆಲಸವನ್ನೂ ಮಾಡಬೇಕಾದುದಿಲ್ಲ. ಅವನು ನಡೆಸತಕ್ಕ ಕಾರ್ಯಗಳೆಲ್ಲವೂ ತನ್ನ ಭಕ್ತರ ಕ್ಷೇಮಕ್ಕಾಗಿಯೇಹೊರತು ಬೇರೆಯಲ್ಲ ನೀವು ಅವನನ್ನು ದೃಢವಾಗಿ ನಂಬಿದರೆ, ನಿಮಗೆ ಸರ್ವವಿಧದಲ್ಲಿಯೂ ಕ್ಷೇಮವುಂಟು ಅವ ನೇ ಮೊದಲು ಪೃಥಿವ್ಯಾದಿಭೂತಗಳನ್ನು ಸೃಷ್ಟಿಸಿ, ಅವುಗಳಿಂದ ದೇವಮ ನುಷ್ಯಾದಿಶರೀರಗಳನ್ನು ಸೃಷ್ಟಿಸಿರುವನು ಹೀಗೆ ಸಮಸ್ತಭೂತಗಳಿಗೂ ಅ ವನೇ ಆದಿಕಾರಣನಾಗಿ, ಎಲ್ಲಕ್ಕೂ ಅಂತರಾತ್ಮನಾಗಿಯೂ ಇರುವುದರಿಂದ, ಲೋಕದಲ್ಲಿ ಪ್ರಾಣಿಗಳಿಗೆ ಅವನಿಗಿಂತಲೂ ಪ್ರೀತಿವಿಷಯವಾದ ವಸ್ತುವು ಬೇರೊಂದಿಲ್ಲ ಅವನೇ ಸಮಸ್ತ ಪ್ರಾಣಿಗಳಲ್ಲಿಯೂ ಒಳಹೊಕ್ಕು ನಿಯ ಮಿಸುತ್ತಿರುವನು. ಎಲ್ಲರಿಗೂ ಸಮನಾದವನು ದೇವನಾಗಲಿ, ಆಸುರ ನಾಗಲಿ, ಮನುಷ್ಯನಾಗಲಿ, ಯಕ್ಷ, ಗಂಧರ್ವ, ಕಿನ್ನರರಲ್ಲಿ ಯಾರೇ ಆಗಲಿ, ಆತನ ಪಾದಾರವಿಂದವನ್ನು ಮರೆಹೊಕ್ಕರೆ, ಸರ್ವವಿಧದಲ್ಲಿಯೂ ಕ್ಷೇ ಮವನ್ನು ಹೊಂದುವರು. ನಾವು ರಾಕ್ಷಸಕುಲದವರಾದರೂ, ಆ ಭಗವಂತನ ಪಾದಾರವಿಂದವನ್ನೇ ಮರೆಹೊಕ್ಕು ಕ್ಷೇಮವನ್ನು ಪಡೆಯಬೇ

ಕು. ಈ ವಿಷಯದಲ್ಲಿ ನಾನೇ ನಿದರ್ಶನವೆಂದು ತಿಳಿಯಿರಿ! ಎಲೈ ರಾಕ್ಷಸ ಬಾಲಕರೆ! ಅವನನ್ನು ಭಜಿಸುವುದಕ್ಕೆ ಜಾತಿನಿಯಮವೇನೂ ಬೇಕಾದುದಿಲ್ಲ. ಉತ್ತಮವಾದಬ್ರಹ್ಮಕುಲದಲ್ಲಿಯಾಗಲಿ,ದೇವಕುಲದಲ್ಲಿಯಾಗಲಿ,ಋಷಿಕುಲ ದಲ್ಲಿಯಾಗಲಿ ಹುಟ್ಟಿದಮಾತ್ರಕ್ಕೆ ಆ ಭಗವಂತನ ಪ್ರೀತಿಯನ್ನು ಸಂಪಾ ದಿಸಬಹುದೆಂಬ ನಿಶ್ಚಯವಿಲ್ಲ. ಸದಾಚಾರದಿಂದಾಗಲಿ, ಶಾಸ್ತ್ರಜ್ಞಾನದಿಂ ದಾಗಲಿ, ದಾನದಿಂದಾಗಲಿ, ತಪಸ್ಸಿನಿಂದಾಗಲಿ, ಯಾಗದಿಂದಾಗಲಿ, ಶುದ್ಧಿ ಯಿಂದಾಗಲಿ, ಚಾಂದ್ರಾಯಣಾದಿವ್ರತಗಳಿಂದಾಗಲಿ ಆತನನ್ನು ಸಂತೋ ಷಪಡಿಸಬಹುದೆಂಬ ನಂಬಿಕೆಯಿಲ್ಲ, ಇವುಗಳಲ್ಲಿ ಯಾವುದೂ ಆ ಪರಮ ಪುರುಷನ ಪ್ರೀತಿಯನ್ನು ಸಂಪೂರ್ಣವಾಗಿ ಪಡೆಯುವುದಕ್ಕೆ ಕಾರಣವಾಗ ಲಾರದು ಯಾವ ಪ್ರಯೋಜನದಲ್ಲಿಯೂ ಅಪೇಕ್ಷೆಯನ್ನಿಡದೆ ಸಾಧಿಸತ ಕ್ಕ ಭಕ್ತಿಯೊಂದೇ ಅವನನ್ನು ಸಂತೋಷಗೊಳಿಸುವುದಕ್ಕೆ ಕಾರಣವಾಗು ವುದು ಬೇರೆ ಉಪಾಯಗಳೆಲ್ಲವೂ ನಟನಮಾತ್ರಗಳಲ್ಲದೆ ಬೇರೆಯಲ್ಲ. ಆದುದರಿಂದ ನೀವು ಸಮಸ್ತಪ್ರಾಣಿಗಳೂ ನಮ್ಮಂತೆಯೇ ಆ ಭಗವಂತನಿಗೆ ಶರೀರವೆಂದು ಭಾವಿಸಿ, ಸರ್ವಭೂತದಯಾಪರರಾಗಿದ್ದು, ಸಂಸಾರನಿವಾರಕ ನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವನಿಯಾಮಕನಾಗಿಯೂ ಇರುವ ಆ ಭಗವಂತನಲ್ಲಿ ಭಕ್ತಿಯನ್ನು ಬೆಳೆಸಿರಿ! ಆ ಭಗವಂತನ ಪ್ರೀತಿ ಯನ್ನು ಪಡೆಯುವುದಕ್ಕೆ ವಂಶೋನ್ನತಿ ಮೊದಲಾದ ಕಾರಣಗಳೇನೂ ಬೇ ಕಾದುದಿಲ್ಲ. ಕೇಶಿ ಮೊದಲಾದ ರಾಕ್ಷಸರೂ, ಯಮಳಾರ್ಜುನರೇ ಮೊದ ಲಾದ ಯಕ್ಷರೂ, ಹಿರಣ್ಯಾಕ್ಷನೇ ಮೊದಲಾದ ದಾನವರೂ, ಪೂತನೆ ಮೊ ದಲಾದ ಸ್ತ್ರೀಯರೂ, ಚಾಣೂರನೇ ಮೊದಲಾದ ಶೂದ್ರರೂ, ನಂದನೇ ಮೊದಲಾದ ಗೊಲ್ಲರೂ, ಜಟಾಯುಮೊದಲಾದ ಪಕ್ಷಿಗಳೂ, ಮಾರೀಚನ್ನೆ ಮೊದಲಾದ ಮೃಗಗಳೂ, ಇನ್ನೂ ಅನೇಕಪಾಪಿ ಜೀವಗಳೂ, ಕೂಡ, ಆ ಭಗವಂತನ ಸಂಬಂಧದಿಂದ ಸಾರೂಪ್ಯಪದವಿಯನ್ನು ಹೊಂದಿರುವರಲ್ಲವೆ? ಆದುದರಿಂದ ನೀವು,ರಾಕ್ಷಸಜಾತಿಯವರೆಂಬ ಶಂಕೆಯನ್ನು ಬಿಟ್ಟು,ಆತನನ್ನು ಭಜಿಸಿರಿ! ಎಲೈ ಮಿತ್ರರೆ! ಒಂದೇ ಸಾರಾಂಶವನ್ನು ತಿಳಿಸುವೆನು ಕೇಳಿರಿ! ಆ ಭಗವಂತನಲ್ಲಿ ಪ್ರಯೋಜನಾಪೇಕ್ಷೆಯಿಲ್ಲದ ದೃಢಭಕ್ತಿಯೊಂದು, ಸ

ಮಸ್ತ ಭೂತಗಳನ್ನೂ ಆ ಭಗವತ್ಸ್ವರೂಪವೆಂದೇ ಭಾವಿಸಿ ಮನ್ನಿಸುವು ದೊಂದು, ಇಷ್ಟು ಮಾತ್ರವೇ ಈ ಲೋಕದಲ್ಲಿ ಸಮಸ್ತ ಪುರುಷಾರ್ಥಗಳಿ ಗಿಂತಲೂ ಉತ್ತಮಪುರುಷಾರ್ಥವೆನಿಸುವುದು" ಎಂದನು ಇದು ಏಳನೆಯ ಅಧ್ಯಾಯವು

---



ನೃಸಿಂಹಾವತಾರವು

ಧರ್ಮರಾಜಾ ಕೇಳು! ಹೀಗೆ ಪ್ರಹ್ಲಾದನ ಬಾಯಿಂದ ಹೊರಟ ತತ್ವೋಪದೇಶವನ್ನು ಕೇಳಿ, ದೈತ್ಯಬಾಲಕರೆಲ್ಲರೂ, ಆ ಮತವೇ ನಿರ್ದುಷ್ಟ ವಾದುದೆಂದು ತಿಳಿದು ಅದನ್ನೇ ಅಂಗೀಕರಿಸಿದರು ಇದಕ್ಕೆ ಹಿಂದೆ ಗುರು ಪುತ್ರರು ತಮಗೆ ಹೇಳಿದ್ದ ಉಪದೇಶಗಳೆಲ್ಲವನ್ನೂ ಮರೆತುಬಿಟ್ಟರು ಇಷ್ಟರ ಲ್ಲಿಯೇ ಗುರುಪುತ್ರನು, ಈ ಬಾಲಕರಿದ್ದ ಸ್ಥಳಕ್ಕೆ ಬಂದು ನೋಡುವಾಗ, ಕೆಲಕೆಲವು ಲಕ್ಷಣಗಳಿಂದ ಆ ರಾಕ್ಷಸಬಾಲಕರ ಸ್ಥಿತಿಯು ಬದಲಾಯಿಸಿರು ವಂತೆ ತೋರಿತು ಅವರ ಬುದ್ಧಿಯು ಭಗವದ್ಧರ್ಮದಲ್ಲಿಯೇ ದೃಢವಾಗಿ ನೆಲೆಗೊಂಡಿರುವುದೆಂಬ ನಿಶ್ಚಯವೂ ಹುಟ್ಟಿತು ಒಡನೆಯೇ ಗುರುಪುತ್ರನು ಭಯಗ್ರಸ್ತನಾಗಿ, ರಾಜನಬಳಿಗೆ ಓಡಿಬಂದು, ಅಲ್ಲಿನ ಸಂಗತಿಗಳೆಲ್ಲವನ್ನೂ ಯಥಾವತ್ತಾಗಿ ತಿಳಿಸಿದನು ಹಿರಣ್ಯಕಶಿಪುವು ತನ್ನ ಮಗನ ಅವಿಧೇಯತೆಯ ನ್ನು ಕೇಳಿದೊಡನೆ, ಕೋಪಾವೇಶದಿಂದ ನಡುಗುತ್ತ, ಹೇಗಾದರೂ ಆ ಪ್ರಹ್ಲಾದನನ್ನು ಕೊಂದೇತೀರಬೇಕೆಂದು ನಿಶ್ಚಯಿಸಿಬಿಟ್ಟನು ಪರಮ ಸಾಧುವಾದ ಆ ಪ್ರಹ್ಲಾದನನ್ನು ಕರಸಿ, ಆಡಬಾರದ ಕ್ರೂರವಾಕ್ಯಗಳ ನ್ನಾಡಿ ಧಿಕ್ಕರಿಸಿದನು. ತನ್ನ ಮುಂದೆ ವಿನಯದಿಂದಲೂ. ತಾಳ್ಮೆಯಿಂದಲೂ ಕೈಮುಗಿದು ನಿಂತಿರುವ ಆ ಕುಮಾರನನ್ನು ವಕ್ರದೃಷ್ಟಿಯಿಂದ ನೋಡಿದ ನು ಅತನನ್ನು ನೋಡಿದೊಡನೆ, ಕಾಲಿಂದ ಮೆಟ್ಟಿದ ಕಾಳಸರ್ಪದಂತೆ ಕೋಪದಿಂದ ಬುಸುಗುಟ್ಟುತ್ತ "ಎಲ ಮೂಢಾ ! ಎಲದುರ್ವಿನೀತಾ! ಎಲಾಕುಲಗೇಡೀ! ಎಲೆ ಅಧಮಾ! ನನ್ನ ಶಾಸನವನ್ನೂ ಲಕ್ಷ್ಯಮಾಡದೆ, ಹಠವಾದದಿಂದ ನಿಂತಿರುವೆಯಾ? ಇದೋ! ಈಗಲೇ ನಿನ್ನನ್ನು ಯಮಪುರಿಗೆ ಕಳುಹಿಸುವೆನು ನೋಡು ! ಎಲ ಮೂರ್ಖಾ! ನಾನು ಕೋಪಗೊಂಡಮಾ

ತ್ರಕ್ಕೆ ಲೋಕಪಾಲಕರೊಡಗೂಡಿದ ಮೂರುಲೋಕಗಳೂ ಭಯದಿಂದ ನಡುಗುವುವು ಇದನ್ನು ತಿಳಿದೂ ನೀನು, ನಿರ್ಭಯನಾಗಿ ನನ್ನ ಶಾಸನವನ್ನು ಮೀರಿ ನಡೆಯುವೆಯಲ್ಲಾ ! ಯಾರ ಬಲದಿಂದ ನೀನು ಹೀಗೆ ನನ್ನ ವಿಷಯದಲ್ಲಿಯೂ ನಿರ್ಭಯನಾಗಿರುವೆ ? ನಿಜಸ್ಥಿತಿಯನ್ನು ತಿಳಿಸು" ಎಂದನು ಅದಕ್ಕಾ ಪ್ರಹ್ಲಾದನು ವಿನಯಪೂರ್ವಕವಾಗಿ ತಂದೆಗೆ ಕೈಮುಗಿದು, "ಓ ರಾಜೇಂದ್ರಾ! ನಾನು ಯಾರ ಬಲದಿಂದ ನಿರ್ಭಯನಾಗಿರುವೆನೆಂದು ಕೇಳಿದೆಯಲ್ಲವೆ ? ನಾನು ಮಾತ್ರವೇನು ? ನೀನೂ, ನಿನಗಿಂತಲೂ ಬಲಾಢ್ಯರಾದವರೂ ಯಾವನ ಬಲದಿಂದಲೇ ಬದುಕಿರಬೇಕೋ ಆತನೇ ನನಗೂ ಬೆಂಬಲವಾಗಿರುವನು. ಬ್ರಹ್ಮದೇವನುಮೊದಲು ಚರಾಚರಾತ್ಮಕವಾದ ಸಮಸ್ತಪ್ರಪಂಚವೂ ಯಾವನ ವಶವಾಗಿರುವುದೋ, ಯಾವನು ಮೂರಡಿಗಳಿಂದಲೇ ಮೂರುಲೋಕಗಳನ್ನೂ ಆಳಿದ ಮಹಾಮಹಿಮೆಯುಳ್ಳವನೋ ಆತನೇ ನಮ್ಮೆಲ್ಲರಿಗೂ ಬೆಂಬಲವು!ಅವನೇ ಎಲ್ಲರಿಗೂ ನಿಯಾಮಕನು! ಅವನೇ ಕಾಲಸ್ವರೂಪಿಯು! ಇಂದ್ರಿಯಶಕ್ತಿ, ಮನೋಬಲ, ಧೈರ್ಯ, ದೇಹಬಲ, ಇವೆಲ್ಲಕ್ಕೂ ಅವನೇ ಆಧಾರನು. ಇಂದ್ರಿಯಗಳಿಗೂ ಅವನೇ ಆಧಾರನು. ಎಣೆಯಿಲ್ಲದ ಮಹಾಮಹಿಮೆಯುಳ್ಳ ಆತನು, ತನ್ನ ಅಂಶಭೂತವಾದ ಪ್ರಕೃತಿಪುರುಷರೆಂಬ ಶಕ್ತಿಗಳಿಂದ ಪ್ರಪಂಚದ ಸೃಷ್ಟಿಸ್ಥಿತಿಸಂಹಾರಗಳನ್ನು ನಡೆಸುವನು. ಅದಕ್ಕೆ ಕಾರಣಗಳಾದ ಸತ್ವರಜಸ್ತಮೋಗುಣಗಳಿಗೂ ಆತನೇ ಪ್ರೇರಕನು. ಓ ಜನಕಾ ! ನನಗಾಗಲಿ, ನಿನಗಾಗಲಿ, ಆ ಸರ್ವೇಶ್ವರನಾದ ಶ್ರೀಹರಿಯ ಬಲವೇ ಬಲವು! "ಆದರೆ ನಮ್ಮಕುಲಕ್ಕೇ ದ್ವೇಷಿಯಾದವನು ನಮಗೆ ಬೆಂಬಲವಾಗುವನೆ? ಎಂದು ಶಂಕಿಸಬೇಡ! ನೀನು ಈ ನಿನ್ನ ರಾಕ್ಷಸಸ್ವಭಾವವನ್ನೂ, ಇತರರಲ್ಲಿ ಭೇದಬುದ್ಧಿಯನ್ನೂ ಬಿಟ್ಟುಬಿಡು ! ಸಮಸ್ತಭೂತಗಳನ್ನೂ ನಿನ್ನೊಡನೆ ಸಮಬುದ್ಧಿಯಿಂದ ಭಾವಿಸು! ಆಗ ನಿನಗೆ ಯಾರೂ ಶತ್ರುಗಳಿರಲಾರರು. ನಮ್ಮ ಮನಸ್ಸಿನಲ್ಲಿರುವ ಭೇದಬುದ್ಧಿಯಿಂದಲೇ ಶತ್ರುಮಿತ್ರಭಾವಗಳೆಲ್ಲವೂ ಹುಟ್ಟುವುವು. ಮೊದಲು ನಮ್ಮ ಮನಸ್ಸನ್ನು ನಾವು ಅಡಗಿಸಿಟ್ಟುಕೊಂಡರೆ, ಸಮಸ್ತ ಶತ್ರುಗಳನ್ನೂ ಅಡಗಿಸಿದಂತಾಗುವುದು. ದುರ್ವಿಷಯಗಳಲ್ಲಿ ಪ್ರವರ್ತಿಸುವ ಮನಸ್ಸಿಗಿಂತ

ಲೂ ಬೇರೆ ಶತ್ರುಗಳೊಬ್ಬರೂ ಇಲ್ಲ ಅಂತಹ ಮನಸ್ಸನ್ನು ಜಯಿಸುವುದೇ ನಾವು ಪರಮಪುರುಷನಿಗೆ ಮಾಡಬೇಕಾದ ದೊಡ್ಡ ಆರಾಧನವು. ಆ ಮನಸ್ಸನ್ನು ಜಯಿಸಿದವನಿಗೆ ಯಾರಲ್ಲಿಯೂ ಶತ್ರುತ್ವವೇ ತೋರಲಾರದು. ಓ ! ಜನಕಾ ! ನಿನ್ನಂತೆಯೇ ಅನೇಕರು ಆತ್ಮಸ್ವರೂಪವನ್ನಪಹರಿಸತಕ್ಕ ಇಂದ್ರಿಯಗಳೆಂಬ ಒಳಗಳ್ಳರನ್ನೇ ಜಯಿಸಲಾರದೆ, ಹತ್ತುದಿಕ್ಕುಗಳನ್ನೂ ತಾವು ಜಯಿಸಿದುದಾಗಿ ನೆನೆಸಿಕೊಳ್ಳುವರು ಇದು ಕೇವಲದುರಭಿಮಾನವೇ ಹೊರತು ಬೇರೆಯಲ್ಲ ಇಂದ್ರಿಯಗಳನ್ನು ಜಯಿಸಿ, ಆತ್ಮ ಪರಮಾತ್ಮಸ್ವರೂಪವನ್ನು ತಿಳಿದು, ಎಲ್ಲವನ್ನೂ ಆ ಪರಮಾತ್ಮನ ಶರೀರವನ್ನಾಗಿ ಭಾವಿಸಿ, ಸಮಸ್ತ ಪ್ರಾಣಿಗಳಲ್ಲಿಯೂ ಸಮಬುದ್ಧಿಯಿಂದಿರುವ ಸಾಧುಗಳಿಗೆ ದೇಹಾಭಿಮಾನವೆಂಬ ಅಜ್ಞಾನದಿಂದುಂಟಾಗುವ ಶತ್ರುಗಳು ಹೇಗೆತಾನೇ ತಲೆಯೆತ್ತುವರು" ಎಂದನು ಹಿರಣ್ಯಕಶಿಪುವಿಗಾದರೋ ಪ್ರಹ್ಲಾದನ ಒಂದೊಂದು ವಾಕ್ಯವೂ ಕೋಪವನ್ನುಕ್ಕಿಸುತಿತ್ತು! ತಡೆಯಲಾರದ ಕೋಪದಿಂದ ತುಟಿಯನ್ನು ನಡುಗಿಸುತ್ತ, ಪ್ರಹ್ಲಾದನನ್ನು ನೋಡಿ "ಎಲೆ ಮೂರ್ಖಾ! ನಿಜವಾಗಿ ನೀನು ನಿನ್ನ ಮರಣಕ್ಕಾಗಿಯೇ ಮಿತಿಮೀರಿ ಬೊಗಳುತ್ತಿರುವೆ? ಮರಣಕಾಲವು ಬಂದಾಗ ಬಾಯಿಗೆ ಬಂದಂತೆ ವಿಪರೀತವಾಕ್ಯಗಳನ್ನಾಡುವುದು ಸಹಜವು! ಮುಖ್ಯವಾಗಿ ನೀನು ಭಾಗ್ಯಹೀನನು! ನನ್ನ ಕೈಯಿಂದ ಸಾಯುವುದಕ್ಕಾಗಿಯೇ ನೀನು ಈ ಮಾತುಗಳನ್ನು ನುಡಿಯುವೆ? ಎಲೆ ಮೂಢಾ ! ನನಗಿಂತಲೂ ಬೇರೆ ಈಶ್ವರನೊಬ್ಬನುಂಟೆಂದು ಹೇಳುವೆಯಲ್ಲವೆ ? ಅವನು ಯಾರು ? ಎಲ್ಲಿರುವನು ? ಆತನು ಎಲ್ಲಾ ಸ್ಥಲಗಳಲ್ಲಿಯೂ ಅಂತರ್ಯಾಮಿಯಾಗಿರುವನೆಂದು ಹೇಳಿದೆಯಲ್ಲವೆ? ಹಾಗಿದ್ದರೆ ಈ ಸಭಾಸ್ತಂಭದಲ್ಲಿ ಅವನೇಕೆ ಕಾಣಿಸಿಕೊಳ್ಳಬಾರದು ? ಎಲೆ ನೀಚಾ ! ಇದೋ ಬಾಯಿಗೆ ಬಂದಂತೆ ಗಳಹುತ್ತಿರುವ ಈ ನಿನ್ನ ತಲೆಯನ್ನು ಈಗಲೇ ನಿನ್ನ ಶರೀರದಿಂದ ಬೇರ್ಪಡಿಸಿ, ಸಮಸ್ತಲೋಕಕ್ಕೂ ನಾನೇ ಪ್ರಭುವೆಂಬುದನ್ನು ತೋರಿಸುವೆನು ನೋಡು! ನೀನು ಯಾವನನ್ನು ರಕ್ಷಕನೆಂದು ನಂಬಿರುವೆಯೋ ಅವನೇ ಬಂದು ನಿನ್ನನ್ನು ರಕ್ಷಿಸಲಿ" ಎಂದನು ಧರ್ಮರಾಜಾ ಕೇಳು ! ಹೀಗೆ ಹಿರಣ್ಯಕಶಿಪುವು ಅತ್ಯಾಕ್ರೋಶಗೊಂಡವನಾಗಿ,



1331. ನೃಸಿಂಹನು ಆತ್ತೀಯು ಸ್ತಂಭವನ್ನು ಭೇದಿಸಿಕೊಂಡು ಬಂದು, ಹಿರಣ್ಯಕಶಿಪುವಿನ ಎದೆಯನ್ನು ಸೀಳಿ ಪ್ರಹ್ಲಾದನಿಗೆ ಅಭಯವನ್ನು ಕೊಟ್ಟುದು.

ಪರಮಭಾಗವತೋತ್ತಮನಾದ ತನ್ನ ಮಗನನ್ನು ದುರ್ಭಾಷೆಗಳಿಂದ ಧಿಕ್ಕ
ರಿಸುತ್ತ, ಸಮೀಪದಲ್ಲಿದ್ದ ಖಡ್ಗವನ್ನು ಕೈಗೆತ್ತಿಕೊಂಡನು. ತಾನು ಕುಳಿತಿದ್ದ
ಸಿಂಹಾಸನವನ್ನು ಬಿಟ್ಟು ಥಟ್ಟನೆ ಕೆಳಕ್ಕಿಳಿದು ಬಂದು, ಮುಂದಿದ್ದ ಸಭಾ
ಸ್ತಂಭವನ್ನು ತನ್ನ ಮುಷ್ಟಿಯಿಂದ ಬಲವಾಗಿ ತಟ್ಟಿದನು. ಇಷ್ಟರಲ್ಲಿಯೇ
ಆಸ್ತಂಭದಿಂದ ಬ್ರಹ್ಮಾಂಡಕಟಾಹವು ಭೇದಿಸಿಹೋಗುವಂತೆ ಒಂದು ದೊ
ಡ್ಡ ಧ್ವನಿಯುಂಟಾಯಿತು. ಈ ಧ್ವನಿಯು ಬ್ರಹ್ಮಲೋಕವೇ ಮೊದಲಾದ
ಸಮಸ್ತಲೋಕವನ್ನೂ ವ್ಯಾಪಿಸಿತು. ಇದನ್ನು ಕೇಳಿ ಬ್ರಹ್ಮಾದಿದೇವತೆಗಳೆ
ಲ್ಲರೂ ತಮ್ಮತಮ್ಮ ಲೋಕಗಳಿಗೆ ಇದೇ ಪ್ರಳಯವಾಗಿರಬಹುದೆಂದು
ನಡುಗುತಿದ್ದರು. ಪ್ರಹ್ಲಾದನನ್ನು ಕೊಲ್ಲಬೇಕೆಂದು ತನ್ನ ಶಕ್ತಿಮೀ
ರಿ ಪ್ರಯತ್ನಿಸುತ್ತಿದ್ದ ಆ ಹಿರಣ್ಯಕಶಿಪುವು, ತಾನು ಹಿಂದೆ ಯಾವಾಗಲೂ
ಕಿವಿಯಿಂದ ಕೇಳದಿದ್ದ ಮಹಾದ್ಭುತವಾದ ಈ ಧ್ವನಿಯನ್ನು ಕೇಳಿ, ಅದು
ಎಲ್ಲಿಂದ ಹುಟ್ಟಿತೆಂದು ತಿಳಿಯಲಾರದೆ, ಆ ಸಭಾಮಧ್ಯದಲ್ಲಿ ನಿಂತು ನಾಲ್ಕು
ಕಡೆಗಳನ್ನೂ ತಿರುಗಿತಿರುಗಿ ನೋಡಿದನು. ಅವನ ಕಣ್ಣಿಗೆ ಯಾವುದೊಂ
ದೂ ಗೋಚರಿಸಲಿಲ್ಲ. ರಾಕ್ಷಸಸೈನಿಕರೆಲ್ಲರೂ ಭಯದಿಂದ ನಡುಗುತಿದ್ದ
ರು. ಇಷ್ಟರಲ್ಲಿಯೇ ಸರ್ವೇಶ್ವರನಾದ ಭಗವಂತನು ತನ್ನ ಭಕ್ತನಾದ
ಪ್ರಹ್ಲಾದನ ವಾಕ್ಯವನ್ನು ಸತ್ಯವಾಗಿ ಮಾಡುವುದಕ್ಕೂ, ಚರಾಚರಾತ್ಮಕವಾ
ದ ಸಮಸ್ತಭೂತಗಳಲ್ಲಿಯೂ ತಾನು ಅಂತರ್ಯಾಮಿಯಾಗಿರುವುದನ್ನು ಪ್ರ
ತ್ಯಕ್ಷವಾಗಿ ತೋರಿಸುವುದಕ್ಕೂ, ಮೃಗವೆಂದೂ, ಮನುಷ್ಯನೆಂದೂ ಹೇಳು
ವುದಕ್ಕಾಗದಂತೆ ಅದ್ಭುತಾಕಾರದಿಂದ ಗೋಚರಿಸಿದನು. ಆಗ ಹಿರಣ್ಯಕಶಿ
ಪುವು, ಆ ಸ್ತಂಭಮಧ್ಯದಿಂದ ಹೊರಟು ಬರುತ್ತಿರುವ ಅಪೂರ್ವಾಕೃತಿಯನ್ನು
ನೋಡಿ, ಭಯಾಶ್ಚರ್ಯಗಳಿಂದ ಸ್ತಬ್ಧನಾಗಿ, "ಅಹಾ! ಇದೇನಿದು? ಮೃಗವೂ
ಅಲ್ಲ! ಮನುಷ್ಯನೂ ಅಲ್ಲ! ಮನುಷ್ಯಸಿಂಹಾಕೃತಿಗಳೆರಡರಿಂದಲೂ ಕಲೆ
ತಿರುವ ಈ ಪ್ರಾಣಿಯಾವುದು? ಇದೇನಾಶ್ಚರ್ಯವು" ಎಂದು ಸುಮ್ಮನೆ
ಆಶ್ಚರ್ಯದಿಂದ ಸ್ತಬ್ಧನಾಗಿ ನಿಂತುಬಿಟ್ಟನು. ಆಗ ಆ ನೃಸಿಂಹಮೂರ್ತಿಯ
ದಿವ್ಯಾದ್ಭುತರೂಪವನ್ನು ಕೇಳಬೇಕೆ? ಕರಗಿದ ಚಿನ್ನದಂತೆ ಹೊಳೆಯುವ
ಕಣ್ಣಾಲೆಗಳು! ಅಗ್ನಿಯಂತೆ ಜ್ವಲಿಸುವ ಸಟೆಗಳಿಂದ ವಿಶಾಲವಾದ ಮುಖ

ದ ಕಾಂತಿ ! ಭಯಂಕರಗಳಾದ ಕೋರೆದಾಡೆಗಳು ! ಈಟಿಯ ಮೊನೆಯು
ಳ್ಳ ಖಡ್ಗದಂತೆ ಅತ್ತಿತ್ತ ಚಲಿಸುತ್ತಿರುವ ನೀಡಿದ ನಾಲಗೆ ! ಮುಖ
ದಲ್ಲಿ ಭಯಂಕರವಾದ ಹುಬ್ಬುಗಂಟು ! ನೆಟ್ಟಗೆ ನಿಗುರಿ ನಿಂತಿರುವ ಕಿ
ವಿಗಳು ! ಪರ್ವತಗುಹೆಯಂತೆ ಅದ್ಭುತಾಕಾರವಾಗಿ ಬಿಚ್ಚಿದ ಬಾಯಿ !
ಕೋಪದಿಂದರಳುತ್ತಿರುವ ಮೂಗಿನ ರಂಧ್ರಗಳು ! ಗುಳಿಬಿದ್ದಂತೆ ತೋ
ರುವ ಭಯಂಕರಗಳಾದ ಕಣ್ಣಿಗಳು ! ಆಕಾಶವನ್ನು ಮುಟ್ಟುವಂತೆ ಮ
ಹೋನ್ನತವಾದ ಮೈ ! ಉಬ್ಬಿದ ಗುಜ್ಜುಗೊರಲು ! ಅಗಲವಾದ
ಎದೆ ! ಸಣ್ಣನಡು ! ಚಂದ್ರಕಿರಣಗಳಂತೆ ಬಿಳುಪಾದ ಮೈಕೂದಲು !
ಸೇನಾಸಮೂಹದಂತೆ ನಾಲ್ಕುಕಡೆಗಳಿಗೂ ನೀಡಿದ ಅನೇಕಭುಜಗಳು ! ಆ
ಯುಧದಂತೆ ತೀಕ್ಷ್ಣವಾದ ನಖಗಳು!ಬೇರೊಬ್ಬರಿಂದ ಇದಿರಿಸಲಸಾಧ್ಯವಾದ
ದಿವ್ಯತೇಜಸ್ಸು! ಹೀಗೆ ಮಹಾದ್ಭುತಸ್ವರೂಪವುಳ್ಳ ನೃಸಿಂಹಮೂರ್ತಿಯು,
ತನಗೆಅಸಾಧಾರಣಚಿಹ್ನಗಳಾದಶಂಖಚಕ್ರಾದ್ಯಾಯುಧಗಳಿಂದಲೂ,ಇನ್ನೂ
ಬೇರೆಬೇರೆ ಆಯುಧಗಳಿಂದಲೂ, ಅಲ್ಲಿದ್ದ ದೈತ್ಯದಾನವರೆಲ್ಲರನ್ನೂ ಹೊಡೆ
ದೋಡಿಸುತ್ತ ಹಿರಣ್ಯಕಶಿಪುವನ್ನು ಬನ್ನಟ್ಟಬಂದನು ಆ ನೃಸಿಂಹಸ್ವರೂಪವ
ನ್ನು ನೋಡಿದೊಡನೆ ಹಿರಣ್ಯಕಶಿಪುವು ತನ್ನ ಮನಸ್ಸಿನಲ್ಲಿ "ಅಹಾ! ಮಹಾ
ಮಾಯಾವಿಯಾದ ವಿಷ್ಣುವು ನನ್ನನ್ನು ಕೊಲ್ಲುವುದಕ್ಕಾಗಿಯೇ ಈ ವಿಚಿ
ತ್ರರೂಪವನ್ನು ತಾಳಿ ಬಂದಿರುವನು! ಇದರಲ್ಲಿ ಸಂದೇಹವಿಲ್ಲ ! ಆದರೇನು?
ಇವನ ಪ್ರಯತ್ನವೊಂದೂ ನನ್ನಮೇಲೆ ಸಾಗಲಾರದು !" ಎಂದು ಹೇಳಿ
ಕೊಳ್ಳುತ್ತ, ಗದೆಯನ್ನೆತ್ತಿಹಿಡಿದು, ಆನೆಯು ಸಿಂಹವನ್ನಿದಿರಿಸುವಂತೆ ತಾನೇ
ನೃಸಿಂಹಮೂರ್ತಿಯನ್ನಿದಿರಿಸಿ ಬರುತಿದ್ದನು ಅಗ್ನಿಜ್ವಾಲೆಯಲ್ಲಿ ಬಿದ್ದ ಪತಂ
ಗದ ಹುಳುವಿನಂತೆ, ಆಗ ಭಗವಂತನ ತೇಜಸ್ಸಿನಿಂದ ರಾಕ್ಷಸನ ಆಕೃತಿಯೇ
ಕಾಣದಂತಾಯಿತು. ಓ ಧರ್ಮರಾಜಾ! ಸೃಷ್ಟಿಗೆ ಮೊದಲು ಲೋಕವೆಲ್ಲವ
ನ್ನೂ ವ್ಯಾಪಿಸಿದ ಮಹಾತಮಸ್ಸನ್ನೇ ಯಾವನು ತನ್ನ ತೇಜಸ್ಸಿನಿಂದ ನಿಮಿಷ
ಮಾತ್ರದಲ್ಲಿ ಪಾನಮಾಡಿಬಿಟ್ಟನೋ, ಅಂತಹ ಶುದ್ಧಸತ್ವಮೂರ್ತಿಯಾದ
ಭಗವಂತನ ತೇಜಸ್ಸಿನಲ್ಲಿ, ತಮೋಮಯನಾದ ಆ ರಾಕ್ಷಸನು ಅಗೋಚರ
ನಾಗುವುದೇನಾಶ್ಚರ್ಯವು ? ಇದೇನೂ ಆಶ್ಚರ್ಯವಲ್ಲ! ಆಮೇಲೆ ಆ ರಾ

ಕ್ಷಸನು, ತಾನು ಹಿಡಿದಿದ್ದ ಮಹಾವೇಗವುಳ್ಳ ಗದೆಯನ್ನು ತಿರುಗಿಸುತ್ತ ಬಂದು, ಆ ಗದೆಯನ್ನು ಭಗವಂತನಮೇಲೆ ಬೀಸಿದನು. ಇದನ್ನು ನೋಡಿ ನೃಸಿಂಹಮೂರ್ತಿಯು, ತಾನೂ ಗದಾಧಾರಿಯಾಗಿ ಮುಂದೆ ಬಂದು, ಗರುಡನು ಸರ್ಪವನ್ನು ಹಿಡಿಯುವಂತೆ ಆ ರಾಕ್ಷಸನನ್ನು ಹಿಡಿದುಕೊಂಡನು ನೃಸಿಂಹಮೂರ್ತಿಯ ಕೈಯಲ್ಲಿ ಸಿಕ್ಕಿಬಿದ್ದಿದ್ದ ರಾಕ್ಷಸನು; ಗರುಡನ ಕೈಯಾಟದಲ್ಲಿ ಸಿಕ್ಕಿದ ಸರ್ಪವು, ಮೆಲ್ಲಗೆ ತಪ್ಪಿಸಿಕೊಳ್ಳುವಂತೆ ಮೆಲ್ಲಗೆ ಆ ಸಿಕ್ಕಿನಿಂದ ತಪ್ಪಿಸಿಕೊಂಡನು ನೃಸಿಂಹಮೂರ್ತಿಯು ಕೇವಲವಿನೋದಾರ್ಥವಾಗಿಯೇ ಇಷ್ಟಕ್ಕೆ ಅವಕಾಶವನ್ನು ಕೊಟ್ಟಿದ್ದರೂ,ಆ ನಿಜಸ್ಥಿತಿಯನ್ನು ತಿಳಿಯದೆ, ಅವನಿಂದ ರಾಜ್ಯಭ್ರಷ್ಟರಾದ ಲೋಕಪಾಲಕರೆಲ್ಲರೂ, ನೃಸಿಂಹಮೂರ್ತಿಗಿಂತಲೂ ರಾಕ್ಷಸನೇ ಬಲಾಢ್ಯನಾಗಿರಬಹುದೆಂದು ಭ್ರಮಿಸಿ ಭಯಪಟ್ಟು, ಅಲ್ಲಲ್ಲಿ ಮೇಘಗಳ ಮರೆಯಲ್ಲಿ ಅವಿತುಕೊಂಡಿದ್ದರು. ಇದೇವಿಧವಾಗಿ ಹಿರಣ್ಯಕಶಿಪುವೂಕೂಡ ತನ್ನ ವೀರ್ಯಕ್ಕೆ ಭಯಪಟ್ಟೇ ನೃಸಿಂಹಮೂರ್ತಿಯು ತನ್ನನ್ನು ಹಿಡಿಯಲಾರದೆ ಕೈಬಿಟ್ಟಿರುವನೆಂದೂ,ತಾನೇ ಬಲಾಢ್ಯನೆಂದೂ ಹೆಮ್ಮೆಯಿಂದ ಮತ್ತಷ್ಟು ಉತ್ಸಾಹಗೊಂಡವನಾಗಿ, ದೇಹಶ್ರಮವನ್ನೂ ಲಕ್ಷ್ಯಮಾಡದೆ, ಮೇಲೆಯೂ, ಕೆಳಗೂ ಭಗವಂತನ ಪ್ರಹಾರಕ್ಕೆ ಅವಕಾಶಕೊಡದಂತೆ ಕತ್ತಿಗುರಾಣಿಗಳನ್ನು ತಿರುಗಿಸುತ್ತ,ಗಿಡಗನಂತೆ ಮಹಾವೇಗದಿಂದ ಹಾರಿಬರುತಿದ್ದನು ಇದನ್ನು ನೋಡಿ ನೃಸಿಂಹಮೂರ್ತಿಯು,ಭಯಂಕರಧ್ವನಿಯಿಂದ ಒಂದಾವರ್ತಿ ಅಟ್ಟಹಾಸವನ್ನು ಮಾಡಿ ಗರ್ಜಿಸಲು,ಈ ಮಹಾಧ್ವನಿಯನ್ನು ಕೇಳಿದೊಡನೆ ಆರಾಕ್ಷಸನಿಗೆ ಭಯದಿಂದ ಕಣ್ಣುಗಳೆರಡೂ ಮುಚ್ಚಿಹೋದುವು ಇದೇ ಸಮಯದಲ್ಲಿ ಭಗವಂತನು ವೇಗದಿಂದ ಬಂದು ಆರಾಕ್ಷಸನನ್ನು ಕೈಯಿಂದ ಹಿಡಿದುಕೊಂಡನು.

ಇಂದ್ರನ ವಜ್ರಾಯುಧಕ್ಕೂ ಮುರಿಯದ ಮೈಯುಳ್ಳ ಆ ರಾಕ್ಷಸನು, ನೃಸಿಂಹಮೂರ್ತಿಯ ಕೈಯಲ್ಲಿ ಸಿಕ್ಕಿ, ಹಾವಿನ ಬಾಯಿಗೆ ಸಿಕ್ಕಿದ ಇಲಿಯಂತೆ, ಅಲ್ಲಿಂದ ತಪ್ಪಿಸಿಕೊಂಡುಬರುವುದಕ್ಕಾಗಿ ಮೈಯೆಲ್ಲವನ್ನೂ ಒದರುತ್ತ ಮಿಲಿಮಿಲಿಯಾಡುತಿದ್ದನು. ಈ ಸ್ಥಿತಿಯಲ್ಲಿಯೇ ನೃಸಿಂಹರೂಪಿಯಾದ ಭಗವಂತನು, ಅವನನ್ನು ಸೆಳೆದು ತಂದು, ಆ ಸಭಾಮಂಟಪದ ಹೊ

ಸ್ತ್ರಂಭದ ಮೇಲೆ ಕುಳಿತು, ಆ ರಾಕ್ಷಸನನ್ನು ತೊಡೆಯಮೇಲೆ ಮಲಗಿಸಿಕೊಂ ಡು, ಹಗಲುರಾತ್ರಿಗಳೆರಡೂ ಅಲ್ಲದ ಸಂಧ್ಯಾಕಾಲದಲ್ಲಿ, ಗರುಡನು ವಿಷಸ ರ್ಪವನ್ನು ಭೇದಿಸುವಂತೆ, ತನ್ನ ಉಗುರುಗಳಿಂದ ಆ ರಾಕ್ಷಸನ ಎದೆಯನ್ನು ಸೀಳಿಬಿಟ್ಟನು * ಓ ಧರ್ಮರಾಜಾ ಕೇಳು! ಆಗ ಆ ನೃಸಿಂಹಮೂರ್ತಿಯ ರೌದ್ರಾಕೃತಿಯನ್ನು ಕೇಳಬೇಕೆ ? ಕಣ್ಣಿಂದ ನೋಡುವುದಕ್ಕಾಗದ ಭ ಯಂಕರ ನೇತ್ರಗಳು! ಆಗಲವಾಗಿ ಬಿಚ್ಚಿದ ಬಾಯಿ! ತುಟಿಯನ್ನು ನಕ್ಕುತ್ತಿ ರುವ ನೀಡಿದ ನಾಲಗೆ! ರಕ್ತಬಿಂದುಗಳಿಂದ ತೊಯ್ದ ಕೇಸರಗಳು! ಇಂತಹ ಘೋರರೂಪದಿಂದಿದ್ದ ನೃಸಿಂಹನು, ಆನೆಯ ಕುಂಭಸ್ಥಲವನ್ನು ಭೇದಿಸುವ ಸಿಂಹದಂತೆ ಆ ರಾಕ್ಷಸನ ಕರುಳನ್ನು ಬಗಿದು, ತನ್ನ ಕೊರಲಿಗೆ ಮಾಲೆಯಾ ಗಿ ಧರಿಸಿದನು ಹೀಗೆ ನೃಸಿಂಹಮೂರ್ತಿಯು,ಕ್ಷಣಮಾತ್ರದಲ್ಲಿ ತನ್ನ ನಖಾ ಗ್ರಗಳಿಂದಲೇ ಆ ರಾಕ್ಷಸನ ದೇಹವನ್ನು ಸೀಳಿ, ಆ ದೇಹವನ್ನು ಒಂದು ಕಡೆ ಯಲ್ಲಿ ಬಿಸುಟು, ಅಲ್ಲಲ್ಲಿ ಆಯುಧಪಾಣಿಗಳಾಗಿ ನಿಂತಿದ್ದ ಸಾವಿರಾರು ದೈ ತ್ಯಭಟರನ್ನು ಬೆನ್ನಟ್ಟಿ ಬಂದನು. ನಾನಾದಿಕ್ಕಿಗೆ ಚದರಿ ಓಡುತಿದ್ದ ಆರಾಕ್ಷ ಸಭಟರನ್ನು ಅತ್ತಿತ್ತ ಕದಲದಂತೆ ಹಿಡಿದು, ಅವರನ್ನೂ ತನ್ನ ನಖಾಗ್ರಗಳಿಂ ಧ ಭೇದಿಸುತ್ತ ಬಂದನು ಆಗ ಆ ನೃಸಿಂಹಮೂರ್ತಿಯ ಸಟಾಘಾತಕ್ಕೆ ಮೇಘಪರಂಪರೆಗಳೆಲ್ಲವೂ ಕದಲಿ ಬೀಳುತಿದ್ದುವು! ಅವನ ಕ್ರೂರದೃ ಷ್ಟಿಗೆ ಸೂರ್ಯಾದಿಗ್ರಹಗಳೆಲ್ಲವೂ ಕಾಂತಿಗುಂದಿ ಮಾಸಿದಂತಾದುವು. ಅವನ ಉಸಿರಾಟಕ್ಕೆ ಸಮುದ್ರವೆಲ್ಲವೂ ಕಲಗಿದುವು! ಅವನ ಅಟ್ಟಹಾಸಧ್ವ ನಿಗೆ ದಿಗ್ಗಜಗಳೆಲ್ಲವೂ ಭಯದಿಂದ ಕೂಗಿಡುತಿದ್ದುವು! ಆಕಾಶದಲ್ಲಿ ಸಂಚ ರಿಸುತಿದ್ದ ವಿಮಾನಗಳೆಲ್ಲವೂ ಆತನ ಸಟಾಗ್ರದಲ್ಲಿ ಸಿಕ್ಕಿನೇತಾಡುತಿದ್ದುವು! ಆವನ ಪಾದಾಹತಿಗೆ ಭೂಮಿಯೆಲ್ಲವೂ ನಡುಗಿತು! ಆತನ ವೇಗದಿಂದ

---

* ಇಲ್ಲಿ ಆ ರಾಕ್ಷಸನಿಗೆ ಆವರಣದ ಒಳಗೂ ಹೊರಗೂ ಸಾವಿಲ್ಲದುದಕ್ಕಾಗಿ ಸಭಾಮಂಟಪದ ಹೊಸ್ತಿಲಿಗೆ ಸೆಳೆತಂದು, ಭೂಮ್ಯಾಕಾಶಗಳಲ್ಲಿ ಮರಣವಿಲ್ಲದುದಕ್ಕಾಗಿ ತೊಡೆಯಮೇಲಿಟ್ಟುಕೊಂಡು, ಹಗಲು ರಾತ್ರಿಗಳಲ್ಲಿ ಸಾವಿಲ್ಲದುದಕ್ಕಾಗಿ ಸಂಧ್ಯಾಕಾಲ ದಲ್ಲಿಯೂ, ಪ್ರಾಣಿಗಳಿಂದಲೂ, ಪ್ರಾಣವಿಲ್ಲದವುಗಳಿಂದಲೂ ಮರಣವಿಲ್ಲದುದಕ್ಕಾಗಿ ಪಶು ಉಗುರುಗಳಿಂದಲೂ ಕೊಂದುದಾಗಿ ಗ್ರಾಹ್ಯವು

ಪರ್ವತಗಳೆಲ್ಲವೂ ಹಾರಿಬೀಳುತಿದ್ದುವು. ಆವನ ತೇಜಸ್ಸಿನಿಂದ ಆಕಾಶವೂ. ದಿಕ್ಕುಗಳೂ ಮರೆಸಿಹೋದುವು! ಮಿತಿಮೀರಿದ ಕೋಪಾವೇಶದಿಂದ ಭಯಂಕರಸ್ವರೂಪನಾದ ಆ ನೃಸಿಂಹಮೂರ್ತಿಯು, ಅಲ್ಲಿದ್ದ ಸಮಸ್ತ ರಾಕ್ಷಸಭಟರನ್ನೂ ಸಂಹರಿಸಿ, ತನಗೆ ಇದಿರಾಗಿ ನಿಲ್ಲುವವರು ಒಬ್ಬರೂ ಇಲ್ಲದಿರುವುದನ್ನು ನೋಡಿ, ತಾನೇ ಸರ್ವೇಶ್ವರನೆಂಬುದನ್ನು ಲೋಕಕ್ಕೆ ತೋರಿಸುವಂತೆ, ತೇಜಸ್ಸಿನಿಂದ ಜ್ವಲಿಸುತ್ತ ಸಭಾಮಧ್ಯದಲ್ಲಿದ್ದ ರಾಜಸಿಂಹಾಸನದಲ್ಲಿ ಬಂದು ಕುಳಿತನು. ಆಗಲೂ ಆತನಮುಂದೆ ಬಂದು ನಿಲ್ಲುವುದಕ್ಕೆ ಧೈರ್ಯಸಾಲದೆ, ಹೇವತೆಗಳೆಲ್ಲರೂ ಭಯದಿಂದ ಹಿಂಜರಿಯುತಿದ್ದರು. ಮೂರುಲೋಕಕ್ಕೂ ತಲೆಬೇನೆಯಂತೆ ಸಹಿಸಬಾರದ ಕ್ರೂರಸ್ವಭಾವವುಳ್ಳ ಆದಿದೈತ್ಯನಾದ ಆ ಹಿರಣ್ಯಕಶಿಪುವು,ಹೀಗೆ ಭಗವಂತನಿಂದ ಸಂಹೃತನಾದುದನ್ನು ಕೇಳಿ, ದೇವಸ್ತ್ರೀಯರೆಲ್ಲರೂ ಸಂತೋಷದಿಂದ ಅರಳಿದ ಮುಖವುಳ್ಳವರಾಗಿ, ಬಾರಿಬಾರಿಗೂ ಆ ನೃಸಿಂಹಮೂರ್ತಿಯಮೇಲೆ ಪುಷ್ಪವರ್ಷಗಳನ್ನು ಕರೆಯುತಿದ್ದರು. ಆ ನೃಸಿಂಹಮೂರ್ತಿಯ ಮಹಾವೈಭವವನ್ನು ನೋಡಬೇಕೆಂಬ ಕುತೂಹಲದಿಂದ, ದೇವತೆಗಳೆಲ್ಲರೂ ವಿಮಾನಾರೂಢರಾಗಿ ಅಂತರಿಕ್ಷದಲ್ಲಿ ಬಂದು ನೆರೆದರು ಆಕಾಶವೆಲ್ಲವೂ ದೇವವಿಮಾನಗಳಿಂದ ತುಂಬಿಹೋಯಿತು. ದೇವದುಂದುಭಿಗಳು ಧ್ವನಿಮಾಡುತಿದ್ದುವು ಗಂಧರ್ವಗಾನದೊಡನೆ ದೇವಸ್ತ್ರೀಯರು ನರ್ತಿಸುತಿದ್ದರು ಇಷ್ಟರಲ್ಲಿಯೇ ಬ್ರಹ್ಮೇಂದ್ರರುದ್ರಾದಿದೇವತೆಗಳೂ, ಮಹರ್ಷಿಗಳೂ, ಪಿತೃದೇವತೆಗಳೂ, ಸಿದ್ಧರೂ, ವಿದ್ಯಾಧರರೂ, ನಾಗರೂ, ಮನುಗಳೂ, ಪ್ರಜಾಧಿಪತಿಗಳೂ, ಗಂಧರ್ವರೂ, ಚಾರಣರೂ, ಅಪ್ಸರಸ್ಸುಗಳೂ, ಯಕ್ಷರೂ, ಕಿನ್ನರರೂ, ಕಿಂಪುರುಷರೂ, ಬೇತಾಳಗಳೂ, ಸುನಂದಕುಮುದರೇ ಮೊದಲಾದ ವಿಷ್ಣುದೂತರೂ ಬಂದು, ನೃಸಿಂಹಮೂರ್ತಿಯಮುಂದೆ ನೆರೆದರು ಆದರೆ, ಇವರೆಲ್ಲರೂ ದೂರದಲ್ಲಿಯೇ ಕೈಜೋಡಿಸಿ ನಿಂತು, ಸಿಂಹಾಸನದಲ್ಲಿ ತೀವ್ರತೇಜಸ್ಸಿನಿಂದ ಜ್ವಲಿಸುತ್ತಿದ್ದ ಆ ನೃಸಿಂಹಮೂರ್ತಿಯನ್ನು ಬೇರೆಬೇರೆಯಾಗಿ ಸ್ತೋತ್ರಮಾಡತೊಡಗಿದರು.

ಮೊದಲು ಬ್ರಹ್ಮದೇವನು ಮುಂದೆ ಬಂದು ಹೀಗೆಂದು ಸ್ತುತಿಸುವನು “ಓ ದೇವಾ! ನೀನು ದೇಶಕಾಲವಸ್ತುವ್ಯವಸ್ಥೆಯಿಲ್ಲದೆ, ಯಾವಾ

ಗಲೂ, ಎಲ್ಲೆಲ್ಲಿಯೂ ನೆಲೆಗೊಂಡಿರತಕ್ಕವನು ನಿನ್ನ ಶಕ್ತಿಯನ್ನು ಇಷ್ಟೆಂ
ದು ನಿರ್ಣಯಿಸುವುದಕ್ಕಿಲ್ಲ ಅದ್ಭುತವೀರ್ಯವುಳ್ಳ ನಿನ್ನ ಒಂದೊಂದು
ಕಾರ್ಯವೂ ಲೋಕಪಾವನವಾಗಿರುವುವು ಜ್ಞಾನಾದಿಷಡ್ಗುಣಪರಿಪೂರ್ಣ
ನಾದ ನೀನು, ಸ್ವರೂಪಸ್ವಭಾವಗಳಿಂದ ವಿಕಾರವಿಲ್ಲದವನಾಗಿದ್ದರೂ, ಲೀ
ಲಾರ್ಥವಾಗಿ ಸತ್ವಾದಿಗುಣಗಳನ್ನು ಕದಲಿಸಿ, ಈ ಪ್ರಪಂಚದ ಸೃಷ್ಟಿಸ್ಥಿತಿ
ಸಂಹಾರಗಳನ್ನು ನಡೆಸುವೆ ಇಂತಹ ನಿನಗೆ ನಮಸ್ಕಾರವು"ಎಂದನು.

ಆಮೇಲೆ ರುದ್ರನು ಮುಂದೆಬಂದು ಕೈಜೋಡಿಸಿ''ಓ ನಾಥಾ! ನಿನ್ನ
ಕೋಪವೇ ಮಹಾಪ್ರಳಯವು ಆ ನಿನ್ನ ಕೋಪದಲ್ಲಿ, ಲೇಶಮಾತ್ರಕ್ಕೂಗು
ರಿಯಾಗಿ ನಿಲ್ಲಲಾರದ ಈ ಅಲ್ಪರಾಕ್ಷಸನು ಆಗಲೇ ಸಂಹೃತನಾದನು ಇನ್ನಾ
ದರೂ ನಿನ್ನ ಕೋಪವನ್ನು ತಗ್ಗಿಸು! ನೀನು ಭಕ್ತವತ್ಸಲನಲ್ಲವೆ' ಆ ರಾಕ್ಷ
ಸನ ಗರ್ಭದಲ್ಲಿ ಹುಟ್ಟಿಯೂ ನಿನಗೆ ಪರಮಭಕ್ತನಾದ ಪ್ರಹ್ಲಾದನು, ಇ
ದೋ! ನಿನ್ನಮುಂದೆ ಬಂದು ನಿಂತಿರುವನು ಅವನನ್ನು ಕೃಪಾದೃಷ್ಟಿಯಿಂದ
ಮನ್ನಿಸಿ ರಕ್ಷಿಸು" ಎಂದನು.

ಆಮೇಲೇ ದೇವೇಂದ್ರನು ಮುಂದೆ ಬಂದು ''ಓ ಪರಮಪುರುಷಾ !
ನೀನೇ ನಮಗೆ ಸರ್ವವಿಧದಲ್ಲಿಯೂ ರಕ್ಷಕನು ನಮಗಾಗಿಯೇ ಈ ಅವತಾರ
ವನ್ನು ಕೈಕೊಂಡು,ಈ ರಾಕ್ಷಸನಿಂದ ಅಪಹರಿಸಲ್ಪಡುತಿದ್ದ ನಮ್ಮ ಯಜ್ಞಭಾ
ಗಗಳೆಲ್ಲವೂ ತಿರುಗಿ ನಮ್ಮ ಕೈಸೇರುವಂತೆ ಮಾಡಿದೆ!ಆದರೇನು?ನಿನಗೆ ವಾಸ
ಸ್ಥಾನವಾಗಿಯೂ, ನಿರ್ಮಲವಾಗಿಯೂ ಇರಬೇಕಾದ ನಮ್ಮ ಹೃದಯಕ
ಮಲವು, ಇದುವರೆಗೆ ಈ ರಾಕ್ಷಸನ ಭಯದಿಂದ ಮುಚ್ಚಿ ಹೋಗಿದ್ದಿತು
ಈಗ ನೀನು ಆ ಭಯವನ್ನು ನೀಗಿಸಿ,ಅದನ್ನು ವಿಕಾಸಗೊಳಿಸಿದುದರಿಂದ ನಿನ್ನ
ವಾಸಸ್ಥಳವನ್ನು ಕ್ರಮಪಡಿಸಿಕೊಂಡಂತಾಯಿತು ಓ ನಾಥಾ ! ನಿನ್ನ
ಸೇವಾಸುಖದಲ್ಲಿತಕ್ಕವರು ಮೋಕ್ಷವನ್ನೂ ಆದರಿಸಲಾರರು ಹೀಗಿರು
ವಾಗ, ಅವರು ಕಾಲಕ್ರಮದಿಂದ ನಾಶಹೊಂದತಕ್ಕ ಇತರಪುರುಷಾರ್ಥ
ಗಳನ್ನು ಎಷ್ಟುಮಾತ್ರವೆಂದು ಭಾವಿಸಬಹುದು? ಹಾಗೆಯೇ ಈಗ ನಮ
ಗೂ ನಿನ್ನ ನಿತ್ಯಸೇವೆಯು ಲಭಿಸುವುದಾದರೆ, ಅತ್ಯಲ್ಪವಾದ ಈ ಯಜ್ಞ
ಭಾಗಗಳಿಂದೇನು?" ಎಂದನು.

ಋಷಿಗಳು ಸ್ತುತಿಸುವರು “ ಹೇದೇವಾ ! ನೀನು ನಿನ್ನ ಧ್ಯಾನ ವೆಂಬ ಮಹಾತಪಸ್ಸನ್ನೇ ನಮಗೆ ಕೃತ್ಯವನ್ನಾಗಿ ಉಪದೇಶಿಸಿರುವೆ ! ಆ ತಪಸ್ಸಿನಿಂದಲೇ ನಾವು ನಿನ್ನ ತೇಜಸ್ಸನ್ನು ಸಾಕ್ಷಾತ್ಕರಿಸುವೆವು. ಆದಿ ಪುರುಷನಾದ ಚತುರ್ಮುಖನೂಕೂಡ, ಪೂರ್ವದಲ್ಲಿ ಯಾವ ತ ಪೋಬಲದಿಂದಲೇ ನಿನ್ನಿಂದ ವ್ಯಾಪ್ತವಾದ ಈ ಸಮಸ್ತ ಜಗತ್ತನ್ನೂ ಸೃ ಷ್ಟಿಸಬಲ್ಲವನಾದನೋ, ಅಂತಹ ನಮ್ಮ ತಪಸ್ಸೆಲ್ಲವೂ ಈಗ ಈ ಕ್ರೂರರಾ ಕ್ಷಸನಿಂದ ನಷ್ಟವಾದುದನ್ನು ನೋಡಿ, ಆಶ್ರಿತರಕ್ಷಕನಾದ ನೀನು, ಸಾಧು ಗಳನ್ನು ರಕ್ಷಿಸುವುದಕ್ಕಾಗಿಯೇ ಈ ನೃಸಿಂಹಾವತಾರವನ್ನು ಕೈಕೊಂಡು, ನಮ್ಮ ತಪಸ್ಸಿಗೆ ವಿಘ್ನವಿಲ್ಲದಂತೆ ಮಾಡಿದೆ ”

ಪಿತೃದೇವತೆಗಳು ಸ್ತುತಿಸುವರು “ ಓ ದೇವಾ ! ಶ್ರಾದ್ಧಕಾಲಗ ಳಲ್ಲಿ, ನಮ್ಮ ಪುತ್ರಪೌತ್ರಾದಿಗಳು ನಮಗೆ ಸಲ್ಲಿಸುತಿದ್ದ ಪಿಂಡಗಳನ್ನೂ, ಅವರು ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವಾಗ ನಮಗೆ ಸಲ್ಲಿಸುತಿದ್ದ ತಿಲೋ ದಕವನ್ನೂ ಕೂಡ, ಈ ರಾಕ್ಷಸನು ಬಲಾತ್ಕಾರದಿಂದ ತಾನೇ ಅನುಭವಿಸು ತಿದ್ದನು ಹೀಗೆ ನಮ್ಮ ಅನ್ನೋದಕಗಳಿಂದ ಕೊಬ್ಬಿಬೆಳೆದ ಈ ರಾಕ್ಷಸನ ಹೃದಯಮಾಂಸವನ್ನು, ಈಗ ನೀನು ನಿನ್ನ ನಖಾಗ್ರಗಳಿಂದ ಭೇದಿಸಿ ಹೊರ ಕ್ಕೆ ತೆಗೆದುದರಿಂದ, ನಮ್ಮ ಭಾಗವನ್ನು ತಿರುಗಿ ನಮಗೆ ಒಪ್ಪಿಸಿದಂತಾಯಿ ತು. ಧರ್ಮಪರಿಪಾಲನಕ್ಕಾಗಿ ಹೀಗೆ ಅದ್ಭುತಾಕಾರವನ್ನು ತಾಳಿ ಬಂದ ನಿನಗೆ ನಮಸ್ಕಾರವು ”

ಸಿದ್ಧರು ಸ್ತುತಿಸುವರು “ ಓ ನೃಸಿಂಹಾ ! ನಮಗೆ ಯೋಗಸಿದ್ಧಿ ಯಿಂದ ಲಭಿಸಿದ್ದ ಸದ್ಗತಿಗಳೆಲ್ಲವನ್ನೂ ಈ ದುಷ್ಟರಾಕ್ಷಸನು, ತನ್ನ ಯೋಗ ಬಲದಿಂದಲೂ, ತಪೋಬಲದಿಂದಲೂ. ತಡೆದುಬಿಟ್ಟಿದ್ದನು ಸರ್ವವಿಧದಿಂ ದಲೂ ಕೊಬ್ಬಿದ ಈ ಕ್ರೂರರಾಕ್ಷಸನನ್ನು ಈಗ ನೀನು ನಿನ್ನ ನಖಾಗ್ರ ಗಳಿಂದ ಸೀಳಿ ನಮ್ಮೆಲ್ಲರನ್ನೂ ಉದ್ಧರಿಸಿದೆ ಹೀಗೆ ಮಹೋಪಕಾರಕನಾದ ನಿನಗೆ ನಮಸ್ಕಾರವು.”

ವಿಧ್ಯಾಧರರು ಸ್ತುತಿಸುವರು “ಓ ದೇವಾ ! ರಾಕ್ಷಸನು, ಯು ಕ್ತಾಯುಕ್ತಗಳನ್ನರಿಯದ ಮೂಢನಾಗಿದ್ದರೂ, ಬಲದಿಂದಲೂ, ವೀರ್ಯ

ಥಿಂಥಲೂ ಕೊಬ್ಬಿದವನಾಗಿ, ನಮಗೆ ನಮ್ಮ ಮನೋಧಾರಣೆಯಿಂದ ಕೈಗೂಡಿ ಬಂದಿದ್ದ, ಅಂತರ್ಧಾನಶಕ್ತಿ ಮೊದಲಾದ ವಿದ್ಯೆಗಳೆಲ್ಲವನ್ನೂ, ಅಣಿಮಾದಿಸಿದ್ಧಿಗಳನ್ನೂ ಅಪಹರಿಸಿಬಿಟ್ಟಿದ್ದನು. ಸಿಂಹವು ಕ್ಷುದ್ರಮೃಗವನ್ನು ಕೊಲ್ಲುವಂತೆ ಈಗ ನೀನು ಆ ಕ್ರೂರರಾಕ್ಷಸನನ್ನು ಕೊಂದು, ನಮ್ಮನ್ನು ರಕ್ಷಿಸಿದೆ! ಮಾಯಾನೃಸಿಂಹಸ್ವರೂಪಿಯಾದ ನಿನ್ನನ್ನು ನಿತ್ಯವೂ ನಮಸ್ಕರಿಸುವೆವು."

ನಾಗರು ಸ್ತುತಿಸುವರು. "ಹೇ ದೇವಾ! ನಮ್ಮಲ್ಲಿದ್ದ ರತ್ನಗಳನ್ನೂ, ಸ್ತ್ರೀರತ್ನಗಳನ್ನೂ ಬಲಾತ್ಕಾರದಿಂದಪಹರಿಸುತಿದ್ದ ಈ ನೀಚರಾಕ್ಷಸನ ಎದೆಯನ್ನು ಸೀಳಿ, ನಮ್ಮೆಲ್ಲರಿಗೂ ಆನಂದವನ್ನುಂಟುಮಾಡಿದ ನಿನಗೆ ನಮಸ್ಕಾರವು."

ಮನುಗಳು ಸ್ತುತಿಸುವರು. "ಹೇ ಪ್ರಭೂ ! ನಾವು ನಿನ್ನ ಆಜ್ಞಾನುಸಾರವಾಗಿ ನಿರ್ಣಯಿಸುತ್ತಬಂದ ವರ್ಣಾಶ್ರಮಮರ್ಯ್ಯಾದೆಗಳೆಲ್ಲವನ್ನೂ ಈ ದುರಾತ್ಮನು ಕೆಡಿಸುತ್ತ ಬಂದುದರಿಂದ, ಇದುವರೆಗೂ ನಾವು ದುಃಖಿತರಾಗಿ ಕಳವಳಿಸುತಿದ್ದೆವು ಈಗ ನಿನ್ನಿಂದ ಆ ನೀಚನು ಸಂಹೃತನಾದನು ಇನ್ನುಮೇಲೆ ನಾವು ನಿರ್ವಿಘ್ನವಾಗಿ ನಿನ್ನ ಆಜ್ಞೆಯನ್ನು ನೆರವೇರಿಸಬಹುದು ನಿನ್ನ ಕಿಂಕರರಾದ ನಾವು ಮುಂದೆ ನಡೆಸಬೇಕಾದ ಕಾರ್ಯವೇನೆಂಬುದನ್ನು ಅಜ್ಞಾಪಿಸಬೇಕು "

ಪ್ರಜಾಧಿಪತಿಗಳು ಸ್ತುತಿಸುವರು. " ಓ ಸರ್ವೇಶ್ವರಾ ! ಲೋಕದಲ್ಲಿ ಪ್ರಜಾವೃದ್ಧಿಕಾರ್ಯವನ್ನು ಮಾಡುವುದಕ್ಕಾಗಿಯೇ ನಾವು ನಿನ್ನಿಂದ ಸೃಷ್ಟಿಸಲ್ಪಟ್ಟವರು ಹಾಗಿದ್ದರೂ ಇದುವರೆಗೆ ಈ ದುರಾತ್ಮನ ನಿರ್ಬಂಧದಿಂದ ನಮ್ಮ ಸೃಷ್ಟಿಕಾರ್ಯವನ್ನು ನಡೆಸುವುದಕ್ಕೂ ನಮಗೆಅವಕಾಶವಿಲ್ಲದಂತಾಯಿತು ಈಗ ಈದುರಾತ್ಮನು ನಿನ್ನಿಂದ ಹತನಾಗಿ, ಎದೆಹರಿದು ಬಿದ್ದಿರುವುದರಿಂದ,ಇನ್ನುಮೇಲೆ ನಾವು ನಿರ್ವಿಘ್ನವಾಗಿ ಆ ಕಾರ್ಯವನ್ನು ನಿರ್ವಹಿಸಬಹುದು ಓ ಸತ್ವಮೂರ್ತೀ ! ಸಕಲಜಗನ್ಮಂಗಳಕಾರಣವಾದ ಈ ನಿನ್ನ ಅವತಾರಕ್ಕೆ ನಮಸ್ಕಾರವು "

ಗಂಧರ್ವರು ಸ್ತುತಿಸುವರು. "ಓ ಪ್ರಭೂ ! ನಾವು ಮಹಾತ್ಮನಾದ ನಿನ್ನ ಮುಂದೆ ಅನವರತವೂ ಗಾನನರ್ತನಗಳನ್ನು ಮಾಡುವುದರಿಂದ, ನ

ಮ್ಮ ವಿದ್ಯೆಯನ್ನು ಸಾರ್ಥಕಪಡಿಸುತಿದ್ದೆವು. ವೀರ್ಯದಿಂದಲೂ, ಬಲದಿಂದ ಲೂ ಗರ್ವಿತನಾದ ಈ ದುರಾತ್ಮನು, ನಮ್ಮನ್ನು ನಿರ್ಬಂಧಿಸಿ ತನ್ನ ವಶಮಾ ಡಿಕೊಂಡಿದ್ದನು. ಈಗ ಆ ನೀಚನು ನಿನ್ನಿಂದ ಸಂಹೃತನಾದನು. ಹೀಗೆಯೇ ಉನ್ಮಾರ್ಗದಲ್ಲಿ ಪ್ರವರ್ತಿಸತಕ್ಕವರಿಗೆ ಎಂದಿಗೂ ಕ್ಷೇಮವುಂಟಾಗಲಾರದು ಇನ್ನುಮೇಲೆ ನಾವು ನಿನ್ನ ಪವಿತ್ರಚರಿತ್ರಗಳನ್ನು ಯಥೇಚ್ಛವಾಗಿ ಕೊಂಡಾ ಡಿ ನಮ್ಮಜನ್ಮವನ್ನು ಸಾರ್ಥಕಗೊಳಿಸಬಹುದು."

ಚಾರಣರು ಸ್ತುತಿಸುವರು "ಓ ಹರೀ ! ನಿನ್ನ ಪಾದಾಶ್ರಯವೇ ಜನ್ಮಮೋಕ್ಷಗಳೆಂಬ ಇಹಲೋಕಸುಖಕ್ಕೂ ಪರಲೋಕಸುಖಕ್ಕೂ ಕಾರ ಣವೆನಿಸುವುದು ಅಂತಹ ನಿನ್ನ ಪಾದಪದ್ಮಗಳನ್ನಾಶ್ರಯಿಸಿ, ನಿನ್ನ ಸೇ ವಾಸುಖವನ್ನನುಭವಿಸುತಿದ್ದ ನಾವು, ಇದುವರೆಗೆ ಈ ದುರಾತ್ಮನ ನಿರ್ಬಂ ಧದಲ್ಲಿ ಸಿಕ್ಕಿ ಬಿದ್ದಿದ್ದೆವು ಸಾಧುಗಳಿಗೆ ಹೃದಯಶಲ್ಯದಂತಿದ್ದ ಆ ನೀಚ ನು ಈಗ ನಿನ್ನಿಂದ ಸಂಹರಿಸಲ್ಪಟ್ಟನು. ಇನ್ನುಮೇಲೆ ನಾವು ಸಂತೋಷ ದಿಂದ ನಿನ್ನ ಸೇವೆಯನ್ನ ನಡೆಸಬಹುದು

ಯಕ್ಷರು ಸ್ತುತಿಸುವರು 'ದೇವಾ ! ನಿನ್ನ ಮನಸ್ಸಿಗೊಪ್ಪುವಂತೆ ಸೇವೆಯನ್ನುಮಾಡುತ್ತ, ನಿನ್ನ ಪಾದಕಿಂಕರರಲ್ಲಿ ಪ್ರಧಾನರೆನಿಸಿಕೊಂಡ ನ ಮ್ಮನ್ನು ಇದುವರೆಗೆ ಈ ದುರಾತ್ಮನು, ತನ್ನ ಪಲ್ಲಕ್ಕಿಯನ್ನು ಹೊರುವ ನೀಚಕೃತ್ಯದಲ್ಲಿ ನಿಯಮಿಸಿದ್ದನು. ಆಶ್ರಿತರ ದುಃಖವನ್ನು ತಿಳಿದ ನೀನು, ರಾ ಕ್ಷಸಶರೀರದಿಂದಿದ್ದ ಈ ಜೀವನಿಗೆ, ಈಗ ಶರೀರವಿಯೋಗವನ್ನುಂಟುಮಾ ಡಿದೆ ಇನ್ನು ನಾವು ನಿರಾತಂಕವಾಗಿ ನಿನ್ನ ಪಾದಸೇವೆಯನ್ನು ಮಾಡ ಬಲ್ಲೆವು"

ಕಿಂಪುರುಷರು ಸ್ತುತಿಸುವರು, 'ಓ ನಾಥಾ ! ನಿನಗಿಂತಲೂ ನಾವು ಕುತ್ಸಿತಪುರುಷರೆಂಬುದು ನಮ್ಮ ಹೆಸರಿನಿಂದಲೇ ವ್ಯಕ್ತವಾಗುವುದು. ನೀ ನೋ ಮಹಾಪುರುಷನೆಂದು ಪ್ರಸಿದ್ಧಿಗೊಂಡವನು! ಸರ್ವೇಶ್ವರನು!ಈರಾಕ್ಷಸ ನು ನಮಗಿಂತಲೂ ಪ್ರಬಲನಾಗಿದ್ದರೂ,ನಿನ್ನ ಶಕ್ತಿಯ ಮುಂದೆಅತ್ಯಲ್ಪವಾದ ಹುಲ್ಲುಕಡ್ಡಿಗೆ ಸಾಟಿಯೆನಿಸಿಕೊಳ್ಳುವನು. ಇದರಮೇಲೆ ಇವನು ಸಾಧುಗಳ ತಿರಸ್ಕಾರದಿಂದ ಮೊದಲೇ ಹತಪ್ರಾಯನಾಗಿದ್ದವನು ನಿನ್ನ ಮಹಾಮಹಿ

ಮೆಗೆ ಇವನನ್ನು ಕೊಂದುದೇನೂ ಅತಿಶಯವಲ್ಲ. ನಿನ್ನ ಅದ್ಭುತಶಕ್ತಿಯನ್ನು ನಾವು ಹೇಗೆತಾನೇ ವರ್ಣಿಸಬಲ್ಲೆವು?"

ವೈತಾಳಿಕರು ಸ್ತುತಿಸುವರು. "ದೇವಾ! ಸಭೆಗಳಲ್ಲಿಯೂ, ಸತ್ರಯಾಗಗಳಲ್ಲಿಯೂ ನಿನ್ನ ಗುಣಗಳನ್ನು ಕೊಂಡಾಡುವುದರಿಂದಲೇ ನಾವೂ ವಿಶೇಷ ಪೂಜ್ಯತೆಯನ್ನು ಹೊಂದುತಿದ್ದೆವು. ಅಂತಹ ನಮ್ಮನ್ನು ಈ ದುರಾತ್ಮನು ನಿರ್ಬಂಧಿಸಿ, ನಮ್ಮಿಂದ ತನ್ನ ಕೀರ್ತಿಯನ್ನು ಕೊಂಡಾಡಿಸಿಕೊಳ್ಳುತಿದ್ದನು. ರೋಗನಿವೃತ್ತಿಯನ್ನುಂಟುಮಾಡಿದಂತೆ ಈ ದುರಾತ್ಮನನ್ನು ನೀನು ಕೊಂದುದು ನಮ್ಮ ಭಾಗ್ಯವಿಶೇಷವೆಂದೆಣಿಸುವೆವು,"

ಕಿನ್ನರರು ಸ್ತುತಿಸುವರು ಓ ಈಶ್ವರಾ! ನಿನ್ನ ಕಿಂಕರರಾದ ನಮ್ಮನ್ನು ಈದೈತ್ಯನು ತನ್ನ ಬಿಟ್ಟಿಯ ಕೆಲಸಕ್ಕಾಗಿ ನಿಯಮಿಸಿ ನಿರ್ಬಂಧಿಸುತಿದ್ದನು. ಆಶ್ರಿತದುಃಖನಿವಾರಕನಾದ ನೀನು, ಈಗ ಆ ದುರಾತ್ಮನನ್ನು ಕೊಂದುದರಿಂದ, ನಾವು ಸುಖಿಗಳಾದೆವು. ಮುಂದೆಯೂ ಹೀಗೆಯೇ ನಮ್ಮನ್ನು ರಕ್ಷಿಸುತ್ತಿರು"

ಸುನಂದರೇ ಮೊದಲಾದ ವಿಷ್ಣುಪಾರ್ಷದರು ಸ್ತುತಿಸುವರು "ಮರೆಹೊಕ್ಕವರನ್ನು ಕಾಪಾಡತಕ್ಕ ಓ ಮಹಾಪ್ರಭೂ! ಲೋಕಕ್ಷೇಮಕರವಾದ ಈ ನಿನ್ನ ಅದ್ಭುತರೂಪವನ್ನು ಈಗಲೇ ನಾವು ಮೊದಲಾವರ್ತಿ ನೋಡುತ್ತಿರುವೆವು. ಇಂತಹ ರೂಪವನ್ನು ಹಿಂದೆ ಯಾವಾಗಲೂ ಕಂಡುದಿಲ್ಲ ಇಲ್ಲಿ ಸತ್ತು ಬಿದ್ದಿರುವ ರಾಕ್ಷಸನೂ ನಮ್ಮಂತೆಯೇ ಮೊದಲು ನಿನ್ನ ಕಿಂಕರನಾಗಿದ್ದು, ಬ್ರಾಹ್ಮಣಶಾಪದಿಂದ ಈ ಜನ್ಮವನ್ನು ಹೊಂದಿರುವನು ತಿರುಗಿ ಇವನೂ ನಮ್ಮೊಡನೆ ನಿನ್ನ ಪಾದಸೇವೆಯಲ್ಲಿಯೇ ಅನ್ವಯಿಸತಕ್ಕವನಾದುದರಿಂದ ನೀನು ಇವನನ್ನು ಕೊಂದುದು, ಅನುಗ್ರಹವೇ ಹೊರತು ನಿಗ್ರಹವಲ್ಲ" ಎಂದರು ಇಲ್ಲಿಗೆ ಎಂಟನೆಯ ಅಧ್ಯಾಯವು

---

ಪ್ರಹ್ಲಾದನು ನೃಸಿಂಹಮೂರ್ತಿಯನ್ನು ಸ್ತುತಿಸಿ ಕೋಪಸಮಾಧಾನಮಾಡಿದುದು.

ಧರ್ಮರಾಜಾ ಕೇಳು! ಹೀಗೆ ಬ್ರಹ್ಮರುದ್ರಾದಿದೇವತೆಗಳೆಲ್ಲರೂ ದೂರದೂರದಲ್ಲಿಯೇ ನಿಂತು ಬಾರಿಬಾರಿಗೂ ಸ್ತುತಿಸುತಿದ್ದರು. ಹಾಗಿದ್ದರೂ

ಆ ನೃಸಿಂಹಮೂರ್ತಿಯ ಕೋಪವನ್ನು ಶಾಂತಿಗೊಳಿಸುವುದಕ್ಕೆ ಯಾರಿಂದ ಲೂ ಸಾಧ್ಯವಿಲ್ಲದೆಹೋಯಿತು. ಯಾರೂ ಮುಂದೆ ಬರಲಾರದೆ, ಭಯದಿಂ ದ ದೂರದಲ್ಲಿಯೇ ನಿಂತು ಆ ಭಗವಂತನಿಗೆ ಪರಮಪ್ರಿಯೆಯಾದ ಲಕ್ಷ್ಮೀ ದೇವಿಯನ್ನು ಪ್ರಾರ್ಥಿಸಿದರು. ಹಿಂದೆ ಯಾವಾಗಲೂ ಕಂಡು ಕೇಳಿಲ್ಲದ ಈ ಅದ್ಭುತರೂಪವನ್ನು ನೋಡಿ ಲಕ್ಷ್ಮೀದೇವಿಯೂ ಮುಂದೆ ಬರುವುದಕ್ಕೆ ಭಯಪಟ್ಟು ನಿಂತಿರಲು, ಆಗ ಬ್ರಹ್ಮದೇವನು, ತನ್ನ ಸಮೀಪದಲ್ಲಿ ನಿಂ ತಿದ್ದ ಪ್ರಹ್ಲಾದನನ್ನು ಕರೆದು “ವತ್ಸಾ ! ನೀನಾದರೂ ಮುಂದೆ ಹೋ ಗು! ನಿನಗಾಗಿ, ನಿನ್ನ ತಂದೆಯ ವಿಷಯದಲ್ಲಿ ಕುಪಿತನಾಗಿರುವ ನೃಸಿಹ್ಮ ಮೂರ್ತಿಯನ್ನು ಸಮಾಧಾನಗೊಳಿಸು” ಎಂದನು. ಆಗ ಪರಮಭಾಗವ ತೋತ್ತಮನಾದ ಪ್ರಹ್ಲಾದಕುಮಾರನು, ಬದ್ಧಾಂಜಲಿಯಾಗಿ ಮೆಲ್ಲಗೆ ಮುಂದೆ ಹೋಗಿ, ಭಗವಂತನ ಪಾದಗಳನ್ನು ಹಿಡಿದು ಸಾಷ್ಟಾಂಗಪ್ರಣಾ ಮವನ್ನು ಮಾಡಿದನು. ಆಗ ಭಗವಂತನು ಆ ಬಾಲಕನಲ್ಲಿ ಕರುಣಾರ್ದ್ರಹೃ ದಯನಾಗಿ, ತಾನಾಗಿಯೇ ಕೈಹಿಡಿದು ಆ ಬಾಲಕನನ್ನು ಮೇಲಕ್ಕೆತ್ತಿ, ಮೃ ತ್ಯುವೆಂಬ ಮಹಾಸರ್ಪದಿಂದ ಭಯಪಟ್ಟವರಿಗೂ ಅಭಯವನ್ನು ಕೊಡ ತಕ್ಕ ತನ್ನ ಹಸ್ತಕಮಲದಿಂದ ಆತನ ತಲೆಯನ್ನು ಸವರಿದನು. ಭಗ ವಂತನ ಹಸ್ತಸ್ಪರ್ಶಮಾತ್ರದಿಂದ ಸಮಸ್ತಪಾಪಗಳನ್ನೂ ನೀಗಿದ ಆ ಪ್ರಹ್ಲಾದನಿಗೆ, ಆ ಕ್ಷಣವೇ ಪರಮಾತ್ಮನ ಸ್ವರೂಪವು ಮನಸ್ಸಿಗೆ ಗೋಚರಿ ಸಿತು. ಅವನಿಗೆ ಮಿತಿಮೀರಿದ ಸಂತೋಷವುಂಟಾಯಿತು. ಆತನ ಮೈಯ್ಯೆ ಲ್ಲವೂ ರೋಮಾಂಚಿತವಾಯಿತು ಆನಂದದಿಂದ ಮನಸ್ಸು ಕರಗಿತು. ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕಾಡುತಿತ್ತು! ಭಗವಂತನ ಪಾದಾರ ವಿಂದಗಳನ್ನು ಮನಸ್ಸಿನಲ್ಲಿಯೇ ಏಕಾಗ್ರತೆಯಿಂದ ಧ್ಯಾನಿಸುತಿದ್ದನು ಆಗ ಪ್ರಹ್ಲಾದನು ಭಕ್ತಿಯಿಂದ ಮೈಮರೆತು, ಕಣ್ಣುಗಳನ್ನೂ, ಮನಸ್ಸ ನ್ನೂ ಆ ಭಗವತ್ಸ್ವರೂಪದಲ್ಲಿಯೇ ದೃಢವಾಗಿ ನೆಲೆಗೊಳಿಸಿ, ಗದ್ಗದಕಂಠ ದಿಂದ ಹೀಗೆಂದು ಸ್ತುತಿಸುವನು

“ಕೇವಲ ಸತ್ವಪ್ರಧಾನರಾದ ಬ್ರಹ್ಮಾದಿದೇವತೆಗಳೂ, ಮಹರ್ಷಿಗ ಳೂ, ಸಿದ್ಧರೂ, ಪ್ರವಾಹದಂತೆ ಹೊರಡುವ ತಮ್ಮ ವಾಗ್ವೈಖರಿಗಳಿಂದ

ಅನವರತವೂ ಸ್ತುತಿಸುತಿದ್ದರೂ, ಗುಣವರ್ಣನಗಳಿಂದ ಯಾವನನ್ನು ಇ ದುವರೆಗೂ ಪೂರ್ಣವಾಗಿ ತೃಪ್ತಿಪಡಿಸಲಾರದಿರುವರೋ, ಅಂತಹ ಸರ್ವೇ ಶ್ವರನನ್ನು, ತಾಮಸಸ್ವಭಾವವುಳ್ಳ ರಾಕ್ಷಸಜಾತಿಯಲ್ಲಿ ಹುಟ್ಟಿದ ನಾನು! ಹೇಗೆತಾನೇ ಸ್ತುತಿಸಿ ತೃಪ್ತಿಪಡಿಸಬಲ್ಲೆನು? ಎಂದಿಗೂ ಇಲ್ಲ! ಆದರೇನು! ಓ ಮಹಾತ್ಮಾ! ಕುಲ, 'ರೂಪ, ವಯಸ್ಸು, ವಿದ್ಯೆ, ತಪಸ್ಸು ಶಾಸ್ತ್ರಪಾಂ ಡಿತ್ಯ, ಇಂದ್ರಿಯಬಲ, ದೇಹಕಾಂತಿ, ಪರಾಕ್ರಮ, ದೇಹಶಕ್ತಿ, ಪೌರುಷ, ಬುದ್ಧಿಶಕ್ತಿ, ಪ್ರಾಣಜಯರೂಪವಾದ ಯೋಗಾಭ್ಯಾಸಗಳು, ಇವೆಲ್ಲವೂ ಪ ರಮಪುರುಷನಾದ ನಿನ್ನನ್ನು ಸಂತೋಷಗೊಳಿಸುವುದಕ್ಕೆ ಸಹಕಾರಿಗಳಾಗ ಲಾರವೆಂದೇ ನನಗೆ ತೋರುವುದು. ಇದಕ್ಕೆ ಕಾಡಾನೆಯೇ ಸಾಕ್ಷಿಯು ಆ ಗಜೇಂದ್ರನಲ್ಲಿ ಮೇಲೆ ಹೇಳಿದ ಕುಲ, ರೂಪ, ಧನಾದಿಸಮೃದ್ಧಿಗಳೊಂ ದೂ ಇಲ್ಲದಿದ್ದರೂ, ಅದು ಭಕ್ತಿಮಾತ್ರದಿಂದ ನಿನ್ನನ್ನು ಸಂತೋಷಪಡಿಸಿ, ನಿನ್ನ ಅನುಗ್ರಹಕ್ಕೆ ಪಾತ್ರವಾಯಿತಲ್ಲವೆ ? ಆದುದರಿಂದ ನಮ್ಮ ರಾಕ್ಷಸಕು ಲದವರಿಗೂ ನೀನು ಭಕ್ತಿಯಿಂದ ವಶನಾಗುವುದರಲ್ಲಿ ಸಂದೇಹವಿರದು! ಓ ದೇವಾ ! ಬ್ರಾಹ್ಮಣಕುಲದಲ್ಲಿ ಹುಟ್ಟಿ, ಧರ್ಮ, ಸತ್ಯ, ಇಂದ್ರಿಯನಿಗ್ರಹ ಶಾಸ್ತ್ರಜ್ಞಾನ, ನಿರ್ಮಾತ್ಸರ್ಯ, ಲಜ್ಜೆ, ತಾಳ್ಮೆ, ಅನಸೂಯೆ, ದಾನ, ಯಜ್ಞ, ಧೃತಿ, ಶಮ, ವ್ರತನಿಷ್ಠೆಗಳೆಂಬ ಹನ್ನೆರಡುಗುಣಗಳಿಂದ ಕೂಡಿದವನಾಗಿ ದ್ದರೂ, ನಿನ್ನಪಾದಾರವಿಂದಗಳಲ್ಲಿ ವಿಮುಖನಾದರೆ, ಆ ಬ್ರಾಹ್ಮಣನಿಗಿಂ ತಲೂ. ನಿನ್ನಲ್ಲಿ ಮನಸ್ಸನ್ನೂ, ವಾಕ್ಕನ್ನೂ, ಪ್ರಾಣಗಳನ್ನೂ ಅರ್ಪಿಸಿ ಭಜಿ ಸತಕ್ಕ ಚಂಡಾಲನೇ ಉತ್ತಮನೆಂದು ನನಗೆ ತೋರುವುದು! ಏಕೆಂದರೆ, ನಿ ನ್ನಲ್ಲಿ ಭಕ್ತಿಯುಳ್ಳ ಚಂಡಾಲನು,ತನ್ನನ್ನೂ, ತನ್ನಕುಲವನ್ನೂ ಪಾವನಮಾ ಡಬಲ್ಲನು. ನಿನ್ನಲ್ಲಿ ಭಕ್ತಿಹೀನನಾಗಿ, ತನ್ನ ಪಾಂಡಿತ್ಯಾದಿಗುಣಗಳಿಗಾಗಿ ವೃಥಾಭಿಮಾನದಿಂದ ಬೀಗಿ ಬೆರೆಯುತ್ತಿರುವ ಬ್ರಾಹ್ಮಣನಾದರೋ, ತನ್ನ ಜನ್ಮವನ್ನಾದರೂ ತಾನು ಪಾವನಮಾಡಿಕೊಳ್ಳಲಾರನು ದೇವಾ! ಸರ್ವ ಸ್ವತಂತ್ರನಾಗಿಯೂ, ಪೂರ್ಣಕಾಮನಾಗಿಯೂ ಇರತಕ್ಕ ನಿನಗೆ, ನಾವು ಯಾವ ವಿಧದಿಂದ ತೃಪ್ತಿಯನ್ನುಂಟುಮಾಡಬಲ್ಲೆವು? ನಿನ್ನ ಆರಾಧನರೂಪ ವಾಗಿ ನಾವು ಮಾಡತಕ್ಕ ಕರ್ಮಗಳೆಲ್ಲವೂ ನಮ್ಮ ಪ್ರಯೋಜನಕ್ಕಾಗಿಯೇ

ಹೊರತು ಅವುಗಳಿಂದ ನಿನಗೇನೂ ಪ್ರಯೋಜನವಾಗಲಾರದು. ನೀನು ಭಕ್ತವತ್ಸಲನಾದುದರಿಂದ, ಭಕ್ತರ ಆತ್ಮೋಜ್ಜೀವನಕ್ಕಾಗಿಯೇ ಅವುಗಳನ್ನು ನೀನು ಕರುಣೆಯಿಂದ ಸ್ವೀಕರಿಸಬೇಕಲ್ಲದೆ ಬೇರೆಯಲ್ಲ. ಚೇತನರು ನಿನಗೆ ಯಾವಯಾವ ಆರಾಧನಗಳನ್ನು ನಡೆಸುವರೋ, ಅವೆಲ್ಲವೂ ಅವರಿಗೇ ಪೂಜ್ಯತೆಯನ್ನು ಹೆಚ್ಚಿಸುವುವು ಮತ್ತು ಕನ್ನಡಿಯಲ್ಲಿ ಮುಖವನ್ನು ನೋಡುವಾಗ, ಆ ಮುಖದ ಕಾಂತಿಯೇ ಪ್ರತಿಬಿಂಬದಲ್ಲಿ ಕಾಣುವಂತೆ, ನಿನ್ನನ್ನು ಆರಾಧಿಸತಕ್ಕವರಲ್ಲಿಯೂ ನಿನ್ನ ಮಹಿಮೆಯೇ ತೋರುವುದು ಆದುದರಿಂದ ಓ ದೇವಾ! ನಾನು ನೀಚವಾದ ರಾಕ್ಷಸಕುಲದಲ್ಲಿ ಹುಟ್ಟಿದವನಾದರೂ, ಶಂಕೆಯನ್ನು ಬಿಟ್ಟು ಸರ್ವೇಶ್ವರನಾದ ನಿನ್ನ ಮಹಿಮೆಯನ್ನು ನನ್ನ ಬುದ್ಧಿಗೆ ತೋರಿದಮಟ್ಟಿಗೆ ತ್ರಿಕರಣಗಳಿಂದಲೂ ಸ್ತುತಿಸುವೆನು. ಪ್ರಕೃತಿಸಂಬಂಧದಿಂದ ಸತ್ವಾದಿಗುಣಗಳ ಪರಿಣಾಮವೆನಿಸಿಕೊಂಡ ಶರೀರದಲ್ಲಿ ಪ್ರವೇಶಿಸಿದ ಜೀವನು, ಸರ್ವೇಶ್ವರನಾದ ನಿನ್ನನ್ನು ಸ್ತುತಿಸುವುದರಿಂದಲೇ ಶುದ್ಧಿಯನ್ನು ಹೊಂದಬೇಕು ಓ ಜಗದೀಶ್ವರಾ! ನಮ್ಮಂತೆಯೇ,ಇದೋ ಇಲ್ಲಿರುವ ಬ್ರಹ್ಮಾದಿದೇವತೆಗಳೆಲ್ಲರೂ ಶುದ್ಧಸತ್ವಮೂರ್ತಿಯಾದ ನಿನಗೆ ಕಿಂಕರರು! ಇವರೆಲ್ಲರೂ ನಿನ್ನ ಕೋಪಕ್ಕೆ ಹೆದರಿ, ನಿನ್ನ ಸಮೀಪಕ್ಕೆ ಹೊದ್ದಲಾರದೆ ದೂರದೂರದಲ್ಲಿಯೇ ನಿಂತಿರುವರು. ಅವರೆಲ್ಲರನ್ನೂ ದಯಾದೃಷ್ಟಿಯಿಂದ ಕರುಣಿಸಬೇಕು ಷಡ್ಗುಣಪರಿಪೂರ್ಣನಾದ ನೀನು ಈ ವಿಧವಾಗಿ ಬೇರೆಬೇರೆ ಅವತಾರಗಳಿಂದ ವಿಚಿತ್ರರೂಪಗಳನ್ನು ತಾಳಿ ವಿನೋದಿಸುವುದೆಲ್ಲವೂ, ಈ ಜಗತ್ತಿನ ಯೋಗಕ್ಷೇಮಗಳನ್ನು ನಿರ್ವಹಿಸುವುದಕ್ಕಾಗಿಯೂ, ಮತ್ತು ನಿನ್ನ ಸ್ವರೂಪಾನುಭವದಿಂದುಂಟಾದ ಮೋಕ್ಷವೆಂಬ ಮಹಾನಂದವನ್ನುಂಟುಮಾಡುವುದಕ್ಕಾಗಿಯೂ ಏರ್ಪಟ್ಟುದೇಹೊರತು ಬೇರೆಯಲ್ಲ ಆದುದರಿಂದ ಓ ದೇವಾ! ನಿನ್ನ ಕೋಪವನ್ನು ನಿಗ್ರಹಿಸು

ಈಗ ನೀನು ನನ್ನ ತಂದೆಯಾದ ರಾಕ್ಷಸನನ್ನು ಕೊಂದುದರಿಂದ ಲೋಕವೆಲ್ಲವೂ ಸಂತೋಷಗೊಂಡಿರುವುದು ಪ್ರಾಣಿವಧೆಯೆಂಬುದು ಅನೇಕಸಂದರ್ಭಗಳಲ್ಲಿ ನಿಷಿದ್ಧವಾಗಿದ್ದರೂ, ಲೋಕಕಂಟಕನಾದ ನನ್ನ ತಂದೆಯನ್ನು ನೀನು ಕೊಂದುದು ಸಜ್ಜನಸಮ್ಮತವಾಗಿಯೇ ಇರುವುದು. ಲೋ

ಕೋಪದ್ರವಕಾರಿಗಳಾದ ಚೇಳು, ಹಾವು ಮೊದಲಾದ ಕ್ರೂರಜಂತುಗಳ
ನ್ನು ಕೊಲ್ಲುವುದರಿಂದ, ದಯಾಸ್ವಭಾವವುಳ್ಳ ಸಾಧುಗಳೂ ಸಂತೋಷಪಡ
ದಿರಲಾರರು ಈ ಕಾರ್ಯದಿಂದ ಸಮಸ್ತಲೋಕಗಳೂ ಸಂತೋಷ
ಹೊಂದಿರುವುವು ಇದೋ ! ನಿನ್ನ ಉಗ್ರಾಕೃತಿಯನ್ನು ನೋಡಿ ಭಯ
ಪಡುತ್ತಿರುವ ಈ ಬ್ರಹ್ಮಾದಿದೇವತೆಗಳೆಲ್ಲರಿಗೂ ಅಭಯವನ್ನು ಕೊಟ್ಟು
ಅವರವರ ಸ್ಥಾನಕ್ಕೆ ಕಳುಹಿಸು ! ಓ ನೃಸಿಂಹಾ ! ಲೋಕದಲ್ಲಿ ಜನ
ಗಳು ಇನ್ನುಮೇಲೆ ಎಂದೆಂದಿಗೂ ಈ ನಿನ್ನ ಸ್ವರೂಪವನ್ನು ಭಯಕಾಲ
ಗಳಲ್ಲಿ ಭಯನಿವಾರಣಾರ್ಥವಾಗಿಯೇ ಧ್ಯಾನಿಸುತ್ತಿರುರಲಿ ! ಓ ದೇವಾ !
ಈ ನಿನ್ನ ಮುಖವೂ, ನಿನ್ನನಾಲಗೆಯೂ,ಸೂರ್ಯಬಿಂಬಕ್ಕ ಸಮಾನಗಳಾದ
ನಿನ್ನ ನೇತ್ರಗಳೂ, ಈ ನಿನ್ನ ಹುಬ್ಬುಗಂಟುಗಳೂ, ಈ ನಿನ್ನ ಕ್ರೂರದಂ
ಷ್ಟ್ರಗಳೂ, ನೀನು ಕಂಠದಲ್ಲಿ ಧರಿಸಿರುವ ಕರುಳಿನ ಮಾಲಿಕೆಯೂ, ರಕ್ತ
ದಲ್ಲಿ ತೊಯ್ದ ನಿನ್ನ ಸಟೆಗಳೂ, ಕೋಪದಿಂದ ನೆಟ್ಟಗೆ ನಿಂತಿರುವ ನಿನ್ನ ಕಿ
ವಿಗಳೂ, ಲೋಕಭಯಂಕರವಾಗಿರುವುವು ಈ ಉಗ್ರರೂಪವನ್ನು ನೋಡಿ
ಬ್ರಹ್ಮಾದಿಗಳು ಭಯಪಡುವುದೇನೂ ಆಶ್ಚರ್ಯವಲ್ಲ ಆದರೆ ನಾನು
ಮಾತ್ರ ಇದೊಂದಕ್ಕೂ ಭಯಪಡತಕ್ಕವನಲ್ಲ. ಅಹಂಕಾರಮಮಕಾರಾ
ದಿಗಳಿಂದ ಸಂಸಾರಸಮುದ್ರದಲ್ಲಿ ಮುಳುಗಿ, ಪುಣ್ಯಪಾಪಕರ್ಮಗಳಲ್ಲಿ ಕಟ್ಟು
ಬಿದ್ದಿರುವ ನಾನು,ಸಹಿಸಲಾರದ ಆ ಸಂಸಾರದುಃಖಕ್ಕೆಮಾತ್ರವೇ ಭಯಪ
ಡುತ್ತಿರುವೆನು ಓ ದೇವಾ! ಹೀಗೆ ಭಯಾತುರನಾದ ನನ್ನನ್ನು ಮೋಕ್ಷಪ್ರ
ದವಾದ ಈ ನಿನ್ನ ಪಾದಮೂಲದಲ್ಲಿ ಯಾವಾಗ ಸೇರಿಸಿಕೊಳ್ಳುವೆಯೋ
ಎಂದು ಕಣ್ಣಿಟ್ಟು ಕಾದಿರುವೆನು ಓ ದೇವಾ ! ನಾನು ಬಹುಕಾಲದಿಂದ
ಅನುಸರಿಸಿ ಬಂದ ಕರ್ಮಪಾಶದಲ್ಲಿ ಕಟ್ಟುಬಿದ್ದು, ಅದರಿಂದ ಜನ್ಮಜನ್ಮ ದಲ್ಲಿ
ಯೂ ಎಷ್ಟೋದುಃಖಗಳನ್ನೂ ಅನುಭವಿಸುತ್ತಬಂದಿರುವೆನು ಆಗಾಗ ಇಷ್ಟ
ವಸ್ತುಗಳು ಲಭಿಸದಿರುವುದು, ಅನಿಷ್ಟವಿಷಯಗಳು ಅನೇಕವಾಗಿ ಬಂದೊ
ದಗುವುದು, ಇವುಗಳಿಂದುಂಟಾದ ದುಃಖಾಗ್ನಿಯಿಂದ ಬೆಂದುಬೆಂದು ಸಂ
ಕಟಪಡುತ್ತ, ನಾನಾಯೋನಿಗಳಲ್ಲಿ ಸುತ್ತುತ್ತಿರುವೆನು. ಈ ಸಂಸಾರದು
ಖವನ್ನು ನೀಗಿಸುವುದಕ್ಕಾಗಿ ನಡೆಸತಕ್ಕ ಕರ್ಮಾದ್ಯುಪಾಯಗಳೂ ದುಃಖ

ರೂಪವಾಗಿಯೇ ಇರುವುವೇಹೊರತು ಹಿತಕಾರಿಗಳಲ್ಲ. ಆದುದರಿಂದ ಓ ಮಹಾತ್ಮಾ! ಎಂದೆಂದಿಗೂ ನನಗೆ ನಿನ್ನ ದಾಸ್ಯವು ಲಭಿಸುವಂತೆ ಕರುಣಿಸ ಬೇಕು. ದೇವಾ! ಸಮಸ್ತಲೋಕಕ್ಕೂ ನೀನೊಬ್ಬನೇ ಪ್ರಿಯಮಿತ್ರನು. ನೀನೇ ಪರದೈವವು ನೀನು ಲೀಲಾರ್ಥವಾಗಿ ಆಗಾಗ ಅವತಾರ ಗಳನ್ನೆತ್ತಿ ನಡೆಸತಕ್ಕ ಯಾವ ಕಾರ್ಯಗಳನ್ನು ಬ್ರಹ್ಮರುದ್ರಾದಿದೇವತೆಗ ಳೂ ಕೈಯೆತ್ತಿ ಕೊಂಡಾಡುವರೋ, ಆ ನಿನ್ನ ಅವತಾರಚರಿತ್ರಗಳನ್ನು ಆಗಾ ಗ ಕೊಂಡಾಡುವುದರಿಂದ ನಾನು ನನ್ನ ಕರ್ಮಪಾಶಗಳೆಲ್ಲವನ್ನೂ ಹರಿದು, ಜನನಮರಣರೂಪವಾದ ಸಂಸಾರದುರ್ಗವನ್ನು ದಾಟಿ, ನಿನ್ನ ಪಾದಾಶ್ರ ಯದಲ್ಲಿರುವ ಪರಮಹಂಸರೊಡನೆ ಸೇರುವಂತೆ ಅನುಗ್ರಹಿಸು! ಓ ನೃಸಿಂ ಹಾ! ನೀನು ಉಪೇಕ್ಷಿಸಿದಪಕ್ಷದಲ್ಲಿ, ಬಾಲಕರನ್ನು ತಂದೆತಾಯಿಗಳಾಗಲಿ, ರೋಗಿಯನ್ನು ಎಂತಹ ಮಹೌಷಧವಾಗಲಿ,ಸಮುದ್ರದಲ್ಲಿ ಮುಳುಗಿಹೋಗು ತ್ತಿರುವವನನ್ನು ಹಡಗಾಗಲಿ,ರಕ್ಷಿಸಲಾರವು. ನೀನು ಪೂರ್ಣಾನುಗ್ರಹವನ್ನು ತೋರಿಸದಿದ್ದರೆ, ಲೋಕದಲ್ಲಿ ದುಃಖನಿವೃತ್ತಿಗಾಗಿ ಏರ್ಪಟ್ಟಿರುವ ಯಾ ವ ಉಪಾಯಗಳೂ ಕೆಲಸಕ್ಕೆ ಬಾರವು. ನಿನ್ನ ಅನುಗ್ರಹವಿಲ್ಲದೆ ಈ ಅಲ್ಪದುಃಖಗಳನ್ನು ನಿವಾರಿಸುವುದಕ್ಕೂ ಬೇರೆ ಶಕ್ತಿಯಿಲ್ಲದಿರುವಾಗ, ಅಪಾ ರವಾದ ಸಂಸಾರದುಃಖವನ್ನು ಬಿಡಿಸಬೇಕೆಂದರೆ, ಯಾರಿಂದ ಸಾಧ್ಯವು? ಈ ಪ್ರಪಂಚದಲ್ಲಿ ಯಾವುದಾದರೂ ಒಂದು ಕಾರ್ಯವನ್ನು ನಡೆಸತಕ್ಕವನಾ ಗಲಿ, ಅದನ್ನು ನಡೆಸುವಂತೆ ಪ್ರೇರಿಸತಕ್ಕವನಾಗಲಿ, ಈ ಉಭಯವಿಧವಾದ (ಪ್ರಯೋಜ್ಯಪ್ರಯೋಜಕ) ಕರ್ತೃಗಳೂ ನಿನ್ನ ಸ್ವರೂಪವೇಹೊರತು ಬೇರೆ ಯಲ್ಲ. ಮತ್ತು ಆಯಾಕ್ರಿಯೆಗೆ ಬೇಕಾದ ಕರ್ಮ, ಕರಣ, ಸಂಪ್ರ ದಾನ, ಅಪಾದಾನ, ಅಧಿಕರಣಗಳೆಂಬ ಕಾರಕವಸ್ತುಗಳೂ ಸಂಬಂಧಿವಸ್ತು ಗಳೂ, ಪ್ರಕಾರವಾಚಕ ಕಾಲವಾಚಕವಸ್ತುಗಳೂ ನೀನೇ! ಉತ್ಕೃಷ್ಟಾ ಪಕೃಷ್ಟ ವಸ್ತುಗಳೆಲ್ಲವೂ ನೀನೇ! ಹೀಗೆ ಲೋಕದಲ್ಲಿ ಬೇರೇಬೇರೆ ಸ್ವಭಾವಗ ಳಿಂದ ಆಗಾಗ ಉತ್ಪತ್ತಿವಿನಾಶಗಳನ್ನು ಹೊಂದುತ್ತಿರುವ ವಸ್ತುಗಳು ಯಾ ವುವುಂಟೋ, ಅವೆಲ್ಲವೂ ನಿನ್ನ ಸ್ವರೂಪವೇಹೊರತು ನಿನಗಿಂತಲೂ ಬೇರೆ ಯಾದುವುಗಳಲ್ಲ. ಆದುದರಿಂದ ನಿಗ್ರಹಾನುಗ್ರಹಗಳೆಲ್ಲಕ್ಕೂ ನೀನೊಬ್ಬನೇ

ಸಮರ್ಥನು ನಿನ್ನ ಸಂಕಲ್ಪವಿಲ್ಲದೆ ಒಂದು ತೃಣವೂ ಕದಲಲಾರದು! ನಾರದಮಹರ್ಷಿಯ ಮೂಲಕವಾಗಿ ನನಗೆ ಈ ಬುದ್ಧಿಯನ್ನುಂಟುಮಾಡಿದವನೂ ನೀನೇ! ನಿನ್ನ ಅನುಗ್ರಹವಿಲ್ಲದೆ ಯಾವನೂ ಸಂಸಾರಚಕ್ರವನ್ನು ದಾಟಲಾರನು. ಓ ದೇವಾ! ಈ ಸಂಸಾರಚಕ್ರಕ್ಕೆ ಮನಸ್ಸೇ ನಾಭಿಯು! ಜ್ಞಾನಕರ್ಮೇಂದ್ರಿಯಗಳೆಂಬ ದಶೇಂದ್ರಿಯಗಳೂ ಪಂಚಪ್ರಾಣಗಳೂ.ಬುದ್ಧಿ,ಎಂಬಿವು ಹದಿನಾರೂ ಆ ಚಕ್ರದ ಅಡ್ಡಗಡ್ಡಿ(ಅರ)ಗಳು ಈ ಅರಗಳೆಲ್ಲವೂ ಮನಸ್ಸೆಂಬ ನಾಭಿಯಲ್ಲಿ ದೃಢವಾಗಿ ಕೀಲಿಸಲ್ಪಟ್ಟಿರುವುವು. ನಿನ್ನ ಮಾಯೆಯೆನಿಸಿಕೊಂಡ ಪ್ರಕೃತಿಯು, ಸತ್ವಾದಿಗುಣಗಳನ್ನು ಪ್ರೇರಿಸತಕ್ಕ ಕಾಲವನ್ನು ಸಹಾಯನನ್ನಾಗಿಟ್ಟುಕೊಂಡು, ಪುಣ್ಯಪಾಪಕರ್ಮಗಳಲ್ಲಿಯೇ ಧೃಢವಾಗಿ ಪ್ರವರ್ತಿಸತಕ್ಕ ಆ ಮನಸ್ಸನ್ನು ಸೃಷ್ಟಿಸುವುದು. ತ್ರಿಗುಣಾತ್ಮಕವಾದ ಪ್ರಕೃತಿಯಿಂದುಂಟಾದ ಆ ಮನಸ್ಸಿನಲ್ಲಿ, ಆ ಮೂರು ಗುಣಗಳೂ ಕಲೆತಿರುವುದರಿಂದ, ರಜೋಗುಣವು ತಲೆಯೆತ್ತಿದಾಗ ಆ ಮನಸ್ಸು ಕರ್ಮಗಳಲ್ಲಿ ಪ್ರವರ್ತಿಸುವುದು. ಸತ್ವಗುಣವು ತಲೆಯೆತ್ತಿದಾಗ ಆ ಮನಸ್ಸೇ ಶಾಸ್ತ್ರಜ್ಞಾನವನ್ನು ಪಡೆದು ಸಂಸಾರವನ್ನು ದಾಟಿಸುವುದಕ್ಕೆ ಸಹಕಾರಿಯಾಗುವುದು ಆದುದರಿಂದ ನಿನ್ನಲ್ಲಿ ವಿಮುಖನಾದವನು ಆಮನಸ್ಸಿನ ದೋಷದಿಂದ ಮೇಲೆಮೇಲೆ ಸಂಸಾರವನ್ನೇ ಹೆಚ್ಚಿಸಿಕೊಳ್ಳುವನೇಹೊರತು, ಅದನ್ನು ದಾಟಿಹೋಗುವುದಕ್ಕೆಸಮರ್ಥನಾಗಲಾರನು. ಓ ಪ್ರಭೂ! ಹೀಗೆ ಜೀವನನ್ನು ಸಂಸಾರಚಕ್ರದಲ್ಲಿ ಸಿಕ್ಕಿಸತಕ್ಕ ಮಾಯೆಯೇ-ನಿನ್ನ ಕೈವಶವಾಗಿರುವುದರಿಂದ, ನೀನೊಬ್ಬನುಹೊರತು ಆ ಸಂಸಾರಚಕ್ರದಿಂದ ತಪ್ಪಿಸಿಕೊಳ್ಳುವುದಕ್ಕೆ ಬೇರೊಬ್ಬನೂ ಸಮರ್ಥನಾಗಲಾರನು ಪ್ರಕೃತಿ, ಕಾಲ, ಇವೆರಡೂ ನಿನಗೆ ಶರೀರಗಳು. ನೀನು ನಿನ್ನ ತೇಜಸ್ಸಿನಿಂದಲೇ ಸತ್ವಾದಿಗುಣಗಳನ್ನು ಜಯಿಸಬಲ್ಲವನು. ಪ್ರಕೃತಿಯ ಪರಿಣಾಮರೂಪವಾದ ಸಂಸಾರದಿಂದ ಜೀವಾತ್ಮರನ್ನು ಕಟ್ಟಿಡತಕ್ಕವನೂ ನೀನೇ! ಕಟ್ಟಿದವನೇ ಬಿಡಿಸಬೇಕಾದುದರಿಂದ- ಆ ಗಂಟನ್ನು ಬಿಡಿಸಬಲ್ಲವನೂ ನೀನೊಬ್ಬನೇ! ಆದುದರಿಂದ ಇಂದ್ರಿಯಗಳೇ ಮೊದಲಾದ ಹದಿನಾರು ಅಡ್ಡಗಡ್ಡಿಗಳಿಂದ ದೃಢವಾಗಿ ಕೀಲಿಸಿದ ಈ ಸಂಸಾರಚಕ್ರದಿಂದ ನೀನೇ ನನ್ನನ್ನು ಉದ್ಧರಿಸಬೇಕು.

ಲೋಕದಲ್ಲಿ ಸಂಸಾರಿಗಳು ಯಾವುದನ್ನು ಬಹಳವಾಗಿ ಅಪೇಕ್ಷಿಸುತ್ತಿರುವ ರೋ, ಅಂತಹ ಇಂದ್ರಾದಿಲೋಕಪಾಲಕರ ಆಯುಸ್ಸು, ಸಂಪತ್ತು ಉನ್ನತ ಪದವಿ,ಮುಂತಾದ ಐಶ್ವರ್ಯಗಳೆಲ್ಲವನ್ನೂ ನಾನು ಚೆನ್ನಾಗಿ ವಿಮರ್ಶಿಸಿ ನೋಡಿದೆನು ಅವೆಲ್ಲವೂ ನನಗೆ ಅತ್ಯಲ್ಪಗಳಾಗಿ ತೋರುವುವು ವಿವೇಕಿಯಾದ ವನು ಅವುಗಳಿಗಾಗಿ ಸ್ವಲ್ಪವೂ ಆಸೆಪಡಬಾರದು ಏಕೆಂದರೆ, ಆ ಇಂದ್ರಾ ದಿದೇವತೆಗಳ ಐಶ್ವರ್ಯಗಳೆಲ್ಲವೂ, ನನ್ನ ತಂದೆಯು ಒಂದಾವರ್ತಿ ಕೋಪ ದಿಂದ ಅಟ್ಟಹಾಸವನ್ನು ಮಾಡಿ, ಹುಬ್ಬುಗಳನ್ನು ಗಂಟಿಕ್ಕಿದಮಾತ್ರದಲ್ಲಿ ಯೇ ನಷ್ಟವಾದುವು. ಅಂತಹ ಮಹಾಪರಾಕ್ರಮಿಯೆನಿಸಿಕೊಂಡ ನನ್ನ ತಂ ದೆಯನ್ನೇ ನೀನು ನಿನ್ನ ನಖಾಗ್ರಗಳಿಂದ ಸೀಳಿದೆಯಲ್ಲವೆ ? ಆದುದರಿಂ ದ ಸಂಸಾರಿಗಳಿಗೆ ಆಸೆಹುಟ್ಟಿಸತಕ್ಕ ಇಂದ್ರಾದಿಪದವಿಗಳೆಲ್ಲವೂ ಅತ್ಯ ಲ್ಪಗಳೆಂದೆಣಿಸುವೆನು ಬ್ರಹ್ಮಪದವಿಯವರೆಗೆ ಲಭಿಸಬಹುದಾದ ಇಂದ್ರಿ ಯಸುಖಗಳಾಗಲಿ, ಅಣಿಮಾದಿಸಿದ್ಧಿಗಳಾಗಲಿ, ನಿನ್ನ ಪ್ರಬಲವಾದ ಕಾಲಶಕ್ತಿಯಿಂದ ನಾಶಹೊಂದತಕ್ಕವುಗಳು. ಆದುದರಿಂದ ಇವೊಂದೂ ನನಗೆ ಆಸೆಯನ್ನು ಹುಟ್ಟಿಸಲಾರವು ಶಾಶ್ವತವಾದ ನಿನ್ನ ಪಾದಸೇವೆ ಯೊಂದನ್ನೇ ನಾನು ಕೋರುತ್ತಿರುವೆನು. ಆದುದರಿಂದ ಓ ದೇವಾ! ನಿನ್ನ ನಿತ್ಯಸೇವೆಯಲ್ಲಿರುವ ಭೃತ್ಯರೊಡನೆ ನನ್ನನ್ನೂ ಸೇರಿಸಿಕೊಳ್ಳುವನಾಗು ಹೇ ಪ್ರಭೂ! ಕಿವಿಯಲ್ಲಿ ಕೇಳುವಾಗಮಾತ್ರ ಸುಖಭ್ರಾಂತಿಯನ್ನು ಹುಟ್ಟಿಸ ತಕ್ಕುದಾಗಿಯೂ, ಅನುಭವಿಸಿ ನೋಡುವಾಗ ಮೃಗತೃಷ್ಣೆ (ಬಿಸಿಲೆದ್ದರೆ) ಯಂತೆ ನಿಸ್ಸಾರಗಳಾಗಿಯೂ ಇರುವ ಈ ಸಂಪತ್ತುಗಳೆಲ್ಲಿ?ಸಮಸ್ತರೋಗಗ ಳಿಗೂ ನೆಲೆಯಾದ ಈ ದೇಹವೆಲ್ಲಿ?ಇವೆರಡಕ್ಕೂ ಸಂಬಂಧವೇ ಕಾಣು ದಿಲ್ಲ ಈ ನಶ್ವರವಾದ ಶರೀರದಿಂದ ಸುಖವನ್ನನುಭವಿಸುವುದೂ ಸುಳ್ಳು! ಈ ಅಂಶವನ್ನು ಚೆನ್ನಾಗಿ ತಿಳಿದ ಮನುಷ್ಯನೂಕೂಡ, ದುರ್ಲಭವಾದ ಆ ವಿಷಯಸುಖಗಳಿಗಾಗಿಯೇ ಆಸೆಪಡುವನು. ಈ ವಿಷಯಸುಖಗಳೆಂಬ ಜೇನಿನ ಹನಿಗಳಿಂದಲೇ ಪ್ರಬಲವಾಗಿ ಉರಿಯುತ್ತಿರುವ ತನ್ನ ಕಾಮಾಗ್ನಿಯ ನ್ನು ನಂದಿಸುವುದಕ್ಕೆ ಪ್ರಯತ್ನಿಸಿ, ಮಹಾಪ್ರಯತ್ನಗಳನ್ನು ಮಾಡುತ್ತಿ ರುವನು. ಈ ವಿಷಯದಲ್ಲಿ ಎಷ್ಟೇ ಕಷ್ಟಪಟ್ಟರೂ ಬೇಸರಿಸಲಾರನು.

ಓ ! ಸರ್ವೇಶ್ವರಾ ! ರಜೋಗುಣ ತಮೋಗುಣಗಳ ಹೆಚ್ಚುಗೆಯಿಂದುಂ ಟಾಗತಕ್ಕ ಕಾಮಕ್ರೋಧಾದಿಗುಣಗಳೆಲ್ಲಕ್ಕೂ ನೆಲೆಯಾದ ರಾಕ್ಷಸಕುಲದಲ್ಲಿ ಹುಟ್ಟಿದ ನಾನೆಲ್ಲಿ ? ಮಹಾಯೋಗಿಗಳಿಗೆ ಲಭ್ಯವಾದ ನಿನ್ನ ದಯೆಯೆಲ್ಲಿ? ಹೀಗೆ ನೀಚಕುಲದಲ್ಲಿ ಹುಟ್ಟಿದ ನನಗೆ ನಿನ್ನ ಕರುಣೆಯನ್ನು ಪಡೆಯುವುದಕ್ಕೆ ಎಳ್ಳಷ್ಟಾದರೂ ಅವಕಾಶವಿಲ್ಲ! ಹಾಗಿದ್ದರೂ ಈಗ ನಾನೇ ಬ್ರಹ್ಮರುದ್ರಾದಿಗಳಿಗಿಂತಲೂ ಧನ್ಯನೆನಿಸಿಕೊಂಡೆನು ಏಕೆಂದರೆ, ಸಮಸ್ತತಾಪನಿವಾರಕವಾದ ಈ ನಿನ್ನ ಹಸ್ತಕಮಲವನ್ನು, ಇದುವರೆಗೆ ನೀನು ಸೃಷ್ಟಿಕರ್ತನಾದ ಆ ಬ್ರಹ್ಮನ ತಲೆಯಮೇಲಾಗಲಿ, ರುದ್ರನ ತಲೆಯಮೇಲಾಗಲಿ, ನಿನ್ನ ಪ್ರಿಯಪತ್ನಿಯಾದ ಲಕ್ಷ್ಮೀದೇವಿಯ ತಲೆಯಮೇಲಾಗಲಿ ಇಟ್ಟುದಿಲ್ಲ. ಅಂತಹ ನಿನ್ನ ಕೈಯನ್ನು ನನ್ನ ತಲೆಯಮೇಲಿಟ್ಟಿಯಲ್ಲವೆ? ನಾನು ನಿನ್ನ ಪೂರ್ಣಕೃಪೆಗೆ ಪಾತ್ರನಾದೆನೆಂಬುದಕ್ಕೆ ಇದಕ್ಕಿಂತಲೂ ಬೇರೆ ನಿದರ್ಶನವೇಕೆ? ಎಂತಹ ಮಹಾಯೋಗಿಗಳಿಗೂ ದುರ್ಲಭವಾದ ಈ ಭಾಗ್ಯವು ನನಗೆ ಲಭಿಸಿದಮೇಲೆ ನನಗಿಂತಲೂ ಧನ್ಯರಾರು? ಆದರೆ ಇದರಿಂದ ನಿನಗೆ ನನ್ನಲ್ಲಿ ಮಾತ್ರಹೆಚ್ಚು ಪಕ್ಷಪಾತವೆಂದೂ ಹೇಳುವುದಕ್ಕಿಲ್ಲ ಉತ್ತಮನೆಂದೂ ಅಧಮನೆಂದೂ ನೋಡತಕ್ಕ ಭೇದಬುದ್ಧಿಯು ಪ್ರಾಕೃತಜನಗಳಿಗೇಹೊರತು, ನಿನಗೆ ಅವನಿವನೆಂಬ ಭೇದವಿಲ್ಲ. ನೀನು ಸಮಸ್ತಜಗತ್ತಿಗೂ ಅಂತರಾತ್ಮನಾಗಿ, ಸಮಸ್ತಪ್ರಾಣಿಗಳಿಗೂ ಹಿತೈಷಿಯಾದ ಮಿತ್ರನಂತಿದ್ದರೂ ನಿನ್ನ ಪಾದಾಶ್ರಯವನ್ನು ಮಾಡಿದವರ ಕೋರಿಕೆಗೆ ತಕ್ಕಂತೆ, ಅವರವರಿಗೆ ಬೇಕಾದ ಇಷ್ಟಾರ್ಥಗಳನ್ನು ಮಾತ್ರವೇ ಕೈಗೂಡಿಸುತ್ತಿರುವ ನಿನ್ನ ಅನುಗ್ರಹವೆಂಬುದು ಕಲ್ಪವೃಕ್ಷದಂತೆ ಅವರವರ ಕೋರಿಕೆಗೆ ತಕ್ಕಹಾಗೆ ಅಲ್ಪಫಲವನ್ನು ಬಯಸಿದವರಿಗೆ ಅಲ್ಪಫಲವನ್ನೇ ಕೊಡುವುದು ಉತ್ತಮಫಲವನ್ನು ಕೋರಿದವರಿಗೆ ಉತ್ತಮಫಲವನ್ನೇ ಕೊಡುವುದು ತನ್ನಲ್ಲಿ ಉದಾಸೀನರಾಗಿರತಕ್ಕವರನ್ನು ತಾನೂ ಉದಾಸೀನವಾಗಿಯೇ ಬಿಟ್ಟುಬಿಡುವುದು ಹೀಗೆ ಅವರವರು ನಡೆಸಿದ ಆರಾಧನಕ್ಕೂ, ಅವರವರು ಕೋರಿಕೆಗೂ ತಕ್ಕಂತೆ ಫಲವನ್ನು ಕೊಡುವ ನಿನ್ನನ್ನು, ಹೇಗೆ ತಾನೇ ಪಕ್ಷಪಾತಿಯೆಂದು ಹೇಳಬಹುದು? ಓ ಭಗವಂತಾ ! ತಾಪತ್ರ

ಯಗಳೆಂಬ ಸರ್ಪಗಳಿಂದ ತುಂಬಿದ ಸಂಸಾರವೆಂಬ ಹಾಳುಬಾವಿಯಲ್ಲಿ ಬಿದ್ದು, ಶಬ್ದಾದಿವಿಷಯಸುಖಗಳಿಗಾಗಿ ತೊಳಲುತ್ತಿರುವ ಜೀವರಾಶಿಗಳ ಗುಂಪಿನಲ್ಲಿ ಸೇರಿ, ಅವರ ಜತೆಗೆ ಅದೇ ಹಾಳುಬಾವಿಯಲ್ಲಿ ಬೀಳುತಿದ್ದ ನನಗೆ ನೀನೇ ನಾರದಮಹರ್ಷಿಯಮೂಲಕವಾಗಿ ತತ್ವೋಪದೇಶವನ್ನು ಮಾಡಿಸಿ, ನಿನ್ನ ಭೃತ್ಯನನ್ನಾಗಿ ಅಂಗೀಕರಿಸಿದೆ! ಅಂತಹ ಭಾಗ್ಯವನ್ನು ಪಡೆದ ನಾನು, ನಿನ್ನ ಭೃತ್ಯರಿಗೆ ಭೃತ್ಯನಾಗಿರುವ ಈಮೇಲ್ಮೆಯನ್ನು ಹೇಗೆತಾನೇ ಬಿಟ್ಟುಹೋಗಲಿ! ಓ ದೇವಾ! ನೀನು ನನ್ನ ಪ್ರಾಣಗಳನ್ನು ರಕ್ಷಿಸಿದುದಾಗಲಿ, ನನ್ನ ತಂದೆಯನ್ನು ಕೊಂದುದಾಗಲಿ ನನ್ನನ್ನು ಅನುಗ್ರಹಿಸುವುದಕ್ಕಲ್ಲ! ಇವೆರಡೂ ನಿನ್ನ ಭಕ್ತರಾದ ಸನಕಾದಿಗಳ ಮಾತನ್ನು ಸತ್ಯವಾಗಿ ಮಾಡುವುದಕ್ಕಾಗಿಯೂ, ನನ್ನ ತಂದೆಯು ನನ್ನನ್ನು ಕೊಲ್ಲುವುದಕ್ಕಾಗಿ ಕತ್ತಿಯನ್ನೆತ್ತಿ ಹಿಡಿದು "ನನಗಿಂತಲೂ ಮೇಲಾದ ಈಶ್ವರನೊಬ್ಬನಿದ್ದಪಕ್ಷದಲ್ಲಿ ಅವನು ಈಗಲೇ ಬಂದು ನಿನ್ನನ್ನು ರಕ್ಷಿಸಲಿ" ಎಂದು ಹೇಳಿದಾಗ, ಅವನಿಗಿದ್ದ ಭ್ರಾಂತಿಯನ್ನು ನೀಗಿಸಿ, ನಿನ್ನ ಮಹಿಮೆಯನ್ನು ತೋರಿಸುವುದಕ್ಕಾಗಿಯೂ ನಡೆಸಿದ ಕಾರ್ಯಗಳೆಂದೇ ಎಣಿಸುವೆನು. ನಾರದನಮೂಲಕವಾಗಿ ನೀನು ನನಗೆ ಮಾಡಿಸಿದ ಜ್ಞಾನೋಪದೇಶವುಮಾತ್ರ ನನ್ನನ್ನು ಅನುಗ್ರಹಿಸುವುದಕ್ಕಾಗಿಯೇ!

ದೇವಾ! ಇದೋ! ಇಲ್ಲಿ ಕಾಣುತ್ತಿರುವ ಚೇತನಾಚೇತನ ಪ್ರಪಂಚಗಳೆಲ್ಲವೂ ನೀನೊಬ್ಬನೇ! ಸೃಷ್ಟಿಗೆಮೊದಲೂ, ಪ್ರಳಯದಲ್ಲಿದ್ದವನೂ ನೀನೊಬ್ಬನೇ! ಹೀಗೆ ಪ್ರಪಂಚದ ಆದ್ಯಂತಗಳೆಲ್ಲವೂ ನಿನ್ನೊಬ್ಬನ ಸ್ವರೂಪವೇ ಆಗಿರುವುದು. ನೀನು ಈ ಜಗತ್ತನ್ನು ನಿನ್ನ ಸಂಕಲ್ಪಮಾತ್ರದಿಂದಲೇ ಸೃಷ್ಟಿಸಿ, ಅವುಗಳಲ್ಲಿ ಅಂತರ್ಯಾಮಿಯಾಗಿಯೂ ಇದ್ದು, ದೇವಮನುಷ್ಯಾದಿಭೇದಗಳಿಂದ ಬೇರೆಬೇರೆಯಾಗಿ ಕಾಣುತ್ತಿರುವೆ ಆದುದರಿಂದ ತತ್ವವನ್ನು ವಿಚಾರಿಸುವಲ್ಲಿ, ಈ ಪ್ರಪಂಚವೆಲ್ಲವೂ ನೀನೊಬ್ಬನೇಹೊರತು ಬೇರೆಯಲ್ಲ. ಹೀಗೆ ನೀನೊಬ್ಬನೇ ಸಮಸ್ತಜಗತ್ತಿಗೂ ಕಾರಣನಾಗಿಯೂ, ಜಗತ್ಸ್ವರೂಪನಾಗಿಯೂ ಇರುವಾಗ, ನಿನಗೆ ಶರೀರವೆನಿಸಿದ ಬೇರೊಬ್ಬನನ್ನು ಈಶ್ವರನೆಂದು ಭಾವಿಸುವುದು ಭ್ರಾಂತಿಯಲ್ಲದೆ ಬೇರೇನು ? ದೇಹವನ್ನೇ ಆತ್ಮವೆಂದು ಭ್ರಮಿಸುವಂತೆ ಇದೂ ಅಜ್ಞಾನದಿಂದುಂಟಾದ ಭ್ರಮವು! ಚಿದಚಿದಾ

ತ್ಮಕವಾದ ಜಗತ್ತೆಲ್ಲವೂ ನೀನೇ! ನಿನ್ನ ಶರೀರರೂಪವಾಗಿರುವ ಆ ಜಗತ್ತ
ನ್ನು ನಿಯಮಿಸತಕ್ಕ ಸರ್ವೇಶ್ವರನೂ ನೀನೇ ! ಆದರ ಆ ಜೀವಪ್ರಕೃತಿಗಳಿ
ಗಿಂತಲೂ ನೀನು ಬೇರೆಯಾಗಿರುವೆ. ನಿನ್ನನ್ನು ಬಿಟ್ಟು ಕರ್ಮವಶ್ಯರಾದ ಇತರ
ಜೀವಾತ್ಮರನ್ನು ಈಶ್ವರನೆಂದು ಭಾವಿಸುವುದುಂಟೆ?

ಒಂದು ವಸ್ತುವಿನ ಉತ್ಪತ್ತಿ, ಸ್ಥಿತಿ, ನ್ನಾಶ, ಪ್ರಕಾಶಗಳಿಗೆ ಬೇರೊಂ
ದುವಸ್ತುವು ಕಾರಣವೆನಿಸಿದ್ದರೂ, ಆ ಕಾರ್ಣಸ್ವರೂಪವೆ ಕಾರ್ಯರೂಪವಾ
ಗಿ ಪರಿಣಮಿಸಬೇಕೇಹೊರತು ಬೇರೆಯಲ್ಲ ಹೇಗೆಂದರೆ, ಭೂಮಿಯಲ್ಲಿ ಹು
ಟ್ಟಿಬೆಳೆದು ಪ್ರಕಾಶಿಸುತಿದ್ದು ಕೊನೆಗೆ, ಅದರಲ್ಲಿಯೇ ಲಯಹೊಂದತಕ್ಕ
ವೃಕ್ಷಾದಿಗಳು, ಆ ಭೂಮಿಯ ಸ್ವರೂಪವೇಹೊರತು ಬೇರೆಯಲ್ಲ! ಮತ್ತು
ಹಗಲು,ರಾತ್ರಿ, ಸಂಧ್ಯೆ,ಬೆಳಗಿನಜಾವ ಮುಂತಾದ ಸೂಕ್ಷ್ಮಕಾಲಗಳೆಲ್ಲವೂ
ಮಹಾಕಾಲದಲ್ಲಿಯೇ ಅಂತರ್ಗತವಾಗಿರುವುವೇಹೊರತು,ಆ ಕಾಲಕ್ಕಿಂತಲೂ
ಬೇರೆಯಾದುವಲ್ಲ. ಆದರಂತೆಯೇ ಈ ಪ್ರಪಂಚದ ಉತ್ಪತ್ತಿಸ್ಥಿತಿನಾಶಾ
ದಿಗಳೆಲ್ಲವೂ ನಿನ್ನಿಂದಲೇ ಉಂಟಾಗುವುದರಿಂದ, ನಿನಗಿಂತಲೂ ಇದು ಬೇರೆ
ಯಾದುದಲ್ಲ. ಓ ದೇವಾ ! ಇದೋ ! ಇಲ್ಲಿ ಕಾಣುವ ಸಮಸ್ತಚರಾಚರ
ಪ್ರಪಂಚವನ್ನೂ ನೀನು ಪ್ರಳಯಕಾಲದಲ್ಲಿ ನಿನ್ನಲ್ಲಿಯೇ ಅಟಗಿಸಿಟ್ಟುಕೊಂ
ಡು, ಪ್ರಳಯಜಲದ ಮಧ್ಯದಲ್ಲಿ ನಿರುಪಾಧಿಕವಾದ ಆತ್ಮಾನಂದವನ್ನನುಭ
ವಿಸುತ್ತ, ಪಡೆಯಬೇಕಾದ ವಸ್ತುವೊಂದೂ ಇಲ್ಲದುದರಿಂದ ಸಮಸ್ತವ್ಯಾ
ಪಾರಗಳನ್ನೂ ಬಿಟ್ಟು,ಆನಂದಾತಿಶಯದಿಂದ ಕಣ್ಣುಗಳನ್ನು ಮುಚ್ಚಿ ಮಲ
ಗಿದ್ದವನು ಹೀಗೆ ಮಲಗಿದ್ದರೂ ನೀನುನಿದ್ರೆಯಿಲ್ಲದವನು.ಏಕೆಂದರೆ,ನೀನು ಎ
ಚ್ಚರ, ಕನಸು, ಸುಷುಪ್ತಿಯೆಂಬ ಮೂರವಸ್ಥೆಗಳನ್ನೂ ಅತಿಕ್ರಮಿಸಿದ
ವನು ಜಲದಮೇಲೆ ಮಲಗಿದ್ದರೂ ನಿನಗೆ ನೀನೇ ಆಧಾರವೇಹೊರತು
ನಿನಗೆ ಬೇರೆ ಆಧಾರವಿಲ್ಲ. ಆಗ ಸೂಕ್ಷ್ಮಾವಸ್ಥೆಯಿಂದ ನಿನಗೆ ಶರೀರವಾಗಿ
ರುವ ಪ್ರಕೃತಿಯಾಗಲಿ, ಅದರಲ್ಲಿರುವ ಸತ್ವಾದಿಗುಣಗಳಾಗಲಿ ನಿನ್ನನ್ನು
ಕದಲಿಸಲಾರವು. ಹೀಗೆ ಪ್ರಳಯಜಲದಲ್ಲಿ ಮಲಗಿದ್ದಾಗ ನೀನು, ನಿನ್ನ
ಅಂಶಭೂತವಾದ ಕಾಲಶಕ್ತಿಯಿಂದ ಪ್ರಕೃತಿಯ ಗುಣಗಳನ್ನು ನೀನಾಗಿಯೇ
ಕದಲಿಸಿ, ಯೋಗನಿದ್ರೆಯನ್ನು ಬಿಟ್ಟು, ಶೇಷಶಯನದಿಂದ ಮೇಲಕ್ಕೆದ್ದು,

ಸೃಷ್ಟಿಕಾರ್ಯಕ್ಕಾಗಿ ಸಂಕಲ್ಪಿಸಿದೆ ! ಒಡನೆಯೇ ನೆಲದಲ್ಲಿರುವ ತನ್ನ ಬೀಜದಿಂದ ಆಲದಮರವು ಹುಟ್ಟುವಂತೆ, ನಿನಗೆ ಶರೀರವಾಗಿ ನಿನ್ನಲ್ಲಿ ಮರೆಸಿಕೊಂಡಿದ್ದ ಸೂಕ್ಷ್ಮಪ್ರಕೃತಿಯು ನಿನ್ನ ನಾಭಿಯಿಂದ ಕಮಲರೂಪವಾಗಿ ಹೊರಟಿತು. ಜಗದ್ರೂಪವಾದ ಆ ತಾವರೆಹೂವಿನಿಂದ ಸೃಷ್ಟಿಕರ್ತನಾದ ಚತುರ್ಮುಖನು ಹುಟ್ಟಿದನು ಅವನು. ಅಲ್ಲಿ ತನಗೆ ಜನ್ಮಸ್ಥಾನವಾದ ಕಮಲವೊಂದನ್ನು ಹೊರತು ಬೇರೊಂದನ್ನೂ ಕಾಣದೆ, ಆ ತಾವರೆಹೂವಿನ ಉತ್ಪತ್ತಿಗೆ ಕಾರಣವಸ್ತುವೇನೆಂದು ಹೊರಗೆಲ್ಲವೂ ಹುಡುಕಿ, ಕೊನೆಗೆ ಜಲದಲ್ಲಿ ಪ್ರವೇಶಿಸಿ,ಬಹುದೂರದವರೆಗೆ ಹೋದರೂ ನಿನ್ನನ್ನು ಕಾಣಲಾರದೆ ಹೋದನು ಮೊಳೆಹೊರಟಮೇಲೆ ಬೀಜವು ಹೇಗೆ ಸಿಕ್ಕದೋ,ಹಾಗೆಯೇ ಜಗದ್ರೂಪವಾದ ಕಮಲಕ್ಕೂ, ಅದರಲ್ಲಿ ಹುಟ್ಟಿದ ಬ್ರಹ್ಮನಿಗೂ ಬೀಜಭೂತನಾದ ನೀನು ಅವನಿಗೆ ಗೋಚರಿಸಲಿಲ್ಲ ಹಾಗೆಯೇ ನೂರು ವರುಷಗಳನ್ನು ನೀರಿನಲ್ಲಿದ್ದು ಕಳೆದರೂ, ಬ್ರಹ್ಮನ ಪ್ರಯತ್ನವು ವಿಫಲವಾಯಿತು ಕೊನೆಗೆ ಬ್ರಹ್ಮನು, ತನ್ನ ಉತ್ಪತ್ತಿಕಾರಣವೇನೆಂಬುದನ್ನು ತಿಳಿಯಲಾರದೆ, ಆಶ್ಚರ್ಯಗೊಂಡು, ತಿರುಗಿ ತಾನಿದ್ದ ಸ್ಥಾನಕ್ಕೆ ಬಂದು, ತಾನು ಹುಟ್ಟಿದ ಕಮಲದಲ್ಲಿಯೇ ಕುಳಿತು ತೀವ್ರವಾದ ತಪಸ್ಸನ್ನು ಮಾಡಿದನು ಆ ತಪೋಬಲದಿಂದ ಶುದ್ಧಮನಸ್ಸುಳ್ಳವನಾಗಿ, ನಿನ್ನನ್ನು ತನ್ನ ಹೃದಯದಲ್ಲಿಯೇ ಕಂಡುಕೊಂಡನು ಭೂಮಿಯಲ್ಲಿ ಗಂಧವು ಹೇಗೋಹಾಗೆ ಬೇರ್ಪಡಿಸುವುದಕ್ಕಾಗದಂತೆ ತನ್ನಲ್ಲಿಯೇ ಸೇರಿ, ಅತಿಸೂಕ್ಷ್ಮಗಳಾದ ಆಕಾಶಾದಿಭೂತಗಳಿಗೂ,ಇಂದ್ರಿಯಗಳಿಗೂ,ಅಂತಃಕರಣಕ್ಕೂ ಆಶ್ರಯವಾದ ನಿನ್ನನ್ನುತನ್ನಲ್ಲಿಯೇ ಸಾಕ್ಷಾತ್ಕರಿಸಿದನು. ಸಹಸ್ರಮುಖಗಳಿಂದಲೂ, ಸಹಸ್ರಶಿರಸ್ಸುಗಳಿಂದಲೂ, ಸಾವಿರಾರು ಕೈಕಾಲುಗಳಿಂದಲೂ, ಅಸಂಖ್ಯಾತವಾದ ಕಣ್ಣು,ಕಿವಿ, ಮೂಗು ಬಾಯಿ ಮುಂತಾದ ಅವಯವಗಳಿಂದಲೂ, ಅನೇಕವಿಧಗಳಾದ ಆಭರಣಗಳಿಂದಲೂ, ಹಲವು ದಿವ್ಯಾಯುಧಗಳಿಂದಲೂ ಶೋಭಿಸುತ್ತ, ಆಯಾ ಅವಯವ ಸನ್ನಿವೇಶಗಳಲ್ಲಿ ಎಂದೆಂದಿಗೂ ವಿಕಾರವಿಲ್ಲದೆ ಬೆಳಗುತ್ತಿರುವ ಆ ನಿನ್ನ ಅದ್ಭುತಸ್ವರೂಪವನ್ನುಕಂಡು ಬ್ರಹ್ಮನು ಅತ್ಯಾನಂದಭರಿತನಾದನು ಆಗ ನೀನು ವೇದವನ್ನು ಕದ್ದುಕೊಂಡು ಹೋಗುತಿದ್ದ ರಜಸ್ತಮೋಗುಣ

ಸ್ವರೂಪರಾದ ಮಧುಕೈಟಭರೆಂಬ ಪ್ರಬಲರಾಕ್ಷಸರಿಬ್ಬರನ್ನೂ ಹಯಗ್ರೀವರೂಪದಿಂದ ಕೊಂದು, ಆ ವೇದಗಳನ್ನು ಹಿಂತಿರುಗಿ ತಂದು ಬ್ರಹ್ಮದೇವನಿಗೆ ಅನುಗ್ರಹಿಸಿದೆ. ಪುರಾತನಮಹರ್ಷಿಗಳು ಆ ಹಯಗ್ರೀವಾವತಾರವನ್ನು ನಿನಗೆ ಬಹಳಪ್ರಿಯವಾದುದೆಂದೂ, ಶುದ್ಧಸತ್ವಮಯವೆಂದೂ ಹೇಳುವರು. ಹೀಗೆ ನೀನು ನಿನ್ನ ಸ್ವೇಚ್ಛೆಯಿಂದ ಆಯಾಕಾಲಕ್ಕೆ ತಕ್ಕಂತೆ ಮನುಷ್ಯನಂತೆಯೂ, ತಿರ್ಯಕ್ಕುಗಳಂತೆಯೂ, ಋಷಿಗಳಂತೆಯೂ, ದೇವತೆಗಳಂತೆಯೂ, ಮತ್ಸ್ಯಾದಿಜಲಜಂತುಗಳಂತೆಯೂ, ಬೇರೆಬೇರೆ ಆಕಾರಗಳನ್ನು ಕೈಕೊಂಡು, ಆಯಾ ಅವತಾರಗಳಿಂದ ದುಷ್ಟರನ್ನಡಗಿಸಿ ಲೋಕವನ್ನು ಕಾಪಾಡುತ್ತಿರುವೆ. ಓ ಮಹಾಪುರುಷಾ! ಆಯಾ ಯುಗಧರ್ಮಗಳನ್ನು ಕಾಪಾಡುವನೂ ನೀನೇ! ಆದರೆ ಸಮಸ್ತಕಾಲಗಳಲ್ಲಿಯೂ ನೀನೇ ರಕ್ಷಿಸತಕ್ಕವನಾಗಿದ್ದರೂ, ಕೃತತ್ರೇತಾದ್ವಾಪರಗಳೆಂಬ ಮೂರುಯುಗಗಳಲ್ಲಿ ಮಾತ್ರ, ಈ ಲೋಕದಲ್ಲಿ ಜನರ ಕಣ್ಣಿಗೆ ಗೋಚರಿಸುವಂತೆ ಅವತಾರಗಳನ್ನೆತ್ತುತ್ತ, ಕಲಿಯುಗದಲ್ಲಿ ಯಾರ ಕಣ್ಣಿಗೂ ಕಾಣದಂತೆ ಮರೆಸಿಕೊಂಡೇ ಲೋಕರಕ್ಷಣಕಾರ್ಯವನ್ನು ನಡೆಸುವೆ. ಇದರಿಂದಲೇ ಮಹಾತ್ಮರು ನಿನ್ನನ್ನು ತ್ರಿಯುಗನೆಂದು ಕರೆಯುತ್ತಿರುವರು ಓ ವೈಕುಂಠನಾಥಾ ! ಅನೇಕದೋಷಗಳಿಗೆ ನೆಲೆಯಾಗಿ, ಸತ್ಕಾರ್ಯಗಳಲ್ಲಿ ಪ್ರವೃತ್ತಿಯನ್ನು ಬಿಟ್ಟು, ವಿಷಯಾಸಕ್ತಿಯಲ್ಲಿ ತೊಳಲುತ್ತಿರುವ ನನ್ನ ಮನಸ್ಸಾದರೋ, ಇಷ್ಟವಸ್ತುಗಳು ಸಿಕ್ಕಿದಾಗ ಸ್ವಲ್ಪಕಾಲದವರೆಗೆ ಸಂತೋಷದಿಂದುಬ್ಬುವುದು ! ಅನಿಷ್ಟಗಳು ಮೇಲೆ ಬಿದ್ದಾಗ ದುಃಖಿಸುವುದು! ಆಗಾಗ ಭಯದಿಂದ ನಡುಗುವುದು! ಹೆಂಡಿರುಮಕ್ಕಳು ಮೊದಲಾದವರ ಮೋಹದಿಂದ ಕಳವಳಿಸುವುದು! ಇಂತಹ ನನ್ನ ಮನಸ್ಸು, ನಿನ್ನ ಕಥಾಶ್ರವಣದಿಂದ ಸಾರ್ಥಕವಾಗಿ ಹೊತ್ತನ್ನು ಕಳೆಯುವುದು ಹೇಗೆ? ಹೀಗೆ ನನ್ನ ಮನಸ್ಸೇ ನನಗೆ ಪ್ರತಿಕೂಲವಾಗಿರುವಾಗ, ವಿಷಯಾಸಕ್ತಿಯಲ್ಲಿ ಬಿದ್ದು ತೊಳಲುತ್ತಿರುವ ನಾನು ನಿನ್ನ ನಿಜಸ್ಥಿತಿಯನ್ನು ಹೇಗೆತಾನೇ ತಿಳಿಯಬಲ್ಲೆನು? ಓ ಅಚ್ಯುತಾ ! ನನ್ನ ನಾಲಗೆಯು ಮಾಧುರ್ಯಾದಿರಸಗಳನ್ನು ಎಷ್ಟೆಷ್ಟುಸಾರಿ ಅನುಭವಿಸಿದರೂ, ತೃಪ್ತಿಯಿಲ್ಲದೆ ನನ್ನನ್ನು ಬಾರಿಬಾರಿಗೂ ಆಕಡೆಗೇ ಎಳೆಯುತ್ತಿರುವುದು.

ಅದರಂತೆಯೇ ಉಪಸ್ಥೇಂದ್ರಿಯವು ಮತ್ತೊಂದು ಕಡೆಗೂ, ತ್ವಗಿಂ
ದ್ರಿಯವು ಇನ್ನೊಂದು ಕಡೆಗೂ, ಹೊಟ್ಟೆಯು ಮತ್ತೊಂದುಕಡೆಗೂ,
ಕಿವಿಯು ಬೇರೊಂದು ಕಡೆಗೂ, ಮೂಗು ಇನ್ನೊಂದುಕಡೆಗೂ, ಕ
ಣ್ಣುಗಳು ಮತ್ತೊಂದು ಕಡೆಗೂ, ಕೈ ಕಾಲು ಮೊದಲಾದ ಅವಯ
ವಗಳು ಬೇರೊಂದು ಕಡೆಗೂ, ತಮತಮಗೆ ಇಷ್ಟಬಂದಂತೆ ನನ್ನನ್ನು
ಸೆಳೆಯುತ್ತಿರುವುವು. ಒಬ್ಬ ಪುರುಷನಿಗೆ ಅನೇಕಪತ್ನಿಯರಿದ್ದಾಗ, ಆ ಸವ
ತಿಯರೆಲ್ಲರೂ, ತಮ್ಮೊಳಗೆ ಒಬ್ಬರಿಗೊಬ್ಬರು ಜಗಳವಾಡುತ್ತ, ಗಂಡನನ್ನು
ತಮ್ಮತಮ್ಮ ಇಷ್ಟಾನುಸಾರವಾಗಿ ಸೆಳೆಯುವಂತೆ, ಈ ಇಂದ್ರಿಯಗಳೆಲ್ಲವೂ
ನನ್ನನ್ನು ನಾನಾಕಡೆಗೆ ಎಳೆಯುತ್ತಿರುವುವು ನಾನೊಬ್ಬನೇ ಅಲ್ಲದೆ, ನನಗೆ
ಸೇರಿದವರೆಲ್ಲರೂ ಹೀಗೆಯೇ ಕಷ್ಟದಲ್ಲಿ ಸಿಕ್ಕಿ ತಮ್ಮತಮ್ಮ ಪುಣ್ಯಪಾ
ಪಕರ್ಮಗಳಿಂದ ಸಂಸಾರವೆಂಬ ಭಯಂಕರವಾದ ವೈತರಣೀನದಿಯಲ್ಲಿ ಬಿ
ದ್ದು, ಜನನಮರಣಗಳ ನಿಮಿತ್ತವಾಗಿಯೂ, ಹೊಟ್ಟೆಯ ಪಾಡಿಗಾಗಿಯೂ,
ನಾನಾವಿಧದುಃಖಗಳನ್ನೂ, ಭಯವನ್ನೂ ಅನುಭವಿಸುತ್ತಿರುವರು, ಸ್ವಜನದ
ಲ್ಲಿ ಮೋಹದಿಂದಲೂ, ಶತ್ರುಗಳಲ್ಲಿ ದ್ವೇಷದಿಂದಲೂ ಕುದಿಯುತ್ತಿರುವರು
ಇಷ್ಟು ಕಷ್ಟಗಳನ್ನನುಭವಿಸಿದರೂ ವಿವೇಕವಿಲ್ಲದೆ, ಮೇಲೆಮೇಲೆ ಅಂತಹ
ಕಷ್ಟಗಳನ್ನೊದಗಿಸಿಕೊಳ್ಳುವುದಕ್ಕಾಗಿಯೇ ಇನ್ನೂ ಕಷ್ಟಪಡುವರು ಓ
ದೇವಾ! ಹೀಗೆ ಮಹಾವಿಪತ್ತಿನಲ್ಲಿ ಸಿಕ್ಕಿಬಿದ್ದವರನ್ನು ನೋಡಿಯೂ ನೀನು
ಉದಾಸೀನನಾಗಿರುವುದು ಯುಕ್ತವೆ? ಈ ನಮ್ಮೆಲ್ಲರನ್ನೂ ಸಂಸಾರ
ದಿಂದದಾಟಿಸಿ ರಕ್ಷಿಸು! ಸಮಸ್ತಲೋಕಗಳಿಗೂ ಹಿತವನ್ನುಪದೇಶಿಸತಕ್ಕಗು
ರುವಾಗಿಯೂ ಷಡ್ಗುಣಪರಿಪೂರ್ಣನಾಗಿಯೂ ಇರುವ ನಿನಗೆ ನಮ್ಮಂತಹ
ಆಶ್ರಿತರನ್ನು ಸಂಸಾರದಿಂದ ಬಿಡಿಸುವುದೇನೂ ದೊಡ್ಡಕಾರ್ಯವಲ್ಲ! ಪ್ರಪಂ
ಚದ ಸೃಷ್ಟಿಸ್ಥಿತಿಸಂಹಾರಗಳೆಲ್ಲವನ್ನೂ ಲೀಲಾಮಾತ್ರದಿಂದಲೇ ನಡೆಸಬ
ಲ್ಲ ನಿನಗೆ, ಈ ಅಲ್ಪಕಾರ್ಯವೇನಸಾಧ್ಯವು? ಅದರೆ, ನನ್ನ ಮನಸ್ಸುಮಾತ್ರ ನಿನ್ನ
ಗುಣವರ್ಣನವೆಂಬ ಅಮೃತಸಮುದ್ರದಲ್ಲಿ ಮುಳುಗಿರುವುದರಿಂದ, ನನ್ನ ವಿಷ
ಯವಾಗಿ ನನಗೇನೂ ಚಿಂತೆಯಿಲ್ಲ ಇಷ್ಟುಮಾತ್ರವೂ ಭಾಗ್ಯವನ್ನು ಪಡೆ
ಯದೆ, ನಿನ್ನಲ್ಲಿ ವಿಮುಖರಾಗಿ, ಇಂದ್ರಿಯಸುಖವನ್ನಪೇಕ್ಷಿಸಿ, ಅದಕ್ಕಾಗಿ ಸಂ

ಸಾರವೆಂಬ ಮಹಾಭಾರವನ್ನು ತಲೆಯಮೇಲೇರಿಸಿಕೊಂಡು ಮೂಢರಾಗಿರುವ ನನ್ನ ಕಡೆಯವರಿಗಾಗಿಯೇ ನಾನು ದುಃಖಿಸುತ್ತಿರುವೆನು. ದೇವಾ! ಹೀಗೆ ಏನೂ ತಿಳಿಯದ ಮೂಢರನ್ನನುಗ್ರಹಿಸುವುದೇ ಮಹಾತ್ಮರ ಸ್ವಭಾವವು. ಆದುದರಿಂದ ಮೂಢಜನರು, ಅಜ್ಞಾನದಿಂದ ನಿನ್ನಲ್ಲಿ ವಿಮುಖರಾಗಿದ್ದರೂ, ನೀನಾಗಿಯೇ ಅವರನ್ನು ಅನುಗ್ರಹಿಸಿ ರಕ್ಷಿಸಬೇಕು ತಮಗಾಗಿ ಮುಕ್ತಿಯನ್ನಪೇಕ್ಷಿಸಿ, ಜನಸಂಚಾರವಿಲ್ಲದ ಕಾಡಿಗೆ ಹೋಗಿ, ಅಲ್ಲಿ ನಿನ್ನ ದಿವ್ಯಮಂಗಳವಿಗ್ರಹವನ್ನು ಧ್ಯಾನಮಾಡುತ್ತಿರುವ ಯೋಗಿಗಳೂ ಕೂಡ ಪ್ರಾಯಕವಾಗಿ ಸ್ವಾರ್ಥಪರರಾಗಿರುವರೇಹೊರತು, ಇತರರ ಪ್ರಯೋಜನದಲ್ಲಿ ದೃಷ್ಟಿಯಿಟ್ಟವರಲ್ಲ ಆದುದರಿಂದ ಈ ನನ್ನ ಕಡೆಯವರಿಗೆ ಅಂತಹ ಮಹರ್ಷಿಗಳನ್ನಾಶ್ರಯಿಸುವುದರಿಂದಾಗಲಿ, ಇಲ್ಲವೇ ನನ್ನಂತೆ ನಿನ್ನಗುಣಗಳನ್ನು ಕೀರ್ತಿಸುವುದರಿಂದಾಗಲಿ ಸಂಸಾರವನ್ನು ದಾಟುವುದಕ್ಕವಕಾಶವಿಲ್ಲ! ಹೀಗೆ ಅನಾಥರಾಗಿರುವ ಈ ಬಂಧುಮಿತ್ರರೆಲ್ಲರನ್ನೂ ಬಿಟ್ಟು ನಾನೊಬ್ಬನುಮಾತ್ರ ಸಂಸಾರದಿಂದ ಮುಕ್ತನಾಗಿ ಮೋಕ್ಷವನ್ನು ಹೊಂದುವುದು ನನಗೆ ಸಮ್ಮತವಿಲ್ಲ. ಆದುದರಿಂದ ದಯಾಳುವಾದ ನೀನು ಇವರನ್ನು ನೀನಾಗಿಯೇ ಅನುಗ್ರಹಿಸಿ ಉದ್ಧರಿಸಬೇಕು, ಸಂಸಾರದಲ್ಲಿ ಸಿಕ್ಕಿ ನರಳುವ ಪ್ರಾಣಿಗೆ, ನಿನ್ನನ್ನು ಬಿಟ್ಟು ಬೇರೆ ಯಾವನೂ ರಕ್ಷಕನಿರುನಂತೆ ನನಗೆ ತೋರಲಿಲ್ಲ. ಹೇ ಪ್ರಭೂ! ಸ್ತ್ರೀಸಂಭೋಗವೇ ವೊದಲಾದ ಈ ಕುಟುಂಬಸುಖವೆಲ್ಲವೂ ಕೇವಲತುಚ್ಛವಾದುದು ತುರಿಗಜ್ಜಿಯ ನವೆಯನ್ನಾರಿಸಿಕೊಳ್ಳುವುದಕ್ಕಾಗಿ,ಕೈಗಳನ್ನು ಬಲವಾಗಿ ತಿಕ್ಕುವುದರಿಂದ, ತತ್ಕಾಲಕ್ಕೆ ಅತ್ಯಲ್ಪವಾದ ಸುಖವು ತೋರಿದರೂ,ಕೊನೆಗೆ ಉರಿಯನ್ನು ತಡೆಯಲಾರದೆ ಸಂಕಟಪಡುವಂತೆ, ಈ ಅಲ್ಪಸುಖಕ್ಕಾಗಿ ಮಾಡತಕ್ಕ ಕಾರ್ಯವೂ ಮೇಲೆಮೇಲೆ ದುಃಖವನ್ನೇ ಹೆಚ್ಚಿಸುವುದು. ಈ ವಿಷಯಸುಖದ ಲ್ಲಿ ಅತ್ಯಾಸೆಯುಳ್ಳವರು ಅದಕ್ಕಾಗಿ ಅನೇಕಕಷ್ಟಗಳನ್ನನುಭವಿಸುತಿದ್ದರೂ,ಅವರಿಗೆ ಈ ಸಂಸಾರಸುಖದಲ್ಲಿ ತೃಪ್ತಿಯೆಂಬುದೇ ಉಂಟಾಗುವುದಿಲ್ಲ. ಆದರೆ, ಕ್ಕೆಲವರುಮಾತ್ರ ಕಜ್ಜಿಹಿಡಿದ ಕೈಯನ್ನು ಕೆರೆಯುವುದರಿಂದ ಮತ್ತಷ್ಟು ಕೇಡಾಗುವುದೆಂದು ತಿಳಿದು, ಆ ನವೆಯನ್ನೂ ಸಹಿಸಿಕೊಂಡು, ಸು

ಮ್ಮ ಸಿರುವುದುಂಟು, ಅದರಂತೆಯೇ ಇಂದ್ರಿಯಗಳನ್ನು ಜಯಿಸಬಲ್ಲ ಕೆಲವು ಯೋಗಿಗಳು,ಶಬ್ದಾದಿವಿಷಯಗಳಲ್ಲಿರುವ ಕೇಡನ್ನು ತಿಳಿದು,ಅದಕ್ಕಾಗಿ ಆಸೆಪ ಡದೆ,ಕಾಮವನ್ನು ನಿಗ್ರಹಿಸುವರು ಆದರೆ ಇದು ಎಲ್ಲರಿಗೂ ಸಾಧ್ಯವಾದಕಾ ರ್ಯವಲ್ಲ. ಓ ಪರಮಪುರುಷಾ! ಮಾತಾಡದೆ ಮೌನದಿಂದಿರುವುದು, ಉ ಪವಾಸಾದಿವ್ರತಗಳನ್ನು ನಡೆಸುವುದು, ವೇದಶಾಸ್ತ್ರಗಳನ್ನೋದುವುದು, ತಪ ಸ್ಸನ್ನು ಮಾಡುವುದು, ವೇದಾರ್ಥಗಳನ್ನು ಬೋಧಿಸುವುದು, ಸ್ವಧರ್ಮಗಳ ನ್ನು ಅನುಷ್ಠಿಸುವುದು, ಇತರರಿಗೂ ಶಾಸ್ತ್ರಾರ್ಥಗಳನ್ನು ಬೋಧಿಸುವುದು, ಜನಸಂಚಾರವಿಲ್ಲದ ಏಕಾಂತಸ್ಥಳದಲ್ಲಿ ಸೇರುವುದು, ಮಂತ್ರಗಳನ್ನು ಜಪಿ ಸುವುದು, ಧ್ಯಾನಮಾಡುವುದು, ಇವೆಲ್ಲವೂ ಮೋಕ್ಷಸಾಧಕಗಳೆಂಬುದೇನೋ ನಿಜವಾಗಿರಬಹುದು ಹಾಗಿದ್ದರೂ ಇಂದ್ರಿಯಗಳನ್ನು ಚೆನ್ನಾಗಿ ಜಯಿಸ ಬಲ್ಲವನಿಗೆಹೊರತು ಮತ್ತವರಿಗೆ ಇವೊಂದೂ ಕೆಲಸಕ್ಕೆ ಬಾರವು. ನಿನ್ನ ಅನುಗ್ರಹವಿಲ್ಲದೆ ಆ ಇಂದ್ರಿಯಗಳನ್ನು ಜಯಿಸುವುದೂ ಸಾಧ್ಯವಲ್ಲ ಹಾಗೆ ಇಂದ್ರಿಯಗಳನ್ನು ಜಯಿಸಲಾರದವನಿಗೆ, ಇವೆಲ್ಲವೂ ಕೇವಲಜೀವನೋ ಪಾಯಕ್ಕೆ ಮಾರ್ಗಗಳಾಗುವುವು ಕೇವಲಡಂಭಕ್ಕಾಗಿ ಈ ಕೆಲಸವನ್ನು ಮಾ ಡತಕ್ಕವರಿಗಾದರೋ, ಇವು ಜೀವನೋಪಾಯಕ್ಕೂ ಉಪಯೋಗಿಸಲಾರ ವು ಹೀಗಿರುವಾಗ ಡಾಂಭಿಕರಿಗೆ ಇವೆಲ್ಲವೂ ಹೇಗೆ ಮೋಕ್ಷಸಾಧಕಗಳಾ ಗುವುವು ?

ದೇವಾ ! ಚೇತನಾಚೇತನಾತ್ಮಕವಾದ ಈ ಪ್ರಪಂಚವೆಲ್ಲವೂ ಬೀಜದಂತೆಯೂ, ಮೊಳಕೆಯಂತೆಯೂ, ಒಮ್ಮೊಮ್ಮೆ ಕಾರಣಾವಸ್ಥೆ ಯನ್ನೂ, ಮತ್ತೊಮ್ಮೆ ಕಾರ್ಯಾವಸ್ಥೆಯನ್ನೂ ಹೊಂದುತ್ತಿರುವುವು ಇವೆರಡೂ ನಿನ್ನ ಶರೀರಗಳೆಂದೂ, ಈ ಶರೀರವು.ನಿನಗೆ ಕರ್ಮಾಧೀನವಾಗಿ ಬಂದುವಲ್ಲವೆಂದೂ ವೇದಗಳಿಂದ ತಿಳಿದುಬರುವುದು. ಇದರಿಂದ ನಿನ್ನನ್ನು ಬಿಟ್ಟ ಬೇರೆವಸ್ತುವೊಂದೂ ಇಲ್ಲವು ಕಟ್ಟಿಗೆಗಳನ್ನು ಜ್ಜಿ,ಅದರಿಂದ ಬೆಂಕಿಯ ನ್ನು ಹುಟ್ಟಿಸುವಂತೆ, ನಿನ್ನನ್ನು ಉಪಾಸನೆಮಾಡತಕ್ಕ ಯೋಗಿಗಳು,ಚೇತ ನಾಚೇತನಾತ್ಮಕಗಳಾದ ಈ ನಿನ್ನ ಶರೀರಗಳಿಂದ ನಿನ್ನನ್ನು ಪ್ರತ್ಯೇಕಿಸಿಕಂ ಡುಕೊಳ್ಳುವರು ಹಾಗೆ ನಿನ್ನನ್ನು ಕಂಡುಕೊಳ್ಳುವುದಕ್ಕೂ ನಿನ್ನ ಉಪಾಸನ

ಬಲವಲ್ಲದೆ ಬೇರೆ ಉಪಾಯವಿಲ್ಲ. ಮತ್ತು ಭೂಮಿ ಮೊದಲಾದ ಪಂಚಭೂತಗಳು, ಪಂಚತನ್ಮಾತ್ರಗಳು, ಇಂದ್ರಿಯಗಳು, ಜ್ಞಾನೋದಯಕ್ಕೆ ಕಾರಣವಾದ ಮನಸ್ಸು, ಬುದ್ಧಿ, ಇವೆಲ್ಲವೂ ನಿನ್ನ ಸ್ವರೂಪವೇ! ಹೆಚ್ಚೇಕೆ? ಸತ್ವಾದಿಗುಣಗಳಿಂದಕೂಡಿ,ಪ್ರಕೃತಿಯಪರಿಣಾಮಗಳೆನಿಸಿಕೊಂಡಸಮಸ್ತಪದಾರ್ಥಗಳೂ,ಈ ಸತ್ವಾದಿಗುಣಗಳಸಂಬಂಧವಿಲ್ಲದ ಜೀವವರ್ಗವೂ ನೀನೇ! ಮನಸ್ಸಿಗೂ ವಾಕ್ಕಿಗೂ ವಿಷಯವಾಗತಕ್ಕ ಎಲ್ಲಾ ವಸ್ತುಗಳೂ ನೀನೇ! ಇದಲ್ಲದೆ ಆ ಸತ್ವಾದಿಗುಣಗಳಾಗಲಿ, ಆ ಗುಣಗಳಿಂದ ಕಲೆತು ಪ್ರಕೃತಿಯ ಪರಿಣಾಮಗಳೆನಿಸಿಕೊಂಡ ಮಹತ್ತು, ಅಹಂಕಾರ, ಮೊದಲಾದ ತತ್ವಗಳಾಗಲಿ, ಆಕಾಶಾದಿಭೂತಗಳಾಗಲಿ, ಮನಸ್ಸು ಮೊದಲಾದ ಇಂದ್ರಿಯಗಳೊಡಗೂಡಿದ ದೇವಮನುಷ್ಯಾದಿಗಳಾಗಲಿ, ನೀನು ಸರ್ವಾಂತರ್ಯಾಮಿಯಾಗಿದ್ದರೂ ನಿನ್ನನ್ನರಿಯಲಾರವು. ಏಕೆಂದರೆ, ಇವೆಲ್ಲವೂ ಕರ್ಮಾಧೀನವಾಗಿ ಹುಟ್ಟಿಸಾಯತಕ್ಕವುಗಳು. ಆ ಕರ್ಮವಶದಿಂದ ಅವುಗಳ ಜ್ಞಾನವೂ ತಗ್ಗುವುದು. ನಿನ್ನ ಕೀರ್ತಿಯೋ ಅಪಾರವಾದುದು. ಧ್ಯಾನನಿಷ್ಠರಾದ ಮಹರ್ಷಿಗಳುಮಾತ್ರ ಭಕ್ತಿಯೋಗದಿಂದ ಕರ್ಮಬಂಧವನ್ನು ನೀಗಿ, ಅದರಿಂದ ಜ್ಞಾನವಿಕಾಸವನ್ನು ಹೊಂದಿ, ಸರ್ವಾಂತರ್ಯಾಮಿಯಾದ ನಿನ್ನ ಸ್ವರೂಪವನ್ನು ತಿಳಿದುಕೊಂಡು, ಶಬ್ದಾದಿವಿಷಯಗಳಲ್ಲಿ ವಿಮುಖರಾಗುವರು ಓ ಮಹಾತ್ಮಾ! ನಿನ್ನನ್ನು ನಮಸ್ಕರಿಸುವುದು- ನಿನ್ನ ಗುಣಗಳನ್ನು ಸ್ತುತಿಸುವುದು, ನಿನ್ನನ್ನು ಪೂಜಿಸುವುದು, ನಿನ್ನ ಪಾದಸೇವೆ ನಿನ್ನನ್ನು ಧ್ಯಾನಿಸುವುದು, ನಿನ್ನ ಕಥೆಗಳನ್ನು ಕೇಳುವುದು, ಈ ಆರುಬಗೆಯ ಅಂಗಗಳೊಡಗೂಡಿದ ನಿನ್ನ ಸೇವೆಯಿಂದಹೊರತು, ಬೇರೆ ಯಾವವಿಧದಿಂದಲೂ ಮನುಷ್ಯನಿಗೆ ಭಕ್ತಿಯೋಗವುಕೈಗೂಡಲಾರದು ಪರಮಹಂಸರೂಕೂಡ,ಈವಿಧವಾದ ಸೇವೆಯಿಂದಲೇ ನಿನ್ನಲ್ಲಿಭಕ್ತಿಯನ್ನು ಸಂಪಾದಿಸಿ, ಅದರಿಂದ ನಿನ್ನ ಸಾನ್ನಿಧ್ಯವನ್ನು ಸೇರುವರು" ಎಂದನು ಧರ್ಮರಾಜಾ ಕೇಳು! ಆಗ ನೃಸಿಂಹಮೂರ್ತಿಗೆ,ಪರಮಭಕ್ತನಾದ ಪ್ರಹ್ಲಾದನ ಬಾಯಿಂದ ಹೊರಟ ಈಸ್ತುತಿವಾಕ್ಯಗಳನ್ನು ಕೇಳಿದೊಡನೆ,ಕೋಪವೆಲ್ಲವೂ ಶಾಂತವಾಯಿತು.ವಿನಯದಿಂದ ಕೈಮುಗಿದು ನಿಂತಿದ್ದ ಆ ಪ್ರಹ್ಲಾದನನ್ನು ಕುರಿತು “ವತ್ಸ ಪ್ರಹ್ಲಾ

ಹಾ! ನಿನಗೆ ಮಂಗಳವಾಗಲಿ! ನಿನ್ನ ಭಕ್ತಿಗಾಗಿ ಮೆಚ್ಚಿದೆನು! ಬೇಕಾದ ವರವನ್ನು ಕೇಳು! ನೀನು ಕೋರಿದುದನ್ನು ಕೊಡುವುದಕ್ಕೆ ಸಿದ್ಧನಾಗಿರುವೆನು ಎಲೈ ಆಯುಷ್ಮಂತನೆ; ನಾನು ದರ್ಶನವನ್ನು ಕೊಟ್ಟಮೇಲೆ ಯಾವ ಪ್ರಾಣಿಗಾದರೂ ತನ್ನ ಇಷ್ಟಾರ್ಥವು ಕೈಗೂಡಲಿಲ್ಲವೆಂಬ ಪರಿತಾಪಕ್ಕೆ ಎಳ್ಳಷ್ಟಾದರೂ ಅವಕಾಶವಿಲ್ಲ ಈ ಕಾರಣದಿಂದಲೇ ವಿವೇಕಿಗಳಾದ ಸಾಧುಗಳು, ತಮ್ಮ ಕ್ಷೇಮಕ್ಕಾಗಿ ಸರ್ವಾರ್ಥಪ್ರದನಾದ ನನ್ನನ್ನು ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ಪೂಜಿಸಿ ಸಂತೋಷಗೊಳಿಸುವರು ನನ್ನನ್ನು ಸಂತೋಷಪಡಿಸಲಾರದವರಿಗೆ ನನ್ನ ದರ್ಶನವೂಕೂಡ ಲಭಿಸಲಾರದು"ಎಂದನು ಹೀಗೆ ಭಗವಂತನು, ಎಂತವರಿಗಾದರೂ ಆಸೆಹುಟ್ಟಿಸತಕ್ಕ ಸರ್ವೋತ್ತಮಗಳಾದ ವರಗಳನ್ನು ಕೊಡುವುದಾಗಿ ಹೇಳಿ,ಆಸೆ ತೋರಿಸುತಿದ್ದರೂ, ಪ್ರಹ್ಲಾದನು ಭಕ್ತಿಯೋಗದಲ್ಲಿಹೊರತು ಬೇರೊಂದರಲ್ಲಿಯೂ ಆಸೆಯಿಲ್ಲದವನಾಗಿ ಆ ವರಗಳೊಂದನ್ನೂ ಅಪೇಕ್ಷಿಸದಿದ್ದನು, ಇಲ್ಲಿಗೆ ಒಂಭತ್ತನೆಯ ಅಧ್ಯಾಯವು.

---

**{ ಭಗವಂತನು ಪ್ರಹ್ಲಾದನನ್ನು ಅನುಗ್ರಹಿಸಿ, ಅಂತರ್ಧಾನಹೊಂದಿದುದು ತ್ರಿಪುರಸಂಹಾರದ ಕಥೆ }**

ಧರ್ಮರಾಜಾ ಕೇಳು ! ಪ್ರಹ್ಲಾದನು ಕೇವಲಬಾಲನಾಗಿದ್ದರೂ, ಭಗವಂತನು ತನಗೆ ಕೊಡುವುದಾಗಿ ಹೇಳಿದ ವರಗಳೆಲ್ಲವೂ ಭಕ್ತಿಮಾರ್ಗಕ್ಕೆ ವಿರೋಧಿಗಳೆಂದು ತಿಳಿದು, ತನ್ನನ್ನು ಮರುಳುಗೊಳಿಸತಕ್ಕ ಆ ಭಗವಂತನ ಮಾತುಗಳಿಗಾಗಿ ನಗುತ್ತ ಹೀಗೆಂದು ಹೇಳುವನು. "ನಾಥಾ ! ವಿಷಯಾಭಿಲಾಷೆಯೆಂಬುದು ನಮ್ಮಂತವರಿಗೆ ಜನ್ಮಸಿದ್ಧವಾಗಿಯೇ ಬಂದಿರುವುದು ಹೀಗಿರುವಾಗ ನೀನೂ ನಮಗೆ, ಅಂತಹ ವಿಷಯಗಳಲ್ಲಿಯೇ ಆಸೆಯನ್ನು ತೋರಿಸಿ ವಂಚಿಸುವುದು ಯುಕ್ತವೆ? ಅದರಿಂದುಂಟಾಗುವ ಅನರ್ಥಗಳನ್ನು ತಿಳಿದೇ ನಾನು ಅವುಗಳಲ್ಲಿ ಆಸೆಯನ್ನು ತೊರೆದು, ಸಂಸಾರವಿಮೋಚನವನ್ನಪೇಕ್ಷಿಸಿ, ನಿನ್ನಲ್ಲಿ ಮರೆಹೊಕ್ಕೆನು ಆದರೆ,ಪ್ರಯೋಜನಾಂತರಗಳಲ್ಲಿ ಅಪೇಕ್ಷೆಯಿಲ್ಲದ ಭಕ್ತಿಲಕ್ಷಣವು ನನ್ನಲ್ಲಿರುವುದೋ ಇಲ್ಲವೋ

ಎಂಬುದನ್ನು ನನ್ನ ಬಾಯಿಂದ ಕೇಳಿ ತಿಳಿದುಕೊಳ್ಳುವುದಕ್ಕಾಗಿಯೇ ನೀನು ಹೀಗೆ ಆಸೆತೋರಿಸುವಂತಿದೆ! ಸಂಸಾರವೆಂಬ ವೃಕ್ಷಕ್ಕೆ ಬೀಜಗಳಂತೆಯೂ, ಬಿಡಿಸುವುದಕ್ಕಾಗದ ಮನಸ್ಸಿನ ಗಂಟುಗಳಂತೆಯೂ ಇರುವ ಕಾಮೋಪಭೋಗಗಳಿಗಾಗಿ ನೀನು ನನ್ನನ್ನು ಪ್ರೇರಿಸುತ್ತಿರುವುದು ನನ್ನ ಮನಸ್ಸನ್ನು ಪರೀಕ್ಷಿಸುವುದಕ್ಕಲ್ಲದೆ ಬೇರೆಯಲ್ಲ! ಹಾಗಿಲ್ಲದಪಕ್ಷದಲ್ಲಿ, ಕಾರುಣ್ಯಮೂರ್ತಿಯಾಗಿಯೂ, ಸಮಸ್ತಲೋಕಗಳಿಗೂ ಹಿತೋಪದೇಶಕನಾಗಿಯೂ ಇರುವ ನೀನು, ಅನರ್ಥಹೇತುಗಳಾದ ಈ ಕಾಮೋಪಭೋಗಗಳಿಗಾಗಿ ನನ್ನನ್ನು ಪ್ರೇರಿಸುವುದೆಂದರೇನು? ಅಜ್ಞಾನವೆಂಬ ಮಹಾಂಧಕಾರದಿಂದ ತುಂಬಿದ ಸಂಸಾರವೆಂಬ ಹಾಳುಬಾವಿಯಲ್ಲಿ ಬಿದ್ದು ಕಣ್ಣುಕಾಣದೆ, ಆತ್ಮಪರಮಾತ್ಮತತ್ವವನ್ನೂ ತಿಳಿಯದೆ ನರಳುತ್ತಿರುವ ಜೀವಾತ್ಮನನ್ನು, ಆ ನರಕದಿಂದ ಕರೆಯೇರಿಸಿ ಕಾಪಾಡುವುದಕ್ಕೆ ನೀನೊಬ್ಬನಲ್ಲದೆ ಬೇರೆ ಸಮರ್ಥರಿಲ್ಲ ನಿನ್ನಿಂದ ಪ್ರತಿಫಲವನ್ನಪೇಕ್ಷಿಸಿ ನಿನ್ನನ್ನಾಶ್ರಯಿಸುವವನು, ಒಂದುಪದಾರ್ಥವನ್ನು ಕೊಟ್ಟು ಅದಕ್ಕಾಗಿ ಬೆಲೆಯನ್ನು ತೆಗೆದುಕೊಳ್ಳುವ ವ್ಯಾಪಾರಿಯೇಹೊರತು ನಿನ್ನ ಭಕ್ತನಲ್ಲ ತನ್ನ ಪ್ರಭುವಿನಿಂದ ಪ್ರತಿಫಲವನ್ನಪೇಕ್ಷಿಸಿಯೇ ಸೇವೆಮಾಡತಕ್ಕವನು ಉತ್ತಮ ಭೃತ್ಯನಾಗಲಾರನು. ಅದರಂತೆಯೇ ತಾನು ಉಪಚಾರಮಾಡಿಸಿಕೊಳ್ಳುವುದಕ್ಕಾಗಿಯೇ ಭೃತ್ಯನ ಕೋರಿಕೆಗಳನ್ನೀಡೇರಿಸತಕ್ಕವನು ಪ್ರಭುವೆನಿಸಿಕೊಳ್ಳಲಾರನು, ಸ್ವಪ್ರಯೋಜನದಲ್ಲಿ ದೃಷ್ಟಿಯಿಡದೆ, ತಮ್ಮೊಳಗೆ ಅನ್ಯೋನ್ಯಾನುರಾಗವನ್ನು ಹೆಚ್ಚಿಸತಕ್ಕ ಗುಣಗಳನ್ನು ನೋಡಿ, ಅದಕ್ಕಾಗಿಯೇ ಒಬ್ಬರನ್ನೊಬ್ಬರು ಅನುವರ್ತಿಸತಕ್ಕವರೇ ನಿಜವಾಗಿ ಸ್ವಾಮಿಭೃತ್ಯರೆನಿಸುವರು. ಲೋಕದಲ್ಲಿ ಇಂತವರು ಕೇವಲ ವಿರಳರಾಗಿದ್ದರೂ, ನಮ್ಮಿಬ್ಬರಿಗೂ ಫಲಾಪೇಕ್ಷೆಯಿಲ್ಲದ ಸ್ವಾಮಿಭೃತ್ಯಭಾವಸಂಬಂಧವೇ. ಏರ್ಪಟ್ಟಿರುವುದು. ನಮ್ಮಿಬ್ಬರಿಗೂ ಈ ಸಂಬಂಧವು ಅನಾದಿಯಾಗಿ ಸಹಜವಾಗಿಯೇ ಬಂದಿರುವುದೇ ಹೊರತು ಈಗ ಹೊಸದಾಗಿ ಬಂದುದಲ್ಲ ಈ ನಮ್ಮಿಬ್ಬರ ಸಂಬಂಧವು ರಾಜನಿಗೂ ಭೃತ್ಯನಿಗೂ ಇರುವ ಸಂಬಂಧದಹಾಗಲ್ಲ ಇದರ ರೀತಿಯೇ ಬೇರೆ! ಏಕೆಂದರೆ. ರಾಜನು ತನ್ನ ಉಪಚಾರಕ್ಕಾಗಿ ಭೃತ್ಯನನ್ನು ಪೋಷಿಸು

ತ್ತಿರುವನು. ಭೃತ್ಯನು ಜೀವನೋಪಾಯಕ್ಕಾಗಿ ರಾಜನನ್ನಾಶ್ರಯಿಸಿ ಅವನ ಸೇವೆಮಾಡುವನು ನಮ್ಮಿಬ್ಬರಿಗಿರುವ ಸಂಬಂಧದಲ್ಲಿ ಆ ವಿಧವಾದ ಪ್ರಯೋಜನಾಪೇಕ್ಷೆಯೇನೂ ಇರುವುದಿಲ್ಲ ಸ್ವತಃ ಪೂರ್ಣಕಾಮನಾದ ನಿನಗೆ ನನ್ನಿಂದ ನಡೆಯಬೇಕಾದ ಕೆಲಸವೇನಿದೆ? ನಾನೂ ಫಲಾಪೇಕ್ಷೆಯಿಂದ ನಿನ್ನನ್ನು ಸೇವಿಸತಕ್ಕವನಲ್ಲ! ಇವೆಲ್ಲವೂ ಸರ್ವಜ್ಞನಾದ ನಿನಗೆ ತಿಳಿಯದ ವಿಷಯಗಳಲ್ಲ. ಆದರೆ ಈಗ ನೀನಾಗಿ ನನ್ನನ್ನು ಪ್ರೋತ್ಸಾಹಿಸುವುದರಿಂದ,ನಾನು ಪ್ರಾರ್ಥಿಸಬೇಕಾದುದೊಂದುಂಟು ನೀನು ನನಗೆ ಇಷ್ಟವರಗಳನ್ನು ಕೊಡುವ ಉದ್ದೇಶವುಳ್ಳವನಾಗಿದ್ದಪಕ್ಷದಲ್ಲಿ, ನನ್ನ ಮನಸ್ಸಿನಲ್ಲಿ ಯಾವ ಕೋರಿಕೆಯೂ ಹುಟ್ಟದಂತೆ ಅನುಗ್ರಹಿಸು. ಇದೇ ಈಗ ನಾನು ನಿನ್ನಲ್ಲಿ ಪ್ರಾರ್ಥಿಸತಕ್ಕ ವರವು ಕಾಮಾಪೇಕ್ಷೆಯುಳ್ಳ ಜೀವನು, ಅದಕ್ಕಾಗಿ ಅನೇಕಪುಣ್ಯಪಾಪಕರ್ಮಗಳನ್ನುನಡೆಸಿ, ಮೇಲೆಮೇಲೆ ಹಲವು ಜನ್ಮಗಳನ್ನೆತ್ತುವನು. ಹೀಗೆ ಮೇಲೆಮೇಲೆ ಜನ್ಮಗಳನ್ನೆತ್ತುವುದರಿಂದ ಅವನ ಇಂದ್ರಿಯಗಳು, ಮನಸ್ಸು, ಪ್ರಾಣಗಳು, ವರ್ಣಾಶ್ರಮಧರ್ಮಗಳು, ಇಂದ್ರಿಯಜಯ, ಆತ್ಮ ಪರಮಾತ್ಮವಿಷಯಕವಾದ ಬುದ್ಧಿ, ಅಕೃತ್ಯಗಳಲ್ಲಿ ನಾಚಿಕೆ, ಜ್ಞಾನಸಂಪತ್ತು, ತೇಜಸ್ಸು, ಸ್ಮರಣಶಕ್ತಿ, ಸತ್ಯ, ಇವೇ ಮೊದಲಾದ ಗುಣಗಳೆಲ್ಲವೂ ಕ್ರಮಕ್ರಮವಾಗಿ ನಶಿಸಿ, ಕೊನೆಗೆ ಸ್ಥಾವರಜನ್ಮವನ್ನೂ ಹೊಂದುವನು. ಮನುಷ್ಯನು ಮನಸ್ಸಿನಲ್ಲಿರುವ ಕಾಮಾಪೇಕ್ಷೆಗಳೆಲ್ಲವನ್ನೂ ಯಾವಾಗ ತೊರೆದುಬಿಡುವನೋ, ಆಗಮಾತ್ರವೇ ಷಾಡ್ಗುಣ್ಯಪರಿಪೂರ್ಣನಾದ ನಿನ್ನ ಸಾಯುಜ್ಯವನ್ನುಪಡೆಯುವನು ಓ ದೇವಾ! ನೀನು ಜ್ಞಾನಾದಿಷಡ್ಗುಣಪರಿಪೂರ್ಣನು! ಪರಮಪುರುಷನು! ಸಮಸ್ತ ಪ್ರಾಣಿಗಳಿಗೂ ಅಂತರಾತ್ಮನು!ಆಶ್ರಿತರ ದುಃಖವನ್ನು ನೀಗಿಸುವುದೇ ನಿನ್ನ ಸ್ವಭಾವವು ಅದ್ಭುತವಾದ ಈ ಸಿಂಹಸ್ವರೂಪದಿಂದ ನೀನು ನನಗೆ ಗೋಚರಿಸಿದುದರಿಂದಲೇ ನಿನ್ನ ಭಕ್ತವಾತ್ಸಲ್ಯವು ಹೊರಪಡುವುದು. ನೀನು ಅಪ್ರಮೇಯಸ್ವರೂಪಸ್ವಭಾವಗಳುಳ್ಳವನಾದುದರಿಂದಲೇ ಬ್ರಹ್ಮನೆಂದು ಕರೆಯಲ್ಪಡುವೆ ನೀನು ಮೂರುಲೋಕಗಳನ್ನೂ ಅಂತರ್ಯಾಮಿಯಾಗಿ ಧರಿಸಿರತಕ್ಕವನು ಪ್ರಣವಶಬ್ದವಾಚ್ಯನೂ ನೀನೇ! ಇಂತಹ ನಿನಗೆ ನಮಸ್ಕಾರವು.

ವಿರಕ್ತಿಯನ್ನು ಹೊರತು ಬೇರೆ ಯಾವ ವರಗಳನ್ನೂ ನಿನ್ನಲ್ಲಿ ನಾನು ಅಪೇಕ್ಷಿಸತಕ್ಕವನಲ್ಲ” ಎಂದನು.

ಆಗ ಭಗವಂತನು ಪ್ರಹ್ಲಾದನನ್ನು ಕುರಿತು“ವತ್ಸಾ! ನಿನ್ನಂತೆ ನನ್ನಲ್ಲಿ ವಿಶೇಷಭಕ್ತಿಯುಳ್ಳ ಪುರುಷರು, ಇಹಲೋಕ ಸುಖಗಳನ್ನಾಗಲಿ.ಪರಲೋಕ ಸುಖಗಳನ್ನಾಗಲಿ ಬಯಸದಿರುವುದೇನೋ ಸಹಜವೇ! ಹಾಗಿದ್ದರೂ ನೀನು ಈ ಮನ್ವಂತರವು ತೀರುವವರೆಗೆ,ನನ್ನ ಆಜ್ಞೆಯಿಂದ, ಈ ಲೋಕದಲ್ಲಿಯೇ ದೈತ್ಯಕುಲಕ್ಕೆ ಪ್ರಭುವಾಗಿ, ಸಾಮ್ರಾಜ್ಯಭೋಗಗಳನ್ನನುಭವಿಸುತ್ತಿರು ಈ ಕಾಲವೆಲ್ಲಾ ನೀನು ನನ್ನ ಕಥೆಗಳನ್ನೇ ಅನುಸಂಧಾನಮಾಡುತ್ತ, ನನ್ನಲ್ಲಿ ನಟ್ಟಮನಸ್ಸುಳ್ಳವನಾಗಿರು! ಆದರಿಂದ ಸಂಸಾರಬಂಧವು ತಾನಾಗಿಯೇ ಬಿಟ್ಟುಹೋಗುವುದು. ಸರ್ವಾಂತರಾತ್ಮನಾಗಿಯೂ, ಯಜ್ಞಪತಿಯಾಗಿಯೂ, ಸರ್ವೇಶ್ವರನಾಗಿಯೂ ಇರುವ ನನ್ನನ್ನು ಸೇರುವುದಕ್ಕೆ, ಅಡ್ಡಿಯಾಗಿರುವ ನಿನ್ನ ಪುಣ್ಯಪಾಪಕರ್ಮಗಳೆಲ್ಲವನ್ನೂ ನೀನು ಅನುಭವಿಸಿಯೇ ತೀರಿಸಬೇಕು. ಮೋಕ್ಷದಲ್ಲಿ ಉದ್ದೇಶವುಳ್ಳವನಿಗೂಕೂಡ, ತನ್ನ ಪ್ರಾಕ್ಕೃತಕರ್ಮಗಳಿಗೆ ಫಲವಾಗಿ, ಸುಖದುಃಖಗಳನ್ನು ಅನುಭವಿಸಿಕಳೆದಲ್ಲದೆ ಅವನ ಉದ್ದೇಶವು ಕೈಗೂಡದು. ಆದುದರಿಂದ ನೀನಾಗಿ ಅಪೇಕ್ಷಿಸದಿದ್ದರೂ ನಿನ್ನನ್ನು, ನಾನು ಕಾಮೋಪಭೋಗಗಳಿಗಾಗಿ ಪ್ರೇರಿಸಬೇಕಾಗಿರುವುದು ಸುಖಾನುಭವದಿಂದ ಪುಣ್ಯಕರ್ಮಗಳನ್ನು ಕಳೆಯುವಂತೆ, ಪಾಪಗಳಿಗೆ ಫಲವಾದ ದುಃಖಾನುಭವಗಳನ್ನೂ, ಮನಸ್ಸಿನಲ್ಲಿ ವಿಕಾರವಿಲ್ಲದೆ ತಾಳ್ಮೆಯಿಂದಲೇ ಅನುಭವಿಸಿ ಕಳೆಯಬೇಕು, ಈವಿಧವಾಗಿ ನೀನು, ನಿನ್ನ ಆಯುಃಕಾಲವನ್ನು ಕಳೆದು, ಕಾಲಕ್ರಮದಿಂದ ಈ ಶರೀರವನ್ನು ನೀಗಿ, ದೇವಲೋಕದಲ್ಲಿಯೂ ಕೀರ್ತಿಸಲ್ಪಡುವ ಮಹಾಯಶಸ್ಸಿಗೆ ಭಾಗಿಯಾಗು ! ಹೀಗೆ ಸಂಸಾರಬಂಧವನ್ನು ನೀಗಿ, ನನ್ನ ಸಾನ್ನಿಧ್ಯವನ್ನು ಸೇರು ! ವತ್ಸಾ ! ಈಗ ನೀನು ನನ್ನ ವಿಷಯವಾಗಿ ಹೇಳಿದ ಈ ಸ್ತುತಿವಾಕ್ಯಗಳನ್ನು ಲೋಕದಲ್ಲಿ ಯಾರುಯಾರು ಭಕ್ತಿಯಿಂದ ಕೀರ್ತಿಸುವರೋ, ಅವರೆಲ್ಲರೂ ನಿನ್ನಂತೆಯೇ ಕಾಲಕ್ರಮದಿಂದ ಕರ್ಮಬಂಧವನ್ನು ನೀಗಿ ದೇಹಾವಸಾನದಲ್ಲಿ ನನ್ನ ಸಾನ್ನಿಧ್ಯವನ್ನು ಸೇರಲಿ” ಎಂದನು. ಆಗ ಪ್ರಹ್ಲಾದನು ಭಗವಂತನನ್ನುಕುರಿತು,

“ಓ ಸರ್ವೇಶ್ವರಾ! ಹಾಗಿದ್ದರೆ, ವರಪ್ರದನಾಗಿ ಬಂದ ನಿನ್ನಲ್ಲಿ, ಈಗ ನಾನು ಅವಶ್ಯವಾಗಿ ವರವನ್ನು ಕೇಳಬೇಕಾದರೆ,ಇದೊಂದನ್ನುಮಾತ್ರಅನುಗ್ರಹಿಸು! ಈ ನನ್ನ ತಂದೆಯು ಸರ್ವೇಶ್ವರನಾದ ನಿನ್ನ ಮಹಾಮಹಿಮೆಯನ್ನು ತಿಳಿಯದೆ, ಅಜ್ಞಾನದಿಂದ, ನಿನ್ನನ್ನು ಭ್ರಾತೃದ್ರೋಹಿಯೆಂದು ದುರಭಿಪ್ರಾಯಪಟ್ಟು, ನಿನ್ನಲ್ಲಿ ಬಹಳವಾದ ವೈರವನ್ನು ಬೆಳೆಸಿಬಿಟ್ಟನು ಇದಲ್ಲದೆ ಸಮಸ್ತಲೋಕಕ್ಕೂ ಹಿತೋಪದೇಶಕನಾಗಿಯೂ, ಸರ್ವೇಶ್ವರನಾಗಿಯೂ ಇರುವ ನಿನ್ನನ್ನು ಬಹಳವಾಗಿ ನಿಂದಿಸಿರುವನು; ಮತ್ತು ನಿನ್ನ ಭಕ್ತನಾದ ನನಗೂ ಅನೇಕವಿಧದಲ್ಲಿ ದ್ರೋಹವನ್ನೆಣಿಸಿದನು ಹೀಗೆ ನಿನಗೂ, ನಿನ್ನ ಭಕ್ತನಾದ ನನಗೂ ದ್ರೋಹವನ್ನೆಣಿಸುತಿದ್ದ ಈ ನನ್ನ ತಂದೆಯು, ಆ ಪಾಪಗಳಿಂದ ಮುಕ್ತನಾಗುವಂತೆ ಅನುಗ್ರಹಿಸಬೇಕು ಇದೇ ಈಗ ನಾನು ನಿನ್ನಲ್ಲಿ ಪ್ರಾರ್ಥಿಸತಕ್ಕ ವರವು. ದೇವಾ! ಆದರೆ ನಿನ್ನ ದೃಷ್ಟಿಗೆ ಬಿದ್ದಾಗಲೇ, ನನ್ನ ತಂದೆಯು ಆ ಮಹಾಪಾತಕಗಳಿಂದ ಮುಕ್ತನಾಗಿರುವುದರಲ್ಲಿ ಸಂದೇಹವಿಲ್ಲ. ಆದರೂ ಪಿತೃಸ್ನೇಹದಿಂದ ಮತ್ತೊಮ್ಮೆ ನಾನಾಗಿ ನಿನ್ನಲ್ಲಿ ಪ್ರಾರ್ಥಿಸುವೆನು” ಎಂದನು ಅದಕ್ಕಾ ಭಗವಂತನು “ವತ್ಸಾ ಕೇಳು! ನಿನ್ನ ತಂದೆಯುಮಾತ್ರವೇ ಅಲ್ಲ, ಪರಮಸಾಧುವಾಗಿಯೂ, ಭಕ್ತಾಗ್ರಣಿಯಾಗಿಯೂ ಇರುವ ನೀನು ಹುಟ್ಟಿದಾಗಲೇ, ನಿನಗೆ ಹಿಂದಿನ ಮತ್ತು ಮುಂದಿನ ಹತ್ತು ತಲೆಮರೆಗಳವರೆಗೂ ನಿನ್ನ ಕುಲದ ಪಿತೃಗಳೆಲ್ಲರೂ ಪಾವನರಾಗಿರುವರು. ಹೆಚ್ಚೇಕೆ? ನಿನ್ನಿಂದ ದೈತ್ಯಕುಲವೇ ಪವಿತ್ರವಾಯಿತೆಂದು ತಿಳಿ! ಜಗತ್ತೆಲ್ಲವೂ ಪರಮಾತ್ಮಸ್ವರೂಪವೆಂಬ ಭಾವದಿಂದ, ಎಲ್ಲವನ್ನೂ ಸಮಬುದ್ಧಿಯಿಂದ ನೋಡತಕ್ಕವರಾಗಿಯೂ, ಜಿತೇಂದ್ರಿಯರಾಗಿಯೂ, ಸೌಶೀಲ್ಯಾದಿಗುಣಗಳುಳ್ಳವರಾಗಿಯೂ, ಪರೋಪಕಾರಿಗಳಾಗಿಯೂ ಇರುವ ನನ್ನ ಭಕ್ತರು, ಯಾವಯಾವ ಸ್ಥಳದಲ್ಲಿರುವರೋ ಆ ಪ್ರದೇಶಗಳು ! ಮ್ಲೇಚ್ಛದೇಶಗಳಾದರೂ ಪಾವನವೆಂದೇ ತಿಳಿಯಬೇಕು. ಓ ಬ್ರಹ್ಮಲಾತಾ! ಲೋಕದಲ್ಲಿ ನನ್ನಭಕ್ತರೆಂದು ಹೇಳಿಸಿಕೊಳ್ಳತಕ್ಕವರೆಲ್ಲರೂ ಆಶೆಪಟ್ಟು ನಿನ್ನ ನಡತೆಯನ್ನೇ ಅನುಸರಿಸಬೇಕು ಆದುದರಿಂದ ಭಗವದ್ಭಕ್ತರಿಗೆ ನೀನೇ ಮೊದಲನೆಯ ನಿದರ್ಶನನಾಗಿರುವೆ! ನನ್ನ ಭಕ್ತರೆಲ್ಲರೂ ನಿನ್ನ ನಡತೆಯನ್ನನುಸರಿಸಿಯೇ ದೇವತೆಗಳು,

ಮನುಷ್ಯರು ಮೊದಲಾದ ಉತ್ತಮವರ್ಗದ ಮತ್ತು ನೀಚವರ್ಗದ ಪ್ರಾಣಿ ಗಳೆಲ್ಲವನ್ನೂ, ನನ್ನ ಸ್ವರೂಪದಿಂದಲೇ ಭಾವಿಸುತ್ತ, ಮನೋವಾಕ್ಕಾಯಗ ಳೆಂಬ ತ್ರಿಕರಣಗಳಿಂದಲೂ ಯಾವಪ್ರಾಣಿಗೂ ಹಿಂಸೆಯನ್ನು ಮಾಡದೆ ಹಿತವನ್ನೇ ಕೋರುತ್ತಿರಬೇಕು. ಎಲ್ಲವನ್ನೂ ನನ್ನ ಶರೀರವೆಂದೇಭಾವಿಸಿ ಮನ್ನಿಸಬೇಕು. ನನ್ನಲ್ಲಿ ಭಕ್ತಿಯೊಂದನ್ನುಹೊರತು ಬೇರೊಂದನ್ನೂ ಬಯಸಬಾರದು ಇವೆಲ್ಲಕ್ಕೂ ನೀನೇ ಮೇಲುಪಜ್ತಿಯು ! ಅದು ಹಾಗಿರಲಿ! ವತ್ಸಾ! ಇನ್ನು ನೀನು ನಿನ್ನ ತಂದೆಗೆ ಪ್ರೇತಕಾರ್ಯಗಳನ್ನಾರಂಭಿಸು ! ನಿ ನ್ನನ್ನು ಪುತ್ರನನ್ನಾಗಿ ಪಡೆದುದರಿಂದಲೂ, ನನ್ನ ಶರೀರಸ್ಪರ್ಶದಿಂದಲೂ, ನಿನ್ನ ತಂದೆಯು ಪುಣ್ಯಲೋಕಗಳನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ನೀನು ಕೆಲವುಕಾಲದವರೆಗೆ ನಿನ್ನತಂದೆಯ ಸಿಂಹಾಸನದಲ್ಲಿ ಕುಳಿತು, ವೇದ ವಿದರಾದ ಮಹರ್ಷಿಗಳ ನಿಯಮಾನುಸಾರವಾಗಿ ರಾಜ್ಯವನ್ನು ನಡೆಸುತ್ತ, ನನ್ನಲ್ಲಿಯೇ ನಟ್ಟಮನಸ್ಸುಳ್ಳವನಾಗಿ, ನಿನ್ನ ಸಮಸ್ತಕರ್ಮಗಳಿಗೂ ನನ್ನನ್ನೇ ಫಲವನ್ನಾಗಿ ಭಾವಿಸಿ, ನನ್ನ ಆರಾಧನವನ್ನು ನಡೆಸುತ್ತಿರು" ಎಂದನು.

ಓ ಧರ್ಮರಾಜಾ! ಹೀಗೆ ಭಗವಂತನು ಆಜ್ಞಾಪಿಸಿದೊಡನೆ, ಪ್ರಹ್ಲಾ ದನು, ಅದರಂತೆಯೇ ತನ್ನ ತಂದೆಗೆ ದೇಹಸಂಸ್ಕಾರವನ್ನು ನಡೆಸಿದನು. ಅಲ್ಲಿದ್ದ ಬ್ರಾಹ್ಮಣಶ್ರೇಷ್ಠರೆಲ್ಲರೂ ಅವನಿಗೆ ರಾಜ್ಯಾಭಿಷೇಕವನ್ನು ನಡೆಸಿ ದರು. ಆಮೇಲೆ ಇತ್ತಲಾಗಿ ಬ್ರಹ್ಮದೇವನು, ಸಮಸ್ತದೇವತೆಗಳೊಡಗೂಡಿ ಶಾಂತಮೂರ್ತಿಯಾದ ಶ್ರೀನೃಸಿಂಹನನ್ನು ಶುದ್ಧವಾಕ್ಯಗಳಿಂದ ಸ್ತುತಿಸಿ, ಹೀಗೆಂದು ವಿಜ್ಞಾಪಿಸುವನು.

“ಓ ದೇವದೇವಾ! ನೀನು ಸರ್ವೇಶ್ವರನು ! ಸಮಸ್ತಲೋಕವನ್ನೂ ಸೃಷ್ಟಿಸತಕ್ಕವನು ನಮ್ಮೆಲ್ಲರಿಗೂ ನೀನೇ ಆದಿಪುರುಷನು. ಲೋಕಕಂಟಕ ನಾಗಿಯೂ, ಮಹಾಪಾಪಿಷ್ಠನಾಗಿಯೂ ಇರುವ ಈ ರಾಕ್ಷಸನು, ನಮ್ಮೆ ಲ್ಲರ ಭಾಗ್ಯೋದಯದಿಂದ ಈಗ ಸಂಹೃತನಾದನು. ಇವನಿಂದುಂಟಾದ ಅನರ್ಥಗಳೆಲ್ಲಕ್ಕೂ ನಾನೇ ಮೂಲವೆನಿಸಿಕೊಂಡೆನು. ನನ್ನಿಂದ ಸೃಷ್ಟಿ ಸಲ್ಪಟ್ಟ ಯಾವ ಭೂತಗಳಿಂದಲೂ ಮರಣವಿಲ್ಲದಂತೆ ನಾನೇ ಇವ ನಿಗೆ ವರವನ್ನು ಕೊಟ್ಟುಬಿಟ್ಟೆನು. ಆ ವರಬಲದಿಂದಲೂ, ತನ್ನ ತಪಸ್ಸಿನಿಂ

ದಲೂ, ಕೊಬ್ಬಿದ ಈ ನೀಚನು, ಶಾಸ್ತ್ರೋಕ್ತಗಳಾದ ವರ್ಣಾಶ್ರಮಧರ್ಮ ಗಳೆಲ್ಲವನ್ನೂ ಹಾಳುಮಾಡುತಿದ್ದನು. ಈಗ ದೈವಾಧೀನದಿಂದ ಇವನು ನಿನ್ನ ಕೈಗೆ ಸಿಕ್ಕಿ ಹತನಾದನು. ಪರಮಸಾಧುವಾಗಿಯೂ, ಮಹಾಭಾಗವ ತೋತ್ತಮನಾಗಿಯೂ ಇರುವ, ಅವನ ಮಗನಾದ ಈ ಬಾಲಕನೂಕೂಡ, ದೈವಾಧೀನವಾಗಿ ನಿನ್ನ ಕೃಪೆಗೆ ಪಾತ್ರನಾಗಿ ಬದುಕಿಕೊಂಡನು. ಈತನು ಉಗ್ರಕೋಪದಿಂದ ಜ್ವಲಿಸುತಿದ್ದ ನಿನ್ನನ್ನು ಸಮೀಪಿಸಿ, ನಿನ್ನ ಕೋಪ ಶಾಂತಿಯನ್ನು ಮಾಡಿದುದೂ ದೈವಕೃಪೆಯಿಲ್ಲದೆ ಬೇರೆಯಲ್ಲ ಓ ಭಗವಂತಾ! ಈ ನಿನ್ನ ನೃಸಿಂಹಸ್ವರೂಪವು ಸ್ಮರಣಮಾತ್ರದಿಂದಲೇ ಮನುಷ್ಯನಿಗೆ ಸಮಸ್ತಭಯಗಳನ್ನೂ ನೀಗಿಸಿ ರಕ್ಷಿಸುವುದು! ಹೆಚ್ಚೇಕೆ? ನಿನ್ನ ಈ ರೂಪ ವನ್ನು ಧ್ಯಾನಮಾಡತಕ್ಕ ಮನುಷ್ಯನಿಗೆ ಸಾಕ್ಷಾತ್ತಾಗಿ ಮೃತ್ಯುವಿನಿಂದಲೂ ಭಯವಿಲ್ಲವು ಇದಕ್ಕೆ ಈ ಬ್ರಹ್ಮಲಾತನೇ ಪ್ರತ್ಯಕ್ಷನಿದರ್ಶನವು" ಎಂದನು. ಆಗ ಭಗವಂತನು ಬ್ರಹ್ಮನನ್ನು ಕುರಿತು "ವತ್ಸ ಚತುರ್ಮುಖಾ! ನೀನು, ಕ್ರೂರಸ್ವಭಾವವುಳ್ಳ ದೈತ್ಯರ ತಪಸ್ಸಿಗೂ, ಮುಖಸ್ತುತಿಗೂ ಮರುಳಾಗಿ ಈವಿಧವಾದ ವರಗಳನ್ನು ಕೊಡಬಾರದು! ಹಾವಿಗೆ ಹಾಲೆರೆದಷ್ಟೂ ಅದರ ವಿಷವನ್ನು ಹೆಚ್ಚಿಸುವಂತೆ, ದುಷ್ಟರಾದ ದೈತ್ಯರಿಗೆ ಇಷ್ಟವರಗಳನ್ನು ಕೊಟ್ಟು ಪ್ರೋತ್ಸಾಹಿಸುವುದರಿಂದ, ಲೋಕೋಪದ್ರವಕ್ಕೆ ಅವಕಾಶವನ್ನು ಹೆಚ್ಚಿಸಿದಂತಾಗುವುದು. ಆದುದರಿಂದ ನೀನು ಇನ್ನುಮೇಲೆ ಈವಿಚಾರದಲ್ಲಿ ಬಹಳ ಎಚ್ಚರದಿಂದಿರಬೇಕು" ಎಂದನು.

ಓ ಧರ್ಮರಾಜಾ! ಭಗವಂತನು ಬ್ರಹ್ಮದೇವನಿಗೆ ಹೀಗೆಂದು ಹೇಳಿ, ಅವನಿಂದ ಸತ್ಕೃತನಾಗಿ, ಸಮಸ್ತಭೂತಗಳೂ ನೋಡುತ್ತಿರುವಹಾಗೆಯೇ ಅಂತರ್ಧಾನವನ್ನು ಹೊಂದಿದನು. ಆಮೇಲೆ ಇತ್ತಲಾಗಿ ಪ್ರಹ್ಲಾದನು, ಬ್ರಹ್ಮರುದ್ರರನ್ನೂ, ಮರೀಚಿ ಮೊದಲಾದ ಪ್ರಜಾಧಿಪತಿಗಳನ್ನೂ, ಭಗವದಂಶಭೂತರೆಂಬ ಗೌರವಭಾವದಿಂದ ಪೂಜಿಸಿ ಅವರೆಲ್ಲರಿಗೂ ತಲೆಬಗ್ಗಿ ನಮಸ್ಕರಿಸಿದನು. ಆಮೇಲೆ ಬ್ರಹ್ಮಾದಿದೇವತೆಗಳೆಲ್ಲರೂ ಮಹರ್ಷಿಗ ಳೊಡಗೂಡಿ ಬಂದು, ಪ್ರಹ್ಲಾದನನ್ನು ದೈತ್ಯ ದಾನವಕುಲಕ್ಕೆಲ್ಲಾ ರಾಜನನ್ನಾಗಿ ಮಾಡಿದರು. ದೇವತೆಗಳೆಲ್ಲರೂ ಪ್ರಹ್ಲಾದನನ್ನು ಅನೇಕವಿಧ

ದಿಂದ ಸ್ತುತಿಸಿ, ಅವನಿಗೆ ಆಶೀರ್ವಾದಗಳನ್ನು ಮಾಡಿ, ಅವನಿಂದ ಸತ್ಕೃತ ರಾಗಿ, ತಮ್ಮ ತಮ್ಮ ಸ್ಥಾನಗಳಿಗೆ ಹೋಗಿಸೇರಿದರು. ಓ ಧರ್ಮರಾಜಾ! ಹೀಗೆ ವೈಕುಂಠದ್ವಾರಪಾಲಕರಾದ ಜಯವಿಜಯರಿಬ್ಬರೂ, ಸನಕಾದಿ ಮಹರ್ಷಿಗಳ ಶಾಪದಿಂದ ದೈತ್ಯರಾಗಿ ಹುಟ್ಟಿ, ವಿಷ್ಣುದ್ವೇಷಿಗಳೆನಿಸಿಕೊಂ ಡಿದ್ದರೂ, ಹುಟ್ಟಿದುದು ಮೊದಲು ಆ ದ್ವೇಷಬುದ್ಧಿಯಿಂದಲೇ ಭಗ ವಂತನನ್ನು ಎಡೆಬಿಡದೆ ಮನಸ್ಸಿನಲ್ಲಿ ಸ್ಮರಿಸುತಿದ್ದರಲ್ಲವೆ?" ಹೀಗೆ ಅವರ ಹೃದಯದಲ್ಲಿ ನಿತ್ಯವಾಸವನ್ನುಮಾಡುತಿದ್ದ ಭಗವಂತನೇ, ಕೊನೆಗೆ ಭಕ್ತ ರನ್ನು ಕಾಪಾಡಬೇಕೆಂಬ ನೆವದಿಂದ ನೃಸಿಂಹರೂಪವನ್ನು ತಾಳಿ ಬಂದು, ಅವರಿಗೆ ರಾಕ್ಷಸಜನ್ಮವಿಮೋಚನವನ್ನು ಮಾಡಿದನು ಆದರೆ ಮಹರ್ಷಿಗಳ ಶಾಪದಂತೆ ಜಯವಿಜಯರು, ಇನ್ನೂ ಹೀಗೆಯೇ ಮತ್ತೆರಡುಜನ್ಮಗಳನ್ನು ಕಳೆಯಬೇಕಾಗಿದ್ದುದರಿಂದ, ಆ ಹಿರಣ್ಯಾಕ್ಷ ಹಿರಣ್ಯಕಶಿಪುಗಳೇ ತಿರುಗಿ ರಾ ವಣಕುಂಭಕರ್ಣರಾಗಿ ಹುಟ್ಟಿದ್ದರು. ಅವರಿಬ್ಬರೂ ಶ್ರೀರಾಮನನ್ನು ದ್ವೇಷಿಸಿ ಅವನ ಬಾಣಗಳಿಂದ ಎದೆಸೀಳಿ ಬಿದ್ದು, ಇದರ ಹಿಂದಿನ ಜನ್ಮದಲ್ಲಿ ಹೇಗೋ ಹಾಗೆಯೇ ಸಾಯುವಾಗಲೂ ಆ ರಾಮನನ್ನೇ ಧ್ಯಾನಿಸುತ್ತ, ದೇಹ ತ್ಯಾಗವನ್ನು ಮಾಡಿದರು ಅವರೇ ತಿರುಗಿ ಶಿಶುಪಾಲದಂತವಕ್ತ್ರರಾಗಿ ಹುಟ್ಟಿ ಶ್ರೀಕೃಷ್ಣನಲ್ಲಿ ದ್ವೇಷವನ್ನು ಬೆಳೆಸಿದರು. ಓ ಧರ್ಮರಾಜಾ! ನಿನ್ನ ರಾಜಸೂಯಯಾಗಕಾಲದಲ್ಲಿ ನಾವೆಲ್ಲರೂ ನೋಡುತಿದ್ದಹಾಗೆಯೇ ಅವ ರಿಬ್ಬರೂ ಶ್ರೀಕೃಷ್ಣನಿಂದ ಸಂಹೃತರಾಗಿ ಸಾಯುಜ್ಯವನ್ನು ಹೊಂದಿದ ರಲ್ಲವೆ? ಇವರಿಬ್ಬರುಮಾತ್ರವೇ ಅಲ್ಲದೆ, ಹೀಗೆಯೇ ಕೃಷ್ಣದ್ವೇಷಿಗ ಳಾದ ಇನ್ನೂ ಅನೇಕರಾಜರು, ಆ ದ್ವೇಷಬುದ್ಧಿಯಿಂದ ಅವನನ್ನೇ ಎಡೆ ಬಿಡದೆ ಮನಸ್ಸಿನಲ್ಲಿ ಭಾವಿಸುತಿದ್ದು, ಅದರಿಂದ ತಮ್ಮ ಪ್ರಾರಬ್ಧಪಾಪ ವನ್ನು ಕಳೆದು ಸಾಯುಜ್ಯವನ್ನೂ ಹೊಂದಿರುವರು ಕಣಜದ ಹುಳುವಿನ ಕೈಗೆ ಸಿಕ್ಕಿಬಿದ್ದ ಕೀಟಗಳು, ತಮಗೆ ವೈರಿಯಾದ ಆ ಹುಳುವಿನ ಭಯ ದಿಂದ ಅದನ್ನೇ ಎಡೆಬಿಡದೆ ಧ್ಯಾನಿಸುತಿದ್ದು, ಆ ಭಾವನೆಯಿಂದ ಕೊನೆಗೆ ಆ ಕಣಜದ ರೂಪವನ್ನೇ ಹೊಂದುವಂತೆ, ಇವರೆಲ್ಲರೂ ದ್ವೇಷಬುದ್ಧಿಯಿಂ ದಲೇ ಭಗವಂತನನ್ನು ಸ್ಮರಿಸಿ, ಅದರಿಂದ ವಿಷ್ಣುಸಾರೂಪ್ಯವನ್ನು ಹೊಂದಿ

ರುವರು- ಹೀಗೆ ಶಿಶುಪಾಲಾದಿರಾಜರು,ದೃಢದ್ವೇಷದಿಂದ ಆಭಗವಂತನನ್ನೇ ಚಿಂತಿಸುತಿದ್ದು ಅನನ್ಯಪ್ರಯೋಜನವಾದ ಭಕ್ತಿಯಿಂದ ಹೇಗೋಹಾಗೆ ಅದರಿಂದ ಸಾಯುಜ್ಯವನ್ನು ಹೊಂದಿರುವರು ಆದುದರಿಂದ ಭಗವಂತನು ತನ್ನನ್ನು ದ್ವೇಷದಿಂದಾಗಲಿ, ಕಾಮದಿಂದಾಗಲಿ, ಭಕ್ತಿಯಿಂದಾಗಲಿ, ಯಾವುದಾದರೂ ಒಂದುವಿಧದಿಂದ ಸ್ಮರಿಸತಕ್ಕವರಿಗೆ, ತನ್ನ ಸಾಯುಜ್ಯವನ್ನು ಕೊಡುವನು. ಓ ಧರ್ಮರಾಜಾ ! ದ್ವೇಷಬುದ್ಧಿಯುಳ್ಳ ಶಿಶುಪಾಲಾದಿಗಳಿಗೆ ಭಗವತ್ಸಾರೂಪ್ಯವು ಹೇಗೆ ಕೈಗೂಡಿತೆಂದು ನೀನು ಕೇಳಿದುದಕ್ಕಾಗಿ ನಿನಗೆ ಹೇಳಬೇಕಾದ ವಿಷಯಗಳನ್ನು ಹೇಳಿದೆನು ಬ್ರಾಹ್ಮಣಕುಲಕ್ಕೆ ಪ್ರಿಯನಾಗಿಯೂ, ದೇವದೇವನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, !ಸರ್ವಾಧಾರನಾಗಿಯೂ ಇರುವ ಮಹಾವಿಷ್ಣುವಿನ ಈ ಅವತಾರಚರಿತ್ರೆಯು ಅತ್ಯಂತಪುಣ್ಯಕರವಾದುದು. ಇದರಲ್ಲಿ ಆದಿದೈತ್ಯರಾದ ಹಿರಣ್ಯಾಕ್ಷ, ಹಿರಣ್ಯಕಶಿಪುಗಳ ವಧವೂ, ಭಾಗವತೋತ್ತಮನಾದ ಪ್ರಹ್ಲಾದನ ನಡತೆಗಳೂ, ಆತನಲ್ಲಿದ್ದ ಭಕ್ತಿಜ್ಞಾನವೈರಾಗ್ಯಗಳೂ ಹೊರಪಡುವುವು. ಭಗವಂತನ ಗುಣಗಳೂ, ಚರಿತ್ರೆಗಳೂ, ವ್ಯಕ್ತವಾಗುವುವು ಮತ್ತು ಇದರಿಂದ ಸತ್ವಾದಿಗುಣಗಳ ಸ್ವರೂಪವೂ, ಕರ್ಮಗಳಸ್ವರೂಪವೂ, ಉತ್ತಮ ಮಧ್ಯಮಾಧಮಗಳೆನಿಸಿಕೊಂಡ ದೇವಾಸುರರಸ್ಥಾನಗಳಿಗೆಕಾಲಗತಿಯಿಂದುಂಟಾಗತಕ್ಕ ವ್ಯತ್ಯಾಸವೂ ವರ್ಣಿಸಲ್ಪಟ್ಟಿರುವುವು, ಮತ್ತು ಈ ಉಪಾಖ್ಯಾನದಲ್ಲಿ, ಭಗವತ್ಪ್ರಾಪ್ತಿಗೆಕಾರಣಗಳಾದಭಾಗವತಧರ್ಮಗಳೂ, ಆತ್ಮವಿಚಾರವೂ ವಿವರಿಸಲ್ಪಟ್ಟಿರುವುವು. ಹೀಗೆ ಭಗವಂತನ ವೀರ್ಯಾದಿಗುಣಗಳನ್ನು ವಿವರಿಸತಕ್ಕ ಈ ಪುಣ್ಯಚರಿತ್ರವನ್ನು, ಯಾವನು ಶ್ರದ್ಧೆಯಿಂದ ಕೇಳಿ ಕೊಂಡಾಡುತ್ತಿರುವನೋ, ಅವನು ಕಾಮಪಾಶದಿಂದ ಬಿಡಲ್ಪಡುವನು ಓ ಧರ್ಮ ರಾಜಾ ! ಯಾವನು ಆದಿಪುರುಷನಾದ ಭಗವಂತನ ಈ ನೃಸಿಂಹಾವತಾರದ ಲೀಲೆಗಳನ್ನೂ, ಹಿರಣ್ಯಾಕ್ಷ ಹಿರಣ್ಯಕಶಿಪುಗಳ ವಧವನ್ನೂ, ಸಜ್ಜನಶಿರೋಮಣಿಯಾದ.ಪ್ರಹ್ಲಾದನ ಮಹಿಮೆಯನ್ನೂ, ಶ್ರದ್ಧೆಯಿಂದ ಪಠಿಸುವನೋ, ಅವನು ಎಂದೆಂದಿಗೂ ಭಯವಿಲ್ಲದ ಮೋಕ್ಷವನ್ನು ಹೊಂದುವನು. ಧರ್ಮರಾಜಾ! ಈ ಮನುಷ್ಯಲೋಕದಲ್ಲಿ ನೀವೇ

ಮಹಾಭಾಗ್ಯಶಾಲಿಗಳು ! ಸಾಕ್ಷಾತ್ ಪರಬ್ರಹ್ಮನೇ ಶ್ರೀಕೃಷ್ಣರೂಪದಿಂದ ಮನುಷ್ಯಾವತಾರವನ್ನೆತ್ತಿ ನಿಮ್ಮ ಮನೆಗಳಲ್ಲಿ ರಹಸ್ಯವಾಗಿ ಸಂಚರಿಸುತ್ತಿರುವುದರಿಂದ, ನಿಮ್ಮ ಭಾಗ್ಯವನ್ನು ನೋಡಿ ಮಹರ್ಷಿಗಳೂ ಕೂಡ ನಿಮ್ಮಲ್ಲಿಗೆ ಹುಡುಕಿಕೊಂಡು ಬರುತ್ತಿರುವರು ರಾಜೇಂದ್ರಾ! ಆ ಶ್ರೀಕೃಷ್ಣನು ನಿನ್ನ ಮಾವನ ಮಗನಾಗಿ ಹುಟ್ಟಿದಮಾತ್ರಕ್ಕೆ,ಅವನನ್ನು ಸಾಧಾರಣಬಂಧುವೆಂದೆಣಿಸಬೇಡ! ಆತನೇ ಪರಬ್ರಹ್ಮನು! ಆತನೇ ಸರ್ವಲೋಕಪ್ರಿಯನು ! ಆತನೇ ಕೇವಲ ಜ್ಞಾನಾನಂದಸ್ವರೂಪನು!ಆತನೇಪರಮಪೂಜ್ಯನು! ನಿಮ್ಮ ಭಾಗ್ಯೋದಯದಿಂದ ಆ ಪರಮಪುರುಷನೇ ಈಗ ನಿಮಗೆ ಹೇಳಿದ ಕೆಲಸವನ್ನು ಮಾಡತಕ್ಕ ಭೃತ್ಯನಾಗಿಯೂ, ಆಗಾಗ ಹಿತೋಪದೇಶಮಾಡತಕ್ಕ ಗುರುವಾಗಿಯೂ ಇರುವನು. ಹೀಗೆ ಪರಮಪುರುಷನೊಡನೆ ಹಲವುವಿಧದಸಂಬಂಧವುಳ್ಳ ನಿಮ್ಮ ಭಾಗ್ಯಕ್ಕಿಂತಲೂ ಮೇಲಾದ ಭಾಗ್ಯವುಂಟೆ? ಆತನ ಮಹಿಮೆಯನ್ನು ಬ್ರಹ್ಮರುದ್ರಾದಿಗಳೂ ತಿಳಿಯಲಾರರು. ಬ್ರಹ್ಮಾದಿಗಳೆಲ್ಲರೂ, ಧ್ಯಾನದಿಂದಲೂ ಭಕ್ತಿಯಿಂದಲೂ,ಇಂದ್ರಿಯಜಯದಿಂದಲೂ,ಯಾವನನ್ನು ಆರಾಧಿಸುತ್ತಿರುವರೋ, ಯೋಗೀಶ್ವರರಿಗೆ ಪ್ರಭುವಾದ ಆ ಭಗವಂತನು. ನಮ್ಮಲ್ಲಿ ಅನುಗ್ರಹವನ್ನು ತೋರಿಸಲಿ. ಓ ರಾಜಾ ! ಹಿಂದೊಮ್ಮೆ ಈ ಶ್ರೀಕೃಷ್ಣನು, ಮಾಯಾವಿಯೆನಿಸಿಕೊಂಡ ಮಯನೆಂಬ ರಾಕ್ಷಸನಿಂದ ನಷ್ಟವಾಗುತಿದ್ದ ರುದ್ರನ ಯಶಸ್ಸನ್ನು ಸ್ಥಿರವಾಗಿ ನಿಲ್ಲುವಂತೆ ಮಾಡಿರುವನು ಹೀಗೆ ಬ್ರಹ್ಮರುದ್ರಾದಿಗಳಿಗೂ ಆಗಾಗ ಕ್ಷೇಮಚಿಂತಕನಾದ ಆ ಶ್ರೀಕೃಷ್ಣನ ಪ್ರಭಾವವನ್ನು ಕೇಳಬೇಕೆ?" ಎಂದನು. ಆಗ ಧರ್ಮರಾಜನು ನಾರದನನ್ನು ಕುರಿತು, "ಓ ಮುನೀಂದ್ರಾ ! ಜಗದೀಶ್ವರನೆನಿಸಿಕೊಂಡ ರುದ್ರನ ಕೀರ್ತಿಯನ್ನು ಮಯನೆಂಬ ರಾಕ್ಷಸನು ಯಾವಕಾಲದಲ್ಲಿ,ಯಾವ ಕಾರಣಕ್ಕಾಗಿ ಕೆಡಿಸುವುದಕ್ಕೆ ಪ್ರಯತ್ನಿಸಿದನು! ಅದನ್ನು ಭಗವಂತನು ಕಾಪಾಡಿದುದು ಹೇಗೆ ?" ಅದನ್ನು ವಿವರಿಸಿ ತಿಳಿಸಬೇಕು" ಎಂದನು. ಆಗ ನಾರದನು ರಾಜೇಂದ್ರಾ ಕೇಳು, "ಹಿಂದೊಮ್ಮೆ ದೇವತೆಗಳೆಲ್ಲರೂ ರುದ್ರನ ಸಹಾಯದಿಂದ ಯುದ್ಧದಲ್ಲಿ ದೈತ್ಯರನ್ನು ಸೋಲಿಸಿದರು ಆಗ ಅಸುರರೆಲ್ಲರೂ ಸಮಸ್ತಮಯಾವಿಗಳಿಗೂ ಪರಮಾ

ಚಾರ್ಯನೆನಿಸಿಕೊಂಡ ಮಯನಲ್ಲಿ ಬಂದು ಮರೆಹೊಕ್ಕರು. ಆಗ ಮಾಯೆಗ
ಳಲ್ಲಿ ನಿಪುಣನಾದ ಮಯನು, ಆ ದೈತ್ಯರಿಗೆ ಬಂಗಾರ, ಬೆಳ್ಳಿ, ಕಬ್ಬಿಣ ಈ
ಮೂರುಲೋಹಗಳಿಂದ ಮೂರುಪಟ್ಟಣಗಳನ್ನು ನಿರ್ಮಿಸಿ ಕೊಟ್ಟನು. ಆಪ
ಟ್ಟಣಗಳು ಯಾರಿಗೂ ಗೋಚರಿಸದಂತೆ ಆಕಾಶದಲ್ಲಿ ಸಂಚರಿಸುತ್ತಿದ್ದುವು
ಅವು ಎಣೆಯಿಲ್ಲದ ಭೋಗಸಾಮಗ್ರಿಗಳಿಂದ ತುಂಬಿವಿಮಾನಗಳಂತೆ ಆಗಾಗ
ಉದ್ದೇಶಿಸಿದ ಸ್ಥಳಕ್ಕೆ ತಂದು ಬಿಡುತಿದ್ದುವು ದೈತ್ಯಸೇನಾಪತಿಗಳೆಲ್ಲರೂಆ
ಪಟ್ಟಣಗಳಲ್ಲಿ ಸೇರಿ,ಯಾರಿಗೂ ತಿಳಿಯದಂತೆ ಸಂಚರಿಸುತ್ತ,ದೇವತೆಗಳಮೇ
ಲೆ ಹಗೆತೀರಿಸಿ ಕೊಳ್ಳುವುದಕ್ಕಾಗಿ,ಊರೂರುಗಳಮೇಲೆ ಬಿದ್ದುಲೋಕಪಾ
ಲರೊಡಗೂಡಿದ ಸಮಸ್ತಲೋಕಗಳನ್ನೂ ನಾಶಮಾಡು ತ್ತಬಂದರು. ಆಗ
ದೇವತೆಗಳು! ಇಂದ್ರನನ್ನು ಮುಂದಿಟ್ಟುಕೊಂಡು ರುದ್ರನಬಳಿಗೆ ಬಂದು
“ ಓ ಪ್ರಭೂ ! ದೈತ್ಯರೆಲ್ಲರೂ ಮಯನಿರ್ಮಿತಗಳಾದ ಮೂರುಪಟ್ಟಣ
ಗಳಲ್ಲಿ ಸೇರಿ, ಕಣ್ಣಿಗೆ ಕಾಣದೆ ಅಲ್ಲಲ್ಲಿ ತಿರುಗುತ್ತ, ನಿನ್ನ ಆಶ್ರಿತರಾ
ದ ನಮ್ಮೆಲ್ಲರನ್ನೂ ನಾಶಮಾಡುತ್ತಿರುವರು ನಮ್ಮನ್ನು ರಕ್ಷಿಸಬೇಕು ”
ಎಂದರು ಆಗ ಮಹಾನುಭಾವನಾದ ರುದ್ರನು, ದೇವತೆಗಳಿಗೆ ಅಭಯವ
ನ್ನು ಕೊಟ್ಟು, ಆಕ್ಷಣವೇ ಧನುಸ್ಸಿನಲ್ಲಿ ಬಾಣಸಂಧಾನವನ್ನುಮಾಡಿ, ಪಾ
ಶುಪತಾಸ್ತ್ರಮಂತ್ರದಿಂದ ಮಂತ್ರಿಸಿ, ಆ ಪಟ್ಟಣಗಳಿಗೆ ಗುರಿಯಿಟ್ಟು ಪ್ರ
ಯೋಗಿಸಿದನು ಈ ಬಾಣವನ್ನು ಪ್ರಯೋಗಿಸಿದೊಡನೆ ಸೂರ್ಯಮಂಡಲ
ದಿಂದ ಕಿರಣಗಳು ಹೊರಡುವಂತೆ, ಆ ಬಾಣದಿಂದ ಹಲವು ಬಗೆಯ
ಬೇರೆಬೇರೆ ಬಾಣಪರಂಪರೆಗಳು ಹೊರಡುತಿದ್ದುವು ಈ ಬಾಣಸಮೂಹ
ಗಳಲ್ಲಿ ಆ ಮೂರುಪಟ್ಟಣಗಳೂ ಮುಚ್ಚಿಹೋಗಿ ಕಣ್ಣಿಗೆ ಕಾಣದಂತಾದ
ವು. ಆ ಪಟ್ಟಣದಲ್ಲಿದ್ದ ದೈತ್ಯರೆಲ್ಲರೂ ಸತ್ತುಬಿದ್ದರು. ಇದನ್ನು ನೋ
ಡಿ ಮಯನು, ಅವರಿಗೆ ತಿರುಗಿ ಜೀವವನ್ನು ಕೂಡಿಸುವುದಕ್ಕಾಗಿ ಆ ರಾಕ್ಷಸ
ಶವಗಳನ್ನುತಂದು, ತನ್ನ ಮಾಯೆಯಿಂದ ನಿರ್ಮಿತವಾದಒಂದಾನೊಂದುಸಿ
ದ್ಧರಸದ ಬಾವಿಯಲ್ಲಿ ಹಾಕಿದನು. ಆ ಹೆಣಗಳು ಸಿದ್ಧರಸದಲ್ಲಿ ಬಿದ್ದೊ
ಡನೆ, ಎಲ್ಲರಿಗೂ ತಿರುಗಿ ಜೀವವುಂಟಾಯಿತು. ಆಕಾಶದಲ್ಲಿರುವ ಮೇಘ
ಗಳ ಬಿರುಕಿನಿಂದ ಮಿಂಚಿನಕಿಡಿಗಳು.ಹೊರಟುಬರುವಂತೆ,ಅಸುರಸೈನಿಕರೆಲ್ಲ

ರೂ ವಜ್ರದೇಹವುಳ್ಳವರಾಗಿಯೂ, ಮಹಾ ತೇಜಸ್ವಿಗಳಾಗಿಯೂ ಆಬಾವಿ ಯಿಂದ ಮೇಲೆದ್ದುಬಂದರು ಆಗ ರುದ್ರನು ತನ್ನ ಪ್ರಯತ್ನವೆಲ್ಲವೂ ವ್ಯರ್ಥವಾದುದಕ್ಕಾಗಿ ದುಃಖಿತನಾಗಿದ್ದನು ಇದನ್ನು ನೋಡಿ. ಭಗ ವಂತನು ಆದಕ್ಕೆ ತಕ್ಕ ಪ್ರತೀಕಾರವನ್ನು ಯೋಚಿಸಿ, ಒಂದು ಹಸುವಿನ ಆ ಕಾರವನ್ನು ತಾಳಿದನು. ಬ್ರಹ್ಮದೇವನು ಕರುವಾಗಿ ನಿಂತನು ಗೋರೂ ಪದಿಂದಿದ್ದ ಭಗವಂತನು, ತನ್ನ ಕರುವಿನೊಡನೆ ಮಯನಿರ್ಮಿತವಾದ ಆ ಪ ಟ್ಟಣದಲ್ಲಿ ಪ್ರವೇಶಿಸಿ, ಆ ಸಿದ್ಧರಸದ ಬಾವಿಯಬಳಿಗೆ ಬಂದು ಮಧ್ಯಾಹ್ನ ಕಾಲದಲ್ಲಿ ಅದರಲ್ಲಿದ್ದ ನೀರೆಲ್ಲವನ್ನೂ ಕುಡಿದುಬಿಟ್ಟನು. ಆ ಬಾವಿಗೆ ಕಾ ವಲಿದ್ದ ದೈತ್ಯರೆಲ್ಲರೂ, ಹೀಗೆ ಅಮೃತರಸವನ್ನು ಕುಡಿಯುತ್ತಿರುವ ಆಹಸು ವನ್ನು ನೋಡಿಯೂಕೂಡ ಭಗವನ್ಮಾಯೆಯೆಂದು ಮರುಳಾಗಿ, ನಿಜ ಸ್ಥಿತಿಯನ್ನು ತಿಳಿಯಲಾರದೆ, ಆ ಹಸುವನ್ನು ತಡೆಯದೆ ಸುಮ್ಮನಿದ್ದರು. ಮಹಾಯೋಗಿಯಾದ ಮಯನಿಗೂ ಈ ವೃತ್ತಾಂತವು ತಿಳಿದುಬಂದಿತು ಒಡನೆಯೇ ಅವನು ಆ ಬಾವಿಯಬಳಿಗೆ ಬಂದು, ಅದರಲ್ಲಿ ರಸವಿಲ್ಲದಿರು ವುದನ್ನು ನೋಡಿ, ದೈವಕೃತವಾದ ಕಾರ್ಯಕ್ಕಾಗಿ ದುಃಖಿಸಬಾರದೆಂದು ತಿಳಿದು, ಮನಸ್ಸಿನಲ್ಲಿ ನಗುತ್ತ ದುಃಖಿತರಾದ ದೈತ್ಯರನ್ನುಕುರಿತು ಹೀಗೆಂದು ಹೇಳುವನು. “ಎಲೈ ಅಸುರಶ್ರೇಷ್ಠರೆ! ದೈವಕೃತವಾಗಿ ಬಂದೊದಗುವ ಸುಖದುಃಖಗಳನ್ನು ತಪ್ಪಿಸಿಕೊಳ್ಳುವುದಕ್ಕೆ, ಲೋಕದಲ್ಲಿ ದೇವತೆಗಳಿಂದಾಗ ಲಿ, ದೈತ್ಯರಿಂದಾಗಲಿ, ಮನುಷ್ಯರಿಂದಾಗಲಿ, ಯಾರಿಂದಲೂ ಸಾಧ್ಯವಿಲ್ಲ. ಆದುದರಿಂದ ನೀವು ಇದಕ್ಕಾಗಿ ಚಿಂತಿಸಿ ಫಲವೇನು? ನಾವಾಗಲಿ, ಇತರ ರಾಗಲಿ, ಈಶ್ವರನಿಂದ ನಿಯಮಿಸಲ್ಪಟ್ಟಸುಖದುಃಖಗಳನ್ನು ಆಯಾಕಾಲ ದಲ್ಲಿ ಅನುಭವಿಸಿಯೇ ತೀರಬೇಕು” ಎಂದನು. ಓ ಧರ್ಮರಾಜಾ! ಆಮೇಲೆ ಇತ್ತಲಾಗಿ ಭಗವಂತನು, ಧರ್ಮ, ಜ್ಞಾನ, ವಿರಕ್ತಿ, ಐಶ್ವರ್ಯ, ತಪಸ್ಸು, ವಿದ್ಯೆ, ಅಘಟಿತಘಟನಾಸಾಮರ್ಥ್ಯವೆಂಬ ತನ್ನ ಏಳುವಿಧವಾದ ಶಕ್ತಿಗ ಳಿಂದ, ಆ ರುದ್ರನಿಗೆ ರಥ, ಸಾರಥಿ, ಧ್ವಜ, ಕುದುರೆ, ಧನುಸ್ಸು, ಕವಚ, ಬಾಣ ಮುಂತಾದ ಯುದ್ಧೋಪಕರಣಗಳನ್ನು ಏರ್ಪಡಿಸಿಕೊ ಟ್ಟನು. ಒಡನೆಯೇ ರುದ್ರನು ಆ ಭಗವಂತನ ಧರ್ಮಶಕ್ತಿರೂಪವಾದ

ರಥವನ್ನೇರಿ, ಕವಚವನ್ನು ತೊಟ್ಟು, ಧನುರ್ಬಾಣಗಳನ್ನು ಹಿಡಿದು, ಅಭಿ
ಜಿತ್ತೆಂಬ ಮುಹೂರ್ತದಲ್ಲಿ ಭಗವಂತನ ತೇಜಸ್ಸಿನಿಂದ ಕೂಡಿದ ಆ ಬಾಣ
ವನ್ನು ಪ್ರಯೋಗಿಸಿ, ಕ್ಷಣಮಾತ್ರದಲ್ಲಿಯೇ ಆ ಮೂರುಪಟ್ಟಣಗಳನ್ನೂ
ದಹಿಸಿಬಿಟ್ಟನು ಒಡನೆಯೇ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು.
ದೇವವಿಮಾನಗಳು ಸಾಲುಸಾಲಾಗಿ ಬಂದು ನೆರೆದುವು ಇಂದ್ರಾದಿ
ದೇವವಿಮಾನಗಳೂ ಋಷಿಗಳೂ, ಪಿತೃಗಳೂ, ಸಿದ್ಧರೂ "ವಿಜಯೀಭವ"
ಎಂದು ಸ್ತುತಿಸುತ್ತ, ರುದ್ರನಮೇಲೆ ಪುಷ್ಪವರ್ಷಗಳನ್ನು ಕರೆದರು. ಗಂಧ
ರ್ವರು ಸಂತೋಷದಿಂದ ಗಾನಮಾಡಿದರು. ಅಪ್ಸರಸ್ಸುಗಳು ನರ್ತಿಸುತ್ತಿ
ದ್ದರು ಓ ಧರ್ಮರಾಜಾ! ಹೀಗೆ ರುದ್ರನು ತ್ರಿಪುರಗಳನ್ನು ದಹಿಸಿದಮೇಲೆ,
ಬ್ರಹ್ಮಾದಿಗಳಿಂದ ಸ್ತುತಿಸಲ್ಪಡುತ್ತ, ಸ್ವಸ್ಥಾನವನ್ನು ಸೇರಿದನು. ಹೀಗೆ
ತನ್ನ ಮಾಯೆಯಿಂದ ಮನುಷ್ಯಸ್ವಭಾವವನ್ನು ನಟಿಸತಕ್ಕವನಾಗಿಯೂ,
ಆಶ್ರಿತರ ದುಃಖವನ್ನು ನಿವಾರಿಸತಕ್ಕವನಾಗಿಯೂ, ಸಮಸ್ತ ಲೋಕಕ್ಕೂ
ಹಿತೋಪದೇಶಕನಾಗಿಯೂ ಇರುವ ಆ ಶ್ರೀಕೃಷ್ಣನ ವೀರಚರಿತ್ರೆಗಳು
ಅನೇಕವಾಗಿ, ಅತ್ಯದ್ಭುತವಾಗಿರುವುವು. ಲೋಕಪಾವನಗಳಾದ ಆ ಚರಿ
ತ್ರೆಗಳನ್ನು ಮಹರ್ಷಿಗಳೂ ಗಾನಮಾಡುತ್ತಿರುವರು. ಓ ಧರ್ಮರಾಜಾ!
ಬೇರೆ ಯಾವುದಾದರೂ ಕೇಳಬೇಕಾದ ವಿಷಯವಿದ್ದರೆ ಕೇಳು! ಹೇಳುವೆನು"
ಎಂದನು. ಇದು ಹತ್ತನೆಯ ಅಧ್ಯಾಯವು.

---

### { ನಾರದನು ಭಕ್ತಿಯೋಗಕ್ಕೆ ಅಂಗಭೂತಗಳಾದ ವರ್ಣಾಶ್ರಮಧರ್ಮಗಳನ್ನು ತಿಳಿಸಿದುದು }

ಶುಕನು ಪರೀಕ್ಷಿದ್ರಾಜನನ್ನು ಕುರಿತು "ಓ ರಾಜೇಂದ್ರಾ! ಧರ್ಮ
ರಾಜನು ಹೀಗೆ ನಾರದನ ಮುಖದಿಂದ, ಮಹಾತ್ಮನಾದ ಪ್ರಹ್ಲಾದನ ಚರಿ
ತ್ರೆಯನ್ನು ಕೇಳಿ ಸಂತೋಷಗೊಂಡವನಾಗಿ, ತಿರುಗಿ ಪ್ರಶ್ನೆಮಾಡುವನು.
"ಓ ಮಹಾತ್ಮಾ! ಮನುಷ್ಯರೆಲ್ಲರೂ ಅನುಸರಿಸಬೇಕಾದ ಸಾಮಾನ್ಯ
ಧರ್ಮಗಳಾವುವು? ವರ್ಣಾಶ್ರಮಧರ್ಮಗಳಾವುವು? ಈ ಧರ್ಮಗಳೆಲ್ಲವೂ
ಭಗವತ್ಪ್ರಾಪ್ತಿಗೆ ಸಾಧನಗಳೆಂಬುದು ಹೇಗೆ? ಅವೆಲ್ಲವನ್ನೂ ವಿವರಿಸಿ

ನನಗೆ ತಿಳಿಸಬೇಕು ಸಮಸ್ತ ಪ್ರಜಾಧಿಪತಿಗಳಿಗೂ ಪ್ರಭುವಾದ ಬ್ರಹ್ಮ ದೇವನಿಗೆ ನೀನು ಸಾಕ್ಷಾತ್ಪುತ್ರನಾದುದರಿಂದ, ಅವನು ನಿನಗೆ ಸಮಸ್ತ ಧರ್ಮರಹಸ್ಯಗಳನ್ನೂ ಉಪದೇಶಿಸಿರುವುದರಲ್ಲಿ ಸಂದೇಹವಿಲ್ಲ ಬ್ರಹ್ಮ ದೇವನಿಗೆ ನಿನ್ನಂತೆ ಬಹಳಮಂದಿ ಪುತ್ರರಿದ್ದರೂ, ಎಲ್ಲರಿಗಿಂತಲೂ ನಿನ್ನಲ್ಲಿ ಅವನಿಗೆ ವಿಶೇಷಪ್ರೇಮವಿರುವುದರಿಂದ, ಅವನು ಬೇರೊಬ್ಬರಿಗೆ ತಿಳಿಸದ ಸೂಕ್ಷ್ಮಧರ್ಮಗಳನ್ನೂ ನಿನಗೆ ಉಪದೇಶಿಸಿರಬಹುದು ಅದಲ್ಲದೆ ತಪಸ್ಸು, ಯೋಗ, ಸಮಾಧಿ ಮೊದಲಾದ ಉಪಾಯಗಳಿಂದ ಆ ಭಗವಂತನಲ್ಲಿ ನಟ್ಟ ಮನಸ್ಸುಳ್ಳ ನಿನಗೆ ತಿಳಿಯದ ವಿಷಯವಾವುದೂ ಇಲ್ಲ. ಭಗವದ್ಭಕ್ತರಾ ಗಿಯೂ, ಕರುಣಾಳುಗಳಾಗಿಯೂ, ಸಾಧುಗಳಾಗಿಯೂ, ಶಾಂತರಾಗಿಯೂ ಇರುವ ನಿಮ್ಮಂತಹಯೋಗೀಶ್ವರರಿಗೆ ಈ ಧರ್ಮರಹಸ್ಯಗಳು ತಿಳಿದಿರುವಂತೆ, ಎಷ್ಟೋ ಶಾಸ್ತ್ರಾಭ್ಯಾಸಮಾಡಿ ಶ್ರಮಪಟ್ಟವರೂ ತಿಳಿಯಲಾರರು ಆ ದು ದರಿಂದ ನನಗೆ ಆ ಧರ್ಮಸೂಕ್ಷ್ಮಗಳೆಲ್ಲವನ್ನೂ ವಿವರಿಸಿ ತಿಳಿಸಬೇಕು" ಎಂದನು ಅದಕ್ಕಾ ನಾರದನು "ಓ ಧರ್ಮರಾಜಾ ಮೊದಲು ಸಕಲಧ ರ್ಮನಿಯಾಮಕನಾದ ಭಗವಂತನಿಗೆ ನಮಸ್ಕಾರವನ್ನುಮಾಡಿ, ಆ ಭಗ ವಂತನು ತಾನಾಗಿಯೇ ತನ್ನ ಬಾಯಿಂದುಪದೇಶಿಸಿರುವ ಸನಾತನ ಧರ್ಮಗಳೆಲ್ಲವನ್ನೂ ನಿನಗೆ ವಿವರಿಸುವೆನು ನಾರಾಯಣನು ದಕ್ಷಕುಮಾರಿ ಯಾದ ಮೂರ್ತಿದೇವಿಯಲ್ಲಿ, ಧರ್ಮನಿಗೆ ಪುತ್ರನಾಗಿ ಅವತರಿಸಿ, ತನ್ನ ಅಂಶ ಭೂತನಾದ ನರನೊಡಗೂಡಿ ಲೋಕಕ್ಷೇಮಕ್ಕಾಗಿ ಈಗಲೂ ಬದರಿಕಾ ಶ್ರಮದಲ್ಲಿ ತಪಸ್ಸುಮಾಡುತ್ತಿರುವನು ಸಮಸ್ತ ಧರ್ಮಗಳಿಗೂ ಆ ಭಗವಂ ತನೇ ಆಧಾರವು. ಆಧರ್ಮಗಳನ್ನು ಬೋಧಿಸತಕ್ಕ ಸಮಸ್ತವೇದಗಳೂ ಆ ಭಗವಂತನ ಸ್ವರೂಪವಲ್ಲದೆ ಬೇರೆಯಲ್ಲ ಆ ವೇದವಿದರಾದ ಮಹರ್ಷಿಗ ಳಿಂದ ಉಪದೇಶಿಸಲ್ಪಟ್ಟ ಸ್ಮೃತಿಗಳೂ, ಹಿರಿಯರ ಆಚಾರಸಂಪ್ರದಾಯ ಗಳೂ, ಆ ಧರ್ಮಕ್ಕೆ ಪ್ರಮಾಣವೆನಿಸಿರುವುವು. ಮುಖ್ಯವಾಗಿ ಭಗ ವಂತನ ಮುಖೋಲ್ಲಾಸಕ್ಕೆ ಕಾರಣವಾಗಿರುವುದೇ ಧರ್ಮವು ಧ ರ್ಮವೆಂಬುದು ಆ ಭಗವಂತನ ಆರಾಧನವಲ್ಲದೆ ಬೇರೆಯಲ್ಲ ಈ ಧರ್ಮ ಗಳನ್ನು ನೀನು ಅವಶ್ಯವಾಗಿ ಕೇಳಬೇಕು. ಸಾಮಾನ್ಯವಾಗಿ ಮನುಷ್ಯ

ರೆಲ್ಲರೂ ಅನುಸರಿಸಬೇಕಾದ ಧರ್ಮಗಳನ್ನು ಹೇಳುವೆನು ಕೇಳು. ಸತ್ಯ, ಪ್ರಾಣಿಗಳಲ್ಲಿ ದಯೆ, ಉಪವಾಸವೇ ಮೊದಲಾದ ತಪಸ್ಸು, ಸ್ನಾನಾದಿಗಳಿಂದ ಶುಚಿಯಾಗಿರುವುದು, ಶೀತೋಷ್ಣಾದಿದ್ವಂದ್ವಗಳನ್ನು ಸಹಿಸಿಕೊಳ್ಳುವುದು ಯುಕ್ತಾಯುಕ್ತವಿವೇಚನೆ, ಮನೋಜಯ ಇಂದ್ರಿಯಗಳನ್ನು ನಿಗ್ರಹಿಸುವುದು, ಯಾವವಿಧದಿಂದಲೂ ಇತರಪ್ರಾಣಿಗಳನ್ನು ಹಿಂಸಿಸದಿರುವುದು, ಅನುಚಿತಕಾಲಗಳಲ್ಲಿ ಸ್ತ್ರೀಸಂಭೋಗಾದಿಗಳಲ್ಲಿ ಪ್ರವರ್ತಿಸದಿರತಕ್ಕ ಬ್ರಹ್ಮಚರ್ಯೆ, ಲೋಭವಿಲ್ಲದಿರುವುದು, ಯಥೋಚಿತವಾದ ಮಂತ್ರಗಳನ್ನು ಜಪಿಸುವುದು, ಮನೋವಾಕ್ಕಾಯಗಳೆಂಬ ತ್ರಿಕರಣಗಳಲ್ಲಿಯೂ ಒಂದೇವಿಧವಾಗಿ ನಡೆಯತಕ್ಕ ಋಜುಬುದ್ಧಿ, ಇದ್ದುದರಲ್ಲಿ ತೃಪ್ತಿ, ಸಮಸ್ತಭೂತಗಳಲ್ಲಿಯೂ ಸಮಬುದ್ಧಿಯುಳ್ಳ ಮಹಾತ್ಮರ ಸೇವೆ, ಲೌಕಿಕಸುಖಗಳಿಗೆ ,ಕಾರಣವಾದ ಪ್ರವೃತ್ತಿಕರ್ಮಗಳನ್ನು ಸಾಧ್ಯವಾದಷ್ಟು ತಗ್ಗಿಸುವುದು, ದುಷ್ಫಲಗಳಾದ ಕಾರ್ಯಗಳಲ್ಲಿ ಪ್ರವರ್ತಿಸದಿರುವುದು, ಕೆಲಸಕ್ಕೆಬಾರದ ಮಾತುಗಳನ್ನಾಡದೆ ಮಿತವಾಗಿ ಮಾತನಾಡುವುದು, ದೇಹಕ್ಕಿಂತಲೂ ವಿಲಕ್ಷಣವಾದ ಆತ್ಮಸ್ವರೂಪವನ್ನು ತಿಳಿಯುವುದು, ತನಗೆ ಶಕ್ತಿಯಿದ್ದಷ್ಟು ಇತರಭೂತಗಳಿಗೆ ಅನ್ನಾದಿಗಳನ್ನು ಕೊಟ್ಟು ಪೋಷಿಸುವುದು, ಸಮಸ್ತ ಭೂತಗಳಲ್ಲಿಯೂ ಜೀವಾತ್ಮನೂ, ಆ ಜೀವನಲ್ಲಿ ಪರಮಾತ್ಮನೂ, ಅಂತರ್ಯಾಮಿಯಾಗಿ ಸೇರಿರುವರೆಂದು ತಿಳಿದು, ಆ ಸಮಸ್ತಭೂತಗಳನ್ನೂ ತನ್ನಂತೆಯೂ, ಪರಮಾತ್ಮನಂತೆಯೂ, ಪ್ರೇಮದಿಂದಲೂ, ಗೌರವದಿಂದಲೂ ಭಾವಿಸುವುದು. ಮನುಷ್ಯರಲ್ಲಿ ವಿಶೇಷವಾಗಿ ಈ ಭಾವನೆಯನ್ನಿಡುವುದು, ಭಗವಂತನ ಗುಣಗಳನ್ನು!ಕೇಳುತ್ತಿರುವುದು, ಅವನ ಗುಣಗಳನ್ನು ಕೀರ್ತಿಸುವುದು, ಆ ಭಗವಂತನನ್ನು ಸ್ಮರಿಸುವುದು, ಆತನ ಪಾದಸೇವೆ, ಅವನಿಗೆ ಅರ್ಘ್ಯಪಾದ್ಯಾದಿಪೂಜೆಗಳನ್ನು ಸಮರ್ಪಿಸುವುದು, ಅವನಿಗೆ ನಮಸ್ಕರಿಸುವುದು, ಸರ್ವವಿಧದಲ್ಲಿಯೂ ಆ ಭಗವಂತನಿಗೆ ಅನುಕೂಲನಾಗಿ ವರ್ತಿಸುವುದು ಅವನಲ್ಲಿ ಆತ್ಮಸಮರ್ಪಣೆಯನ್ನು ಮಾಡುವುದು ಈ ಮೂವತ್ತೂ ಮನುಷ್ಯರಿಗೆ ಸರ್ವಸಾಮಾನ್ಯವಾದ ಧರ್ಮಗಳು!,ಇವುಗಳಿಂದಲೇ ಸರ್ವಾಂತರಾತ್ಮನಾದ ಭಗ

ವಂತನು ತೃಪ್ತಿಹೊಂದುವನು. ಇದಲ್ಲದೆ, ಗರ್ಭಾಧಾನಮೊದಲಾದ ಹದಿನಾರು ಸಂಸ್ಕಾರಗಳೂ ಯಾವನಿಗೆ ಕ್ರಮವಾಗಿ ನಡೆಯುವುವೋ ಅವನು ದ್ವಿಜನೆನಿಸುವನು. ಬ್ರಾಹ್ಮಣಕ್ಷತ್ರಿಯವೈಶ್ಯರೆಂಬ ಮೂರುವರ್ಣದವರಿಗೆಮಾತ್ರ ಈ ಸಂಸ್ಕಾರಗಳು ವಿಧಿಸಲ್ಪಟ್ಟಿರುವುದರಿಂದ, ಅವರು ದ್ವಿಜರೆನಿಸುವರು. ಶೂದ್ರನಿಗೆ ವಿವಾಹವೊಂದುಹೊರತು ಬೇರೆ ಯಾವ ಸಂಸ್ಕಾರಗಳೂ ಇಲ್ಲದುದರಿಂದಲೂ,ಅವನಿಗೆ ಉಪನಯನಾದಿಸಂಸ್ಕಾರವು ಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟಿರುವುದರಿಂದಲೂ, ಅವನು ದ್ವಿಜನೆನಿಸಿಕೊಳ್ಳುವುದಿಲ್ಲ. ಬ್ರಹ್ಮದೇವನು ಶ್ರುತಿಸ್ಮೃತಿಗಳಮೂಲಕವಾಗಿ ಈ ಹದಿನಾರು ಸಂಸ್ಕಾರಗಳನ್ನೂ ಯಾರಿಗಾಗಿ ವಿಧಿಸಿರುವನೋ ಅವರೇ ದ್ವಿಜರು! ಇತರರು ಡಂಭಕ್ಕಾಗಿ ತಾವೇ ಉಪನಯನಾದಿಸಂಸ್ಕಾರಗಳನ್ನು ನಡೆಸಿಕೊಂಡರೂ, ಅವರಿಗೆ ದ್ವಿಜತ್ವವಿಲ್ಲ ಈ ದ್ವಿಜತ್ವವು ಕುಲದಿಂದಲೂ, ಕರ್ಮದಿಂದಲೂ ಸಿದ್ಧಿಸುವುದು ಹೀಗೆ ಸಂಸ್ಕಾರಗಳಿಂದ ಶುದ್ಧರಾದ ಬ್ರಾಹ್ಮಣಾದಿವರ್ಣತ್ರಯದವರಿಗೆಮಾತ್ರ ಯಾಗಮಾಡುವುದು ವೇದಗಳನ್ನೋದುವುದು, ದಾನಮಾಡುವುದು, ಎಂಬೀ ಮೂರು ಕರ್ಮಗಳೂ, ಆಯಾ ಆಶ್ರಮಧರ್ಮಗಳಿಗೆ ತಕ್ಕಂತೆ ಶಾಸ್ತ್ರಗಳಲ್ಲಿ ಸಿಧಿಸಲ್ಪಟ್ಟಿರುವುವು ಈ ವರ್ಣಾಶ್ರಮಧರ್ಮಗಳನ್ನು ನಡೆಸದವರು ಪತಿತರೆನಿಸುವರು ಧಾರಾಗ್ನಿಯುಳ್ಳವರಿಗೆ ಮೇಲೆ ಹೇಳಿದ ಮೂರುಕರ್ಮಗಳೂ ಉಂಟು ಅಗ್ನಿಯಿಲ್ಲದವರಿಗೆ (ಅಪತ್ನೀಕರಿಗೆ) ಯಾಗಾಧಿಕಾರವಿಲ್ಲದುದರಿಂದ,ಅವರಿಗೆ ಎರಡೇ ಕರ್ಮಗಳು ಇತರರಿಗೆ ವೇದಾಧ್ಯಯನವನ್ನು ಮಾಡಿಸುವುದು ಇತರರಿಂದ ಯಾಗಮಾಡಿಸುವುದು. ದಾನವನ್ನು ತೆಗೆದುಕೊಳ್ಳುವುದು, ಈ ಮೂರು ಕರ್ಮಗಳೂ ಬ್ರಾಹ್ಮಣನಿಗೆ ಜೀವನಾರ್ಥವಾಗಿ ಏರ್ಪಟ್ಟಿರುವುವು. ಮೊದಲಿನ ಮೂರು ಕರ್ಮಗಳನ್ನುಮಾತ್ರ ಬ್ರಾಹ್ಮಣನು ಅವಶ್ಯವಾಗಿ ನಡೆಸಿಯೇ ತೀರಬೇಕು. ಬೇರೆ ಮೂರುಕರ್ಮಗಳೂ ಕೇವಲಜೀವನಾರ್ಥವಾಗಿಯೇ ಏರ್ಪಟ್ಟಿರುವುದರಿಂದ, ಅವುಗಳನ್ನು ನಡೆಸಿಯೇತೀರಬೇಕೆಂಬ ನಿರ್ಬಂಧವಿಲ್ಲ. ಇದರಿಂದ ಬ್ರಾಹ್ಮಣನಿಗೆಮಾತ್ರ ಆರು ಕರ್ಮಗಳು! ಕ್ಷತ್ರಿಯವೈಶ್ಯರಿಗೆ ದಾನತೆಗೆದುಕೊಳ್ಳುವುದಕ್ಕಾಗಲಿ, ಯಾಗಮಾಡಿಸುವುದಕ್ಕಾ

ಗಲಿ, ವೇದಾಧ್ಯಯನ ಮಾಡಿಸುವುದಕ್ಕಾಗಲಿ ಅಧಿಕಾರವಿಲ್ಲ ಕ್ಷತ್ರಿಯರಿಗೆ ಪ್ರಜೆಗಳನ್ನು ಪಾಲಿಸುವುದೇ ಮುಖ್ಯಧರ್ಮವು. ರಾಜ್ಯಾಧಿಕಾರದಲ್ಲಿರುವ ಕ್ಷತ್ರಿಯನು, ತನ್ನ ಜೀವನಕ್ಕಾಗಿ ಬ್ರಾಹ್ಮಣಜಾತಿಯನ್ನುಬಿಟ್ಟು,ಇತರಜಾತಿಯವರಿಂದ ಕಪ್ಪ,ತೆರಿಗೆ,ಸುಂಕ ಮುಂತಾದುವುಗಳನ್ನು ತೆಗೆಯಬಹುದು.ರಾಜ್ಯಾಧಿಕಾರವಿಲ್ಲದ ಕ್ಷತ್ರಿಯನು ಬೇರೆವಿಧದಿಂದ ಜೀವಿಸಬಹದು. ಬ್ರಾಹ್ಮಣ ಕುಲವನ್ನನುವರ್ತಿಸುತ್ತ ಕೃಷಿ, ವಾಣಿಜ್ಯ (ವ್ಯಾಪಾರ) ಗಳಿಂದ ಜೀವಿಸಬೇಕಾದುದು ವೈಶ್ಯರ ಧರ್ಮವು. ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ಮೂರು ವರ್ಣದವರಿಗೂ ಸೇವೆಮಾಡುತ್ತ, ಅವರಿಂದ ಕೊಡಲ್ಪಟ್ಟ ಅನ್ನಾದಿಗಳಿಂದ ಜೀವಿಸಬೇಕಾದುದು ಶೂದ್ರವರ್ಣದವರ ಧರ್ಮವು ಬ್ರಾಹ್ಮಣನು, ತನ್ನ ಜೀವನಕ್ಕೆ ಸಾಲದಿದ್ದಾಗ ಕೃಷಿ, ಗೋರಕ್ಷಣ ಮೊದಲಾದ ವೃತ್ತಿಗಳಿಂದಾಗಲಿ, ಯಾಚನೆಮಾಡದೆ ಲಭಿಸಿದುದರಿಂದಾಗಲಿ, ದೇಶಾಂತರಗಳಲ್ಲಿ ಯಾಚಿಸಿ ತಂದುದರಿಂದಾಗಲಿ, ಕಳದಲ್ಲಿ ಉದಿರಿದ ಧಾನ್ಯಗಳನ್ನೂ, ಧಾನ್ಯದ ತೆನೆಗಳನ್ನೂ ಆಯ್ದು ತರುವುದರಿಂದಲಾಗಲಿ ಈ ನಾಲ್ಕುವಿಧದಿಂದ ತನ್ನ ಜೀವನವನ್ನು ನಡೆಸಿಕೊಳ್ಳಬಹುದು ಈ ನಾಲ್ಕರಲ್ಲಿ ಮೊದಲುಮೊದಲು ಹೇಳಿದುದಕ್ಕಿಂತಲೂ, ಮೇಲುಮೇಲಿನದು ಉತ್ತಮವೆನಿಸುವುದು ಎಂದರೆ ಬ್ರಾಹ್ಮಣನಿಗೆ ಕೃಷಿ ಗೋರಕ್ಷಣಾದಿಗಳಿಗಿಂತಲೂ, ಯಾಚನೆಯೂ, ಆ ಯಾಚನೆಗಿಂತಲೂ, ಯಾಚಿಸದೆ ಲಭಿಸತಕ್ಕ ಧಾನ್ಯದ ತಾಳುಗಳನ್ನು ಸಂಪಾದಿಸಿ ಜೀವನಮಾಡುವುದೂ ಉತ್ತಮವೃತ್ತಿಯೆನಿಸುವುದು ಆದರೆ ಈ ಬ್ರಾಹ್ಮಣಾದಿ ಚತುರ್ವರ್ಣದವರಲ್ಲಿ,ತಮಗೆ ಅನಿವಾರ್ಯವಾದ ಆಪತ್ಕಾಲಗಳಲ್ಲಿ ಹೊರತು ಇತರಕಾಲಗಳಲ್ಲಿ ಕೀಳು ಜಾತಿಯವರು.ತಮಗಿಂತಲೂ ಉತ್ತಮವರ್ಣದವರಿಗೆ ವಿಧಿಸಲ್ಪಟ್ಟ ಜೀವನೋಪಾಯಗಳನ್ನುಮಾತ್ರ ಅವಲಂಬಿಸಬಾರದು ಕ್ಷತ್ರಿಯಜಾತಿಯವರು ಹೊರತು,ಬೇರೆ ಎಲ್ಲಾ ವರ್ಣದವರೂ,ಅಪತ್ಕಾಲಗಳಲ್ಲಿ ಯಥೋಚಿತವಾಗಿ ಮೇಲೆ ಹೇಳಿದ ಎಲ್ಲಾ ವೃತ್ತಿಗಳನ್ನೂ ಅವಲಂಬಿಸಬಹುದು ಬ್ರಾಹ್ಮಣಕ್ಷತ್ರಿಯರಿಬ್ಬರೂ ಎಂತಹ ವಿಪತ್ತುಗಳಲ್ಲಿಯಾದರೂ,ಋತ,ಅಮೃತ,ಮೃತ, ಪ್ರಮೃತ, ಸತ್ಯಾನೃತವೆಂಬ ಐದುಬಗೆಯ ಜೀವನಗಳನ್ನು ಹೊರತು ಬೇರೆ ಜೀವನಕ್ಕೆ ಕೈಯಿಕ್ಕ

ಬಾರದು. ಋತವೆಂದರೆ ಕಳದಲ್ಲಿ ಉದಿರಿದ ಧಾನ್ಯಗಳನ್ನು ಆಯ್ದು ತಿನ್ನು ವುದು, ಅಮೃತವೆಂದರೆ ದೈವಾಧೀನವಾಗಿ ಲಭಿಸಿದುದನ್ನು ತಿಂದು ಜೀವಿಸುವು ದು. ಮೃತವೆಂದರೆ ಪ್ರತಿದಿನವೂ ಭಿಕ್ಷಾಟನಮಾಡಿ ತಂದು ಜೀವಿಸುವುದು, ಪ್ರಮೃತ ಸತ್ಯಾನೃತಗಳೆಂದರೆ ಕೃಷಿವಾಣಿಜ್ಯಗಳು, ಈ ಐದು ಬಗೆಯ ಜೀವನವನ್ನು ಹೊರತು ಶ್ವವೃತ್ತಿಯನ್ನು (ಎಂದರೆ ನೀಚಸೇವೆಯನ್ನು) ಮಾ ತ್ರ ಎಂತಹ ವಿಪತ್ತುಗಳಲ್ಲಿಯೂ ನಡೆಸಬಾರದು ಬ್ರಾಹ್ಮಣ ಕ್ಷತ್ರಿಯ ರಿಬ್ಬರೂ ಸಕಲದೇವತಾಸ್ವರೂಪರೆನಿಸಿಕೊಂಡಿರುವುದರಿಂದ ಎಲ್ಲರಿಗೂ ಪೂಜ್ಯರು. ಇವರು ತಮಗಿಂತ ನೀಚವರ್ಣದವರನ್ನು ಸೇವೆಮಾಡಿ ಜೀವಿ ಸುವುದು ಬಹಳ ನಿಂದ್ಯವಾದ ಕಾರ್ಯವು ಮನಸ್ಸನ್ನು ನಿಗ್ರಹಿತಕ್ಕ ಶಮೆ, ಇಂದ್ರಿಯಗಳನ್ನು ನಿಗ್ರಹಿಸತಕ್ಕ ದಮೆ, ಉಪವಾಸಾದಿತಪಸ್ಸು, ಸ್ನಾನಾ ದಿಕರ್ಮಗಳಿಂದುಂಟಾಗತಕ್ಕ ಶುದ್ಧಿ, ಇದ್ದುದರಲ್ಲಿ ತೃಪ್ತಿ, ತಾಳ್ಮೆ, ಶೀತೋ ಷ್ಣಾದಿದ್ವಂದ್ವಗಳನ್ನು ಸಹಿಸಿಕೊಳ್ಳುವುದು, ಮನೋವಾಕ್ಕಾಯಗಳೆಂಬ ತ್ರಿಕರಣಗಳಲ್ಲಿಯೂ ಒಂದೇವಿಧವಾದ ಋಜುಬುದ್ಧಿ, ಆತ್ಮಪರಮಾತ್ಮ ತತ್ವವನ್ನು ತಿಳಿಯುವುದು, ದಯೆ, ಭಗವಂತನಲ್ಲಿಯೇ ಮನಸ್ಸಿಡುವುದು, ಸಮಸ್ತಭೂತಗಳಿಗೂ ಹಿತವನ್ನು ಮಾಡುವುದು, ಇವೆಲ್ಲವೂ ಬ್ರಾಹ್ಮ ಣಕುಲದ ಲಕ್ಷಣಗಳು ಯುದ್ಧದಲ್ಲಿ ಧೈರ್ಯದಿಂದ ಪ್ರವರ್ತಿಸುವುದು, ಇ ತರರ ತಿರಸ್ಕಾರವನ್ನು ಸಹಿಸದಿರುವುದು ಮಹಾವಿಪತ್ತುಗಳಲ್ಲಿಯೂ ದುಃ ಖಕ್ಕೆ ಅವಕಾಶಕೊಡದೆ ಧೈರ್ಯದಿಂದಿರುವುದು, ಶತ್ರುಗಳನ್ನು ನಿಗ್ರಹಿಸ ತಕ್ಕ ಶಕ್ತಿ, ಲೋಭಬುದ್ಧಿಯಿಲ್ಲದೆ ದಾನಮಾಡುವುದು, ದೇಹಧರ್ಮಗ ಳಾದ ಹಸಿವು, ಬಾಯಾರಿಕೆ, ಮೊದಲಾದುವುಗಳನ್ನು ತಡೆದುಕೊಳ್ಳುವು ದು, ತಾಳ್ಮೆ, ಬ್ರಾಹ್ಮಣಕುಲಕ್ಕೆ ಅನುಕೂಲನಾಗಿ, ನಡೆಯುವುದು ಆಶ್ರಿತ ರಲ್ಲಿ ಅನುಗ್ರಹವನ್ನು ತೋರಿಸುವುದು, ಪ್ರಜೆಗಳನ್ನು ರಕ್ಷಿಸುವುದು, ಇವೆ ಲ್ಲವೂ ಕ್ಷತ್ರಿಯಜಾತಿ ಯಲಕ್ಷಣಗಳು. ದೇವತೆಗಳಲ್ಲಿಯೂ, ಗುರುಗಳಲ್ಲಿಯೂ, ಪೂಜ್ಯರಲ್ಲಿಯೂ, ಗೋವುಗಳಲ್ಲಿಯೂ ಭಕ್ತಿ, ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳಿಂದ ಸಂತುಷ್ಟನಾಗಿರುವುದು, ಪರಲೋಕವುಂಟೆಂಬ ನಂಬಿಕೆ, ದ್ರವ್ಯಾರ್ಜನೆಯಲ್ಲಿ ಅಕ್ಕರೆ ದ್ರವ್ಯಾರ್ಜನೆಗಾಗಿ ನೈಪುಣ್ಯದಿಂದ ಪ್ರಯತ್ನಿ

ಸುವುದು,ಇವೆಲ್ಲವೂ ವೈಶ್ಯಜಾತಿಯ ಲಕ್ಷಣಗಳು ತಮಗಿಂತಲೂ ಉತ್ತಮ ವೆನಿಸಿಕೊಂಡ ಬ್ರಾಹ್ಮಣಾದಿವರ್ಣದವರಿಗೆ ತಗ್ಗಿ ನಡೆಯುವುದು, ಸ್ನಾನಾದಿಗಳಿಂದ ಶುದ್ಧನಾಗಿರುವುದು, ತನ್ನ ಯಜಮಾನನನ್ನು ನಿಷ್ಕಪಟವಾಗಿ ಸೇವೆಮಾಡುವುದು, ಮಂತ್ರವಿಲ್ಲದೆ ಕೇವಲನಮಸ್ಕಾರರೂಪವಾದ ಯಜ್ಞಗಳೆನ್ನನುಷ್ಠಿಸುವುದು, ಪರದ್ರವ್ಯವನ್ನು ಕಳದಿರುವುದು, ಸುಳ್ಳಾಡದಿರುವುದು. ಗೋಬ್ರಾಹ್ಮಣರನ್ನು ಕಾಪಾಡುವುದು, ಇವೆಲ್ಲವೂ ಶೂದ್ರಜಾತಿಯ ಲಕ್ಷಣಗಳು ತನ್ನ ಪತಿಯನ್ನೇ ದೈವವೆಂದು ನಂಬಿ ಅವನನ್ನುಪಚರಿಸುವುದು, ಪತಿಯ ಮನಸ್ಸಿಗೆ ಅನುಕೂಲವಾಗಿನಡೆಯುವುದು, ಪತಿಯ ಬಂಧುಗಳನ್ನು ಪ್ರೀತಿಸುವುದು. ಪತಿಯ ಶ್ರೇಯಸ್ಸಿಗಾಗಿ ವ್ರತಗಳನ್ನು ನಡೆಸುವುದು, ಇವೆಲ್ಲವೂ ಸ್ತ್ರೀಯರಿಗೆ ಉತ್ತಮಲಕ್ಷಣಗಳು ತಮ್ಮ ಮನೆಗಳನ್ನು ಆಗಾಗ ಸಾರಿಸಿ, ಗುಡಿಸಿ, ರಂಗೋಲೆಗಳಿಂದಲಂಕರಿಸುತ್ತಿರುವುದು. ವಿಶೇಷವಾಗಿ ಮನೆಯನ್ನು ಬಿಟ್ಟು ಹೊರಗೆ ಸಂಚಾರಮಾಡದಿರುವುದು, ಮನೆಯಲ್ಲಿರುವ ಪಾತ್ರಪದಾರ್ಥಗಳನ್ನು ಶುದ್ಧವಾಗಿಡುವುದು, ತಾವೂ ವಸ್ತ್ರಾಭರಣಗಳಿಂದಲಂಕರಿಸಿಕೊಳ್ಳುವುದು, ತಮ್ಮ ಪತಿಗೆ ಬೇಕಾದ ಇಷ್ಟವಸ್ತುಗಳನ್ನು ಆಗಾಗ ಸಿದ್ಧಪಡಿಸುವುದು, ವಿನಯದಿಂದಲೂ, ಇಂದ್ರಿಯನಿಗ್ರಹದಿಂದಲೂ ಸತ್ಯವಾಗಿಯೂ ಪ್ರಿಯವಾಗಿಯೂ ಇರುವ ಮಾತುಗಳಿಂದಲೂ ಪತಿಯನ್ನು ಸಂತೋಷಪಡಿಸುವುದು, ಕಾಲೋಚಿತವಾಗಿ ಆತನನ್ನು ಪ್ರೀತಿಯಿಂದ ಸೇವಿಸುವುದು, ಇದ್ದುದರಲ್ಲಿ ತೃಪ್ತಿ, ಅತ್ಯಾಶೆಯಿಲ್ಲದಿರುವುದು, ಯಾವಾಗಲೂ ಬೇಸರಿಸದೆ ಮನೆಯ ಕೆಲಸಗಳನ್ನು ಅಕ್ಕರೆಯಿಂದ ನಡೆಸುವುದು, ಪತಿಶುಶ್ರೂಷೆಯೇ ದೊಡ್ಡ ಧರ್ಮವೆಂದು ತಿಳಿದು. ಯಾವಾಗಲೂ ಪತಿಯ ಮನಸ್ಸಿಗೆ ಪ್ರಿಯವಾಗಿಯೂ ಸತ್ಯವಾಗಿಯೂ ನಡೆಯುವುದು, ಯಾವಸಂದರ್ಭದಲ್ಲಿಯೂ ಎಚ್ಚರತಪ್ಪದೆ ನಡೆದುಕೊಳ್ಳುತ್ತ ಯಾವಾಗಲೂ ಶುಚಿಯಾಗಿರುವುದು, ಈ ನಿಯಮಗಳಿಂದ ಸ್ತ್ರೀಯರು ಸ್ನೇಹಪೂರ್ವಕವಾಗಿ ಪತಿಸೇವೆಯನ್ನು ಮಾಡಬೇಕು. ಪುರುಷನು ಮಹಾಪಾತಕಿಯಾಗಿದ್ದಪಕ್ಷದಲ್ಲಿ ಅಂತವನನ್ನು ಸ್ತ್ರೀಯರು ಇಷ್ಟುನಿಯಮದಿಂದ ಭಜಿಸಬೇಕೆಂಬ ವಿಧಿಯಿಲ್ಲವು. ಅಂತಹ ಪುರುಷನು ಶುದ್ಧನಾ

ಗುವವರೆಗೂ ಕಾಲನಿರೀಕ್ಷಣೆಯಿಂದಿದ್ದು, ಆಮೇಲೆ ಹಿಂದೆ ಹೇಳಿದ ವಿಧಿಗಳಿಂದ ಅವನನ್ನು ಸೇವಿಸಬೇಕು. ಲಕ್ಷ್ಮೀದೇವಿಯು ಪರಮಪುರುಷನನ್ನು ಹೇಗೋಹಾಗೆ,ಸ್ತ್ರೀಯರು ತಮ್ಮ ಪತಿಯನ್ನೇ ಪರದೈವವೆಂದು ಭಾವಿಸುತಿದ್ದ ಪಕ್ಷದಲ್ಲಿ, ಅಂತಹ ಸ್ತ್ರೀಯರು ತಮ್ಮ ಪತಿಗಳೊಡಗೂಡಿ ವಿಷ್ಣುಲೋಕದಲ್ಲಿ ಲಕ್ಷ್ಮೀನಾರಾಯಣರಂತೆಯೇ ನಿತ್ಯಸಂತೋಷಿಗಳಾಗಿರುವರು ಓಧರ್ಮರಾಜಾ! ಮೇಲೆ ಹೇಳಿದ ನಾಲ್ಕುವರ್ಣಗಳಲ್ಲದೆ, ಬೇರೆ ಕೆಲವು ಸಂಕರಜಾತಿಗಳುಂಟು ಇವುಗಳಲ್ಲಿ ಅನುಲೋಮಜವೆಂದೂ ಪ್ರತಿಲೋಮಜವೆಂದೂ ಎರಡು ಮುಖ್ಯಭೇದಗಳು ಹೀನವರ್ಣದವನಿಗೆ ಉತ್ತಮವರ್ಣದ ಸ್ತ್ರೀಯಲ್ಲಿ ಹುಟ್ಟಿದವರು ಪ್ರತಿಲೋಮಜಾತಿಗೆ ಸೇರಿದವರು ಉತ್ತಮವರ್ಣದ ಪುರುಷನಿಗೆ ಹೀನವರ್ಣದ ಸ್ತ್ರೀಯಲ್ಲಿ ಹುಟ್ಟಿದವರು ಅನುಲೋಮಜಾತಿಯವರು. ಈ ಸಂಕರಜಾತಿಯವರೆಲ್ಲರೂ ಅವರವರ ಕುಲಪರಂಪರೆಯಾಗಿ ಬಂದ ಜೀವನವನ್ನೇ ಹಿಡಿಯಬೇಕೇಹೊರತು, ಬೇರೇಮಾರ್ಗಕ್ಕೆ ಪ್ರಯತ್ನಿಸಬಾರದು. ಕಳವು, ಕೊಲೆ, ಮುಂತಾದ ಪಾಪಕಾರ್ಯಗಳಿಗೆ ಎಷ್ಟೇ ಹೀನಜಾತಿಯವರೂ ಪ್ರಯತ್ನಿಸಬಾರದು. ಓ ರಾಜೇಂದ್ರಾ! ಬ್ರಾಹ್ಮಣಕ್ಷತ್ರಿಯಾದಿವರ್ಣಗಳಲ್ಲಿ ಹುಟ್ಟಿದ ಎಲ್ಲಾಮನುಷ್ಯರಿಗೂಕೂಡ, ಪ್ರಾಯಕವಾಗಿ ಅವರವರ ವರ್ಣಗಳಿಗೂ, ಆಶ್ರಮಗಳಿಗೂ ವಿಧಿಸಲ್ಪಟ್ಟ ಕರ್ಮಗಳನ್ನು ತಪ್ಪದೆ ನಡೆಸುತ್ತಬರುವುದೇ ಸರ್ವವಿಧದಲ್ಲಿಯೂ ಶ್ರೇಯಸ್ಕರವು ಈ ವರ್ಣಾಶ್ರಮಧರ್ಮಗಳೆಲ್ಲವೂ, ಅವರವರ ಸ್ವಭಾವಕ್ಕೆ ತಕ್ಕಂತೆಯೇ ಏರ್ಪಟ್ಟಿರುವುವು, ಆ ಧರ್ಮವೇ ಅವರಿಗೆ ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವನ್ನುಂಟುಮಾಡುವುದೆಂದು, ವೇದವಿತ್ತುಗಳಾದ ಮಹರ್ಷಿಗಳು ನಿರ್ಣಯಿಸಿರುವರು. ಹೀಗೆತಮ್ಮತಮ್ಮ ವರ್ಣಾಶ್ರಮಗಳಿಗೆ ತಕ್ಕಂತೆ ಕರ್ಮಗಳನ್ನು ನಡೆಸುತ್ತ, ಅವರವರಿಗೆ ನಿಯತವಾದ ಜೀವನೋಪಾಯಗಳಿಂದಲೇ ದೇಹಧಾರಣೆಯನ್ನು! ಮಾಡತಕ್ಕವರು, ಕಾಲಕ್ರಮದಿಂದ ಕರ್ಮಬಂಧವನ್ನು ನೀಗಿ ಕೊನೆಗೆ ಪ್ರಕೃತಿಗುಣಗಳ ಸಂಬಂಧವಿಲ್ಲದೆ ಮೋಕ್ಷವನ್ನೂ ಪಡೆಯಬಹುದು. ಆದರೆ ಸ್ವವೃತ್ತಿಯಿಂದಾದರೂ ಕರ್ಮಗಳಲ್ಲಿ ಪ್ರವರ್ತಿಸತಕ್ಕವರಿಗೆ, ಕರ್ಮಬಂಧವು ನೀಗುವುದು ಹೇಗೆ?" ಎಂದು ನೀನು ಶಂಕಿಸ

ಬಹುದು ಭೂಮಿಯಲ್ಲಿ ಆಗಾಗ ಬೀಜಗಳನ್ನು ಬಿತ್ತಿ, ಬೆಳೆಗಳನ್ನು ಬೆಳೆಯುತ್ತ ಬಂದಹಾಗೆಲ್ಲಾ, ಆ ಭೂಮಿಯು ನಿಸ್ಸಾರವಾಗುತ್ತ ಬಂದು, ಕೊನೆಗೆ ವ್ಯವಸಾಯಕ್ಕೂ ಉಪಯೋಗವಿಲ್ಲದಂತಾಗಿ,ಅದರಲ್ಲಿ ಬಿತ್ತಿದ ಬೀಜವು ಹಾಗೆಯೇ ನಷ್ಟವಾಗುವುದಲ್ಲವೆ? ಹಾಗೆಯೇ ಕಾಮಗಳಿಗೆ ಉತ್ಪತ್ತಿಸ್ಥಾನವಾದ ಈ ಮನಸ್ಸೆಂಬುದು, ಕಾಮಗಳನ್ನನುಭವಿಸುತ್ತಬರುವುದರಿಂದ ಅವುಗಳಲ್ಲಿ ಕ್ರಮಕ್ರಮವಾಗಿ ಜಿಹಾಸೆಹೊಂದುವುದು ಉರಿಯುವಬೆಂಕಿಗೆ ಎಡೆಬಿಡದೆ ತುಪ್ಪದ ಹಂಡೆಗಳನ್ನು ಬಗ್ಗಿಸುವುದರಿಂದ ಅದು ನಂದಿಹೋಗುವುದಲ್ಲವೆ? ಅದೇ ತುಪ್ಪವನ್ನು ಆ ಬೆಂಕಿಯಲ್ಲಿ ಸ್ವಲ್ಪಸ್ವಲ್ಪವಾಗಿ ತೊಟ್ಟಿಕ್ಕುತ್ತಬಂದರೆ, ಉರಿಯೂ ಹೆಚ್ಚುತ್ತಬರುವುದು ಅದರಂತೆಯೇ ಮನಸ್ಸುಸ್ವಲ್ಪಸ್ವಲ್ಪವಾಗಿ ಕಾಮಗಳನ್ನನುಭವಿಸುತಿದ್ದರೆ,ಅದಕ್ಕೆಕಾಮಾಭಿಲಾಷೆಯು ಇನ್ನೂ ಹೆಚ್ಚುತ್ತ ಬರುವುದು ಧರ್ಮವಿರುದ್ಧವಿಲ್ಲದೆ ಯಥೇಷ್ಟವಾಗಿಕಾಮಗಳನ್ನನುಭವಿಸುವುದರಿಂದ,ಅದರಲ್ಲಿತಾನಾಗಿಯೇ ವಿರಕ್ತಿಹುಟ್ಟಿ ಮನಸ್ಸು ಶಾಂತವಾಗಬಹುದು ಓ ಧರ್ಮರಾಜಾ! ಹಿಂದೆ ಬ್ರಾಹ್ಮಣಾದಿವರ್ಣಗಳಿಗೆ ಯಾವಯಾವ ಗುಣಗಳು ಹೇಳಲ್ಪಟ್ಟಿರುವುವೋ, ಆ ಲಕ್ಷಣಗಳನ್ನೇ ಮುಖ್ಯವಾಗಿಟ್ಟುಕೊಂಡು, ಅವರವರನ್ನು ಆಯಾವರ್ಣದವರೆಂದು ನಿರ್ಣಯಿಸಬಹುದು ಬ್ರಾಹ್ಮಣನಿಗಿರಬೇಕಾದ ಶಮದಮಾದಿಗುಣಗಳು ಬೇರೆವರ್ಣದವನಿಗಿದ್ದರೂ, ಅವನನ್ನು ಬ್ರಾಹ್ಮಣನೆಂದೇ ಭಾವಿಸಬಹುದು ಈ ಜಾತಿನಿರ್ಣಯಕ್ಕೆ ಅವರವರ ನಡತೆಗಳೇ ಮುಖ್ಯ ಪ್ರಮಾಣವೇ ಹೊರತು,ಹುಟ್ಟಿದ ಜಾತಿಯೇ ಮುಖ್ಯವಲ್ಲ ಹನ್ನೊಂದನೆಯ ಅಧ್ಯಾಯವು.

---

### { ನಾರದನು ಧರ್ಮರಾಜನಿಗೆ ಆಶ್ರಮಧರ್ಮಗಳನ್ನು ವಿವರಿಸಿದುದು. }

ಓ ಧರ್ಮರಾಜಾ! ಇದುವರೆಗೆ ಬ್ರಾಹ್ಮಣಾದಿವರ್ಣಗಳ ಧರ್ಮವನ್ನು ವಿವರಿಸಿದುದಾಯಿತು ಇನ್ನು ಆಶ್ರಮಧರ್ಮಗಳನ್ನು ಹೇಳುವೆನು ಕೇಳು! ಆಶ್ರಮಗಳಲ್ಲಿ ಬ್ರಹ್ಮಚರ್ಯವೇ ಮೊದಲನೆಯದು! ಬ್ರಹ್ಮಚಾರಿಯು ಗುರುಕುಲದಲ್ಲಿಯೇ ವಾಸಮಾಡುತ್ತ, ಜಿತೇಂದ್ರಿಯನಾಗಿ, ಗುರುವಿಗೆ

ಹಿತವಾದ ಕಾರ್ಯವನ್ನೇ ಆಚರಿಸುತ್ತಿರಬೇಕು. ಆ ಗುರುವಿನಲ್ಲಿ ಪೂರ್ಣವಿಶ್ವಾಸದಿಂದಿರಬೇಕು ದಾಸನಂತೆ ಅವನ ಸೇವೆಯನ್ನು ಮಾಡಬೇಕು. ಪ್ರಾತಃಸ್ಸಾಯಂಕಾಲಗಳೆರಡರಲ್ಲಿಯೂ, ಗುರುಗಳನ್ನೂ, ಸೂರ್ಯಾಗ್ನಿಗಳನ್ನೂ, ಇತರ ದೇವತೆಗಳನ್ನೂ ಉಪಾಸನೆಮಾಡಬೇಕು. ಹಾಗೆಯೇ ಪ್ರಾತಸ್ಸಾಯಂಕಾಲಗಳಲ್ಲಿ ಎಚ್ಚರದಿಂದ ಗಾಯಿತ್ರಿಯನ್ನು ಜಪಿಸಬೇಕು. ಉಚಿತಕಾಲಗಳಲ್ಲಿ ತನ್ನ ಗುರುವು ಕರೆದಾಗ, ಅವನ ಬಳಿಗೆ ಹೋಗಿ ವೇದಾಧ್ಯಯನವನ್ನು ಮಾಡಬೇಕು. ಅಧ್ಯಯನಪ್ರಾರಂಭದಲ್ಲಿಯೂ, ಕೊನೆಯಲ್ಲಿಯೂ ಗುರುವಿನ ಪಾದಗಳನ್ನು ಹಿಡಿದು ನಮಸ್ಕರಿಸಬೇಕು. ಮತ್ತು ಬ್ರಹ್ಮಚಾರಿಯು, ಮುಂಜಿ, ಕೃಷ್ಣಾಜಿನ, ಜಟೆ, ದಂಡ, ಕಮಂಡಲು, ಯಜ್ಞೋಪವೀತ, ದರ್ಭೆಯ ಪವಿತ್ರ, ಇವುಗಳನ್ನು ಯಾವಾಗಲೂ ಧರಿಸಿರಬೇಕು ಹಗಲುರಾತ್ರಿಗಳೆರಡರಲ್ಲಿಯೂ ಭಿಕ್ಷೆಮಾಡಿ ತಂದ ಅನ್ನವನ್ನು, ತನ್ನ ಗುರುವಿನ ಕೈಗೊಪ್ಪಿಸಿ, ಅವನು ಅನುಮತಿಯನ್ನು ಕೊಟ್ಟಪಕ್ಷದಲ್ಲಿ ಆ ಶೇಷವನ್ನು ತಾನು ಭುಜಿಸಬೇಕು. ಆ ಗುರುವು ಅನುಮತಿಸದಕಾಲದಲ್ಲಿ ಉಪವಾಸದಿಂದಲೇ ಇರಬೇಕು ಆಹಾರವನ್ನು ಮಿತವಾಗಿ ಭುಜಿಸುತ್ತ, ಸದಾಚಾರಪರನಾಗಿ ಆಯಾಕಾರ್ಯಗಳನ್ನು ಶ್ರದ್ಧೆಯಿಂದ ನಡೆಸಬೇಕು. ಇಂದ್ರಿಯಗಳನ್ನು ಸಂಪೂರ್ಣವಾಗಿ ನಿಗ್ರಹಿಸಿಡಬೇಕು. ಅತ್ಯವಶ್ಯವಿದ್ದಾಗಹೊರತು, ಸ್ತ್ರೀಯರೊಡನೆಯೂ, ಸ್ತ್ರೀಯರಲ್ಲಿ ಮೋಹವುಳ್ಳವರೊಡನೆಯೂಮಾತಾಡಬಾರದು. ಸ್ತ್ರೀವಿಷಯವಾದ ಮಾತುಕಥೆಗಳನ್ನು ಸಂಪೂರ್ಣವಾಗಿತ್ಯಜಿಸಬೇಕು. ಗೃಹಸ್ಥಧರ್ಮಗಳಿಗೆ ಸ್ವಲ್ಪವೂಮನಸ್ಸುಕೊಡದೆ, ದೃಢಬ್ರಹ್ಮಚರ್ಯೆಯಲ್ಲಿರಬೇಕು ಸ್ತ್ರೀಯರಿದ್ದಕಡೆಗೆ ಸುಳಿಯಬಾರದು ಇಂದ್ರಿಯಗಳು ಬಹಳ ಬಲಿಷ್ಠಗಳಾದುದರಿಂದ, ಸ್ವಲ್ಪಮಾತ್ರದಅವಕಾಶವನ್ನು ಕೊಟ್ಟರೂ, ಕೇವಲ ವಿರಕ್ತನಾದಸನ್ಯಾಸಿಯಮನಸ್ಸನ್ನಾದರೂ ತಮ್ಮ ಕಡೆಗೆಸೆಳೆದುಬಿಡುವುವು ತಲೆಬಾಚುವುದು, ಮೈಯೊತ್ತುವುದು, ಸ್ನಾನಮಾಡಿಸುವುದು, ಅಭ್ಯಂಗನ ಮಾಡಿಸುವುದು ಇಂತಹ ಕಾರ್ಯಗಳನ್ನು ಸ್ತ್ರೀಯರ ಕೈಯಿಂದ ಮಾಡಿಸಿಕೊಳ್ಳಬಾರದು. ಯೌವನವತಿಯರಾದ ಗುರುಪತ್ನಿಯರು ಇಂತಹ ಕಾರ್ಯಕ್ಕೆ ಬಂದಾಗ ಅವರನ್ನು ಬೇಡವೆಂದೇ ನಿಷೇಧಿಸಬೇಕು ಓ ಧ

ರ್ಮರಾಜಾ! ಸ್ತ್ರೀಯರನ್ನು ಅಗ್ನಿಗೂ, ಪುರುಷನನ್ನು ತುಪ್ಪದ ಗಡಿಗೆಗೂಸ
ಮಾನವೆಂದು ತಿಳಿ! ಇವೆರಡನ್ನೂ ಒಂದುಕಡೆಯಲ್ಲಿಟ್ಟರೆ ತುಪ್ಪವುಕರಗಿಬೀ
ಳುವುದೇ ನಿಶ್ಚಯವಲ್ಲವೆ? ಹಾಗೆಯೇಸ್ತ್ರೀಯರ ಸಹವಾಸದಿಂದ ಪುರುಷನ
ಮನಸ್ಸು ಕರಗುವುದರಲ್ಲಿ ಸಂದೇಹವೇನು ? ಆದುದರಿಂದ ಪುರುಷನು ತನ್ನ
ಹೊಟ್ಟೆಯಲ್ಲಿ ಹುಟ್ಟಿದ ಮಗಳೊಡನೆಯಾದರೂ ರಹಸ್ಯಸ್ಥಳದಲ್ಲಿ ನಿಲ್ಲಬಾ
ರದು. ಉಚಿತಕಾಲಗಳಲ್ಲಿ ಅವರಿಗೆ ಆವಶ್ಯವಿದ್ದ ಕಾರ್ಯವನ್ನುಮಾತ್ರ
ನಡೆಸಬೇಕು. ಈ ನಿಯಮವು ಬ್ರಹ್ಮಚಾರಿಗೆಮಾತ್ರವೇ ಅಲ್ಲದೆ, ಬ್ರಹ್ಮೋ
ಪಾಸನದಲ್ಲಿ ನಿರತನಾಗಬೇಕೆಂಬ ಯತಿಯೂಕೂಡ, ಆ ಸ್ತ್ರೀಯರ ಸಹವಾ
ಸವನ್ನೂ,ಅವರ ವಿಷಯವಾದ ಮಾತುಗಳನ್ನೂ ಸಂಪೂರ್ಣವಾಗಿ ತ್ಯಜಿಸ
ಬೇಕು ಪರಮೇಶ್ವರನು ತನ್ನ ಮಾಯೆಯಿಂದ ಜೀವನಿಗೆ ಶರೀರಗಳನ್ನು
ಕಲ್ಪಿಸಿಡುವನು ಆ ಶರೀರವೇ ಜೀವನಿಗೆ ಆತ್ಮವೆಂಬ ಭ್ರಾಂತಿಯ
ನ್ನುಂಟುಮಾಡುವುದು ಈ ಶರೀರವನ್ನು ಭಗವಂತನು ಕಾರ್ಯಸಮರ್ಥ
ವನ್ನಾಗಿ ಮಾಡಿಟ್ಟಿರುವವರೆಗೂ, "ನಾನೇ ದೇವತೆ! ನಾನೇ ಮನುಷ್ಯ
ನು!" ಎಂಬ ಭೇದಬುದ್ಧಿಗಳೆಲ್ಲವೂ ಅನುಸರಿಸಿ ಬರುವುವು ಈ ಭೇದಬು
ದ್ಧಿಯಿರುವವರೆಗೆ ಉತ್ತಮಪುರುಷಾರ್ಥವಾದ ಮೋಕ್ಷವು ಕೈಗೂಡಲಾ
ರದು. ಹಾಗಿದ್ದರೂ ಈ ಭೇದಬುದ್ಧಿಯು ತಪ್ಪುವವರೆಗೆ ಮನುಷ್ಯನುತನಗೆ
ಶರೀರದಮೂಲಕವಾಗಿ ಬಂದ ಆಯಾವರ್ಣಾಶ್ರಮಭೇದಗಳನ್ನನುಸರಿಸಿ,
ಆಯಾಧರ್ಮಗಳನ್ನು ತಪ್ಪದೆ ನಡೆಸುತ್ತಬಂದಪಕ್ಷದಲ್ಲಿ, ಅದರಿಂದಕ್ರಮ
ಕ್ರಮವಾಗಿ ಆಭೇದಬುದ್ಧಿಯನ್ನುಂಟುಮಾಡತಕ್ಕ ಅಜ್ಞಾನವು ತಾನಾಗಿ
ಯೇ ನೀಗುವುದು. ಆತ್ಮಪರಮಾತ್ಮವಿವೇಕವೂ ಹುಟ್ಟುವುದು ಕೊನೆಗೆಮೋ
ಕ್ಷವೂ ಲಭಿಸುವುದು. ಪ್ರಾಯಕವಾಗಿ ಬ್ರಹ್ಮಚಾರಿಗಳಿಗೆ ವಿಧಿಸಲ್ಪಟ್ಟ
ನಿಯಮಗಳನ್ನೇ ಬ್ರಹ್ಮೋಪಾಸನದಲ್ಲಿರುವ ಸನ್ಯಾಸಿಗಳೂ, ಗೃಹಸ್ಥರೂ
ಅವಶ್ಯವಾಗಿ ನಡೆಸುತ್ತಬರಬೇಕು ಆದರೆ ಗೃಹಸ್ಥಧರ್ಮಗಳಲ್ಲಿಮಾತ್ರ
ಕೆಲವುವಿಶೇಷಗಳುಂಟು. ಗೃಹಸ್ಥನಿಗೆ ಋತುಕಾಲಗಳಲ್ಲಿ ಸ್ತ್ರೀಸಂಭೋಗ
ವುಂಟು. ಆದುದರಿಂದ ಅವನಿಗೆ ಬ್ರಹ್ಮಚರ್ಯವೆಂಬುದು ನಿತ್ಯವಲ್ಲ. ಸ್ತ್ರೀಸಂ
ಗವಿಲ್ಲದಕಾಲದಲ್ಲಿ? ಗೃಹಸ್ಥನೂ ಪೂರ್ಣಬ್ರಹ್ಮಚರ್ಯದಲ್ಲಿದ್ದಂತೆಯೇಭಾವಿ

ಸಲ್ಪಡುವನು ಬ್ರಹ್ಮಚರ್ಯವನ್ನು ಸರಿಯಾಗಿ ಅನುಷ್ಠಿಸತಕ್ಕವರು,ಮೈಗೆ ಎಣ್ಣೆಯನ್ನೊತ್ತಿಸುವುದು, ಅಭ್ಯಂಗನ ಮಾಡುವುದು,ಕಣ್ಣಿಗೆಕಪ್ಪನ್ನಿಡುವುದು, ಮೈಯೊತ್ತಿಸುವುದು, ಸ್ತ್ರೀಪ್ರತಿಮೆಗಳನ್ನು ಬರೆಸುವುದು,ಮದ್ಯಮಾಂಸಗಳನ್ನು ಸೇವಿಸುವುದು, ಪುಷ್ಪಗಳನ್ನು ಮುಡಿಯುವುದು, ಮೈಗೆ ಗಂಧವನ್ನು ಲೇಪಿಸುವುದು, ಇತರ ದೇಹಾಲಂಕಾರಗಳನ್ನು ಮಾಡಿಸಿಕೊಳ್ಳುವುದು, ಈ ಕಾರ್ಯಗಳೆಲ್ಲವನ್ನೂ ಸಂಪೂರ್ಣವಾಗಿತ್ಯಜಿಸಬೇಕು ದೃಢವ್ರತವನ್ನು ಹಿಡಿದ ಗೃಹಸ್ಥರೂ ಈ ನಿಯಮಗಳಿಂದಲೇ ನಡೆದುಕೊಳ್ಳಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರುವರ್ಣದವರೂ ಬ್ರಹ್ಮಚರ್ಯದಿಂದ ಗುರುಕುಲವಾಸವನ್ನು ಮಾಡುತ್ತ,ಅಂಗಗಳೊಡನೆಯೂ,ಉಪನಿಷತ್ತುಗಳೊಡನೆಯೂ, ವೇದಗಳನ್ನೋದಿ, ತಮ್ಮ ಬುದ್ಧಿಬಲವಿದ್ದಷ್ಟು ಆ ವೇದಗಳ ಅರ್ಥವನ್ನೂ ತಿಳಿದುಕೊಳ್ಳಬೇಕು. ಬ್ರಹ್ಮಚಾರಿಯು ಹೀಗೆ ವೇದಾಧ್ಯಯನವನ್ನು ಮುಗಿಸಿದಮೇಲೆ, ತನಗೆ ಶಕ್ತಿಯಿದ್ದಷ್ಟು ಗುರುದಕ್ಷಿಣೆಯನ್ನು ಸಮರ್ಪಿಸಿ, ಆ ಗುರುವಿನ ಅನುಮತಿಯನ್ನು ಪಡೆದಮೇಲೆ, ಗೃಹಸ್ಥಧರ್ಮವನ್ನಾಗಲಿ, ಇಲ್ಲವೇ ಸನ್ಯಾಸಾಶ್ರಮವನ್ನಾಗಲಿ ಕೈಕೊಳ್ಳಬಹುದು ಗೃಹಸ್ಥಧರ್ಮದಲ್ಲಿರತಕ್ಕವನು, ಅದರಿಂದ ಸನ್ಯಾಸಾಶ್ರಮಕ್ಕಾಗಲಿ, ವಾನಪ್ರಸ್ಥಾಶ್ರಮಕ್ಕಾಗಲಿ ಪ್ರವೇಶಿಸಬಹುದು, ಬ್ರಹ್ಮಚಾರಿಗಳೂ, ಗೃಹಸ್ಥರೂ ತಮ್ಮತಮ್ಮ ಆಶ್ರಮಧರ್ಮಗಳಲ್ಲಿಯೇ ನಿಂತರೂ ನಿಲ್ಲಬಹುದು. ಮೇಲೆಹೇಳಿದ ಎಲ್ಲಾ ಆಶ್ರಮಗಳಲ್ಲಿರತಕ್ಕವರೂಕೂಡ, ಅಗ್ನಿಯಲ್ಲಿಯೂ, ಗುರುವಿನಲ್ಲಿಯೂ, ತನ್ನಲ್ಲಿಯೂ, ಸಮಸ್ತ ಭೂತಗಳಲ್ಲಿಯೂ ಭಗವಂತನು ಅಂತರ್ಯಾಮಿಯಾಗಿ ನೆಲೆಗೊಂಡು ನಿಯಮಿಸುತ್ತಿರುವನೆಂದೂ, ಹಾಗಿದ್ದರೂ ಆ ಆಶ್ರಯವಸ್ತುಗಳಲ್ಲಿರುವ ದೋಷಕ್ಕೆ ಅವನು ಗುರಿಯಾಗತಕ್ಕವನಲ್ಲವೆಂದೂ ತತ್ವವನ್ನು ಚೆನ್ನಾಗಿ ಭಾವಿಸಿ ತಿಳಿಯಬೇಕು. ಬ್ರಹ್ಮಚರ್ಯಾದ್ಯಾಶ್ರಮಗಳಲ್ಲಿ ಯಾವುದನ್ನು ಹಿಡಿದರೂ, ಆಯಾ ಆಶ್ರಮಧರ್ಮಗಳನ್ನು ತಪ್ಪದೆ ನಡೆಸುತ್ತಬಂದರೆ, ಅದರಿಂದ ಕ್ರಮವಾಗಿ ತತ್ವತ್ರಯಜ್ಞಾನವುಂಟಾಗಿ, ಕೊನೆಗೆ ಬ್ರಹ್ಮಸಾಯುಜ್ಯವನ್ನೂ ಪಡೆಯಬಹುದು ಓ ರಾಜೇಂದ್ರಾ! ಮಹರ್ಷಿಗಳೂ ಆದರಿಸತಕ್ಕ ವಾನಪ್ರಸ್ಥಧರ್ಮಗಳನ್ನು ಹೇಳುವೆನು

ಕೇಳು! ಈ ಧರ್ಮವನ್ನು ಲೋಪವಿಲ್ಲದೆ ನಡೆಸುತ್ತಬಂದವರು, ಪರಮ ಯೋಗಿಗಳು ಹೊಂದತಕ್ಕ ವಿಷ್ಣುಲೋಕವನ್ನು ಶೀಘ್ರದಲ್ಲಿಯೇ ಪಡೆಯು ವರು ಈ ವಾನಪ್ರಸ್ಥಾಶ್ರಮಿಗಳು, ಕೃಷಿಮಾಡಿ ಬೆಳೆದ ಧಾನ್ಯಗಳನ್ನು ಭುಜಿಸಬಾರದು. ಕೃಷಿಯಿಲ್ಲದೆ ಕಾಡಿನಲ್ಲಿ ಬೆಳೆದ ಗೆಡ್ಡೆ, ಗೆಣಸು,ಹಣ್ಣು,ಹಂ ಪಲು ಮುಂತಾದುವುಗಳನ್ನಾದರೂ ಪಕ್ವವಾಗುವುದಕ್ಕೆ ಮೊದಲೇ ತೆಗೆದು ತಿನ್ನಬಾರದು ಬೆಂಕಿಯಲ್ಲಿ ಪಕ್ವವಾದುದನ್ನೂ ತಿನ್ನಬಾರದು ಹಸಿಯ ಪದಾ ರ್ಥಗಳನ್ನು ಬೆಂಕಿಯಲ್ಲಿ ಸುಟ್ಟೂ ತಿನ್ನಬಾರದು ಕೇವಲ ಸೂರ್ಯಕಿರಣ ದಿಂದ ಪಕ್ವವಾಗಿ ಮರದಿಂದುದಿರಿದ ಹಣ್ಣುಗಳನ್ನುಮಾತ್ರವೇ ಭಕ್ಷಿಸಬೇ ಕು ಕಾಡಿನಲ್ಲಿ ಉದಿರಿದ ಧಾನ್ಯವನ್ನು ತಂದು, ವಿಹಿತಕಾಲಗಳಲ್ಲಿ ಅದರಿಂದ ಚರು, ಪುರೋಡಾಶಮುಂತಾದುವುಗಳನ್ನು ಸಿದ್ಧಪಡಿಸಿ, ಹೋಮಕಾರ್ಯ ವನ್ನು ನಡೆಸಬೇಕು ಈ ಕಾಳುಗಳನ್ನು ಕಾಲಾಂತರಕ್ಕಾಗಿ ಸಂಗ್ರಹಿಸಿಡ ಬಾರದು ಹೊಸಕಾಳುಗಳು ಸಿಕ್ಕಿದಾಗ ಹಿಂದಿದ್ದುವನ್ನು ಉಪಯೋ ಗಿಸಬಾರದು ಕಾಡಿನಲ್ಲಿ ಪರ್ಣಶಾಲೆಗಳನ್ನಾಗಲಿ, ಪರ್ವತಗುಹೆಗಳ ನ್ನಾಗಲಿ, ವಾಸಸ್ಥಾನವನ್ನಾಗಿ ಮಾಡಿಕೊಳ್ಳಬೇಕು ಈ ವಾಸಸ್ಥಳಗಳು ಹೋಮಾಗ್ನಿಯನ್ನು ರಕ್ಷಿಸುವುದಕ್ಕೆಹೊರತು ತನ್ನ ಸುಖಕ್ಕಲ್ಲವೆಂದು ದು ತಿಳಿದು, ತಾನು ಯಾವಾಗಲೂ, ಚಳಿ, ಗಾಳಿ, ಮಳೆ, ಹಸಿ ಮುಂತಾ ದುವುಗಳನ್ನು ಸಹಿಸಿಕೊಂಡು, ಬಿಸಿಲಲ್ಲಿಯೇ ಇದ್ದು ದೇಹವನ್ನು ಶೋ ಷಿಸಬೇಕು ಮತ್ತು ಜಟೆಯನ್ನು ಬೆಳೆಸಿ, ಮೈಕೂದಲನ್ನೂ, ಉಗುರುಗಳ ನ್ನೂ, ಮೀಸೆಗಳನ್ನೂ ದೇಹದ ಕೊಳೆಯನ್ನೂ ತೆಗೆಯದೆ, ದಂಡಕಮಂಡ ಲುಗಳನ್ನು ಹಿಡಿದು, ಕೃಷ್ಣಾಜಿನವನ್ನೂ, ವಲ್ಕಲಗಳನ್ನೂ ಸ್ರುಕ್ಸ್ರುವ ಮೊದ ಲಾದ ಇತರಪರಿಕರಗಳನ್ನೂ ಸ್ವೀಕರಿಸಬೇಕು ಹೀಗೆ ದೃಢಮನಸ್ಸಿನಿಂದ ಎಷ್ಟೋ ಕಷ್ಟಗಳನ್ನಾದರೂ ಸಹಿಸಿಕೊಂಡು, ಶರೀರದಾರ್ಢ್ಯಕ್ಕೆ ತಕ್ಕಂ ತೆ ಹನ್ನೆರಡುವರಷಗಳಾಗಲಿ, ಎಂಟು ವರುಷಗಳಾಗಲಿ, ಎರಡು ವರುಷಗ ಳಾಗಲಿ, ಕೊನೆಗೆ ಒಂದೇ ವರುಷವಾಗಲಿ, ಶ್ರದ್ಧೆಯಿಂದ ಇದೇ ನಿಯಮ ಗಳನ್ನ ನುಸರಿಸುತ್ತ ಕಾಡಿನಲ್ಲಿರಬೇಕು. ಹೀಗೆ ನಡಿಸುತ್ತಬರುವಾಗ ವ್ಯಾಧಿ ಯಿಂದಲೋ,ಅಥವಾ ಮುಪ್ಪಿನಿಂದಲೋ ಮುಂದೆ ಆಧರ್ಮಗಳನ್ನುನಡೆಸು

ವೃದ್ಧಕ್ಕಾಗಲಿ, ಜ್ಞಾನಸಂಪಾದನೆಗಾಗಲಿ, ಸನ್ಯಾಸಪರಿಗ್ರಹಕ್ಕಾಗಲಿ, ಶಕ್ತಿಯಿಲ್ಲದಪಕ್ಷದಲ್ಲಿ, ಅಗ್ನಿಗಳನ್ನು ಆತ್ಮಸಮಾರೋಪಣೆಮಾಡಿಕೊಂಡು ಅಹಂಕಾರಮಮಕಾರಗಳನ್ನು ನಿಶ್ಶೇಷವಾಗಿ ಬಿಟ್ಟು, ತನ್ನ ಶರೀರ ದಲ್ಲಿರುವ ಪಂಚಭೂತಗಳನ್ನೂ, ಇಂದ್ರಿಯಗಳನ್ನೂ ಅದಕ್ಕದ ಕ್ಕೆ ಕಾರಣಭೂತವಾದ ವಸ್ತುಗಳಲ್ಲಿ ಲಯಹೊಂದಿಸಿದಂತೆ (ಎಂದರೆ, ತ ನ್ನ ಶರೀರದಲ್ಲಿರುವ ನವರಂಧ್ರಗಳೂ ಆಕಾಶದಲ್ಲಿಯೂ,ಪ್ರಾಣವಾಯುವು ವಾಯುವಿನಲ್ಲಿಯೂ, ಉಷ್ಣಾಂಶವು ಅಗ್ನಿಯಲ್ಲಿಯೂ, ರಕ್ತ, ಶ್ಲೇಷ್ಮ, ಮೊದಲಾದ ಜಲಾಂಶಗಳು ಜಲದಲ್ಲಿಯೂ, ಮಾಂಸವೇ ಮೊದಲಾದ ಉಳಿದ ಘನಪದಾರ್ಥಗಳು ಭೂಮಿಯಲ್ಲಿಯೂ, ಹೀಗೆ ಉತ್ಪತ್ತಿಕ್ರಮ ವನ್ನನುಸರಿಸಿ ಅದರದರ ಕಾರಣ ವಸ್ತುವಿನಲ್ಲಿ ಸೇರಿಹೋದಂತೆ) ಅನುಸಂ ಧಾನಮಾಡಬೇಕು. ಹಾಗೆಯೆ ವಾಗಿಂದ್ರಿಯವು ತನ್ನ ವಾಗ್ವ್ಯಾ ಪಾರದೊಡನೆ, ತನಗೆ ಅಭಿಮಾನಿದೇವತೆಯಾದ ಅಗ್ನಿಯಲ್ಲಿಯೂ, ಹ ಸ್ತೇಂದ್ರಿಯವು ಅದರ ವ್ಯಾಪಾರದೊಡನೆ ತದಭಿಮಾನಿದೇವತೆಯಾದ ಇಂದ್ರನಲ್ಲಿಯೂ, ಪಾದೇಂದ್ರಿಯವು ಅದರ ವ್ಯಾಪಾರದೊಡನೆ ಕಾಲಸ್ವ ರೂಪಿಯಾದ ವಿಷ್ಣುವಿನಲ್ಲಿಯೂ, ಉಪಸ್ಥೇಂದ್ರಿಯವು ತನ್ನ ಕಾರ್ಯ ವಾದ ಸಂಭೋಗದೊಡನೆ ಪ್ರಜಾಧಿಪತಿಯಲ್ಲಿಯೂ, ಪಾಯುವೆಂಬ ಇಂ ದ್ರಿಯವು ಮಲವಿಸರ್ಜನವೆಂಬ ತನ್ನ ಕಾರ್ಯದೊಡನೆ ಮೃತ್ಯುದೇವನಲ್ಲಿ ಯೂ, ಲಯಹೊಂದಿದಂತೆ ಭಾವಿಸಬೇಕು ಹಾಗೆಯೇ ಕಿವಿ, ಕಣ್ಣು, ನಾಲಗೆ, ಮೂಗು, ತ್ವಕ್ಕು, ಎಂಬ ಈ ಐದುಬಗೆಯ ಜ್ಞಾನೇಂದ್ರಿಯಗ ಳೂ ತಮತಮಗೆ ಭೋಗ್ಯಗಳಾದ ಶಬ್ದ, ರೂಪ, ರಸ, ಗಂಧ, ಸ್ಪರ್ಶಗ ಳೊಡನೆ ಕ್ರಮವಾಗಿ, ತತ್ತದಭಿಮಾನಿಗಳಾದ ದಿಕ್ಕು, ವಾಯು, ಸೂರ್ಯ, ವರುಣ, ಅಶ್ವಿನೀದೇವತೆಗಳಲ್ಲಿ ಲಯಹೊಂದಿದಂತೆಭಾವಿಸಬೇಕು ಹಾಗೆಯೆ ಮನಸ್ಸೆಂಬುದು ಮನೋರಥದೊಡನೆ ಚಂದ್ರನಲ್ಲಿಯೂ, ಬುದ್ಧಿಯು ಭಾವ ನೆಯೊಡನೆ ಬ್ರಹ್ಮನಲ್ಲಿಯೂ, ಅಹಂಕಾರವು ಅಭಿಮಾನದೊಡನೆ ರುದ್ರನಲ್ಲಿ ಯೂ, ಚಿತ್ತವು ಸತ್ವವೆಂಬ ತನ್ನ ವ್ಯಾಪಾರದೊಡನೆ ಕ್ಷೇತ್ರಜ್ಞನಲ್ಲಿಯೂ, ಸಾತ್ವಿಕಾಹಂಕಾರವು ತನ್ನ ಕಾರ್ಯವಾದ ಇಂದ್ರಿಯಗಳೊಡನೆ ತನಗೆ

ಉತ್ಪತ್ತಿಸ್ಥಾನವಾದ್ಯಮಹತ್ತತ್ವದಲ್ಲಿಯೂ, ಲಯಹೊಂದಿದಂತೆ ಭಾವಿಸಬೇಕು ಮತ್ತು ಪಂಚಭೂತಗಳಲ್ಲಿ, ಭೂಮಿಯು ಜಲದಲ್ಲಿಯೂ. ಜಲವು ತೇಜಸ್ಸಿನಲ್ಲಿಯೂ, ತೇಜಸ್ಸು ವಾಯುವಿನಲ್ಲಿಯೂ, ವಾಯುವು ಆಕಾಶದಲ್ಲಿಯೂ, ಆಕಾಶವು ತಾಮಸಾಹಂಕಾರದಲ್ಲಿಯೂ, ಆ ತಾಮಸಾಹಂಕಾರವು ಮಹತ್ತತ್ವದಲ್ಲಿಯೂ, ಆ ಮಹತ್ತತ್ವವು ಅವ್ಯಕ್ತವೆಂಬ ಪ್ರಧಾನದಲ್ಲಿಯೂ, ಈ ಪ್ರಧಾನವು ಪರಮಾತ್ಮಸ್ವರೂಪನಾದ ಜೀವನಲ್ಲಿಯೂ ಸೇರಿಹೋದಂತೆ ಭಾವಿಸಬೇಕು. ಹೀಗೆ ದೇಹೇಂದ್ರಿಯಪ್ರಾಣಗಳೆಲ್ಲವನ್ನೂ ಆದರದರ ಕಾರಣವಸ್ತುಗಳಲ್ಲಿ ಕ್ರಮವಾಗಿ ಲಯಹೊಂದಿಸುತ್ತ ಬಂದಮೇಲೆ, ಉಳಿಯುವ ಜೀವನು,ಕೇವಲ ಜ್ಞಾನಸ್ವರೂಪನೆಂದೂ, ಪರಮಾತ್ಮನಿಗೆ ಶರೀರವಾಗಿ ಅವನ ನಿಯಮಕ್ಕೊಳಪಟ್ಟಿರುವುದರಿಂದ ಪರಮಾತ್ಮಸ್ವರೂಪನೆಂದೂ ಭಾವಿಸಬೇಕು ಈ ಸ್ಥಿತಿಯಲ್ಲಿ ಜೀವನು, ತನಗೆ ಆಧಾರವಾದಕಟ್ಟಿಗೆಯು ಉರಿದುಹೋದಮೇಲೆ, ಬೆಂಕಿಯು ತಾನಾಗಿ ಶಾಂತವಾಗುವಂತೆ, ತನ್ನಲ್ಲಿ ಜಾತಿಗುಣಾದ್ಯಭಿಮಾನಗಳೆಲ್ಲವನ್ನೂ ತೊರೆದು ಶಾಂತನಾಗಿ, ದೇಹತ್ಯಾಗವನ್ನುದ್ದೇಶಿಸಿ ಪ್ರಾಯೋಪವೇಶವನ್ನು ಮಾಡಬೇಕು ಇಲ್ಲಿಗೆ ಹನ್ನೆರಡನೆಯ ಅಧ್ಯಾಯವು.

---

### { ಸನ್ಯಾಸಾಶ್ರಮಧರ್ಮಗಳು ಮತ್ತು ಪ್ರಹ್ಲಾದಾಜಗರ ಸಂವಾದವು }

ಧರ್ಮರಾಜಾ ಕೇಳು! ರೋಗದಿಂದಾಗಲಿ, ಮುಪ್ಪಿನಿಂದಾಗಲಿ, ಸ್ವಧರ್ಮಗಳನ್ನು ನಡೆಸುವುದಕ್ಕೂ, ಸನ್ಯಾಸಾಶ್ರಮವನ್ನು ಕೈಕೊಳ್ಳುವುದಕ್ಕೂ ಅಶಕ್ತನಾದ ವಾನಪ್ರಸ್ಥನು, ಹೀಗೆ ಪ್ರಾಯೋಪವೇಶದಿಂದ ದೇಹತ್ಯಾಗವನ್ನು ಮಾಡಬೇಕು. ಹಾಗಿಲ್ಲದೆ ವಾನಪ್ರಸ್ಥನಿಯಮಗಳನ್ನು ಪೂರೈಯಿಸಿದಮೇಲೆಯೂ ಪುರುಷನು ದೇಹಬಲವುಳ್ಳವನಾಗಿ, ಬೇರೆ ಆಶ್ರಮಧರ್ಮಗಳನ್ನು ನಡೆಸಬಲ್ಲವನಾಗಿದ್ದಪಕ್ಷದಲ್ಲಿ,ದೇಹವೊಂದನ್ನುಮಾತ್ರ ಉಳಿಸಿಕೊಂಡು, ಸರ್ವಸಂಗಪರಿತ್ಯಾಗಮಾಡಿ, ಸನ್ಯಾಸಾಶ್ರಮವನ್ನು ಪರಿಗ್ರಹಿಸಬಹುದು. ಈ ಸನ್ಯಾಸಿಗಳಿಗೆ,ಅವಶ್ಯವಾಗಿದ್ದರೆಕೌಪೀನವೊಂದು,ನಡುಪಟ್ಟಿ

ಯೊಂದು,ಇವೆರಡೇ ಪರಿಗ್ರಹಿಸಬಹುದಾದ ವಸ್ತುಗಳು ಇವರುತಮ್ಮ ಆಶ್ರಮಧರ್ಮವನ್ನನುಸರಿಸಿ ದಂಡಕಮಂಡಲುಗಳು,(ಜನಿವಾರ,ಉಡಿದಾರ),ಮತ್ತು ಮಳೆಗಾಳಿಗಳ ಬಾಧೆಯನ್ನು ತಡೆಯಲಾರದ ಸಂದರ್ಭದಲ್ಲಿ ಮೈಮುಚ್ಚುವಂತೆ ಒಂದುಬಟ್ಟೆ,ಇವಿಷ್ಟನ್ನುಮಾತ್ರ ಧರಿಸಬಹುದು ಸನ್ಯಾಸಿಗಳು ತಮ್ಮ ದೇಹಕ್ಕಿಂತಲೂ ಬೇರೆಯಾಗಿ ತಮ್ಮಲ್ಲಿಟ್ಟುಕೊಳ್ಳಬಹುದಾದವಸ್ತುಗಳೆಲ್ಲವೂ ಇಷ್ಟೇ! ಈ ಸನ್ಯಾಸಾಶ್ರಮವನ್ನು ಕೈಕೊಂಡವನು, ಒಂದುರಾತ್ರಿಗೆಮೇಲೆ ಒಂದು ಗ್ರಾಮದಲ್ಲಿ ನಿಲ್ಲದೆ, ಭೂಸಂಚಾರಮಾಡಬೇಕು ಹೀಗೆ ಸಿಂತಲ್ಲಿನಿಲ್ಲದೆ ಏಕಾಕಿಯಾಗಿಸಂಚರಿಸುತ್ತ, ಅಲ್ಲಲ್ಲಿ ಭಿಕ್ಷೆಯನ್ನೆತ್ತಿ ಜೀವಿಸಬೇಕು ಆತ್ಮಾನುಭವದಿಂದ್ಲಲೇ ಆನಂದಿಸುತ್ತಿರಬೇಕು ಸಮಸ್ತಭೂತಗಳಿಗೂ ಹಿತವನ್ನೇ ಕೋರುತ್ತ,ಕೋಪವನ್ನು ನಿಗ್ರಹಿಸಿ,ಶ್ರೀಮನ್ನಾರಾಯಣನಲ್ಲಿ ನಟ್ಟಮನಸ್ಸುಳ್ಳವನಾಗಿರಬೇಕು ಚೇತನಾಚೇತನಗಳಿಗಿಂತಲೂ ವಿಲಕ್ಷಣನಾಗಿಯೂ, ವಿಕಾರರಹಿತನಾಗಿಯೂ, ಇರುವಪರಮಾತ್ಮನಲ್ಲಿಯೇ ಈ ಪ್ರಪಂಚವೆಲ್ಲವೂ ಅಡಗಿರುವುದೆಂದೂ, ಆ ಪರಮಾತ್ಮನೇ ಈ ಸಮಸ್ತಜಗತ್ತಿಗೂ ಅಂತರ್ಯಾಮಿಯಾಗಿ ನೆಲೆಗೊಂಡುನಿಯಮಿಸುತ್ತಿರುವನೆಂದೂ,ನಿಶ್ಚಯಜ್ಞಾನದಿಂದತಿಳಿಯಬೇಕು (ಪ್ರಾತಸ್ಸಾಯಂಕಾಲಗಳೆರಡರಲ್ಲಿಯೂ, ದೇಹಕ್ಕಿಂತಲೂ ವಿಲಕ್ಷಣವಾದ ಜೀವಾತ್ಮಸ್ವರೂಪವನ್ನು ವಿಮರ್ಶಿಸುತ್ತ, ಆ ಜೀವಾತ್ಮನಿಗೂ ಅಂತರಾತ್ಮನಾದ ಪರಮಾತ್ಮನ ಸ್ವರೂಪವನ್ನೂ, ಅವನ ಸೃಷ್ಟಿವೈಚಿತ್ರ್ಯವನ್ನೂ ಚಿಂತಿಸುತ್ತಿರಬೇಕು ) ನಿದ್ರೆ, ಎಚ್ಚರ, ಇವೆರಡಕ್ಕೂ ಮಧ್ಯಮವೆನಿಸಿಕೊಂಡ ಸ್ವಪ್ನಾವಸ್ಥೆಯಲ್ಲಿ, ದೇಹಕ್ಕಿಂತಲೂ ಬೇರೆಯಾಗಿ ತೋರುವ ಆತ್ಮಸ್ವರೂಪವನ್ನೂ ಆಗ ಜೀವಾತ್ಮನ ಅನುಭವಕ್ಕೆ ಬರುವ ಪರಮಾತ್ಮನ ವಿಚಿತ್ರಸೃಷ್ಟಿಗಳನ್ನೂ ವಿಮರ್ಶಿಸಿ ತಿಳಿಯಬೇಕು. ಜೀವನಿಗೆ ಸಂಸಾರಬಂಧವಾಗಲಿ, ಮೋಕ್ಷವಾಗಲಿ, ಭಗವಂತನ ಸಂಕಲ್ಪದಿಂದ ಏರ್ಪಡುವುದೇಹೊರತು, ಸಹಜವಾಗಿ ಬಂದುದಲ್ಲವೆಂದು ತಿಳಿಯಬೇಕು ಸಂಸಾರಿಗಳು ಮರಣಕ್ಕಾಸೆಪಡದಂತೆ, ಸನ್ಯಾಸಿಯು ಅಸ್ಥಿರವಾದ ಈ ದೇಹಕ್ಕಾಸೆಪಡದೆ, ಪ್ರಾಣಿಗಳ ಉತ್ಪತ್ತಿವಿನಾಶಗಳಿಗೆ ಕಾರಣವಾದ ಕಾಲಗತಿಯನ್ನೇ ಇದಿರುನೋಡುತ್ತಿ

ರಬೇಕು. ಸನ್ಯಾಸಿಯು ಅಸಚ್ಛಾಸ್ತ್ರಗಳನ್ನು ಕಿವಿಗೊಟ್ಟು ಕೇಳಬಾರದು. ಜೀವನೋಪಾಯಕ್ಕಾಗಿ ಯಾವವೃತ್ತಿಯನ್ನೂ ಅವಲಂಬಿಸಬಾರದು ವಿತಂಡವಾದಗಳಿಗೆ ಬಾಯಿಕ್ಕಬಾರದು ವಾದಪ್ರತಿವಾದಗಳಲ್ಲಿ ಯಾವ ಪಕ್ಷವನ್ನೂ ಹಟದಿಂದ ಹಿಡಿಯಬಾರದು. ಸನ್ಯಾಸಿಯು ಧನಾಶೆಯಿಂದ ಹೆಚ್ಚಾಗಿ ಶಿಷ್ಯರನ್ನೂ ಸೇರಿಸಿಕೊಳ್ಳಬಾರದು ಒಂದುವೇಳೆ ಅನೇಕಶಿಷ್ಯರು ಬಂದು ಸೇರಿದರೂ, ಅವರಿಗೆ ವಿಶೇಷವಾಗಿ ಶಾಸ್ತ್ರಗಳನ್ನೋದಿಸುವುದರಲ್ಲಿಯೇ ತಾನು ಕಾಲವನ್ನು ಕಳೆಯಬಾರದು ಏಕೆಂದರೆ, ಈ ಕಾರ್ಯದಲ್ಲಿಯೇ ಹೆಚ್ಚಾಗಿ ಪ್ರವರ್ತಿಸುವ ಸನ್ಯಾಸಿಯ ಮನಸ್ಸು,ಆತ್ಮಜ್ಞಾನದಲ್ಲಿ ಪ್ರವರ್ತಿಸಲಾರದು. ಸನ್ಯಾಸಿಗಳು ಮಠಾಧಿಪತ್ಯವನ್ನು ಕೈಕೊಳ್ಳಬಾರದು ಹಾಗೆ ಮಠಾಧಿಪತಿಯಾಗಿ ನಿಂತಪಕ್ಷದಲ್ಲಿ, ನಿಗ್ರಹಾನುಗ್ರಹಗಳಿಂದ ವೈಷಮ್ಯಬುದ್ಧಿಗೆ ಅವಕಾಶಕೊಡಬೇಕಾಗುವುದು ಆದುದರಿಂದ ಯತ್ಯಾಶ್ರಮವನ್ನು ಕೇವಲಧರ್ಮಾರ್ಥವಾಗಿ ಕೈಕೊಂಡಾಗಲೇ ಶಿಷ್ಯರನ್ನು ಸೇರಿಸಿಕೊಳ್ಳಬೇಕಾಗುವುದೇಹೊರತು, ಆ ಆಶ್ರಮವನ್ನು ಕೇವಲಜ್ಞಾನಾರ್ಥವಾಗಿಯೇ ಅಂಗೀಕರಿಸುವಪಕ್ಷದಲ್ಲಿ, ಈ ಶಿಷ್ಯಾದಿಗಳ ಸಂಪರ್ಕವನ್ನು ದೂರವಾಗಿ ಬಿಟ್ಟುಬಿಡುವುದೇ ಮೇಲು ! ವಿಷಯಸುಖಗಳಿಗೆ ಸ್ವಲ್ಪವಾದರೂ ಆಸೆಪಡದೆ, ಜಿತೇಂದ್ರಿಯನಾಗಿ, ಧರ್ಮಾಧರ್ಮಗಳಲ್ಲಿ ಸಮಬುದ್ಧಿಯುಳ್ಳವನಾಗಿ, ಕೇವಲ ಜ್ಞಾನಮಾರ್ಗದಲ್ಲಿಯೇ ನಿಲ್ಲತಕ್ಕ ಸನ್ಯಾಸಿಗೆ, ಶಿಷ್ಯರನ್ನೋದಿಸುವುದರಿಂದ ಧರ್ಮಾರ್ಜನೆಯನ್ನುಮಾಡಿ ಫಲವೇನು ? ಆದರೆ ! “ ಶಿಷ್ಯರನ್ನು ಸಂಗ್ರಹಿಸದಿದ್ದಪಕ್ಷದಲ್ಲಿ ಯತಿಯು ತನ್ನ ಜ್ಞಾನಾತಿಶಯವನ್ನು ಲೋಕಕ್ಕೆ ಪ್ರಕಾಶಪಡಿಸುವುದು ಹೇಗೆ” ಎಂದು ನೀನು ಶಂಕಿಸಬಹುದು. ಸನ್ಯಾಸಿಗೆ ತಾನು ಜ್ಞಾನಿಯೆಂಬುದನ್ನು ಹೊರಕ್ಕೆ ಕಾಣಿಸದಿರಬೇಕಾದುದೇ ಯುಕ್ತವು ಸನ್ಯಾಸಿಗಳು ತನ್ನಲ್ಲಿರುವ ಯಾವ ಮಹಿಮೆಯನ್ನೂ ಹೊರಕ್ಕೆ ಕಾಣಿಸಬಾರದು ತಾನು ವಿದ್ವಾಂಸನಾಗಿದ್ದರೂ ಹೊರಗಿನವರಿಗೆ ಏನೂ ತಿಳಿಯದ ಮೂಢನಂತೆಯೂ, ವಾದಸಮರ್ಥನಾಗಿದ್ದರೂ ಮೂರ್ಖನಂತೆಯೂ, ಬಹಳ ಅನುಭವಶಾಲಿಯಾಗಿದ್ದರೂ ಕೇವಲಬಾಲನಂತೆಯೂ ನಟಿಸಬೇಕು. ತನ್ನ ಉದ್ದೇಶ

ವೇನೆಂಬುದನ್ನೇ ಹೊರಕ್ಕೆ ಕಾಣಿಸದೆ,ಭಗವಂತನದಿವ್ಯಮಂಗಳವಿಗ್ರಹವೊಂದರಲ್ಲಿಯೇ ನಟ್ಟಮನಸ್ಸುಳ್ಳವನಾಗಿ, ನೋಡಿದವರಿಗೆ ಹುಚ್ಚನಂತೆ ಕಾಣಿಸಿಕೊಳ್ಳಬೇಕು ಸನ್ಯಾಸಿಯು ಜ್ಞಾನಹೀನನಾಗಿದ್ದಾಗಮಾತ್ರ ಧರ್ಮಮಾರ್ಗವನ್ನನುಷ್ಠಿಸಬಹುದು! ಜ್ಞಾನನಿಷ್ಠನಾದವನು ಧರ್ಮಮಾರ್ಗವನ್ನು ಹಿಡಿಯಬೇಕಾದುದಿಲ್ಲ. ಉಪವಾಸಾದಿವ್ರತಗಳೂಕೂಡ ದೇಹಬಲವನ್ನು ಕೆಡಿಸಿ ಜ್ಞಾನಯೋಗಕ್ಕೆ ಪ್ರತಿಬಂಧಕವಾಗುವುದರಿಂದ,ಜ್ಞಾನಯೋಗವನ್ನೇ ಮುಖ್ಯವಾಗಿ ಹಿಡಿಯತಕ್ಕ ಸನ್ಯಾಸಿಯು, ಕರ್ಮಮಾರ್ಗಕ್ಕೆ ಕೈಯಿಕ್ಕಲೇ ಬಾರದು ಧರ್ಮಾಧರ್ಮಗಳೆರಡೂ, ಮೋಕ್ಷಕ್ಕೆಪ್ರತಿಬಂಧಕಗಳೆಂಬುದನ್ನು ತಿಳಿದು ಜ್ಞಾನಮಾರ್ಗವನ್ನೇಹಿಡಿಯಬೇಕಾದುದು ಸನ್ಯಾಸಿಯ ಮುಖ್ಯಧರ್ಮವು. ಹೀಗೆ ಸನ್ಯಾಸಿಯು ಮಹಾಜ್ಞಾನಿಯಾಗಿದ್ದಾಗಲೂ ತನ್ನ ಮಹಿಮೆಯನ್ನು ಇತರರಿಗೆ ಕಾಣಿಸಬಾರದೆಂಬುದಕ್ಕೆ ನಿದರ್ಶನವಾಗಿ ಒಂದು ಇತಿಹಾಸವುಂಟು ಇದೇವಿಷಯದಲ್ಲಿ ಪ್ರಹ್ಲಾದನಿಗೂ ಅಜಗರವ್ರತದಲ್ಲಿದ್ದ ಒಬ್ಬ ಮಹರ್ಷಿಗೂ, ಹಿಂದೆ ಕೆಲವು ಸಂವಾದಗಳು ನಡೆದಿರುವುವು. ಹಿಂದೊಮ್ಮೆ ಭಗವದ್ಭಕ್ತನಾದ ಪ್ರಹ್ಲಾದನು, ಪ್ರಪಂಚದ ತತ್ವವನ್ನು ತಿಳಿಯಬೇಕೆಂದೆಣಿಸಿ, ತನ್ನ ಕೆಲವು ಪರಿವಾರಗಳೊಡನೆ ಭೂಸಂಚಾರವನ್ನು ಮಾಡುತ್ತ, ಕಾವೇರೀತೀರದಲ್ಲಿ ಸಹ್ಯಪರ್ವತದ ಸಮೀಪಕ್ಕೆ ಬಂದನು ಆ ಪರ್ವತದ ಬುಡದಲ್ಲಿ ಒಬ್ಬಾನೊಬ್ಬ ಮಹರ್ಷಿಯು ನಿಶ್ಚೇಷ್ಟನಾಗಿ ಬರೀನೆಲದಮೇಲೆ ಮಲಗಿದ್ದನು ಆತನು ಮಹಾತೇಜಸ್ವಿಯಾಗಿದ್ದರೂ ನೆಲದ ಮಣ್ಣಿನಲ್ಲಿ ಬಿದ್ದು, ಕೊಳೆಮುಚ್ಚಿದ ಮೈಯುಳ್ಳವನಾಗಿದ್ದುದರಿಂದ, ತನ್ನ ಸಹಜವಾದ ತೇಜಸ್ಸನ್ನು ಹೊರಗೆ ಕಾಣಿಸದಿದ್ದನು ಹೀಗೆ ಆ ಮಹರ್ಷಿಯುಹೆಬ್ಬಾವಿನಂತೆ ಉದ್ದಕ್ಕೆ ನೆಲದಮೇಲೆ ಬಿದ್ದು ಅಜಗರವ್ರತವನ್ನು ಹಿಡಿದಿದ್ದನು ಆಗ ಪ್ರಹ್ಲಾದನಿಗೆ ಆಕೃತಿಯಿಂದಾಗಲಿ, ಮಾತಿನಿಂದಾಗಲಿ, ವರ್ಣಾಶ್ರಮಾದಿಚಿಹ್ನಗಳಿಂದಾಗಲಿ, ‘‘ಆ ಪುರುಷನುಯಾವಜಾತಿಯವನು, ಯಾವ ಆಶ್ರಮವನ್ನು ಹಿಡಿದವನು‘‘ಎಂಬುದನ್ನು ತಿಳಿಯುವುದಕ್ಕೆ ಸಾಧ್ಯವಾಗಲಿಲ್ಲ. ಆಗ ಭಾಗವತೋತ್ತಮನಾದ ಪ್ರಹ್ಲಾದನು,ವಿನಯದಿಂದ ಮುಂದೆ ಹೋಗಿ, ಆತನಿಗೆ ನಮಸ್ಕರಿಸಿ ಪ್ರಶ್ನೆಮಾಡುವನು ‘‘ಓ

ಮಹಾತ್ಮಾ ! ನೀನು ಯಾರು ? ಪ್ರಯತ್ನಪಟ್ಟು ಅನೇಕಭೋಗಸಾಮಗ್ರಿ ಗಳನ್ನು ಸಂಪಾದಿಸಿ, ಬೇಕುಬೇಕಾದ ಭೋಗಗಳನ್ನನುಭವಿಸುತ್ತ, ತನ್ನ ಮೈ ಯನ್ನು ಚೆನ್ನಾಗಿ ಬೆಳೆಸಿಟ್ಟ ಮನುಷ್ಯನಂತೆ ನೀನು ದೇಹಪುಷ್ಟಿಯುಳ್ಳವ ನಾಗಿರುವೆ? ಈಗ ನಿನ್ನ ಸ್ಥಿತಿಯನ್ನು ನೋಡಿದರೆ. ನೀನು ಯಾವ ಕೆಲಸವ ನ್ನೂ ಮಾಡುವಹಾಗೆ ತೋರುವುದಿಲ್ಲ. ನಿನ್ನ ದೇಹವಾದರೋ ಕೊಬ್ಬಿ ಬೆ ಳೆದಿರುವುದು ಲೋಕದಲ್ಲಿ ಉದ್ಯೋಗ ಪರನಾದವನಿಗೆ ಧನವು ಲಭಿಸುವು ದು ಧನಸಮೃದ್ಧಿಯಿದ್ದವನೇ ಭೋಗಗಳನ್ನನುಭವಿಸಬಹುದು. ಭೋಗಿ ಯಾದವನೇ ಶರೀರಪುಷ್ಟಿಯನ್ನು ಹೊಂದುವನು ನೀನಾದರೋ ಉದ್ಯೋ ಗಪರನೆಂದೂ ತೋರುವುದಿಲ್ಲ! ನಿನ್ನನ್ನು ಧನವಂತನೆಂದೂ ಹೇಳುವುದಕ್ಕಿಲ್ಲ! ನಿನಗೆ ಭೋಗಾಪೇಕ್ಷೆಯಿರುವಂತೆಯೂ ಕಾಣುವುದಿಲ್ಲ ನೀನು ಭೋಗಗ ಳನ್ನನುಭವಿಸಿದಂತೆಯೂ ತೋರುವುದಿಲ್ಲ ಹೀಗಿ ವಾಗಲೂ ನಿನ್ನ ದೇಹ ವು ಹೀಗೆ ಕೊಬ್ಬಿ ಬೆಳೆದಿರುವುದನ್ನು ನೋಡಿ ನನಗೆ ಅತ್ಯಾಶ್ಚರ್ಯವುಂ ಟಾಗುವುದು ನಿನಗೆ ಈವಿಧವಾದ ದೇಹಪುಷ್ಟಿಯುಂಟಾಗುವುದಕ್ಕ ಕಾ ರಣವೇನು ? ಇದಲ್ಲದೆ ನಿನ್ನನ್ನು ನೋಡಿದರೆ ವಿದ್ವಾಂಸನಂತೆಯೂ, ಕಾ ರ್ಯಸಮರ್ಥನಂತೆಯೂ, ವಾಕ್ಚಾತುರ್ಯವುಳ್ಳವನಂತೆಯೂ ತೋರುವಿ ? ಹೀಗಿರುವಾಗಲೂ ನೀನುಕೈಲಾಗದವನಂತೆ ಬಿದ್ದಿರುವುದೇಕೆ? ಮತ್ತು ಲೋಕದಲ್ಲಿ ಅನೇಕಜನಗಳು ನಾನಾವಿಧಕರ್ಮಗಳಲ್ಲಿ ಉತ್ಸಾಹದಿಂದ ಪ್ರವರ್ತಿಸುತ್ತಿರುವುದನ್ನು ನೋಡಿಯೂ, ನೀನು ಎಲ್ಲವನ್ನೂ ಬಿಟ್ಟು ಉದಾ ಸೀನನಾಗಿ ಮಲಗಿರುವುದೇಕೆ"ಎಂದನು

ಅಮೃತಸಮಾನವಾದ ಆ ಪ್ರಹ್ಲಾದನ ವಿನಯವಾಕ್ಯಗಳಿಂದ ಪ್ರೇರಿ ತನಾಗಿ, ಮಹರ್ಷಿಯು, ಮಂದಹಾಸದೊಡನೆ ಈಮಾತನ್ನು ಹೇಳುವನು ''ಓರಾಕ್ಷಸಶ್ರೇಷ್ಠಾ! ಪ್ರಹ್ಲಾದಾ ! ಪ್ರಾಣಿಗಳು ಕಾರ್ಯಗಳಲ್ಲಿ ಪ್ರವರ್ತಿ ಸುವುದಕ್ಕೂ, ಅವುಗಳಿಂದ ನಿವೃತ್ತರಾಗುವುದಕ್ಕೂ ಕಾರಣವೇನೆಂಬುದನ್ನು ನೀನು ತಿಳಿಯದವನಲ್ಲ ಇಂದ್ರಿಯಗಳಿಗೆ ಅಗೋಚರವಾದ ವಿಷಯಗಳನ್ನೂ ನೀನು ತಿಳಿಯಬಲ್ಲವನು ಸಮಸ್ತ ಪ್ರಾಣಿಗಳ ಮನಸ್ಸಿನ ಉದ್ದೇಶಗಳೆಲ್ಲ ವನ್ನೂ ನೀನು ಧ್ಯಾನದೃಷ್ಟಿಯಿಂದಲೇ ತಿಳಿಯಬಲ್ಲವನು ಮತ್ತು ನೀನು,

ಸ್ವಯಂಪ್ರಕಾಶನಾಗಿಯೂ, ಷಾಡ್ಗುಣ್ಯಪರಿಪೂರ್ಣನಾಗಿಯೂ ಇರುವ ಶ್ರೀಮನ್ನಾರಾಯಣನನ್ನು ಅನನ್ಯಪ್ರಯೋಜನವಾದ ಭಕ್ತಿಯಿಂದ ಸಂತೋಷಪಡಿಸಿ, ಅವನ ಪೂರ್ಣಾನುಗ್ರಹಕ್ಕೆ ಪಾತ್ರನಾಗಿರುವೆ! ಆ ಭಗವಂತನು ಯಾವಾಗಲೂ ನಿನ್ನ ಹೃದಯದಲ್ಲಿಯೇ ನೆಲೆಗೊಂಡಿದ್ದು, ನಿನ್ನ ಹೃದಯದಲ್ಲಿರುವ ಅಜ್ಞಾನಾಂಧಕಾರವನ್ನು ನೀಗಿಸುತ್ತಿರುವನು ಅಂತಹ ನಿನಗೆ ತಿಳಿಯದ ವಿಷಯವು ಯಾವುದುಂಟು? ಹಾಗಿದ್ದರೂ ಈಗ ನೀನು ನನ್ನನ್ನು ಪ್ರಶ್ನೆಮಾಡಿದುದಕ್ಕಾಗಿ, ನಾನು ಹಿರಿಯರಿಂದ ಕೇಳಿ ತಿಳಿದಕೆಲವು ವಿಷಯಗಳನ್ನು ನಿನಗೂ ತಿಳಿಸುವೆನು ಕೇಳು! ಆತ್ಮಶುದ್ಧಿಯನ್ನಪೇಕ್ಷಿಸತಕ್ಕವನು ಅವಶ್ಯವಾಗಿ ನಿನ್ನೊಡನೆ ಸಂಭಾಷಣೆಗಳನ್ನು ನಡೆಸಬೇಕು ಪ್ರಹ್ಲಾದಾ! ನಾನೂ ಹಿಂದೆ ಎಷ್ಟೋಬಗೆಯ ಪುಣ್ಯಪಾಪಕರ್ಮಗಳನ್ನು ನಡೆಸಿದವನು ಪ್ರಯತ್ನಪಟ್ಟು ಸಾಧಿಸತಕ್ಕ ಕಾಮಭೋಗಗಳಲ್ಲಿಯೂ, ಎಷ್ಟೆಷ್ಟುಸಾರಿ ಅನುಭವಿಸಿದರೂ ತೃಪ್ತಿಯನ್ನುಂಟುಮಾಡದೆ, ಮೇಲೆಮೇಲೆ ಜನ್ಮಪರಂಪರೆಗಳನ್ನು ಹೆಚ್ಚಿಸುತ್ತಿರುವ ಶಬ್ದಾದಿವಿಷಯಗಳಲ್ಲಿಯೂ ಆಶೆಪಟ್ಟು, ಅದಕ್ಕಾಗಿ ಕರ್ಮಗಳನ್ನು ನಡೆಸಿ, ನಾನಾಯೋನಿಗಳಲ್ಲಿ ಹುಟ್ಟಿಬಂದಿರುವೆನು ಆ ಕರ್ಮಬಂಧದಿಂದಲೇ ನಾನು ಈಗ ಈ ಮನುಷ್ಯಜನ್ಮವನ್ನೆತ್ತಿ ಈ ಲೋಕದಲ್ಲಿ ಹುಟ್ಟಿರುವೆನು ದೈವಾಧೀನವಾಗಿ ನನ್ನ ಪುಣ್ಯಬಲದಿಂದ ನನಗೆ ಈ ಮನುಷ್ಯಜನ್ಮವು ಲಭಿಸಿತು. ಪುಣ್ಯಕರ್ಮಗಳಿಂದ ಸ್ವರ್ಗಾದಿಸುಖಗಳನ್ನು ಪಡೆಯುವುದಕ್ಕಾಗಲಿ, ಜ್ಞಾನಮಾರ್ಗದಿಂದ ಮೋಕ್ಷವನ್ನು ಪಡೆಯುವುದಕ್ಕಾಗಲಿ, ಅಧರ್ಮದಲ್ಲಿ ಬಿದ್ದು ಪಶುಪಕ್ಷಿಮೃಗಾದಿಗಳ ಜನ್ಮವನ್ನು ಹೊಂದುವುದಕ್ಕಾಗಲಿ, ಈ ಭೂಲೋಕವೇ ದ್ವಾರವೆನಿಸಿರುವುದು. ಹೀಗೆ ಸ್ವರ್ಗಮೋಕ್ಷಗಳನ್ನು ಸಾಧಿಸುವುದಕ್ಕೆ ಅನುಕೂಲವಾದ ಮನುಷ್ಯಜನ್ಮವು ಲಭಿಸಿರುವಾಗಲೂ, ಕೆಲವರು ಉತ್ತಮಪುರುಷಾರ್ಥದಲ್ಲಿ ದೃಷ್ಟಿಯಿಡದೆ,ಕೇವಲಕುಟುಂಬಸುಖಕ್ಕಾಗಿಯೂ, ದುಃಖನಿವೃತ್ತಿಗಾಗಿಯೂ ಕರ್ಮಗಳನ್ನಾಚರಿಸುವರು. ದುಃಖನಿವೃತ್ತಿಗಾಗಿ ಮಾಡತಕ್ಕ ಆ ಕರ್ಮಗಳೇ ಅವರಿಗೆ ಮೇಲೆಮೇಲೆ ಸಂಸಾರವನ್ನು ತಗುಲುಕಟ್ಟಿ, ವಿಶೇಷದುಃಖಕ್ಕೆ ಕಾರಣವಾಗುವುದು. ಹೀಗೆ ಈ ಲೋಕದಲ್ಲಿ ಅನೇಕಜನರು ತಮ್ಮ ಪ್ರ

ಯತ್ನಕ್ಕೆ ವಿಪರೀತವಾದ ಫಲವನ್ನೇಹೊಂದುತ್ತಿರುವುದನ್ನು ನೋಡಿ,ನನಗೆ ಆ ಕರ್ಮಗಳಲ್ಲಿ ಸಂಪೂರ್ಣವಾದ ವಿರಕ್ತಿಯು ಹುಟ್ಟಿತು

ಆತ್ಮವೆಂಬುದು ಸಹಜವಾಗಿಯೇ ಕೇವಲಸುಖಸ್ವರೂಪವಾಗಿರುವುದರಿಂದ, ಅದರ ಸುಖಕ್ಕಾಗಿ ನಾವೇನೂ ಪ್ರಯತ್ನಿಸಬೇಕಾದುದಿಲ್ಲ. ಆದರೆ ಈ ಲೋಕದಲ್ಲಿ ಪ್ರಾಣಿಗಳು ಆಗಾಗ ಅನುಭವಿಸುವ ಕಷ್ಟಪರಂಪರೆಗಳನ್ನು ನೋಡಿದರೆ 'ಜೀವನು ಕೇವಲಸುಖಸ್ವರೂಪನೆಂದು ನಮಗೆ ತೋರುವುದಿಲ್ಲವಲ್ಲಾ!" ಎಂದು ನೀನು ಕೇಳಬಹುದು ಎಲ್ಲಾ ದೇಹವ್ಯಾಪಾರಗಳನ್ನೂ ನೀಗಿ,ಆಸೆಗಳೆಲ್ಲವನೂ ತೊರೆದುಬಿಡುವುದರಿಂದುಂಟಾಗತಕ್ಕ ಸುಖವೇ ಆತ್ಮಸುಖವೆಂದು ತಿಳಿ ! ಆದುದರಿಂದ ಪ್ರಯತ್ನಗಳೆಲ್ಲವನ್ನೂ ಬಿಟ್ಟು ಆತ್ಮಸ್ವರೂಪದ ನಿಜಸ್ಥಿತಿಯನ್ನು ಯೋಚಿಸಿ ನೋಡುವಾಗಲೇ ಜೀವನು ಸುಖರೂಪವಾಗಿ ಕಾಣುವನು ಶಬ್ದಾದಿವಿಷಯಭೋಗಗಳೆಲ್ಲವೂ ಮನಸ್ಸಿನ ಮೂಲಕವಾಗಿಯೇ ಉಂಟಾಗುವುವು ಆ ಸುಖಗಳೆಲ್ಲವೂ ನಶ್ವರಗಳು ! ಇವನ್ನು ಯೋಚಿಸಿಯೇ ನಾನು ಅವೆಲ್ಲವನ್ನೂ ಬಿಟ್ಟು,ಆತ್ಮಸ್ವರೂಪವನ್ನು ತಿಳಿಯುವುದರಲ್ಲಿ ಉದ್ದೇಶವನ್ನಿಟ್ಟು, ನನ್ನ ಪ್ರಾರಬ್ಧಕರ್ಮವನ್ನು ಅನುಭವದಿಂದಲೇ ಕಳೆಯಬೇಕೆಂಬುದಕ್ಕಾಗಿ ಇಲ್ಲಿ ಮಲಗಿರುವೆನು ಆದರೆ "ಲೋಕದಲ್ಲಿರುವವರೆಲ್ಲರೂ ನಿನ್ನಂತೆ ಆತ್ಮಸುಖವನ್ನೇ ಬಯಸಿ ಈ ವ್ರತವನ್ನಾಚರಿಸಬಾರದೆ" ಎಂದು ನೀನು ಕೇಳಬಹುದು ಪ್ರಹ್ಲಾದಾ! ಲೋಕದಲ್ಲಿ ಎಲ್ಲರೂ ಒಂದೇವಿಧವಾಗಿರುವುದಿಲ್ಲ ! ಕೆಲವರುಮಾತ್ರ ಈ ಆತ್ಮಸುಖಕ್ಕಾಗಿ ಯತ್ನಿಸುವರು ಆತ್ಮವು ಸ್ವತಃ ಕೇವಲಸುಖಸ್ವರೂಪವೆಂದೂ, ಆ ಸ್ವರೂಪವನ್ನು ನೋಡುವುದೇ ತಮಗೆ ಪುರುಷಾರ್ಥವೆಂದೂ ತಿಳಿಯಲಾರದ ಮೂಢರು, ಶರೀರಗತವಾದ ದೇವಮನುಷ್ಯಾದಿಭೇದಗಳೆಲ್ಲವನ್ನೂ ಆತ್ಮನಿಗೇ ಆರೋಪಿಸಿಕೊಂಡು, ಈ ಅಜ್ಞಾನದಿಂದ ಭಯಂಕರವಾದಸಂಸಾರದಲ್ಲಿ ಸಿಕ್ಕಿ ಬೀಳುವರು ಹುಲ್ಲು, ಪಾಚಿ, ಮೊದಲಾದುವುಗಳಿಂದ ಮುಚ್ಚಿಹೋಗಿರುವ ನೀರನ್ನು ಕಾಣಲಾರದೆ, ಬಿಸಿಲ್ಗೊದೆಯನ್ನು ನೋಡಿ ಅದನ್ನೇ ನೀರೆಂದು ತಿಳಿದು, ಅದಕ್ಕಿದಿರಾಗಿ ಓಡುವ ಮೃಗದಂತೆ.ಜನಗಳು ಆನಂದಮಯವಾದ ಆತ್ಮಸ್ವರೂಪವನ್ನು ತಿಳಿಯಲಾರದೆ, ವಿಷಯಸುಖಗಳನ್ನೇ

ಪುರುಷಾರ್ಥಗಳೆಂದು ತಿಳಿದು ಅದಕ್ಕಾಗಿ ಕಷ್ಟಪಡುವರು. ಇದಕ್ಕೆ ಅವರ ಅ
ಜ್ಞಾನವೇ ಕಾರಣವಲ್ಲದೆ ಬೇರೆಯಲ್ಲ ಇಂತಹ ಮೂಢರು, ಕರ್ಮಾಧೀನವಾ
ಗಿ ತಮಗೆ ತಗುಲುಕಟ್ಟಿದ ದೇಹೇಂದ್ರಿಯಾದಿಗಳಿಂದಲೇ ತಮಗೆ ಸುಖವ
ನ್ನು ಸಂಪಾದಿಸಬೇಕೆಂದೆಣಿಸಿ,ಬಾರಿಬಾರಿಗೂ ವ್ಯರ್ಥವಾದ ಕಾರ್ಯಗಳನ್ನು
ನಡೆಸುತ್ತಿರುವರು. ಈ ಸುಖಾಪೇಕ್ಷೆಯಿಂದ ಲಭಿಸತಕ್ಕ ಕಾರ್ಯಗಳು
ಅವರಿಗೆ ಮೇಲೆಮೇಲೆ ದುಃಖವನ್ನೇ ತಂದಿಡುವುವು ಆಧ್ಯಾತ್ಮಿಕಾದಿತಾಪ
ತ್ರಯಗಳಿಂದ ಯಾವಾಗಲೂ ತೊಳಲುತ್ತಿರುವ ಜೀವನಿಗೆ, ಪ್ರಯತ್ನಪೂ
ರ್ವಕವಾಗಿ ಸಂಪಾದಿಸಿದ ಧನದಿಂದಾಗಲಿ, ಆ ದ್ರವ್ಯಬಲದಿಂದ ಸಾಧಿಸ
ತಕ್ಕ ಶಬ್ದಾದಿವಿಷಯಗಳಿಂದಾಗಲಿ ಯಾವ ಸುಖವುಂಟು ? ಹಣವನ್ನು
ಸಂಪಾದಿಸುವುದಕ್ಕಾಗಿ ಅನುಭವಿಸುವ ಕಷ್ಟವನ್ನು ಅಷ್ಟಿಷ್ಟೆಂದು ಹೇಳಿ
ತೀರದು. ಆ ಹಣವನ್ನು ಸಂಪಾದಿಸಿದಷ್ಟೂ ಅದರಲ್ಲಿ ಮೇಲೆಮೇಲೆ ಆ
ಸೆಯು ಹೆಚ್ಚುವುದು ಈ ದ್ರವ್ಯಾಶೆಯಿಂದ ಮೇಲೆಮೇಲೆ ಕಷ್ಟಪಡುತ್ತ
ಲೇ ಇರುವನು ಸಂಪಾದಿಸಿಟ್ಟ ಹಣವನ್ನು ಕಾಪಾಡಿಡುವುದೂ ಕಷ್ಟವು ?
ಗಳಿಸಿದ ಹಣವನ್ನು ವೆಚ್ಚಮಾಡುವಾಗಲೂ ಸಂಕಟಪಡಬೇಕಾಗುವುದು.
ಧನವಂತನು ಕ್ಷಣಮಾತ್ರವಾದರೂ ಸುಖವಾಗಿ ನಿದ್ರೆಯನ್ನನುಭವಿಸ
ಲಾರನು ಏಕೆಂದರೆ, ಧನವಂತರಿಗೆ ರಾಜರಿಂದಲೂ, ಕಳ್ಳರಿಂದಲೂ, ಶ
ತ್ರುಗಳಿಂದಲೂ, ಬಂಧುಜನದಿಂದಲೂ, ಪಶುಪಕ್ಷಿಗಳಿಂದಲೂ, ಯಾಚ
ಕರಿಂದಲೂ, ಕಾಲದಿಂದಲೂ, ಯಾವಾಗಲೂ ಭಯವಿದ್ದೇಇರುವುದು.
ಧನವಂತರು ಹಣವನ್ನು ತಮ್ಮ ಪ್ರಾಣಕ್ಕೆ ಸಮಾನವಾಗಿ ಭಾವಿಸು
ತ್ತಿರುವುದರಿಂದ, ತಮ್ಮ ದೇಹಸುಖಕ್ಕೂ ತಾವು ಉಪಯೋಗಿಸಲಾರದೆ
ತಮ್ಮಿಂದಲೇ ತಾವು ಭಯಪಡುವರು ಆದುದರಿಂದ ಹಣವಿದ್ದುಕ
ಡೆಯಲ್ಲಿ ಭಯವು ಎಂದಿಗೂ ತಪ್ಪಿದುದಲ್ಲ ಪ್ರಾಣದಲ್ಲಿಯೂ, ಹಣದಲ್ಲಿ
ಯೂ, ಅಭಿಮಾನವುಳ್ಳವನು, ಶೋಕ, ಮೋಹ, ಭಯ, ಕ್ರೋಧ, ರಾಗ,
ಅಧೈರ್ಯ, ಶ್ರಮ, ಮುಂತಾದ ಕಷ್ಟಗಳೆಲ್ಲಕ್ಕೂ ಗುರಿಯಾಗಬೇಕಾಗುವು
ದು. ಆದುದರಿಂದ ವಿವೇಕಿಯಾದವನು ಪ್ರಾಣಗಳಲ್ಲಿಯೂ, ಹಣದಲ್ಲಿ
ಯೂ, ಸ್ವಲ್ಪಮಾತ್ರವೂ ಆಸೆಯನ್ನಿಡಬಾರದು. ಪ್ರಹ್ಲಾದಾ ! ಲೋಕ

ದಲ್ಲಿ ಜೇನುನೊಣಗಳು ಮತ್ತು ಹೆಬ್ಬಾವುಗಳು ಇವೆರಡೂ ನಮಗೆ ಈ ವಿಷಯದಲ್ಲಿ ಉತ್ತಮಗುರುಗಳೆಂದು ತಿಳಿ! ಆ ಎರಡುಪ್ರಾಣಿಗಳ ನಡತೆ ಯನ್ನು ನೋಡಿಯೇ ನಾನು, ವಿರಕ್ತನಾಗಿಯೂ, ಇದ್ದುದರಲ್ಲಿ ತೃಪ್ತ ನಾಗಿಯೂ ಇರಬೇಕೆಂಬ ಬುದ್ಧಿಯನ್ನು ಕಲಿತುಕೊಂಡೆನು. ಭ್ರಮರಗಳು ಅಲ್ಲಲ್ಲಿ ಸುತ್ತಿ, ಪುಷ್ಪಗಳಿಂದ ಜೇನನ್ನು ಸಂಗ್ರಹಿಸಿತಂದು,ಗೂಡನ್ನು ಕಟ್ಟಿ, ಎಷ್ಟೋಶ್ರಮದಿಂದ ಅದರಲ್ಲಿ ಜೇನನ್ನು ತುಂಬಿಡುವುವು ಈಸಮಯದಲ್ಲಿ ಬೇರೆ ಯಾವನಾದರೂ ಬಂದು ಆ ಹುಳಗಳನ್ನು ಕೊಂದು, ಅ ಜೇನನ್ನು ಹೊತ್ತುಕೊಂಡು ಹೋಗುವನು. ಅದರಂತೆಯೇ ಈ ಲೋಕದಲ್ಲಿ, ಒಬ್ಬರು ಪ್ರಯತ್ನಪಟ್ಟು ಸಂಪಾದಿಸಿದ ಹಣವನ್ನು ಮತ್ತೊಬ್ಬರು ಅಪಹರಿಸಿಕೊಂ ಡುಹೋಗುವರು ಇದರಿಂದ ಲೋಕದಲ್ಲಿ ಧನಾದಿಗಳಿಗೆ ಆಸೆಪಡದೆ, ವೈರಾ ಗ್ಯವನ್ನಂಗೀಕರಿಸುವುದೇ ಮೇಲೆಂದು ಈ ಭ್ರಮರಗಳ ದೃಷ್ಟಾಂತದಿಂದ ವ್ಯಕ್ತವಾಗುವುದು ಬೆಟ್ಟದ ಹಾವುಗಳು ನಿರ್ವ್ಯಾಪಾರವಾಗಿ ಬಿದ್ದ ಕಡೆ ಯಲ್ಲಿಯೇ ಬಿದ್ದು ದೈವಿಕವಾಗಿ ಸಿಕ್ಕಿದುದನ್ನು ತಿಂದುತೃಪ್ತವಾಗಿರುವುವು. ಅದರಂತೆಯೇ ನಾನು ದೈವಲಬ್ಧವಾದುದರಲ್ಲಿ ತೃಪ್ತನಾಗಿ ಇಲ್ಲಿಯೇ ಬಹು ಕಾಲದಿಂದ ಮಲಗಿರುವೆನು ನನಗೆ ಸಿಕ್ಕತಕ್ಕ ಆಹಾರವು ಅತ್ಯಲ್ಪವಾಗಿದ್ದ ರೂ, ಹೆಚ್ಚಾಗಿದ್ದರೂ, ಉತ್ತಮವಾದ ಮೃಷ್ಟಾನ್ನವಾಗಿದ್ದರೂ, ಕೆಲಸ ಕ್ಕೆ ಬಾರದ ಕದನ್ನವಾಗಿದ್ದರೂ, .ಮತ್ತೊಬ್ಬರು ಶ್ರದ್ಧೆಯಿಂದ ತಂದಿಕ್ಕಿ ದುದಾದರೂ, ತಿರಸ್ಕಾರದಿಂದ ಬಿಸಾಡಿದುದಾದರೂ, ಅದರಲ್ಲಿ ಸಂತೋಷವ ನ್ನಾಗಲಿ, ಜಿಹಾಸೆಯನ್ನಾಗಲಿ ತೋರಿಸದೆ ಯಾವಕಾಲಕ್ಕೆ ಯಾವುದು ಸಿಕ್ಕುವುದೋ ಅದನ್ನೇ ತಿಂದು ಹಗಲುರಾತ್ರಿಗಳನ್ನು ಕಳೆಯುತ್ತಿರುವೆನು. ಮೈಮೇಲೆ ಹಾಕಿಕೊಳ್ಳುವುದಕ್ಕೆ ಪಟ್ಟೆಮಡಿಯಾಗಿದ್ದರೂ, ಮೃದುವಾದ ದುಕೂಲವಾಗಿದ್ದರೂ, ಒರಟಾದ ಚರ್ಮವಾಗಿದ್ದರೂ, ನಾರು ಸೀರೆಯಾ ಗಿದ್ದರೂ, ಆಯಾಕಾಲಕ್ಕೆ ಸಿಕ್ಕಿದುದನ್ನೇ ಸಂತೋಷವಾಗಿ ಧರಿಸುವೆನು. ಹೀಗೆ ಕಾಲೋಚಿತವಾಗಿ !ಸಿಕ್ಕಿದುದರಲ್ಲಿಯೇ ನಾನು ಸಂತೊಷಪಡತಕ್ಕ ವನು. ಕೆಲವುಕಾಲಗಳಲ್ಲಿಬರೀನೆಲದಲ್ಲಿಯೇ ಮಲಗುವೆನು. ಮತ್ತೊಮ್ಮೆ ಹುಲ್ಲುಮೇಲೆಯೂ, ಸೊಪ್ಪುಸದೆಗಳಮೇಲೆಯೂ ಮಲಗಿ ಕಾಲವನ್ನು ಕಳೆ

ಯುವೆನು. ಕೆಲವುಸಂದರ್ಭಗಳಲ್ಲಿ ಉಪ್ಪರಿಗೆಯ ಮಂಚದಲ್ಲಿ ಹಂಸ ತೂಲಿಕಾ ತಲ್ಪದಮೇಲೆಯೂ ಮಲಗುವೆನು ಒಮ್ಮೊಮ್ಮೆ ಅವಕಾಶವಿದ್ದಾಗ, ಚೆನ್ನಾಗಿ ಅಭ್ಯಂಗನಸ್ನಾನವನ್ನುಮಾಡಿ, ಪುಷ್ಪಚಂದನಾದಿಗಳಿಂದಲೂ, ಶುದ್ಧವಾದ ಮಡಿಬಟ್ಟೆಯಿಂದಲೂದೇಹವನ್ನಲಂಕರಿಸಿಕೊಳ್ಳುವೆನು ಇವೊಂದಕ್ಕೂ ಸೌಕರ್ಯವಿಲ್ಲದಿದ್ದಾಗ ಹಾಗೆಯೇ ಕಾಲವನ್ನು ಕಳೆಯುವೆನು ಪ್ರಹ್ಲಾದಾ ! ಹೀಗೆ ಪುಷ್ಪಚಂದನಾದ್ಯಲಂಕಾರಗಳು ಸಿಕ್ಕಿದರೂ, ಸಿಕ್ಕದಿದ್ದರೂ, ಉತ್ತಮವಾದ ವಸ್ತ್ರವು ಲಭಿಸಿದರೂ, ಲಭಿಸದಿದ್ದರೂ, ರಥಾದಿಗಳಮೇಲೆ ಸಂಚರಿಸಿದರೂ, ಕಾಲುನಡೆಯಿಂದ ತಿರುಗಿದರೂ ಅವೆಲ್ಲವೂ ನನಗೆ ಸಮಾನವೇಹೊರತು ವ್ಯತ್ಯಾಸವೇ ತೋರುವುದಿಲ್ಲ ಸ್ವಭಾವದುರ್ಜನರಾದ ಬೇರೆಯವರು ನನ್ನನ್ನು ನಿಂದಿಸಿದರೂ, ಸ್ತುತಿಸಿದರೂ ನಾನು ಅವರಲ್ಲಿ ಕೋಪವನ್ನಾಗಲಿ, ಸಂತೋಷವನ್ನಾಗಲಿ ತೋರಿಸತಕ್ಕವನಲ್ಲ. ನನ್ನನ್ನು ನಿಂದಿಸತಕ್ಕವರನ್ನು ನಾನು ನಿಂದಿಸಕ್ಕವನಲ್ಲ ಸ್ತುತಿಸತಕ್ಕವರನ್ನು ಸ್ತುತಿಸತಕ್ಕವನಲ್ಲ ಅವರೆಲ್ಲರಿಗೂ ಸಮವಾಗಿ ಶ್ರೇಯಸ್ಸನ್ನೇ ಬಯಸುತ್ತಿರುವೆನು ಮತ್ತು ನನ್ನ ಮನಸ್ಸು ಭಗವಂತನಲ್ಲಿಯೇ ದೃಢವಾಗಿ ನೆಲೆಗೊಂಡು, ಬೇರೊಂದುವಿಷಯವನ್ನೂ ಗಮನಿಸದಿರಬೇಕೆಂಬುವೇ ನನ್ನ ಕೋರಿಕೆ ! ಹೀಗೆ ನಾನು ನಿತ್ಯಸಂತೋಷಿಯಾಗಿರುವುದರಿಂದಲೇ, ಕ್ರಮವಾದ ದೇಹಸಂಸ್ಕಾರಗಳೊಂದೂ ಇಲ್ಲದಿದ್ದರೂ,ನನ್ನ ದೇಹವು ಪುಷ್ಟವಾಗಿಯೇ ಇರುವುದು ಮತ್ತು ಓ ಪ್ರಹ್ಲಾದಾ! ನೀನೂ ನನ್ನಂತೆಯೇ ನಡೆದುಕೊಳ್ಳಬೇಕಾದರೆ, ಅದಕ್ಕೆ ತಕ್ಕ ಉಪಾಯವನ್ನು ಹೇಳುವೆನು ಕೇಳು ನಮಗೆ ಶರೀರಸಂಬಂಧದಿಂದ ತೋರುವ ಜಾತಿರೂಪಾದಿವಿಕಲ್ಪಬುದ್ಧಿಗಳೆಲ್ಲವನ್ನೂ ನಮ್ಮ ಮನೋವ್ಯಾಪಾರದಲ್ಲಿ ಲೀನವಾದಂತೆ ಭಾವಿಸಬೇಕು ಹಾಗೆಯೇ ಆ ಮನೋವ್ಯಾಪಾರವನ್ನು ದೇಹಾತ್ಮಭ್ರಮಕ್ಕೆ ಕಾರಣವಾದ ಮನಸ್ಸಿನಲ್ಲಿಯೂ, ಆ ಮನಸ್ಸನ್ನು ಸಾತ್ವಿಕಾಹಂಕಾರದಲ್ಲಿಯೂ, ಆ ಸಾತ್ವಿಕಾಹಂಕಾರವನ್ನು ಮೂಲಪ್ರಕೃತಿಯೆಂಬ ಮಾಯೆಯಲ್ಲಿಯೂ ಲಯಹೊಂದಿಸಿದಂತೆ ಅನುಸಂಧಾನಮಾಡಬೇಕು ಆ ಮಾಯೆಯನ್ನೂ ಕೂಡ ಆತ್ಮಾನುಭವದಲ್ಲಿ ಲಯಹೊಂದಿದಂತೆ ಭಾವಿಸಿ, ಆ ಆತ್ಮನನ್ನೇ ಶರೀ

ರವಾಗಿಉಳ್ಳ ಪರಮಾತ್ಮನನ್ನು ಸಾಕ್ಷಾತ್ಕರಿಸುತ್ತ, ದೇಹವ್ಯಾಪಾರವಲ್ಲವ
ನ್ನೂ ಬಿಟ್ಟು, ಪ್ರಾರಬ್ಧಾವಸಾನದಲ್ಲಿ ಈ ಶರೀರವನ್ನು ಬಿಟ್ಟುಬಿಡಬೇಕು-
ಓ, ಪ್ರಹ್ಲಾದಾ! ಈ ನನ್ನ ನಡತೆಗಳೆಲ್ಲವೂ ಬಹಳ ಗೋಪ್ಯವಾದುವೆಂದು
ತಿಳಿ! ಇದು ಲೋಕಾಚಾರಕ್ಕೂ,ಶಾಸ್ತ್ರಕ್ಕೂ,ಬಹಳ ವಿರುದ್ಧವಾಗಿ ತೋರಿ
ದರೂ,ಜ್ಞಾನಮಾರ್ಗಕ್ಕೆ ಬಹಳ ಸಹಾಯಕವಾಗಿರುವುದು ಮತ್ತು ಈ ನನ್ನ
ಚರಿತ್ರೆಯು ಬಹಳ ರಹಸ್ಯವಾಗಿದ್ದರೂ ನೀನು ಪರಮಭಾಗವತೋತ್ತಮ
ನೆಂಬುದನ್ನು ತಿಳಿದು ಅದನ್ನು ನಿನಗೆ ಹೇಳಿರುವೆನು" ಎಂದನು ಓ ಧರ್ಮ
ರಾಜಾ! ಹೀಗೆ ಆ ಮಹರ್ಷಿಯು ಹೇಳಿದ ಪರಮಹಂಸಧರ್ಮವನ್ನು ಪ್ರ
ಹ್ಲಾದನು ಶ್ರದ್ಧೆಯಿಂದ ಕೇಳಿ ಸಂತೋಷಪಟ್ಟು, ಅವನನ್ನು ಯಥೋಚಿ
ತವಾಗಿ ಪೂಜಿಸಿ, ಆತನ ಅನುಮತಿಯನ್ನು ಪಡೆದು, ತನ್ನ ನಿವಾಸಕ್ಕೆ ಹಿಂತಿ
ರುಗಿದನು ಇದು ಹದಿಮೂರನೆಯ ಅಧ್ಯಾಯವು

---

ನಾರದನು ಧರ್ಮರಾಜನಿಗೆ ಗೃಹಸ್ಥಧರ್ಮಗಳನ್ನು ತಿಳಿಸಿದುದು

ತಿರುಗಿ ಧರ್ಮರಾಜನು ನಾರದನನ್ನು ಕುರಿತು "ಓ ಮಹರ್ಷೀ!
ಯಾವಾಗಲೂ ಗೃಹಸ್ಥಾಶ್ರಮದ ಸೇವದಿಂದ ಮನೆಮಂದಿ ಮಕ್ಕಳಲ್ಲಿಯೇ
ಆಸಕ್ತರಾಗಿರುವ ನಮ್ಮ ಗತಿಯೇನು? ಇತರಾಶ್ರಮಗಳಂತೆ ಇದರಲ್ಲಿ ವಿರಕ್ತಿ
ಗಾಗಲಿ, ಜ್ಞಾನಾಭಿವೃದ್ಧಿಗಾಗಲಿ ಅವಕಾಶವಿಲ್ಲ ಗೃಹಾಸಕ್ತರಾದ ನ
ಮ್ಮಂತವರಿಗೆ ಮೋಕ್ಷಸಾಧನವಾದ ಸುಲಭೋಪಾಯವೇನಾದರೂ ಇದ್ದ
ರೆ ಅದನ್ನು ತಿಳಿಸಬೇಕು" ಎಂದನು ಅದಕ್ಕಾ ನಾರದನು "ಓ ಧರ್ಮ
ರಾಜಾ! ನೀನು ಅನೇಕವಿಷಯಗಳನ್ನು ಬಲ್ಲವನಾಗಿದ್ದರೂ ಲೋಕಾನುಗ್ರ
ಹಾರ್ಥವಾಗಿ ಈ ಪ್ರಶ್ನವನ್ನು ಕೇಳಿದುದಕ್ಕಾಗಿ ನಾನು ಬಹಳಸಂತೋಷ
ಪಟ್ಟೆನು ನಿನ್ನಿಂದ ಎಲ್ಲರಿಗೂ ಜ್ಞಾನಲಾಭವಾಗವುದು ಆ ಗೃಹಸ್ಥಧರ್ಮ
ಗಳನ್ನು ನಿನಗೆ ವಿಸ್ತಾರವಾಗಿ ತಿಳಿಸುವೆನು ಕೇಳು. ಇದರಿಂದಲೇ ಪುಣ್ಯಾಪಾ
ಪಕರ್ಮಗಳನ್ನು ನೀಗಬಹುದು ಗೃಹಸ್ಥಧರ್ಮದಲ್ಲಿರುವವನು ಆ ಆಶ್ರ
ಮಕ್ಕೆ ವಿಧಿಸಲ್ಪಟ್ಟ ಸಂಧ್ಯಾವಂದನ,ಪಂಚಮಹಾಯಜ್ಞಗಳೇ ಮೊದಲಾ

ದತನ್ನ ಆವಶ್ಯಕರ್ಮಗಳೆಲ್ಲವನ್ನೂ ಆ ಪರಮಾತ್ಮನಿಗೇ ಅರ್ಪಿತವೆಂಬ ಬು ದ್ಧಿಯಿಂದ ನಡೆಸುತ್ತ, ಆ ಭಗವಂತನ ಗುಣಗಳನ್ನು ಯಾವಾಗಲೂ ಮನಸ್ಸಿನಲ್ಲಿ ಸ್ಮರಿಸುತ್ತ, ಭಗವದ್ಭಕ್ತರನ್ನು ಸೇವಿಸುತ್ತಿರಬೇಕು ಆಶ್ರಮಧರ್ಮಗಳನ್ನು ನಡೆಸುವಕಾಲದಲ್ಲಿಹೊರತು, ಇತರಕಾಲಗಳಲ್ಲಿ ಭಗವದ್ಭಕ್ತರ ಸಹವಾಸದಲ್ಲಿಯೇ ಇದ್ದು, ಅವರ ಮೂಲಕವಾಗಿ ಭಗವತ್ಕಥಾಮೃತಗಳನ್ನು ಶ್ರದ್ಧೆಯಿಂದ ಕೇಳುತ್ತಿರಬೇಕು ಅಂತಹ ಮಹಾತ್ಮರ ಸಹವಾಸದಿಂದ ದೇಹದಲ್ಲಿಯೂ, ತನ್ನ ಹೆಂಡಿರುಮಕ್ಕಳಲ್ಲಿಯೂ ಇರುವ ಮೋಹಪಾಶವನ್ನೂ "ತಾನು ತನ್ನ"ದೆಂಬ ಅಹಂಕಾರಮಮಕಾರಗಳನ್ನೂ ತ್ಯಜಿಸಬಹುದು ಕನಸನ್ನು ಕಂಡವನು ಎಚ್ಚರಗೊಂಡಮೇಲೆ, ತಾನು ಕನಸಿನಲ್ಲಿಕಂಡವಸ್ತುಗಳು, ಆಕಾಲದಲ್ಲಿ ಹೊರತು ಇತರಕಾಲಗಳಲ್ಲಿ ಅನುಭವಯೋಗ್ಯವಲ್ಲವೆಂದು ತಿಳಿದುಕೊಳ್ಳುವಂತೆ, ಈ ಮನೆಮಂದಿಮಕ್ಕಳೆಲ್ಲವೂ ಅಸ್ಥಿರಗಳೆಂದೂ, ಪುರುಷಾರ್ಥಗಳಲ್ಲವೆಂದೂ ತಿಳಿದು ವಿರಕ್ತನಾಗಬೇಕು ದೇವಮನುಷ್ಯಾದಿ ಭೇದಗಳೆಲ್ಲವೂ ಶರೀರದಮೂಲಕವಾಗಿ ಬಂದುದೇಹೊರತು, ಆ ಭೇದವು ಆತ್ಮಕ್ಕಿಲ್ಲವೆಂಬ ನಿಶ್ಚಯದಲ್ಲಿರಬೇಕು ಹೀಗೆ ಗೃಹಸ್ಥನು ಸತ್ಸಹವಾಸದ ಬಲದಿಂದ ತತ್ವಜ್ಞಾನವನ್ನು ಹೊಂದಿ ವಿರಕ್ತನಾಗಿದ್ದರೂ, ತನ್ನ ಮನೆಮಂದಿಮಕ್ಕಳೊಡನೆ ಸಂಬಂಧವಿದ್ದವನಂತೆ ತೋರಿಸುತ್ತ, ತನ್ನ ಪ್ರಾಣಧಾರಣೆಗೆ ಬೇಕಾದ ಸೌಕರ್ಯಗಳನ್ನುಮಾತ್ರ ಅವರಿಂದ ಪಡೆಯಬೇಕು ಮತ್ತು ತನ್ನ ಜ್ಞಾತಿಗಳೂ, ತನ್ನ ತಾಯಿತಂದೆಗಳೂ, ತನ್ನ ಹೆಂಡಿರುಮಕ್ಕಳೂ, ತನ್ನ ಬಂಧುಮಿತ್ರರೂ, ಮತ್ತು ತನ್ನ ಕಡೆಯವರಾದ ಇತರರೂ, ಯಾವಯಾವುದನ್ನು ಅಪೇಕ್ಷಿಸುವರೋ, ಅದನ್ನು ಹಾಗೆಯೇ ಅನುಮೋದಿಸುತ್ತ, ತಾನುಮಾತ್ರ ಅವುಗಳಲ್ಲಿ ಮಮಕಾರವಿಲ್ಲದಂತಿರಬೇಕು ಮತ್ತು ತನಗೆ ಮಳೆಬೆಳೆಗಳಿಂದಾಗಲಿ, ಗಣಿಗಳಿಂದಾಗಲಿ, ಆಕಸ್ಮಿಕವಾಗಿಯೇ ಆಗಲಿ, ಲಭಿಸಿದ ಧನವೆಲ್ಲವನ್ನೂ, ದೈವಾನುಗ್ರಹದಿಂದ ಬಂದುದೆಂದೇ ಭಾವಿಸಿ, ಅವೆಲ್ಲವನ್ನೂ ತನ್ನ ಇಷ್ಟಮಿತ್ರರಿಗೆ ಕೊಟ್ಟು ಸಂತೋಷಪಡಿಸುತ್ತ, ತನ್ನ ದೇಹಪೋಷಣೆಗೆ ಬೇಕಾದಷ್ಟನ್ನು ಮಾತ್ರವೇ ತಾನು ಅನುಭವಿಸಬೇಕು. ಯಾವ ಪ್ರಾಣಿಗಳಾದರೇನು? ತಮ್ಮ ಹೊಟ್ಟೆತುಂ

ಬುವುದಕ್ಕೆ ಬೇಕಾದಷ್ಟು ಪದಾರ್ಥಗಳನ್ನುಮಾತ್ರವೇ ತಮ್ಮದೆಂದು ಅಭಿ ಮಾನಿಸಬಹುದೇಹೊರತು,ಅದಕ್ಕೆಮೇಲೆ ಆಸೆಪಟ್ಟುಫಲವಿಲ್ಲ ! ಹಾಗೆ ಆಸೆ ಪಡತಕ್ಕವರನ್ನು ಕಳ್ಳರೆಂದೇ ಹೇಳಬಹುದು ಅವರು ಕಳ್ಳರಂತೆ ಸಂಸಾರ ಪಾಶದಲ್ಲಿ ಕಟ್ಟುಬೀಳುವರು. ಆದುದರಿಂದ ವಿವೇಕಿಯಾದವನು, ತನ್ನದೆಂದು ಸಂಗ್ರಹಿಸಿಟ್ಟ ಧಾನ್ಯಾದಿಗಳನ್ನೂ ಅನ್ನವನ್ನೂ ಇತರವಸ್ತುಗಳನ್ನೂ ತಿನ್ನು ವುದಕ್ಕಾಗಿ ಬರುವ, ಬೆಕ್ಕು, ಇಲಿ, ನಾಯಿ, ಜಿಂಕೆ, ಒಂಟೆ,ಕತ್ತೆ, ಕಪಿ, ಕೀಟಗಳು, ನೊಣಗಳು, ಇವೆಲ್ಲವನ್ನೂ ತನ್ನ ಹೆಂಡಿರುಮಕ್ಕಳು ಮೊದಲಾ ದ ತನ್ನ ಪರಿವಾರದಂತೆಯೇ ತಿಳಿದು, ಸುಮ್ಮನಿರಬೇಕೇಹೊರತು ಅವು ಗಳಮೇಲೆ ಭೇದಬುದ್ಧಿಯನ್ನಿಡಬಾರದು. ತಾನು ಗಳಿಸಿಟ್ಟ ಪದಾರ್ಥಗಳನ್ನು ತಿಂದು ಬದುಕುವ ತನ್ನ ಬಂಧುವರ್ಗಗಳಿಗೂ,ಇವಕ್ಕೂ ತಾರತಮ್ಯವೇನು ?

ಮತ್ತು ಗೃಹಸ್ಥನು ಧರ್ಮಾರ್ಥಕಾಮಗಳನ್ನು ಸಂಪಾದಿಸುವುದಕ್ಕಾ ಗಿಯೇ ವಿಶೇಷಪ್ರಯಾಸವನ್ನು ತೆಗೆದುಕೊಳ್ಳದೆ,ದೈವಿಕವಾಗಿ ತನಗೆ ಲಭಿಸಿ ದುದರಿಂದಲೇ ಆಯಾ ದೇಶಕಾಲಾನುಗುಣವಾಗಿ ತೃಪ್ತಿಯನ್ನುಹೊಂದಬೇ ಕು. ನಾಯಿನರಿಗಳಿಂದಹಿಡಿದು, ಚಂಡಾಲಜಾತಿಯವರೆಗಿನ ಸಮಸ್ತಪ್ರಾಣಿ ಗಳಿಗೂ, ತನ್ನ ಕೈಲಾದಮಟ್ಟಿಗೆ ಅನ್ನಾದಿಗಳನ್ನು ಕೊಟ್ಟು ಪೋಷಿಸಬೇ ಕು ಹೆಂಡಿರುಮಕ್ಕಳಲ್ಲಿ ತನ್ನವರೆಂಬ ಅಭಿಮಾನವನ್ನೇ ಬಿಟ್ಟುಬಿಡಬೇಕು. ಆದರೆ ಯಾರಿಗಾದರೂ ಪತ್ನಿಯಲ್ಲಿರುವ ಮೋಹವನ್ನು ಬಿಡುವುದೇನೋ ಕಷ್ಟವು, ಮನುಷ್ಯನು ತನ್ನಹೆಂಡಿರನಿಮಿತ್ತವಾಗಿಪ್ರಾಣವನ್ನಾದರೂ ಒಪ್ಪಿಸುವನು! ತಂದೆತಾಯಿಗಳನ್ನಾದರೂ ಕೊಲ್ಲುವನು! ಗುರುಜನಗಳ ನ್ನಾದರೂ ತಿರಸ್ಕರಿಸುವನು! ಹೀಗಿರುವಾಗ ಯಾವನು ಸ್ತ್ರೀಮೋಹವನ್ನು ತ್ಯಜಿಸಬಲ್ಲನೋ ಅವನು ಪರಮಾತ್ಮನನ್ನೂ ಸುಲಭವಾಗಿ ಜಯಿಸಬಲ್ಲನು ಓ ಧರ್ಮರಾಜಾ! ಯೋಚಿಸಿ ನೋಡುವಲ್ಲಿ, ಕ್ರಿಮಿಗಳಿಂದಲೂ ಮಲಮೂತ್ರಗ ಳಿಂದಲೂ ತುಂಬಿ,ಕೊನೆಗೆ ಭಸ್ಮಾವಶೇಷವಾಗಿ ನಿಲ್ಲತಕ್ಕ ಈಶರೀರವೆಲ್ಲಿ?ಅದ ಕ್ಕೆ ಆ ಸ್ತ್ರೀಯರು ತೋರಿಸತಕ್ಕ ರತಿಸುಖವೆಲ್ಲಿ?ಆಕಾಶದಂತೆ ನಿರ್ಲೇಪನಾ ದ ಆತ್ಮನಿಗೆ ಅದರಿಂದ ಸುಖವೆಂದರೇನು? ಇವೆಲ್ಲವೂ ಅಸಂಗತಗಳು ! ಆ ದುದರಿಂದ ಪಂಡಿತನಾದವನು, ಈ ತತ್ವವನ್ನಾಲೋಚಿಸಿ, ಭಾರ್ಯೆಯರಲ್ಲಿ

ಸ್ವಾಭಿಮಾನವನ್ನೇ ಬಿಟ್ಟುಬಿಡಬೇಕು. ಹೀಗೆ ಗೃಹಸ್ಥನು ಪತ್ನೀಪುತ್ರಾದಿಗ ಳಲ್ಲಿ ಅಭಿಮಾನವನ್ನು ಬಿಟ್ಟು, ತನಗೆ ದೈವಾಧೀನವಾಗಿ ಲಭಿಸಿದುದರಲ್ಲಿ ತನ್ನ ಪಂಚಮಹಾಯಜ್ಞಾದಿಕಾರ್ಯಗಳನ್ನು ನಡೆಸುತ್ತ, ಅದರಲ್ಲಿ ಮಿಕ್ಕ ವಸ್ತುಗಳಿಂದಲೇ ತನ್ನ ಜೀವಧಾರಣೆಯನ್ನು ಮಾಡುತ್ತಿರಬೇಕಲ್ಲದೆ, ಅದ ಕ್ಕಿಂತಲೂ ಹೆಚ್ಚಾಗಿ ಆಸೆಪಡಬಾರದು. ಹೀಗೆ ಮಾಡುವುದರಿಂದ ಕ್ರಮ ವಾಗಿ ಜ್ಞಾನೋದಯವನ್ನೂ, ಅದರಿಂದ ಕೊನೆಗೆ ಮಹರ್ಷಿಗಳಿಗೆ ಯೋಗ್ಯ ವಾದ ಮುಕ್ತಿಯನ್ನೂ ಪಡೆಯಬಹುದು. ಮತ್ತು ಗೃಹಸ್ಥನು, ದೇವತೆ ಗಳು, ಋಷಿಗಳು, ಮನುಷ್ಯರು, ಭೂತಗಳು ಪಿತೃಗಳು ಎಂಬೀ ಪಂಚಮ ಹಾಯಜ್ಞದೇವತೆಗಳಿಗೂ, ತನಗೂ, ಬೇರೆಬೇರೆಯಾಗಿ ಅಂತರ್ಯಾಮಿ ಯೆನಿಸಿಕೊಂಡ ಪರಮಪುರುಷನನ್ನು, ತನ್ನ ಕುಲೋಚಿತವಾದ ವೃತ್ತಿ ಯಲ್ಲಿ ಸಂಪಾದಿಸಿದ ಹಣದಿಂದ ಪ್ರತಿದಿನವೂ ಆರಾಧಿಸಬೇಕು. ದೊ ಡ್ಡ ಯಾಗಗಳನ್ನು ನಡೆಸತಕ್ಕ ಸೌಕರ್ಯಗಳೆಲ್ಲವೂ ತನಗೆ ಸಂಪೂರ್ಣವಾಗಿ ಲಭಿಸಿದಾಗ, ಶಾಸ್ತ್ರೋಕ್ತವಾಗಿ ಯಾಗಗಳನ್ನೂ ನಡೆಸಿ, ಅವುಗಳಿಂದಲೂ ಪರಮಪುರುಷನನ್ನು ಆರಾಧಿಸಬಹದು. ಓ ಧರ್ಮರಾಜಾ! ಆದರೆ ಬ್ರಾ ಹ್ಮಣಮುಖದಿಂದ ಕೊಡಲ್ಪಟ್ಟ ಅನ್ನಾದಿಗಳಿಂದ ಭಗವಂತನು ಸಂತೋ ಷಪಡುವಂತೆ, ಅಗ್ನಿಮುಖವಾಗಿ ಕೊಟ್ಟ ಹವಿಸ್ಸುಗಳಿಂದಲೂ ಸಂತೋಷಿಸ ಲಾರನು. ಆದುದರಿಂದ ಗೃಹಸ್ಥನು ಬ್ರಾಹ್ಮಣರನ್ನು ಯಥಾಯೋಗ್ಯವಾಗಿ ಆರಾಧಿಸಿ, ಅದರಿಂದ ಪರಮಾತ್ಮನಿಗೆ ಸಂತೋಷವನ್ನುಂಟುಮಾಡಬೇಕು. ಬ್ರಾಹ್ಮಣಕ್ಷತ್ರಿಯವೈಶ್ಯರೆಂಬ ಮೂರು ವರ್ಣದವರೂ, ತಮ್ಮತಮ್ಮ ದ್ರ ವ್ಯಾನುಕೂಲ್ಯಕ್ಕೆ ತಕ್ಕಂತೆ, ಭಾದ್ರಪದಮಾಸದ ಕೃಷ್ಣಪಕ್ಷವು ಅಮಾವಾಸ್ಯೆ ಯದಿನದಲ್ಲಿ ತನ್ನ ಪಿತೃಗಳಿಗೂ, ಅವರ ಬಂಧುಗಳಿಗೂ ಶ್ರಾದ್ಧವನ್ನು ನಡೆಸ ಬೇಕು. ಮತ್ತು ದಕ್ಷಿಣೋತ್ತರಾಯಣಗಳ ಪ್ರಾರಂಭದಿನಗಳು, ಮೇಷ ತುಲಾ ಸಂಕ್ರಮಣಗಳೆಂಬ ವಿಷುವತ್ಪುಣ್ಯದಿನಗಳು, ವ್ಯತೀಪಾತಗಳು, ತಿಥಿಕ್ಷಯ, ಚಂದ್ರಸೂರ್ಯಗ್ರಹಣಗಳು, ದ್ವಾದಶಿ, ಅಮಾವಾಸ್ಯೆ, ಶ್ರವ ಣನಕ್ಷತ್ರ, ಶುಕ್ಲಪಕ್ಷದ ತೃತೀಯೆ, (ಅಕ್ಷತೃತೀಯೆ), ಕಾರ್ತಿಕಶುಕ್ಲನವ ಮಿ. ಮಾರ್ಗಶಿರ ಮೊದಲಾದ ನಾಲ್ಕು ತಿಂಗಳುಗಳಲ್ಲಿ ಕೃಷ್ಣಾಷ್ಟಮೀ

ದಿನಗಳು, ಮಾಘಶುಕ್ಲಸಪ್ತಮಿ, ಮಖಾನಕ್ಷತ್ರದೊಡಗೂಡಿದ ಪೌರ್ಣ
ಮಿ, ಆಯಾ ಮಾಸದ ಪ್ರಧಾನನಕ್ಷತ್ರಗಳೊಡಗೂಡಿದ ಪೌರ್ಣಮಿತಿಥಿ
ಗಳು, ಅನೂರಾಧೆ, ಶ್ರವಣ, ಉತ್ತರ, ಉತ್ತರಾಷಾಢ,ಉತ್ತರಾಭಾದ್ರಪದ
ಗಳೆಂಬ ಐದುನಕ್ಷತ್ರಗಳೊಡಗೂಡಿದ ದ್ವಾದಶೀತಿಥಿ, ಮೇಲೆ ಹೇಳಿದ
ಮೂರು ಉತ್ತರಾನಕ್ಷತ್ರಗಳೊಡಗೂಡಿದ ಏಕಾದಶಿ, ಜನ್ಮನಕ್ಷತ್ರ, ಶ್ರವ
ಣನಕ್ಷತ್ರ, ಇಂತಹ ದಿನಗಳಲ್ಲಿ ಗೃಹಸ್ಥನು ಪಿತೃಗಳಿಗೆ ಪ್ರೀತ್ಯರ್ಥವಾಗಿ
ಶ್ರಾದ್ಧಗಳನ್ನು ಮಾಡಬೇಕು ಶ್ರೇಯಃಕಾರಣಗಳಾದ ಇತರಧರ್ಮಗಳ
ನ್ನು ನಡೆಸುವುದಕ್ಕೂ ಇವು ಉತ್ತಮ ದಿನಗಳಾದುದರಿಂದ, ಈ ದಿನಗಳಲ್ಲಿ
ಅವಶ್ಯವಾಗಿ ಸ್ನಾನದಾನಾದಿಪುಣ್ಯಕರ್ಮಗಳನ್ನು ನಡೆಸಬೇಕು.ಇವು ಆಯು
ರ್ವೃದ್ಧಿಗೂ ಕಾರಣಗಳು ಈ ಕಾಲಗಳಲ್ಲಿ ನಡೆಸತಕ್ಕ ಸ್ನಾನ, ಜಪ,
ಹೋಮ, ತಪಸ್ಸು, ದೇವಬ್ರಾಹ್ಮಣತೃಪ್ತಿ, ಕ್ಷತ್ರಿಯರಿಗೂ ವೈಶ್ಯರಿಗೂ
ಮಾಡತಕ್ಕ ಸತ್ಕಾರಗಳು, ಪಿತೃಶ್ರಾದ್ಧಗಳು, ಭೂತತೃಪ್ತಿ, ದಾನಧ
ರ್ಮಗಳು, ಇವೆಲ್ಲವೂ ಉತ್ತಮಫಲವನ್ನು ಕೊಡುವುವು ಮತ್ತು ಗೃಹಸ್ಥ
ನು,ತನ್ನ ಪತ್ನಿಗಾಗಿ ನಡೆಸತಕ್ಕ ಪುಂಸವನ, ಸೀಮಂತ, ಮೊದಲಾದ ಸಂ
ಸ್ಕಾರಗಳಲ್ಲಿಯೂ, ಮಕ್ಕಳಿಗಾಗಿ ನಡೆಸತಕ್ಕ ಜಾತಕರ್ಮ, ನಾಮಕರಣ
ಮೊದಲಾದ ಸಂಸ್ಕಾರಕಾಲಗಳಲ್ಲಿಯೂ. ಮರಣಹೊಂದಿದವರಿಗೆ ಮಾಡ
ತಕ್ಕ ದಹನಾದಿಸಂಸ್ಕಾರಕಾಲಗಳಲ್ಲಿಯೂ, ದಹನವಾದಮೇಲೆ ನಡೆಸತಕ್ಕ
ನಿತ್ಯವಿಧಿ ಮೊದಲಾದ ಕಾಲಗಳಲ್ಲಿಯೂ, ಸ್ನಾನದಾನಾದಿಕರ್ಮಗಳನ್ನು
ನಡೆಸುವುದರಿಂದ ಬಹಳ ಉತ್ತಮಫಲವುಂಟು, ಓ ರಾಜೇಂದ್ರಾ!
ಕಾಲನಿಯಮವನ್ನು ಹೇಳಿದೆನಷ್ಟೆ! ಇನ್ನು ದೇಶನಿಯಮಗಳನ್ನು ಹೇಳು
ವೆನು ಕೇಳು. ಯಾವ ಸ್ಥಳದಲ್ಲಿ ಸತ್ಪಾತ್ರವು ದೊರಕುವುದೋ ಆ ದೇಶ
ವೇ ದಾನಾದಿಕರ್ಮಗಳಿಗೆ ಉತ್ತಮಸ್ಥಾನವೆನಿಸುವುದು. ಮತ್ತು ಭಗವ
ನ್ಮೂರ್ತಿಗಳಿರತಕ್ಕ ಸ್ಥಳಗಳೂ, ತಪಸ್ಸು, ವಿದ್ಯೆ, ದಯೆ,ಮೊದಲಾದ ಗು
ಣಗಳುಳ್ಳ ಬ್ರಾಹ್ಮಣರು ವಾಸಮಾಡತಕ್ಕ ಸ್ಥಳಗಳೂ ಭಗವಂತನಿಗೆ ಪೂಜೆ
ನಡೆಯತಕ್ಕ ಸ್ಥಳಗಳೂ, ಇವೆಲ್ಲವೂ ಪವಿತ್ರಸ್ಥಳಗಳು. ಇಂತಹ ಸ್ಥಳಗಳಲ್ಲಿ
ಧರ್ಮಕಾರ್ಯವನ್ನು ನಡೆಸುವುದರಿಂದ, ಉತ್ತಮಫಲವನ್ನು ಹೊಂದಬ

ಹುದು ಮತ್ತು ಪುರಾಣಪ್ರಸಿದ್ಧಗಳಾದ ಗಂಗೆ, ಪುಷ್ಕರ, ಮೊದಲಾದ ಪುಣ್ಯತೀರ್ಥಗಳ ತೀರಪ್ರದೇಶಗಳೂ, ಮಹಾತ್ಮರು ವಾಸಮಾಡತಕ್ಕ ಸ್ಥಳಗಳೂ, ಧರ್ಮಾನುಷ್ಠಾನಕ್ಕೆ ಯೋಗ್ಯವೆನಿಸುವುವು ಕುರುಕ್ಷೇತ್ರ, ಗಯೆ, ಪ್ರಯಾಗೆ, ಪುಲಹಾಶ್ರಮ, ನೈಮಿಶಾರಣ್ಯ, ಫಲ್ಗುಸೀನದಿಯು ಹರಿಯತಕ್ಕ ಸ್ಥಳ, ರಾಮಸೇತು, ಪ್ರಭಾಸತೀರ್ಥ, ದ್ವಾರಕೆ, ಕಾಶಿ, ಮಧುರೆ, ಪಂಪಾಸರಸ್ಸು, ಬಿಂದುಸರಸ್ಸೆಂದು ಪ್ರಸಿದ್ಧವಾದ ಕರ್ದಮಾಶ್ರಮ, ಬದರಿಕಾಶ್ರಮ, ಅಲಕನಂದೆ, ಚಿತ್ರಕೂಟ ಇವೇ ಮೊದಲಾದ ಸ್ಥಳಗಳೂ, ಮಹೇಂದ್ರ, ಮಲಯ,ಮುಂತಾದ ಎಲ್ಲಾ ಕುಲಪರ್ವತಗಳ ತಪ್ಪಲುಗಳೂ. ಭಗವಂತನು ಅರ್ಚಾರೂಪದಿಂದ ನೆಲೆಗೊಂಡಿರುವ ದಿವ್ಯಕ್ಷೇತ್ರಗಳೂ ಪವಿತ್ರವೆನಿಸುವುವು ಶ್ರೇಯಃಕಾಂಕ್ಷಿಯಾದ ಪುರುಷನು, ಇಂತಹ ಪುಣ್ಯಸ್ಥಳಗಳನ್ನು ಆಗಾಗ ಸೇವಿಸುತ್ತಿರಬೇಕು ಇಂತಹ ಸ್ಥಳಗಳಲ್ಲಿ ಮಾಡತಕ್ಕ ಒಂದೊಂದು ಧರ್ಮಕಾರ್ಯವೂ ಸಹಸ್ರಗುಣಾಧಿಕವಾದ ಫಲಗಳನ್ನು ಕೊಡುವುದು ಧರ್ಮರಾಜಾ! ಮತ್ತೊಂದು ರಹಸ್ಯವನ್ನು ಹೇಳುವೆನು ಕೇಳು ನಾವು ದಾನಧರ್ಮಾದಿಗಳಿಗೆ ಸತ್ಪಾತ್ರವನ್ನು ಹುಡುಕಬೇಕಾದರೆ,ಈಲೋಕದಲ್ಲಿ ಶಾಸ್ತ್ರಾನುಸಾರವಾದ ಸತ್ಪಾತ್ರವು ಸಿಕ್ಕುವುದೇ ಕಷ್ಟವು ಆದುದರಿಂದ ಜ್ಞಾನಿಗಳಾದ ಪಂಡಿತರು, ಚರಾಚರಾತ್ಮಕವಾದ ಈ ಪ್ರಪಂಚಕ್ಕೆಲ್ಲವೂ ಅಂತರಾತ್ಮನಾಗಿರುವ ಆ ಪರಮಪುರುಷನೊಬ್ಬನೇ ಸತ್ಪಾತ್ರವೆಂದೂ, ನಾವು ಮಾಡತಕ್ಕ ಸತ್ಕರ್ಮಗಳೆಲ್ಲವೂ ಆ ಭಗವಂತನಿಗೇ ಅರ್ಪಿತಗಳಾಗಬೇಕೆಂದೂ ನಿಶ್ಚಯಿಸಿರುವರು ರಾಜೇಂದ್ರಾ! ಅಷ್ಟೇಕೆ? ನಿನ್ನ ರಾಜಸೂಯಯಾಗಕಾಲದಲ್ಲಿ, ಎಷ್ಟೋಮಂದಿ ದೇವತೆಗಳೂ, ಋಷಿಗಳೂ, ತಪಸ್ಸಿದ್ಧರಾದ ಮಹಾತ್ಮರೂ, ಬ್ರಹ್ಮದೇವನೂ, ಅವನ ಮಕ್ಕಳಾದ ಸನಕಾದಿಗಳೂ, ಬಂದು ಸೇರಿದ್ದರೂ, ಆ ಸಭೆಯಲ್ಲಿ ಶ್ರೀಕೃಷ್ಣನೇ ಅಗ್ರಪೂಜೆಯನ್ನು ಗ್ರಹಿಸುವುದಕ್ಕೆ ಏರ್ಪಟ್ಟನಲ್ಲವೆ? ಆದುದರಿಂದ ಅವನೊಬ್ಬನೇ ಸತ್ಪಾತ್ರವೆಂಬುದು ನಿನಗೆ ಪ್ರತ್ಯಕ್ಷವಾಗಿ ಕಂಡುಬಂದ ವಿಷಯವು! ಅನೇಕ ಜೀವರಾಶಿಗಳಿಂದ ತುಂಬಿದ ಈ ಬ್ರಹ್ಮಾಂಡವೆಂಬ ವೃಕ್ಷಕ್ಕೆ, ಆ ಪರಮಪುರುಷನೇ ಮೂಲವೆನಿಸಿರುವುದರಿಂದ, ಮರದ ಬುಡಕ್ಕೆ ನೀರೆರೆಯುವಂತೆ

ಅವನಿಗೆ ಮಾಡತಕ್ಕ ಆರಾಧನದಿಂದ ಸಮಸ್ತಜೀವಗಳೂ ತೃಪ್ತಿಹೊಂದುವುವು ಆ ಭಗವಂತನೇ ಜೀವರಾಶಿಗೆ, ದೇವತೆಗಳೆಂದೂ, ಮನುಷ್ಯರೆಂದೂ, ತಿರ್ಯಕ್ಕುಗಳೆಂದೂ ಆಕಾರಭೇದಗಳನ್ನು ಕಲ್ಪಿಸಿ, ಅದರಲ್ಲಿ ತಾನೂ ಜೀವಶರೀರಕನಾಗಿ ಶಯನಿಸಿರುವುದರಿಂದ, ಪುರುಷನೆಂದು ಪ್ರಸಿದ್ಧಿಗೊಂಡಿರುವನು ಆದರೆ ದೇವಮನುಷ್ಯಾದಿರೂಪದಿಂದಿರುವ ಎಲ್ಲಾ ಜೀವಗಳಲ್ಲಿಯೂ ತಾನು ಸೇರಿದ್ದರೂ, ತನ್ನ ಜ್ಞಾನ ಶಕ್ತಿ ಮುಂತಾದ ಗುಣಗಳಲ್ಲಿ ತಾರತಮ್ಯವನ್ನು ತೋರಿಸುತ್ತಿರುವನು ಲೋಕದಲ್ಲಿ ಅವನಿಲ್ಲದ ಪ್ರಾಣಿಗಳೊಂದಾದರೂ ಇರುವುದಿಲ್ಲ ಆದುದರಿಂದ ಯಾರನ್ನು ಪೂಜಿಸಿದರೂ ಆ ಭಗವಂತನನ್ನು ಪೂಜಿಸಿದಂತೆಯೇ ಭಾವಿಸಿ ಅದನ್ನು ನಡೆಸಬೇಕು ಯಾರಲ್ಲಿ ಭಗವಂತನ ಗುಣಗಳು ಹೆಚ್ಚಾಗಿ ಕಾಣುವುವೋ, ಅವರನ್ನೇ ಉತ್ತಮಪಾತ್ರವೆಂದೆಣಿಸಬೇಕು ಈ ಗುಣಗಳ ತಾರತಮ್ಯವನ್ನನುಸರಿಸಿಯೇ ಪಾತ್ರಾಪಾತ್ರಗಳನ್ನು ನಿರ್ಣಯಿಸಬೇಕು ಓ ರಾಜೇಂದ್ರಾ! ಮೊದಲ ಕೃತಯುಗದಲ್ಲಿ ಪ್ರಾಯಕವಾಗಿ ಎಲ್ಲರೂ ಜ್ಞಾನಿಗಳಾಗಿದ್ದು, ಎಲ್ಲವನ್ನೂ ಬ್ರಹ್ಮಸ್ವರೂಪವೆಂದೇ ಭಾವಿಸಿ ಪೂಜಿಸುತಿದ್ದರು ಕ್ರಮಕ್ರಮವಾಗಿ ಈ ಜ್ಞಾನವು ತಗ್ಗುತ್ತಬಂದು, ಒಬ್ಬರಲ್ಲಿ ಮತ್ತೊಬ್ಬರಿಗೆ ತಿರಸ್ಕಾರಭಾವವು ಹೆಚ್ಚಿಬಂದುದನ್ನು ನೋಡಿ, ಪಂಡಿತರು ತ್ರೇತಾದಿಯುಗಗಳಲ್ಲಿ ಅರ್ಚಾವಿಗ್ರಹಗಳನ್ನು ಪ್ರತಿಷ್ಠೆಮಾಡಿ,ಅವುಗಳನ್ನು ಬ್ರಹ್ಮಸ್ವರೂಪದಿಂದಭಾವಿಸಿ ಪೂಜಿಸತೊಡಗಿದರು. ತತ್ವಜ್ಞಾನವಿಲ್ಲದೆ ಇತರರಲ್ಲಿ ತಿರಸ್ಕಾರಬುದ್ಧಿಯುಳ್ಳ ಮೂಢರಿಗೂಕೂಡ, ಅಂತಹ ವಿಗ್ರಹಗಳಲ್ಲಿ ಗೌರವಜ್ಞಾನವೂ,ಭಕ್ತಿಯೂ ಹುಟ್ಟಿ,ಅವರೂ ಅವುಗಳನ್ನು ಶ್ರದ್ಧೆಯಿಂದ ಉಪಾಸನೆಮಾಡುವಂತಾಯಿತು ಆವಿಗ್ರಹಗಳನ್ನು ನಿಜವಾದ ಭಕ್ತಿಯಿಂದಾರಾಧಿಸತಕ್ಕವರು ತಾವು ಕೋರಿದ ಪುರುಷಾರ್ಥಗಳನ್ನು ಪಡೆಯುತ್ತಬಂದರು.ಆದರೇನು?ಹೀಗೆ ಅರ್ಚಾವಿಗ್ರಹಗಳನ್ನು ಪೂಜಿಸತಕ್ಕವರೂಕೂಡ, ಭಗವತ್ಸ್ವರೂಪರಾದ ಇತರ ಜನರನ್ನು ಗೌರವಿಸದೆ, ದ್ವೇಷಬುದ್ಧಿಯನ್ನು ತೋರಿಸುತ್ತಬಂದರೆ. ಆ ವಿಗ್ರಹಾರಾಧನವೂ ಅವರಿಗೆ ಸಫಲವಾಗಲಾರದು. ರಾಜಾ! ಮುಖ್ಯವಾಗಿ ಬ್ರಾಹ್ಮಣರನ್ನು ಪರಮಾತ್ಮಸ್ವರೂಪದಿಂದಲೇ ಭಾವಿಸಿ ಪೂಜಿಸಬೇಕು. ಏಕೆಂದರೆ,

ತಪಸ್ಸು, ತತ್ವಜ್ಞಾನ, ದೈವಾಧೀನವಾಗಿ ಲಭಿಸಿದುದರಲ್ಲಿ ತೃಪ್ತಿ, ಇವೇ ಮೊದಲಾದ ಗುಣಗಳಿಂದ, ಬ್ರಾಹ್ಮಣರು, ಭಗವದಂಶವನ್ನು ತಮ್ಮಲ್ಲಿ ಚೆನ್ನಾಗಿ ತೋರಿಸುತ್ತಿರುವರು ಇದರಿಂದ ಬ್ರಾಹ್ಮಣನೇ ಸತ್ಪಾತ್ರವೆಂದು ಪಂಡಿತರು ನಿರ್ಣಯಿಸಿರುವರು ಇದಲ್ಲದೆ ತ್ರೈಲೋಕ್ಯವನ್ನೂ ತನ್ನ ಪಾದರಜಸ್ಸಿನಿಂದ ಪಾವನಮಾಡುತ್ತ, ಸರ್ವಾಂತರ್ಯಾಮಿಯೆನಿಸಿಕೊಂಡ ಆ ಶ್ರೀಕೃಷ್ಣನೂಕೂಡ, ಬ್ರಾಹ್ಮಣರನ್ನೇ ತನ್ನ ದೈವವೆಂದು ಭಾವಿಸಿ ಪೂಜಿಸುತ್ತಿರುವನು ಇನ್ನು ನಮ್ಮಂತವರು ಆ ಬ್ರಹ್ಮಕುಲವನ್ನು ಗೌರವಿಸಬೇಕೆಂಬುದರಲ್ಲಿ ಸಂದೇಹವೇನಿದೆ?" ಎಂದನು ಇಲ್ಲಿಗೆ ಹದಿನಾಲ್ಕನೆಯ ಅಧ್ಯಾಯವು

---

(ನಾರದನು ಧರ್ಮರಾಜನಿಗೆ ಬೇರೆಕೆಲವು ಗೃಹಸ್ಥಧರ್ಮಗಳನ್ನೂ, ಮೋಕ್ಷಧರ್ಮವನ್ನೂ ತಿಳಿಸಿದುದು)

"ಓ ಧರ್ಮರಾಜಾ ಕೇಳು! ದ್ವಿಜರೆನಿಸಿಕೊಂಡ ಬ್ರಾಹ್ಮಣಕ್ಷತ್ರಿಯವೈಶ್ಯರೆಂಬ ಮೂರುವರ್ಣದವರಲ್ಲಿ, ಕೆಲವರು ಯಜ್ಞಯಾಗಾದಿಕರ್ಮಗಳಲ್ಲಿಯೇ ಆಸಕ್ತರಾಗಿರುವರು. ಬೇರೆ ಕೆಲವರು ತಪೋನಿಷ್ಠರಾಗಿರುವರು ಮತ್ತೆ ಕೆಲವರು ವೇದಾಧ್ಯಯನದಲ್ಲಿಯೂ, ಇತರರಿಗೆ ವೇದಾಧ್ಯಯನವನ್ನು ಮಾಡಿಸುವುದರಲ್ಲಿಯೂ ಆಸಕ್ತರಾಗಿರುವರು ಇನ್ನು ಕೆಲವರು ಜ್ಞಾನಯೋಗ ಕರ್ಮಯೋಗಗಳೆರಡರಲ್ಲಿಯೂ ಶ್ರದ್ಧೆಯುಳ್ಳವರಾಗಿರುವರು ಆದರೆ ಹೀಗೆ ಬೇರೆಬೇರೆ ಧರ್ಮಗಳನ್ನು ನಡೆಸತಕ್ಕವರಲ್ಲಿ, ಕರ್ಮಯೋಗವನ್ನು ಸಹಾಯಮಾತ್ರವಾಗಿಟ್ಟುಕೊಂಡು ಜ್ಞಾನಯೋಗವನ್ನೇ ಪ್ರಧಾನವಾಗಿ ಅವಲಂಬಿಸಿದವರೇ ಉತ್ತಮಪಾತ್ರವೆನಿಸುವರು ಆದುದರಿಂದ ಶಾಶ್ವತವಾದ ಪುರುಷಾರ್ಥವನ್ನು ಬಯಸತಕ್ಕವರು, ಪಿತೃದೇವತೆಗಳ ಪ್ರೀತಿಗಾಗಿ ಕೊಡತಕ್ಕ ಹವ್ಯಕವ್ಯಾದಿಗಳನ್ನು ಅಂತಹ ಜ್ಞಾನನಿಷ್ಠರಿಗೇ ಸಿಲ್ಲಿಯೋಗಿಸಬೇಕು ಅಂತಹ ಜ್ಞಾನನಿಷ್ಠರಾದ ಬ್ರಾಹ್ಮಣರು ಸಿಕ್ಕದಿದ್ದಪಕ್ಷದಲ್ಲಿ, ಕರ್ಮನಿಷ್ಠರಾದವರಲ್ಲಿಯೇ, ಅವರವರ ಜ್ಞಾನತಾರತಮ್ಯವನ್ನುನೋಡಿ, ಇದ್ದುದರಲ್ಲಿ ಉತ್ತಮವೆಂದು ತೋರಿದವರನ್ನು ನಿಯಮಿಸಬೇಕು. ಶ್ರಾದ್ಧ

ಕಾರ್ಯಗಳಲ್ಲಿ ವೈಶ್ವದೇವಸ್ಥಾನಕ್ಕೆ ಇಬ್ಬರನ್ನೂ, ಪಿತೃಸ್ಥಾನಕ್ಕೆ ಮೂವರ ನ್ನೂ ನಿಮಂತ್ರಿಸಿ ಭೋಜನಮಾಡಿಸಬೇಕು ಅಷ್ಟುಮಂದಿಬ್ರಾಹ್ಮಣರು ಲಭಿಸದಿದ್ದಾಗ, ಕೊನೆಗೆ ಒಂದೊಂದುಸ್ಥಾನಕ್ಕೆ ಒಬ್ಬೊಬ್ಬರನ್ನಾದರೂ ನಿಯಮಿಸಿ ಭೋಜನವನ್ನಿಕ್ಕಬೇಕು ಬಹಳ ಧನವಂತನಾಗಿದ್ದರೂ ಕೂಡ ಶ್ರಾದ್ಧಕಾಲಗಳಲ್ಲಿ ಶಾಸ್ತ್ರವಿಧಿಗಿಂತಲೂ ಹೆಚ್ಚುಮಂದಿ ಬ್ರಾಹ್ಮಣರನ್ನು ನಿಮಂತ್ರಿಸಬಾರದು ಏಕೆಂದರೆ, ಶ್ರಾದ್ಧದಲ್ಲಿ ದೇಶ ಕಾಲ ಪಾತ್ರಗಳೂ, ಶ್ರದ್ಧೆಯೂ,ಪೂಜಾಸಾಮಗ್ರಿಗಳೂ ಶಾಸ್ತ್ರವಿಧಿಯಂತೆ ನಿಯತವಾಗಿರಬೇಕೇ ಹೊರತು,ಬಂಧುತ್ವದ ದಾಕ್ಷಿಣ್ಯಕ್ಕಾಗಿ ಬಹಳ ವಿಜೃಂಭಣೆಯಿಂದ ನಡೆಸಿದರ ಸಾರ್ಥಕವಾಗಲಾರದು ಆದುದರಿಂದ ಈಕಾರ್ಯಗಳನ್ನು ಶಾಸ್ತ್ರವಿಧಿಗಿಂತ ಲೂ ಹೆಚ್ಚಾಗಿ ವಿಸ್ತರಿಸುವುದು ಯುಕ್ತವಲ್ಲ ಹಿಂದೆ ಹೇಳಿದಂತೆ ಶುದ್ಧ ವಾದ ದೇಶಕಾಲಗಳಲ್ಲಿ ಶ್ರಾದ್ಧಕಾರ್ಯಗಳನ್ನು ನಡೆಸಬೇಕಾಗಿ ಬಂದಾಗ, ವಿಷ್ಣುಸ್ಥಾನಕ್ಕೂ ಯೋಗ್ಯನಾದ ಬ್ರಾಹ್ಮಣನೊಬ್ಬನನ್ನು ನಿಮಂತ್ರಿಸಿ ಭೋಜನಮಾಡಿಸಬೇಕು. ವಿಷ್ಣುವನ್ನುದ್ದೇಶಿಸಿ ಸತ್ಪಾತ್ರದಲ್ಲಿ ವಿನಿಯೋ ಗಿಸತಕ್ಕ ಅನ್ನದಾನವು ಅತ್ಯಲ್ಪವಾಗಿದ್ದರೂ, ಅಕ್ಷಯವಾದ ಫಲವನ್ನು ಕೊ ಡುವುದು ಅದರಿಂದ ಇಹಲೋಕದಲ್ಲಿಯೂ ಶ್ರೇಯಸ್ಸುಂಟು ಓ ಧರ್ಮರಾಜಾ ! ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ, ಭೂತ ಗಳಿಗೂ, ಬಂಧುಗಳಿಗೂ, ತನಗೂ, ಅನ್ನವನ್ನು ವಿಭಾಗಿಸಿಕೊಡಬೇಕು. ಆ ಸಮಸ್ತಪ್ರಾಣಿಗಳನ್ನೂ ಭಗವದ್ರೂಪದಿಂದ ಭಾವಿಸಬೇಕು ಶ್ರಾ ದ್ಧದಲ್ಲಿ ಮಾಂಸವನ್ನುಪಯೋಗಿಸಬಾರದು. ಕಾಡಿನಲ್ಲಿ ಮಹರ್ಷಿಗಳು ಭು ಜಿಸತಕ್ಕ ಧಾನ್ಯಾದಿಗಳನ್ನೇ ಪಕ್ವಮಾಡಿ, ಆ ಅನ್ನದಿಂದಲೇ ಎಲ್ಲರನ್ನೂ ತೃಪ್ತಿಗೊಳಿಸಬೇಕು ಇದರಿಂದ ಪಿತೃದೇವತೆಗಳೂ, ದೇವತೆಗಳೂ ತೃಪ್ತಿ ಹೊಂದುವಂತೆ, ಪ್ರಾಣಿಹಿಂಸೆಯಿಂದ ಸಂಪಾದಿಸಿ ತಂದ ಮಾಂಸದಿಂದ ತೃಪ್ತಿಹೊಂದಲಾರರು. ಪ್ರಾಣಿಹಿಂಸೆಯು ಎಂದಿಗೂ ಶ್ರೇಯಸ್ಕರವಲ್ಲ. ಭೂತದ್ರೋಹವನ್ನು ಮಾಡದಿರುವುದಕ್ಕಿಂತ ಉತ್ತಮಧರ್ಮವಿಲ್ಲ. ಆದು ದರಿಂದ ತನ್ನ ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ಇತರ ಭೂತಗಳಿಗೆ ಯಾವನೂ ದ್ರೋಹವನ್ನೆಣಿಸಬಾರದು ಕೆಲವರು ಯಾಗ

ಮಾಡುವ ನೆವದಿಂದ ಪಶುವಧವನ್ನು ಮಾಡುವುದುಂಟು. ಯಜ್ಞತತ್ವವ ನ್ನು ಚೆನ್ನಾಗಿ ಬಲ್ಲವರಾಗಿಯೂ, ನಿಷ್ಕಾಮರಾಗಿಯೂ ಇರುವ ಜ್ಞಾನಿಗ ಳಾದರೋ, ಹೀಗೆ ಪಶು ಪುರೋಡಾಶಗಳೇ ಮೊದಲಾದ ದ್ರವ್ಯಗಳಿಂದ ನ ಡೆಸತಕ್ಕ ಕರ್ಮಯಜ್ಞಗಳಿಗಿಂತಲೂ, ಜ್ಞಾನಯಜ್ಞವನ್ನೇ ಮೇಲೆಂದು ಭಾ ವಿಸಿ, ಜ್ಞಾನಯೋಗವನ್ನೇ ಅನುಷ್ಠಿಸುವರು ಈ ವಿಧಿಯುಳ್ಳ ಕರ್ಮಯ ಜ್ಞಗಳನ್ನೆಲ್ಲಾ ಅವರು,ತಮ್ಮ ಜ್ಞಾನವೆಂಬ ಯೋಗಾಗ್ನಿಯಲ್ಲಿಹೋಮಮಾ ಡುವರು ತನ್ನ ಪ್ರಯೋಜನಕ್ಕಾಗಿ ಯಾಗದಲ್ಲಿ ಪಶುಗಳನ್ನು ಕೊಲ್ಲತಕ್ಕ ಪುರುಷನನ್ನು ನೋಡಿ, ಸಮಸ್ತಭೂತಗಳೂ ಭಯಪಟ್ಟು ನಿಂದಿಸುವುವು ಈ ಕಾರಣದಿಂದಲೇ ಕೆಲವು ಜ್ಞಾನಿಗಳು ಆ ಕರ್ಮಯಜ್ಞಗಳನ್ನು ತ್ಯಜಿಸಿ, ಜ್ಞಾನಯಜ್ಞವನ್ನೇ ಅನುಷ್ಠಿಸುವರು ಧರ್ಮರಹಸ್ಯವನ್ನು ತಿಳಿದಪುರುಷನು, ದೈವಲಬ್ಧವಾದುದರಿಂದಲೇ ತನ್ನ ನಿತ್ಯನೈಮಿತ್ತಿಕಕರ್ಮಗಳನ್ನು ಶ್ರದ್ಧೆ ಯಿಂದ ನಡೆಸಬೇಕು ಧರ್ಮಗಳನ್ನು ನಡೆಸುವುದರಲ್ಲಿ ಕೆಲವುಸೂಕ್ಷ್ಮಾಂಶಗ ಳನ್ನು ತಿಳಿಸುವೆನು ಕೇಳು! ಕೆಲವರು ಧರ್ಮಬುದ್ಧಿಯಿಂದಲೇ ಕೆಲವುಕಾರ್ಯಗ ಳನ್ನುನಡೆಸುವುಂಟು ಅವುಗಳಲ್ಲಿ ವಿಧರ್ಮವೆಂದೂ, ಪರಧರ್ಮವೆಂದೂ, ಉಪ ಧರ್ಮವೆಂದೂ, ದಾಂಭಿಕಧರ್ಮವೆಂದೂ ಆಭಾಸಧರ್ಮವೆಂದೂ ಐದು ಭೇದಗಳುಂಟು. ಸ್ವಧರ್ಮಕ್ಕೆ ಹಾನಿಕರವಾಗಿದ್ದಪಕ್ಷದಲ್ಲಿ ಅವು ವಿಧರ್ಮಗಳೆ ನಿಸುವುವು. ಒಬ್ಬರ ವರ್ಣಾಶ್ರಮಧರ್ಮಗಳನ್ನು ಮತ್ತೊಬ್ಬರು ಅನುಷ್ಠಿಸು ವುದು ಪರಧರ್ಮವೆನಿಸುವುದು ವೇದವಿರುದ್ಧವಾಗಿ ಸ್ವೇಚ್ಛೆಯಿಂದಅಂಗೀಕರಿ ಸಿದ ಪಾಷಂಡಾದಿಧರ್ಮಗಳು ಉಪಧರ್ಮಗಳು ಪರರನ್ನು ವಂಚಿಸುವುದಕ್ಕಾಗಿ ಮಾಡತಕ್ಕಧರ್ಮಗಳು ಡಾಂಭಿಕಧರ್ಮಗಳೆನಿಸುವು ವಿಧಿವಾಕ್ಯಗಳಿಗೆಅಪಾ ರ್ಥವನ್ನು ಕಲ್ಪಿಸಿ, ಅದರಂತೆ ನಡೆಸುವುದು (ಎಂದರೆ ಗೋದಾನವನ್ನು ಮಾ ಡಬೇಕೆಂದಿರುವವನು,ಈಗಲೋ ನಾಳೆಯೋ ಸಾಯುವುದಕ್ಕಿರುವ ಹಸು ವನ್ನು ದಾನಮಾಡುವುದು , ಇವೇ ಮೊದಲಾದುವು) ಚಲಧರ್ಮವೆನಿಸುವುವು ಇವೆಲ್ಲವೂ ಧರ್ಮಬುದ್ಧಿಯಿಂದ ನಡೆಸಲ್ಪಟ್ಟರೂ, ಅಧರ್ಮದ ಶಾಖೆಗ ಳೆನಿಸಿಕೊಳ್ಳುವುವೇಹೊರತು, ಧರ್ಮವೆನಿಸಿಕೊಳ್ಳಲಾರವು ಆದುದ ರಿಂದ ಧರ್ಮಜ್ಞನಾದವನು, ಇವುಗಳನ್ನು ತ್ಯಜಿಸಬೇಕು. ಅವರವರ

ಸ್ವಭಾವಕ್ಕೂ, ವರ್ಣಾಶ್ರಮಗಳಿಗೂ ಅನುಗುಣವಾಗಿ ನಡೆಸತಕ್ಕ ಕರ್ಮಗಳೇ ಮನಶ್ಶಾಂತಿಯನ್ನುಂಟುಮಾಡುವುವೇಹೊರತು,ಇತರ ಧರ್ಮಗಳು ಎಷ್ಟುಮಾತ್ರವೂ ಫಲಕಾರಿಗಳಲ್ಲ. ಪುರುಷನು ದರಿದ್ರನಾಗಿದ್ದಪಕ್ಷದಲ್ಲಿ ಸ್ವಧರ್ಮಾಚರಣಕ್ಕಾಗಿಯೂ ತೊಬ್ಬರಿಂದ ಧನವನ್ನಪೇಕ್ಷಿಸಬಾರದು ದೈವಲಬ್ಧವಾದುದನ್ನುಮಾತ್ರವೇ ತಿಂದು ತೃಪ್ತಿಪಡುವ ಹೆಬ್ಬಾವಿನಂತೆ, ತನಗೆ ದೈವಿಕವಾಗಿ ಲಭಿಸಿದುದರಿಂದಲೇ ದೇಹಧಾರಣೆಯನ್ನು ಮಾಡುತ್ತ, ನಿಷ್ಕಾಮನಾಗಿರುವುದೇ ಉತ್ತಮವೃತ್ತಿಯೆನಿಸಿಕೊಳ್ಳುವುದು ನಿಷ್ಕಾಮನಾಗಿಯೂ, ನಿತ್ಯಸಂತುಷ್ಟನಾಗಿಯೂ,ತನ್ನ ಆತ್ಮಜ್ಞಾನದಿಂದಲೇ ಆನಂದಿಸತಕ್ಕವನಾಗಿಯೂ ಇರುವುದರಿಂದುಂಟಾಗುವ ಸುಖವು, ಶಬ್ದಾದಿವಿಷಯಗಳಿಗಾಗಿ ಆಸೆಪಟ್ಟು ಅದಕ್ಕಾಗಿ ನಾನಾಕಡೆಗಳಲ್ಲಿ ತೊಳಲುತ್ತಿರುವ ಮನುಷ್ಯನಿಗೆ ಎಂದಿಗೂ ಲಭಿಸಲಾರದು ಪಾದರಕ್ಷೆಯನ್ನು ಮೆಟ್ಟಿ ನಡೆಯತಕ್ಕವನಿಗೆ, ಭೂಮಿಯೆಲ್ಲವೂ ಚರ್ಮಮಯವಾಗಿ ತೋರುವಂತೆ, ತನ್ನಲ್ಲಿ ತಾನು ನಿತ್ಯಸಂತೋಷಿಯಾಗಿರತಕ್ಕವನಿಗೆ, ಸಮಸ್ತದಿಕ್ಕುಗಳೂ ಸುಖಮಯವಾಗಿಯೇ ತೋರುವುವು ನಿತ್ಯಸಂತೋಷಿಯಾದ ಮನುಷ್ಯನು,ಕೇವಲಜಲಾಹಾರದಿಂದಲೇ ಭೂಪ್ರದಕ್ಷಿಣವನ್ನುಮಾಡಿ ಸುಖದಿಂದ ಬರಬಹುದು ಇದಕ್ಕಾಗಿ ಬೇರೊಬ್ಬರಲ್ಲಿ ಧನವನ್ನು ಯಾಚಿಸಬೇಕಾದುದೇ ಇಲ್ಲ ತೃಪ್ತಿಯಿಲ್ಲದ ಮನುಷ್ಯನು, ವಿಷಯಸುಖಕ್ಕಾಗಿ ಯಾವಾಗಲೂ ಪ್ರಯತ್ನಿಸುತ್ತ,ಎಷ್ಟಾದರೂ ತೃಪ್ತಿಯಿಲ್ಲದೆ ನಾಯಿಯಂತೆ ತಿರುಗಿ ಎಲ್ಲರನಿಂದೆಗೂ ಪಾತ್ರನಾಗುವನು. ಬ್ರಾಹ್ಮಣನು ಅಸಂತುಷ್ಟನಾಗಿದ್ದಪಕ್ಷದಲ್ಲಿ ಆತನ ಬ್ರಹ್ಮವರ್ಚಸ್ಸೂ, ಶಾಸ್ತ್ರಜ್ಞಾನವೂ, ತಪಸ್ಸೂ, ಖ್ಯಾತಿಯೂ, ಎಲ್ಲವೂ ನಿಶ್ಶೇಷವಾಗಿ ನಶಿಸುವುವು ಇಂದ್ರಿಯಚಾಪಲ್ಯವುಳ್ಳವನ ಜ್ಞಾನವು ಎಷ್ಟುಮಾತ್ರವೂ ಕೆಲಸಕ್ಕೆ ಬಾರದು ಲೋಭಬುದ್ಧಿಯು ಎಂತವರಿಗೂ ಇರಬಾರದು. ಲೋಭಕ್ಕಿಂತಲೂ ಹೀನವಾದ ದುರ್ಗುಣವು ಬೇರೊಂದಿಲ್ಲ ಹಸಿವು ಬಾಯಾರಿಕೆಗಳನ್ನು ತೀರಿಸುವುದರಿಂದ ಕಾಮವನ್ನು ನೀಗಿಸಬಹುದು. ಹಗೆತೀರಿಸಿಕೊಳ್ಳುವುದರಿಂದ ಕೋಪವೂ ಅಡಗಿಹೋಗುವುದು ಸಮಸ್ತದಿಕ್ಕುಗಳನ್ನೂ ಜಯಿಸಿ ಭೂಮಂಡಲವನ್ನೇ ಅನುಭವಿಸುತಿ

ದ್ದರೂ ಲೋಭವೆಂಬುದುಮಾತ್ರ ತಗ್ಗಲಾರದು ಓ ರಾಜೇಂದ್ರಾ ! ಎ ಷ್ಟೋಜನರು ಅನೇಕಶಾಸ್ತ್ರಗಳನ್ನೋದಿದ ಪಂಡಿತರಾಗಿದ್ದರೂ, ಲೌಕಿಕ ವೈದಿಕ ವ್ಯಾಪಾರಗಳನ್ನುಬಲ್ಲವರಾಗಿದ್ದರೂ, ಮತ್ತೊಬ್ಬರ ಸಂಶಯವನ್ನು ನಿವಾರಿಸಬಲ್ಲವರಾಗಿದ್ದರೂ, ಸಭೆಗಳಲ್ಲಿ ಅಗ್ರಗಣ್ಯರೆನಿಸಿಕೊಂಡಿದ್ದರೂ, ತಮ್ಮಲ್ಲಿರುವ ಅಸಂತುಷ್ಟಿಯೆಂಬ ಒಂದೇ ದುರ್ಗುಣದಿಂದ ನರಕದಲ್ಲಿ ಬಿದ್ದಿರುವರು ಆದುದರಿಂದ ಕಾಮಾದಿಗಳನ್ನು ಜಯಿಸಿ, ಇದ್ದುದರಲ್ಲಿ ತೃ ಪ್ತನಾಗಿರುವುದೇ ವಿವೇಕಿಯ ಕರ್ತವ್ಯವು "ಆದರೆ ಮನಸ್ಸಿನಲ್ಲಿ ಸಹಜ ವಾಗಿ ಹುಟ್ಟುವ ಕಾಮ ಕ್ರೋಧ ಲೋಭಾದಿಗಳನ್ನು ನಿಗ್ರಹಿಸುವುದು ಹೇಗೆ" ಎಂದು ಕೇಳುವೆಯಾ ? ಭೋಗಾಪೇಕ್ಷೆಯನ್ನು ಬಿಡುವುದರಿಂದ ಕಾಮವನ್ನು ನಿಗ್ರಹಿಸಬಹುದು ಆ ಕಾಮವನ್ನಡಗಿಸುವುದರಿಂದ ಕೋ ಪವನ್ನು ಜಯಿಸಬಹುದು ಹಣದಿಂದುಂಟಾಗುವ ಅನರ್ಥಗಳನ್ನು ತಿಳಿಯುವು ದರಿಂದ ಲೋಭವನ್ನು ನೀಗಿಸಬಹುದು. ಆತ್ಮಸ್ವರೂಪಜ್ಞಾನದಿಂದ ಭಯ ವನ್ನು ನೀಗಿಸಬಹುದು ಹುಟ್ಟಿದಮೇಲೆ ಸಾವು ನಿಶ್ಚಯವೆಂಬ ತತ್ವಜ್ಞಾ ನವು ಶೋಕಮೋಹಗಳನ್ನು ನೀಗಿಸುವುದು ಹಾಗೆಯೇ ಮಹಾತ್ಮರ ಸೇವೆ ಯಿಂದ ಡಂಭವನ್ನೂ, ಮೌನದಿಂದ ತನ್ನ ಯೋಗಾಭ್ಯಾಸಕ್ಕೆ ವಿಘ್ನಕಾರಿ ಗಳಾದ ಲೋಕವಾರ್ತಾದಿಗಳನ್ನೂ, ದೇಹಾದಿಗಳಲ್ಲಿ ಅಭಿಮಾನವನ್ನು ಬಿ ಡುವುದರಿಂದ ಹಿಂಸಾಭಯವನ್ನೂ ತಪ್ಪಿಸಬಹುದು ಕಾರುಣ್ಯದಿಂದಲೂ, ಮನಸ್ಸಮಾಧಾನದಿಂದಲೂ, ಯೋಗಬಲದಿಂದಲೂ ಕ್ರಮವಾಗಿ ಇತರ ಪ್ರಾಣಿಗಳಿಂದಲೂ, ದೈವಿಕವಾಗಿಯೂ, ದೇಹಜನ್ಯವಾಗಿಯೂ ತನಗೆ ಬಂದೊದಗುವ ತಾಪತ್ರಯವೆಂಬ ಮೂರುಬಗೆಯ ದುಃಖಗಳನ್ನೂ ತಪ್ಪಿಸ ಬಹುದು ಹಾಗೆಯೇ ಸಾತ್ವಿಕಾಹಾರದಿಂದ ನಿದ್ರೆಯನ್ನೂ, ಸತ್ವಗುಣದಿಂ ದ ರಜಸ್ತಮೋಗುಣಗಳನ್ನೂ, ಶಾಂತಿಯಿಂದ ಮನಸ್ಸನ್ನೂ ನಿಗ್ರಹಿಸಬ ಹುದು ಹೀಗೆ ಕಾಮಾದಿದುರ್ಗುಣಗಳನ್ನು ಜಯಿಸುವುದಕ್ಕೆ ತಕ್ಕ ಉ ಪಾಯಗಳು ನಮ್ಮಲ್ಲಿಯೇ ಏರ್ಪಟ್ಟಿರುವುವು ಗುರುಭಕ್ತಿಯೊಂದಿದ್ದರೆ ಮನುಷ್ಯನು ಗುರುಸೇವೆಯಿಂದ ಇವೆಲ್ಲವನ್ನೂ ಸಾಧಿಸಬಹುದು. ಸಾ ಕ್ಷಾದ್ಭಗವಂತನೇ ಆಚಾರ್ಯರೂಪದಿಂದ ಶಿಷ್ಯರನ್ನನುಗ್ರಹಿಸುವನು ಆ

ದುವರಿಂದ, ಜ್ಞಾನಪ್ರದನಾದ ಆಚಾರ್ಯನನ್ನು ಸಾಮಾನ್ಯಮನುಷ್ಯನೆಂದು ಭಾವಿಸತಕ್ಕವನು, ಎಷ್ಟೇಶಾಸ್ತ್ರಜ್ಞನಾಗಿದ್ದರೂ, ಎಷ್ಟೇ ಧರ್ಮಾನುಷ್ಠಾನಗಳನ್ನು ನಡೆಸುತ್ತಬಂದರೂ, ಅವನ ಜ್ಞಾನನಿಷ್ಠೆಗಳೆಲ್ಲವೂ ನದಿಯಲ್ಲಿ ಮುಳುಗಿ ಬಂದು ಮೇಲೆ ಮಣ್ಣನ್ನು ಸುರಿದುಕೊಳ್ಳುವ ಆನೆಗಳ ಸ್ನಾನದಂತೆ ನಿಷ್ಫಲವಾಗುವುವೇಹೊರತು ಸಾರ್ಥಕವಾಗಲಾರವು ಓ ಧರ್ಮರಾಜಾ' ಪ್ರಕೃತಿಪುರುಷರಿಬ್ಬರಿಗೂ ನಿಯಾಮಕನಾಗಿ, ಯೋಗೀಶ್ವರರಿಂದ ಅನವರತವೂ ಧ್ಯಾನಿಸಲ್ಪಡತಕ್ಕ ಪಾದಾರವಿಂದಗಳುಳ್ಳ ಸಾಕ್ಷಾದ್ಭಗವಂತನೇ ಇಲ್ಲಿ ಕೃಷ್ಣರೂಪದಿಂದವತರಿಸಿರುವನು ಇದನ್ನು ತಿಳಿಯದ ಕೆಲವರು ಆ ಕೃಷ್ಣನನ್ನೂ ತಮ್ಮಂತೆ ಸಾಮಾನ್ಯಮನಷ್ಯನೆಂದು ಭಾವಿಸುವರಲ್ಲವೆ? ಇದರಂತೆಯೇ ಆಚಾರ್ಯನಲ್ಲಿರುವ ಮಹಿಮೆಯನ್ನು ತಿಳಿಯದ ಮೂಢರು, ಆಚಾರ್ಯನನ್ನು ಸಾಧಾರಣಮನಷ್ಯನೆಂದೇ ಎಣಿಸುವರು ಲೋಕದಲ್ಲಿ ಅವರವರು ನಡೆಸತಕ್ಕ ವರ್ಣಾಶ್ರಮಧರ್ಮಗಳೆಲ್ಲಕ್ಕೂ ಇಂದ್ರಿಯಜಯವೇ ಮುಖ್ಯಪ್ರಯೋಜನವು ಆ ಇಂದ್ರಿಯಜಯವನ್ನು ಸಾಧಿಸಲಾರದ ಧರ್ಮಾನುಷ್ಠಾನಗಳೆಲ್ಲವೂ ನಿಷ್ಪ್ರಯೋಜನಗಳು. ಇಂದ್ರಿಯಜಯವನ್ನು ಸಂಪಾದಿಸಿದಮೇಲೆಯೂ,ಅದು ಪರಮಾತ್ಮಧ್ಯಾನರೂಪವಾದ ಸಮಾಧಿಯೋಗವನ್ನು ಕೈಗೂಡಿಸದಿದ್ದಪಕ್ಷದಲ್ಲಿ ಅಷ್ಟು ಶ್ರಮಪಟ್ಟು ಸಾಧಿಸಿದ ಇಂದ್ರಿಯಜಯವೂ ವ್ಯರ್ಥವಾಗುವುದು ಬ್ರಾಹ್ಮಣರಿಗೆ ಜೀವನಾರ್ಥವಾದ ಯಾಜನಾದಿಕರ್ಮಗಳು ವಿಧ್ಯುಕ್ತವಾಗಿಯೇ ಇದ್ದರೂ, ಆ ಬ್ರಾಹ್ಮಣರು ತಮ್ಮ ಜೀವನವನ್ನು ಪರಮಾತ್ಮಧ್ಯಾನಕ್ಕಾಗಿ ಉಪಯೋಗಿಸದಿದ್ದರೆ, ಆ ಕರ್ಮಗಳೂ ವ್ಯರ್ಥವೆನಿಸುವುವು. ಪರಮಾತ್ಮಧ್ಯಾನದಲ್ಲಿ ವಿಮುಖರಾದವರು ನಡೆಸತಕ್ಕ ಶ್ರೌತಸ್ಮಾರ್ತಕರ್ಮಗಳಾವುವೂ ಫಲಕಾರಿಗಳಲ್ಲ ಮನಸ್ಸನ್ನು ನಿಗ್ರಹಿಸಬಲ್ಲ ಪ್ರತಿಮನುಷ್ಯನೂ ಹೆಂಡಿರುಮಕ್ಕಳೆಂಬ ಸಂಸಾರಪಾಶವೆಲ್ಲವನ್ನೂ ತೊರೆದು, ಶರೀರಮಾತ್ರಸಹಾಯಕನಾಗಿ, ನಾಲ್ಕನೆಯ ಆಶ್ರಮವಾದ ಸನ್ಯಾಸಾಶ್ರಮವನ್ನು ಕೈಕೊಂಡು, ನಿರ್ಜನವಾದ ಸ್ಥಳದಲ್ಲಿ ಏಕಾಕಿಯಾಗಿದ್ದು, ಭಿಕ್ಷೆಮಾಡಿ ತಂದ ಅನ್ನವನ್ನು ಮಿತವಾಗಿ ಭುಜಿಸುತ್ತಿರಬೇಕು. ಅವನು ಶುಚಿಯಾದ ಸಮಪ್ರ

ದೇಶದಲ್ಲಿ ಆಸನವನ್ನು ಕಲ್ಪಿಸಿ, ಅದರಮೇಲೆ ದರ್ಭಾಸ್ತರಣವನ್ನೂ, ಕೃಷ್ಣಾಜಿನವನ್ನೂ,ಅದರಮೇಲೆ ವಸ್ತ್ರವನ್ನೂ ಹಾಸಿ, ಅದರಲ್ಲಿ ನಿಶ್ಚಲನಾಗಿ ನೆಟ್ಟಗೆ ಕುಳಿತು "ಓಂ" ಎಂಬ ಪ್ರಣವಮಂತ್ರವನ್ನು ಪುನಶ್ಚರಣಮಾಡುತ್ತಿರಬೇಕು. ಪೂರಕ, ಕುಂಭಕ, ರೇಚಕಗಳೆಂಬ ಪ್ರಾಣಾಯಾಮಕಾರ್ಯಗಳಿಂದ ಪ್ರಾಣವಾಯುವನ್ನೂ ಅಪಾನವಾಯುವನ್ನೂ ಅಡಗಿಸಿ, ತನ್ನ ಮನಸ್ಸು ಶಬ್ದಾದಿವಿಷಯಗಳಲ್ಲಿ ಪ್ರವರ್ತಿಸದೆ ದೃಢವಾಗಿ ನಿಲ್ಲುವವರೆಗೆ, ತನ್ನ ಮೂಗಿನ ತುದಿಯಲ್ಲಿಯೇ ದೃಷ್ಟಿಯನ್ನಿಟ್ಟು,ಈ ಪ್ರಾಣಾಯಾಮವನ್ನು ಸಾಧಿಸಬೇಕು ಮನಸ್ಸು ಆಗಾಗ ಶಬ್ದಾದಿವಿಷಯಸುಖದ ಕಡೆಗೆ ಆಸೆಯಿಂದ ಸೆಳೆಯಲ್ಪಟ್ಟು ಅಲ್ಲಲ್ಲಿ ಸುತ್ತುತ್ತಿರುವುದು. ಆದರೆ ಬಲಾತ್ಕಾರಪೂರ್ವಕವಾಗಿ ಅದನ್ನೆಳೆದು ಹೃದಯದಲ್ಲಿರುವ ಪರಮಪುರುಷನ ದಿವ್ಯಮಂಗಳವಿಗ್ರಹದಲ್ಲಿಯೇ ನೆಲೆಗೊಳಿಸಬೇಕು ಹೀಗೆ ಪ್ರತಿದಿನವೂ ಎಡೆಬಿಡದೆ ಅಭ್ಯಸಿಸುತ್ತಬಂದರೆ, ಆ ಸನ್ಯಾಸಿಯ ಮನಸ್ಸು ಸ್ವಲ್ಪಕಾಲದಲ್ಲಿಯೇ ವಿಷಯಾಪೇಕ್ಷೆಯನ್ನು ಬಿಟ್ಟು,ದೃಢವಾಗಿ ತನ್ನ ಸ್ವಾಧೀನದಲ್ಲಿ ನಿಲ್ಲುವುದು ಕಟ್ಟಿಗೆಯಿಲ್ಲದಿದ್ದಾಗ, ಬೆಂಕಿಯು ತನಗೆತಾನೇ ನಂದಿಹೋಗುವಂತೆ,ವಿಷಯಗಳನ್ನು ಕಾಣದ ಮನಸ್ಸು ತನಗೆತಾನೇ ಶಾಂತವಾಗುವುದು. ಹೀಗೆ ಶಬ್ದಾದಿವಿಷಯಗಳ ಕಡೆಗೆ ಆಕರ್ಷಿಸಲ್ಪಡದೆ, ಸಮಸ್ತ ವ್ಯಾಪಾರಗಳನ್ನೂ ಬಿಟ್ಟ ಮನಸ್ಸು, ಬ್ರಹ್ಮಾನುಭವವೆಂಬೀ ಮಹಾನಂದವನ್ನು ಮುಟ್ಟಿದಮೇಲೆ, ಎಂದಿಗೂ ಅದನ್ನು ಬಿಟ್ಟು ಹಿಂತಿರುಗಲಾರದು. ಧರ್ಮಾರ್ಥಕಾಮಗಳಿಗೆ ಉತ್ಪತ್ತಿಸ್ಥಾನವಾದ ಗೃಹಸ್ಥಾಶ್ರಮವನ್ನು ತೊರೆದು,ಸನ್ಯಾಸಾಶ್ರಮವನ್ನು ಪರಿಗ್ರಹಿಸಿದವನು, ತಿರುಗಿ ಆ ಧರ್ಮಾರ್ಥಕಾಮಗಳಿಗೇ ಅಪೇಕ್ಷಿಸುವಪಕ್ಷದಲ್ಲಿ, ವಾಂತಿಮಾಡಿದ ಅನ್ನವನ್ನು ನಾಚಿಕೆಯಿಲ್ಲದೆ ಭಕ್ಷಿಸುವುದಕ್ಕೆ ಆಶೆಪಡುವ ಮೂಢನಂತೆಯೇಹೊರತು ಬೇರೆಯಲ್ಲ. ದೇಹವು ಆತ್ಮಕ್ಕಿಂತಲೂ ಬೇರೆಯಾದುದೆಂದೂ, ಎಂದಿದ್ದರೂ ಅದು ಮರಣಹೊಂದತಕ್ಕುದೆಂದೂ, ಆ ದೇಹವು ಕೊನೆಗೆ ಅಮೇಧ್ಯವಾಗಿಯೂ, ಕ್ರಿಮಿರೂಪವಾಗಿಯೂ, ಭಸ್ಮವಾಗಿಯೂ ಬಿದ್ದು ಹೋಗುವುದೆಂದೂ ಚೆನ್ನಾಗಿ ತಿಳಿದು, ಅದರಲ್ಲಿ ಅಭಿಮಾನವನ್ನು ಬಿಟ್ಟಮೇಲೆಯೂ ಸನ್ಯಾಸಿಗಳು,

ಆ ವಿವೇಕಜ್ಞಾನವನ್ನು ಮರೆತು,ತಿರುಗಿ ಆದೇಹವನ್ನೇ ಆತ್ಮವೆಂದುಅಭಿಮಾನಿಸಿ ಪೋಷಿಸುವುದಾದರೆ, ಇಂತವರು ವಾಂತಿಮಾಡಿದ ಅನ್ನವನ್ನು ತಿರುಗಿ ಭಕ್ಷಿಸಬೇಕೆಂದಾಸೆಪಡುವಮೂಢರಿಗೆಸಮಾನವಲ್ಲವೆ? ತನ್ನ ವರ್ಣಾಶ್ರಮಧರ್ಮಗಳನ್ನು ಕ್ರಮವಾಗಿ ನಡೆಸದಿರತಕ್ಕಗೃಹಸ್ಥನೂ, ಗುರುಕುಲವಾಸಾದಿ ವ್ರತಗಳನ್ನು ತ್ಯಜಿಸಿದ ಬ್ರಹ್ಮಚಾರಿಯೂ, ಆಗಾಗ ಗ್ರಾಮಗಳಲ್ಲಿ ಬಂದು ವಾಸಮಾಡುವ ವಾನಪ್ರಸ್ಥನೂ, ಇಂದ್ರಿಯಲೋಲನಾದ ಸನ್ಯಾಸಿಯೂ, ಈ ನಾಲ್ವರೂ,ಆಶ್ರಮಧರ್ಮಗಳಿಗೆ;ಅಪಪ್ರಥೆಯನ್ನು ತರುವ ವೇಷಧಾರಿಗಳೇ ಹೊರತು, ನಿಜವಾದ ಆಶ್ರಮಿಗಳಲ್ಲ, ಬಗವನ್ಮಾಯೆಯಿಂದ ಬುದ್ಧಿಗೆಟ್ಟು, ಅಧೋಗತಿಯನ್ನು ಹೊಂದತಕ್ಕ ಅಂತವರ ಸ್ಥಿತಿಗಾಗಿ ಪಶ್ಚಾತ್ತಾಪಪಟ್ಟು ಅವರನ್ನು ದೂರವಾಗಿರಿಸಬೇಕೇಹೊರತು, ಅವರೊಡನೆ ಸೇರಬಾರದು ದೇಹಕ್ಕಿಂತಲೂ ಆತ್ಮವು ವಿಲಕ್ಷಣವೆಂಬುದನ್ನೂ, ಆ ಆತ್ಮಕ್ಕೂಪರಮಾತ್ಮನು ಅಂತರ್ಯಾಮಿಯಾಗಿ ನಿಯಮಿಸುತ್ತಿರುವನೆಂಬುದನ್ನೂ ತಿಳಿದ ಮನುಷ್ಯನಿಗೆ, ಆ ದೇಹದಲ್ಲಿ ಸ್ವಲ್ಪಮಾತ್ರವೂ ಅಭಿಮಾನವು ಹುಟ್ಟಲಾರದು ಈ ಜ್ಞಾನದಿಂದ ಅವನ ಮನಸ್ಸು ಬಹಳ ನಿರ್ಮಲವಾಗುವುದು ಅಂತವನು ಯಾರಿಗಾಗಿ ಯಾವುದನ್ನುದ್ದೇಶಿಸಿ ತನ್ನ ದೇಹವನ್ನು ಪೋಷಿಸಬೇಕು? ಈ ದೇಹಪೋಷಣೆಯಿಂದ ಆತ್ಮಕ್ಕಾಗಲಿ, ಪರಮಾತ್ಮನಿಗಾಗಲಿ ತೃಪ್ತಿಯಿಲ್ಲ ಆದುದರಿಂದ ಆತ್ಮಪರಮಾತ್ಮರಿಗಿಂತಲೂ ದೇಹವು ಬೇರೆಯೆಂಬುದನ್ನು ತಿಳಿದವನು ಆ ದೇಹವನ್ನು ಪೋಷಿಸಲಾರನು. ಓ ಧರ್ಮರಾಜಾ! ತತ್ವಜ್ಞರಾದ ಪಂಡಿತರು ಶರೀರವನ್ನು ರಥವೆಂದೂ, ಇಂದ್ರಿಯಗಳನ್ನು ಕುದುರೆಗಳೆಂದೂ. ಆ ಇಂದ್ರಿಯಗಳಿಗೆ ನಿಯಾಮಕವಾದ ಮನಸ್ಸನ್ನು ಕಡಿವಾಳದ ಹಗ್ಗವೆಂದೂ ಬುದ್ಧಿಯನ್ನು ಸಾರಥಿಯೆಂದೂ, ಶಬ್ದಾದಿವಿಷಯಗಳನ್ನು ಮಾರ್ಗಗಳೆಂದೂ, ಬಲವನ್ನು ದೃಢವಾದ ಕಟ್ಟುಗಳೆಂದೂ, ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನಗಳೆಂಬ ಪಂಚ ಪ್ರಾಣಗಳೂ ಮತ್ತು ನಾಗ, ಕೂರ್ಮ ಕೃಕರ, ದೇವದತ್ತ,ಧನಂಜಯಗಳೆಂಬ ಐದು ಉಪಪ್ರಾಣಗಳೂ ಸೇರಿ ಈ ಹತ್ತು ಬಗೆಯ ವಾಯುಗಳನ್ನು ಅ ರಥದ ಇರಿಚಿಯೆಂದೂ,ಪಾಪಪುಣ್ಯಗಳೆರಡನ್ನೂ ಎರಡು ಚಕ್ರ

ಗಳೆಂದೂ, ದೇಹಾಭಿಮಾನವುಳ್ಳ ಜೀವನನ್ನು ರಥಿಕನೆಂದೂ, ಪ್ರಣವಮಂತ್ರವನ್ನೇ ಬಿಲ್ಲುಬಾಣಗಳೆಂದೂ, ಪರಮಾತ್ಮನನ್ನೇ ಲಕ್ಷ್ಯವೆಂದೂ ಹೇಳುವರು ಈ ಜೀವನೆಂಬ ರಥಿಕನಿಗೆ, ರಾಗ, ದ್ವೇಷ, ಲೋಭ, ಶೋಕ ಮೋಹ, ಭಯ, ಮದ, ಮಾನ, ಅವಮಾನ, ಅಸೂಯೆ, ವಂಚನೆ, ಹಿಂಸೆ. ಮತ್ಸರ, ಕ್ರೋಧ, ಪ್ರಮಾದ, ಹಸಿವು, ನಿದ್ರೆ, ಮುಂತಾದುವುಗಳನ್ನು ಶತ್ರುವೆಂದೂ ಹೇಳುವರು ಈ ಶತ್ರುಗಳಲ್ಲಿ ಕೇವಲರಜೋಗುಣಸ್ವಭಾವವುಳ್ಳವು ಕಲವು ಕೇವಲ ತಮೋಗುಣಸ್ವಭಾವವುಳ್ಳವು ಕೆಲವು ರಜಸ್ತಮೋಗುಣಗಳಲ್ಲಿ ಯಾವುದಾದರೂ ಒಂದರೊಡನೆ ಮಿಶ್ರವಾದ ಸತ್ವಪ್ರಕೃತಿಯುಳ್ಳವು ಕೆಲವು ಜೀವನು ಶರೀರೇಂದ್ರಿಯಸಮುದಾಯರೂಪವಾದ ಈ ರಥವು ತನಗೆ ವಶವಾಗಿದ್ದಾಗಲೇ, ಮಹದನುಗ್ರಹದಿಂದ ತನಗೆ ಲಭಿಸಿದ ಜ್ಞಾನವೆಂಬ ಖಡ್ಗವನ್ನು ಧರಿಸಿ, ಭಗವಂತನನ್ನೇ ತನಗೆ ಬೆಂಬಲವಾಗಿಟ್ಟುಕೊಂಡು, ಮೇಲೆ ಹೇಳಿದ ರಾಗದ್ವೇಷಾದಿಶತ್ರುಗಳನ್ನು ನಿಗ್ರಹಿಸಿ, ಮುಕ್ತಿಸಾಮ್ರಾಜ್ಯವನ್ನು ಪಡೆಯುವುದಕ್ಕೆ ಯತ್ನಿಸಬೇಕು ಈ ಮೋಕ್ಷೈಶ್ವರ್ಯವನ್ನು ಸಾಧಿಸಿಸಂತೋಷಪಡಬೇಕೆಂಬಉದ್ದೇಶವುಳ್ಳವನು, ಆ ದೇಹಾದಿಗಳನ್ನಾಗಲಿ ದೇಹಸಂಬಂಧಿಗಳನ್ನಾಗಲಿ ಆಶಿಸಬಾರದು ಜೀವನು ಈ ಉದ್ದೇಶವನ್ನು ಸಾಧಿಸದೆ, ಎಚ್ಚರತಪ್ಪಿದಪಕ್ಷದಲ್ಲಿ, ಕೆಟ್ಟದಾರಿಯಲ್ಲಿಯೇ ತಿರುಗುವ ಸ್ವಭಾವವುಳ್ಳ ಇಂದ್ರಿಯಗಳೆಂಬ ಕುದುರೆಗಳೂ, ಬುದ್ಧಿಯೆಂಬ ಸಾರಥಿಯೂ ಆತನನ್ನು ಪ್ರವೃತ್ತಿಕರ್ಮಗಳೆಂಬ ದುರ್ಮಾರ್ಗಕ್ಕೆತಂದು, ಅಲ್ಲಿ ಹೊಂಚುಹಾಕುತ್ತಿರುವ ಶಬ್ದಾದಿವಿಷಯಗಳೆಂಬ ಕಳ್ಳರ ಕೈಗೆ ಸಿಕ್ಕಿಸುವುದು. ಆ ಕಳ್ಳರು ಆಗ ಇವನನ್ನು ಅವನ ರಥ, ರಥಾಶ್ವ, ಸಾರಥಿಗಳೊಡನೆ ಸಾಗಿಸಿಕೊಂಡು ಹೋಗಿ, ಮಹಾಭಯಂಕರವಾದ ಸಂಸಾರವೆಂಬ ಹಾಳುಭಾವಿಯಲ್ಲಿ ತಳ್ಳುವರು ಓ ಧರ್ಮರಾಜಾ! ವೇದೋಕ್ತವಾದ ಕರ್ಮಗಳಲ್ಲಿ ಪ್ರವೃತ್ತಿಕರ್ಮವೆಂದೂ, ನಿವೃತ್ತಿಕರ್ಮವೆಂದೂ ಎರಡುಬಗೆಯುಂಟು ಪ್ರವೃತ್ತಿಕರ್ಮವೆಂಬುದು ಕೆಲವು ಕಾಲದ ಸುಖವನ್ನು ತೋರಿಸಿ, ತಿರುಗಿ ಸಂಸಾರದಲ್ಲಿಯೇ ತಂದು ಸೇರಿಸುವುದು ನಿವೃತ್ತಿಕರ್ಮವು ಶಾಶ್ವತವಾದ ಮುಕ್ತಿಯನ್ನು ಕೊಡುವುದು ಈ ಪ್ರವೃತ್ತಿನಿವೃತ್ತಿಧರ್ಮಗಳಸ್ವ

ರೂಪವನ್ನು ವಿವರಿಸುವೆನು ಕೇಳು ! ಅಗ್ನಿಹೋತ್ರ,ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಪಶುಯಾಗ,ಸೋಮಯಾಗ,ವೈಶ್ವದೇವ, ಬಲಿಹರಣ,ಮುಂತಾದ ವೈದಿಕಕರ್ಮಗಳಿಗೆ ಇಷ್ಟಕರ್ಮಗಳೆಂದು ಹೆಸರು ಈ ಕರ್ಮಗಳೆಲ್ಲವೂ ಪ್ರಾಣಿಹಿಂಸೆಯನ್ನೊಳಕೊಂಡು ಪುರೋಡಾಶಾದಿದ್ರವ್ಯಪ್ರಚುರವಾಗಿರುವುವು. ಇವುಗಳನ್ನು ಸ್ವರ್ಗಾದಿಫಲಾಪೇಕ್ಷೆಯಿಂದ ನಡೆಸಿದಾಗ, ಇವೇ ಪ್ರವೃತ್ತಿಕರ್ಮವೆನಿಸಿಕೊಂಡು ಮೇಲೆಮೇಲೆ ರಾಗದ್ವೇಷಾದಿಗಳನ್ನು ಹೆಚ್ಚಿಸುವುವಲ್ಲದೆ, ಅವುಗಳನ್ನು ನೀಗಿಸಿ ಮನಶ್ಶುದ್ಧಿಯನ್ನುಂಟುಮಾಡಲಾರವು ಈ ಕರ್ಮಗಳೇ ಫಲಾಪೇಕ್ಷೆಯಿಲ್ಲದೆ ಭಗವದರ್ಪಣರೂಪವಾಗಿ ನಡೆಸಲ್ಪಟ್ಟಪಕ್ಷದಲ್ಲಿ, ಮನಶ್ಶಾಂತಿಗೆ ಕಾರಣವಾಗಿ ನಿವೃತ್ತಿಕರ್ಮಗಳೆನಿಸುವುವು. ದೇವಾಲಯಗಳನ್ನು ನಿರ್ಮಿಸುವುದು, ತೋಪುಗಳನ್ನು ಬೆಳೆಸುವುದು, ಕೊಳಬಾವಿಗಳನ್ನು ಕಟ್ಟಿಸುವುದು, ಇತರರಿಗೆ ಜೀವನೋಪಾಯಗಳನ್ನು ಕಲ್ಪಿಸುವುದು, ಇವೆಲ್ಲವೂ ಪೂರ್ತಕರ್ಮಗಳೆನಿಸುವುವು ಇವೂಕೂಡ ಫಲಾಪೇಕ್ಷೆಯಿಲ್ಲದೆ ನಡೆಸಿದಾಗ, ಮೋಕ್ಷಸಾಧಕಗಳಾಗಿ ನಿವೃತ್ತಿಕರ್ಮಗಳೆನಿಸುವುವು ಓ ಧರ್ಮರಾಜಾ ! ಈ ಪ್ರವೃತ್ತಿಕರ್ಮಗಳನ್ನೇ ನಡೆಸುತ್ತಬರುವ ತ್ರೈವರ್ಣಿಕನು, ಆ ಕರ್ಮಫಲವನ್ನನುಭವಿಸುವುದಕ್ಕಾಗಿ, ಪೃಥಿವ್ಯಾದಿಪಂಚಭೂತಗಳೊಡಗೂಡಿದ ಸೂಕ್ಷ್ಮಶರೀರದೊಡನೆ ಧೂಮಾದಿಮಾರ್ಗವನ್ನು ಸೇರಿ,ಅಲ್ಲಿ ಕ್ರಮವಾಗಿ, ಧೂಮ, ರಾತ್ರಿ,ಕೃಷ್ಣಪಕ್ಷ ದಕ್ಷಿಣಾಯನ, ಪಿತೃಲೋಕ,ಆಕಾಶವೆಂಬೀ ಮಾರ್ಗವಾಗಿ ಚಂದ್ರನನ್ನು ಸೇರಿ, ಅಮೃತಮಯವಾದ ದೇಹದಿಂದ ಆ ಚಂದ್ರಲೋಕದಲ್ಲಿದ್ದು,ಅಲ್ಲಿ ತನ್ನಕರ್ಮಫಲವನ್ನು ಅನುಭವಿಸುತ್ತಿರುವನು ಆ ಕರ್ಮಫಲವು ತೀರಿದೊಡನೆ, ಅವನಿಗುಂಟಾಗಿದ್ದ ಅಮೃತಮಯವಾದ ಶರೀರವು ಕ್ಷಯಿಸುತ್ತಬರುವುದು ಒಡನೆಯೇ ಅಲ್ಲಿಂದ ಕದಲಿ, ಕ್ರಮವಾಗಿ ಆಕಾಶ, ವಾಯು, ಧೂಮ, ಮೇಘ,ವರ್ಷ,ಓಷಧಿ, ಅನ್ನ,ರೇತಸ್ಸು,ಎಂಬಿವುಗಳಲ್ಲಿ ಸ್ವಲ್ಪಸ್ವಲ್ಪಕಾಲದವರೆಗೆ ತಂಗುತ್ತ ಕೆಳಕ್ಕಿಳಿದು, ತಿರುಗಿ ಈ ಲೋಕದಲ್ಲಿಯೇ ಹುಟ್ಟುವನು ಬ್ರಾಹ್ಮಣಾದಿವರ್ಣತ್ರಯದಲ್ಲಿ ಹುಟ್ಟಿ ಗರ್ಭಾಧಾನವೇ ಮೊದಲಾಗಿ ಶ್ಮಶಾನದಲ್ಲಿ ನಡೆಯತಕ್ಕ ಎಲ್ಲಾ ಸಂಸ್ಕಾರಗಳನ್ನುಹೊಂದಿದವನೂಕೂಡ,

ಪ್ರವೃತ್ತಿಕರ್ಮಗಳಿಂದ ತಿರುಗಿ ಧೂಮಾದಿಮಾರ್ಗದಿಂದ ಹೋಗಿಹೋಗಿ ಬರುತ್ತಿರುವನು. ಹೀಗೆ ಮೇಲೆ ಹೋಗುವುದಕ್ಕೆ ಪಿತೃಯಾನವೆಂದೂ, ಅಲ್ಲಿಂದ ಕಳಗೆ ಬರುವುದಕ್ಕೆ ಪುನರ್ಭವಯಾನವೆಂದೂ ಹೆಸರು ನಿವೃತ್ತಿಧರ್ಮವನ್ನು ಹಿಡಿದವರಿಗೆ ಪುನರ್ಜನ್ಮವಿಲ್ಲದ ದೇವಯಾನವೆಂಬ ಬೇರೆ ಮಾರ್ಗವುಂಟು ಇದನ್ನೇ ಅರ್ಚಿರಾದಿಮಾರ್ಗವೆಂದೂ ಹೇಳುವರು ಇವರಲ್ಲಿ ಹೋಗಬೇಕೆಂಬ ಉದ್ದೇಶವುಳ್ಳವರು,ಕರ್ಮೇಂದ್ರಿಯವ್ಯಾಪಾರಗಳೆಲ್ಲವನ್ನೂ ಜ್ಞಾನೇಂದ್ರಿಯಗಳಲ್ಲಿಯೇ ಅಡಗಿಸಿಬಿಡುವರು ಹಾಗೆಯೇ ಆ ಜ್ಞಾನೇಂದ್ರಿಯಗಳನ್ನು ಸಂಕಲ್ಪವೆಂಬ ಅಲೆಗಳಿಂದ ತುಂಬಿದ ಮನಸ್ಸಿನಲ್ಲಿ ಅಡಗಿಸುವರು ಸತ್ವಪ್ರಧಾನವಾದ ಆ ಮನಸ್ಸನ್ನು ಶಾಸ್ತ್ರಾಧೀನವಾಗಿ ಮಾಡುವರು ಆ ಸಮಸ್ತಶಾಸ್ತ್ರಗಳನ್ನೂ ಅಕ್ಷರಸಮುದಾಯರೂಪವಾಗಿ ಭಾವಿಸುವರು ಆ ಅಕ್ಷರಗಳೆಲ್ಲವೂ ಓಂಕಾರವೊಂದರಲ್ಲಿಯೇ ಅಡಗಿದುದಾಗಿ ಅನುಸಂಧಾನಮಾಡುವರು. ಓಂಕಾರವನ್ನು ಅದರ ಚತುರ್ಥಮಾತ್ರೆಯಾದ ಬಿಂದುನಾದದಲ್ಲಿಯೂ, ಆ ಬಿಂದುನಾದವನ್ನು ಪ್ರಾಣದಲ್ಲಿಯೂ, ಆ ಪ್ರಾಣವನ್ನು ಅದಕ್ಕೆ ಸಹಚರನಾದ ಜೀವನಲ್ಲಿಯೂ, ಆ ಜೀವನನ್ನು ಮಹದಾತ್ಮಕವಾದ ಪರಬ್ರಹ್ಮನಲ್ಲಿಯೂ ಅರ್ಪಿಸಿದಂತೆ ಅನುಸಂಧಾನಮಾಡುವರು ಇಂತವರು ಅರ್ಚಿರಾದಿಮಾರ್ಗವನ್ನು ಹಿಡಿದು, ಮೊದಲಿಂದ ಕ್ರಮವಾಗಿ, ಅಗ್ನಿ, ಸೂರ್ಯ, ದಿವಸ, ಪ್ರಾಹ್ಣ, ಶುಕ್ಲಪಕ್ಷ, ಪೂರ್ಣಿಮೆ, ಉತ್ತರಾಯಣ, ಅಮಾನವ, ಚಂದ್ರ, ವಿದ್ಯುತ್ತು, ವರುಣ, ಇಂದ್ರ, ವಿರಾಟ್ಟುಗಳೆಂಬ ಲೋಕಗಳಲ್ಲಿ,ಆತಿವಾಹಿಕರಿಂದ ನಡೆಸಲ್ಪಡುತ್ತ,ಪರವ್ಯೂಹಾದ್ಯವತಾರಗಳುಳ್ಳ ಭಗವಂತನನ್ನು ಹೊಂದುವನು ಹೀಗೆ ಆತ್ಮೋಪಾಸನವನ್ನು ಮಾಡತಕ್ಕವನು, ಕ್ರಮವಾಗಿ ಅರ್ಚಿರಾದಿಮಾರ್ಗವನ್ನು ದಾಟಿದಮೇಲೆ, ಪ್ರಕೃತಿಸಂಬಂಧವನ್ನು ನಿಶ್ಶೇಷವಾಗಿ ತೊರೆದು,ಪಾಪನಿವೃತ್ತಿಯೇ ಮೊದಲಾದ ಅಷ್ಟಗುಣಗಳೊಡಗೂಡಿದ ಶುದ್ಧಸ್ವರೂಪವನ್ನು ಹೊಂದುವನು. ಇಂತವನು ತಿರುಗಿ ಸಂಸಾರಸಂಬಂಧಕ್ಕೆಸಿಕ್ಕಲಾರನು. ಈ ಮಾರ್ಗಕ್ಕೆ ದೇವಯಾನವೆಂದು ಹೆಸರು,ಈ ದಾರಿಯಲ್ಲಿ ಹೋಗತಕ್ಕವನು ಕೊನೆಗೆ ಸೇರತಕ್ಕ ಪ್ರಾಪ್ಯವಸ್ತುವಾದ ಪರಮಾತ್ಮನ ಸ್ವರೂಪವನ್ನು ತಿಳಿಸುವೆನು ಕೇಳು ಭಗ

ವಂತನಿಗೆ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧವೆಂಬ ನಾಲ್ಕು ವ್ಯೂಹಗಳುಂಟು 'ಈ ವ್ಯೂಹಗಳಲ್ಲಿ ಅನಿರುದ್ಧ, ಪ್ರದ್ಯುಮ್ನ ಸಂಕರ್ಷಣವೆಂಬ ಮೂರು ವ್ಯೂಹಗಳೂ ಕ್ರಮವಾಗಿ ಸೃಷ್ಟಿಸ್ಥಿತಿ ಲಯಗಳನ್ನು ನಿರ್ವಹಿಸುತ್ತ, ಎಚ್ಚರ, ಕನಸು, ಸುಷುಪ್ತಿಯೆಂಬ ಅವಸ್ಥೆಗಳಿಗೆ ನಿಯಾಮಕರೆನಿಸುವರು. ಈ ಮೂರುವ್ಯೂಹಗಳನ್ನೇ ಕ್ರಮವಾಗಿ ವಿಶ್ವವೆಂದೂ, ತೈಜಸವೆಂದೂ, ಪ್ರಾಜ್ಞವೆಂದೂ ಹೇಳುವರು. ಪ್ರಣವದಲ್ಲಿರುವ ಅಕಾರ, ಉಕಾರ, ಮಕಾರಗಳಿಂದಲೂ ಈ ಮೂರು ವ್ಯೂಹಗಳೇ ಹೇಳಲ್ಪಡುವುವು. ನಾಲ್ಕನೆಯ ವ್ಯೂಹವೆನಿಸಿಕೊಂಡ ವಾಸುದೇವನು, ಈಮೇಲೆ ಹೇಳಿದ ಎಲ್ಲಾಶಕ್ತಿಗಳನ್ನೂ ಹೊಂದಿ, ಎಲ್ಲಕ್ಕೂ ಕಾರಣಭೂತನಾಗಿರುವನು ಹೀಗೆ ಪರವ್ಯೂಹಾದಿಸರ್ವಾವಸ್ಥೆಗಳಿಂದ ಕೂಡಿದ ಭಗವಂತನೇ ಮುಕ್ತಿಸ್ಥಾನವು ಹೀಗೆ ವೇದಗಳಲ್ಲಿ ನಿರೂಪಿಸಲ್ಪಟ್ಟ, ಪಿತೃಯಾನದೇವಯಾನಗಳೆಂಬ ಈ ಎರಡುಮಾರ್ಗಗಳನ್ನು ಶಾಸ್ತ್ರದೃಷ್ಟಿಯಿಂದ ಚೆನ್ನಾಗಿ ನೋಡಿ ತಿಳಿದವರೂಕೂಡ, ಅಜ್ಞಾನದಿಂದ ಮೋಸಹೋಗದೆ ಭಕ್ತಿಬಲದಿಂದ ಪರಮಪುರುಷನನ್ನು ಸೇರುವರು ಸೃಷ್ಟಿಗೆ ಮೊದಲೂ, ಪ್ರಳಯದಲ್ಲಿಯೂ,ಇವೆರಡರ ಮಧ್ಯಕಾಲದಲ್ಲಿಯೂ,ಪ್ರಾಣಿಗಳ ಒಳಗೂ ಹೊರಗೂ ಇರತಕ್ಕವನು ಆ ಪರಮಾತ್ಮನೊಬ್ಬನೇ ! ಉತ್ತಮಾಧಮಗಳೆನಿಸಿಕೊಂಡ ಚೇತನಾಚೇತನಗಳೂ, ಮೂಲಪ್ರಕೃತಿಯೂ, ಸಮಷ್ಟಿಜೀವನೂ ಇವೆಲ್ಲವೂ ಆ ಪರಮಾತ್ಮನ ಸ್ವರೂಪವೇಹೊರತು ಬೇರೆಯಲ್ಲ. ಜ್ಞಾನಸ್ವರೂಪನಾದ ಜೀವನೂ, ಆ ಜೀವನ ಜ್ಞಾನಕ್ಕೆ ವಿಷಯಗಳಾದ ಅಚೇತನವಸ್ತುಗಳೂ, ನಾಮರೂಪಾತ್ಮಕಗಳಾದ ಸಮಸ್ತವಸ್ತುಗಳೂ ಆ ಪರಮಾತ್ಮನ ಸ್ವರೂಪವೇ! ಕಣ್ಣಿಗೆ ಕಾಣುವಂತೆ ಅನುಸರಿಸಿ ಬರತಕ್ಕ ದೇಹವಾಗಲಿ, ಸುಖಭ್ರಾಂತಿಯನ್ನು ಹುಟ್ಟಿಸಿ ಇಂದ್ರಿಯಗಳಿಂದನುಭವಿಸಲ್ಪಡುವ ಶಬ್ದಾದಿವಿಷಯಗಳಾಗಲಿ, ಮನುಷ್ಯನಿಗೆ ಪುರುಷಾರ್ಥವೆನಿಸಿಕೊಳ್ಳುವುದಿಲ್ಲ ಪುರುಷರು ಯಾವಾಗಲೂ ಆಸೆಪಡತಕ್ಕ ವಸ್ತುವೇ ಪುರುಷಾರ್ಥವೆನಿಸುವುದು. ಅಂತಹ ವಸ್ತುವು ನಿತ್ಯಾನಂದಸ್ವರೂಪನಾದ ಪರಮಾತ್ಮನೊಬ್ಬನಲ್ಲದೆ ಬೇರೆಯಲ್ಲ. ನಾನೆಂಬ ಅಹಂಕಾರಕ್ಕೆಡೆಯಾದ ಶರೀರದಂತೆಯೇ, ನನ್ನದೆಂ

ಬ ಮಮಕಾರವನ್ನು ಹುಟ್ಟಿಸತಕ್ಕ ಶಬ್ದಾದಿವಿಷಯಗಳೂ ಅನಿತ್ಯಗಳು ! ಕನಸಿನಲ್ಲಿ ಎಷ್ಟೋಸುಖಾನುಭವಗಳನ್ನು ಮಾಡಿದ ದೇಹವು, ಎಚ್ಚರವಾದ ಮೇಲೆ ಕಾಣದೆಹೋಗುವುದಲ್ಲವೆ? ಆದರೆ ಆ ಕನಸಿನಲ್ಲಿಯೂ ಆತ್ಮಕ್ಕೆ "ನಾನು" ಎಂಬ ಜ್ಞಾನವುಮಾತ್ರ ಅನುಸರಿಸಿಬರುವುದರಿಂದ, ದೇಹವು ಆತ್ಮವಲ್ಲವೆಂದು ಚೆನ್ನಾಗಿ ತಿಳಿಯಬಹದು ಅದರಂತೆಯೇ ಎಚ್ಚರದಲ್ಲಿರುವ ಶರೀರವೂಕೂಡ ಆತ್ಮವಲ್ಲವು, ಜೀವಾತ್ಮನಿಗೆ ಸಹಜವಾಗಿ ಏರ್ಪಟ್ಟ ನಿತ್ಯತ್ವಾದಿ ಧರ್ಮಗಳೊಂದೂ ಶರೀರದಲ್ಲಿ ಕಾಣುವುದಿಲ್ಲ ಆತ್ಮಕ್ಕೂ ದೇಹಕ್ಕೂ ಇರುವ ಸಂಬಂಧವು, ಮರಕ್ಕೂ ಅದರ ನೆಳಲಿಗೂ ಇರುವ ಸಂಬಂಧದಷ್ಟೇಹೊರತು ಬೇರೆಯಲ್ಲ ಮರದ ನೆಳಲೆಂಬುದು, ಆ ಮರಕ್ಕೆ ಸಂಬಂಧಪಟ್ಟ ವಸ್ತುಗಳಲ್ಲಿ ಯಾವುದೂ ಅಲ್ಲ, ವೃಕ್ಷಸಮುದಾಯವನ್ನೇ ನೆಳಲೆಂದೂ ಹೇಳುವುಕ್ಕಿಲ್ಲ ಆ ವೃಕ್ಷದ ಪರಿಣಾಮದಿಂದುಂಟಾದ ರೂಪಾಂತರವೆಂದೂ ಹೇಳುವುದಕ್ಕಿಲ್ಲ ಅದನ್ನೇ ವೃಕ್ಷವೆಂದೂ ಹೆಳುವುದಕ್ಕಿಲ್ಲ. ಅದು ವೃಕ್ಷವನ್ನಗಲಿರತಕ್ಕುದೂ ಅಲ್ಲ ವೃಕ್ಷಗಳಿರುವವರೆಗೆ ಆ ಆನೆಳಲು ಅದನ್ನು ಬಿಡದೆ ಅನುಸರಿಸಿಬರತಕ್ಕುದೂ ಅಲ್ಲ ಒಮ್ಮೊಮ್ಮೆ ಕಾಣುತ್ತಲೂ, ಮತ್ತೊಮ್ಮೆ ಅದೃಶ್ಯವಾಗುತ್ತಲೂ ಇರುವುದರಿಂದ ಅನಿತ್ಯವೆನಿಸುವುದು ಅದರಂತೆಯೇ ಶರೀರವೂಕೂಡ ಆತ್ಮವನ್ನು ಬಿಟ್ಟು ನಿಲ್ಲತಕ್ಕುದೂ ಅಲ್ಲ ಅದನ್ನು ಆತ್ಮನ ಸಮುದಾಯರೂಪವೆಂದೂ ಹೇಳುವುದಕ್ಕಿಲ್ಲ ಆತ್ಮದ ಪರಿಣಾಮವೆಂದೂ ಹೇಳುವುದಕ್ಕಿಲ್ಲ ಅನಿತ್ಯವಾದುದರಿಂದ ಅದನ್ನೇ ಆತ್ಮವೆಂದೂ ಹೇಳುವುದಕ್ಕಿಲ್ಲ ಮತ್ತು ಭೂಮಿ ಮೊದಲಾದ ಪಂಚಭೂತಗಳೂ, ತನ್ಮಾತ್ರಗಳೆಂಬ ಅವಯವಗಳ ಸಮುದಾಯದಿಂಲೇ ಏರ್ಪಟ್ಟಿರುವುದುದರಿಂದ, ತನ್ಮಾತ್ರಗಳು ನಷ್ಟವಾದಾಗ ಸಮುದಾಯರೂಪಗಳಾದ ಭೂತಗಳೂ ನಷ್ಟವಾಗುವುವು ಆ ಭೂತಗಳು ನಷ್ಟವಾದಾಗ, ಕೊನೆಗೆ ಅವಯವಗಳೂ ಇಲ್ಲದಂತೆಯೇ ಕಾಣದೆಹೋಗುವುವು. ಹೀಗೆ ಪಂಚಭೂತಗಳೇ ಅನಿತ್ಯವಾಗಿರುವಾಗ, ಆ ಭೂತಗಳ ಸಮುದಾಯರೂಪವಾದ ಶರೀರವು ಅನಿತ್ಯವೆಂಬುದರಲ್ಲಿ ಸಂದೇಹವೇನಿದೆ ? ಹೀಗೆ ನಶ್ವರವಾದ ಶರೀರವನ್ನು ನಿತ್ಯವಾದ ಆತ್ಮನೆಂದು ತಿಳಿಯಬಹುದೆ ? ದೇಹವನ್ನು ಆ

ತ್ಮವೆಂದು ತಿಳಿಯುವುದಕ್ಕೆ ತಕ್ಕಷ್ಟುಕಾರಣಗಳೇನೂ ಏರ್ಪಡುವುದಿಲ್ಲ.ಎರ
ಡುವಸ್ತುಗಳು ಗುಣದಲ್ಲಿ ಒಂದಕ್ಕೊಂದು ಸಮಾನವಾಗಿದ್ದರೆ, ಆ ಗುಣ
ಸಾಮ್ಯದಿಂದಲಾದರೂ ಒಂದುವಸ್ತುವನ್ನು ಮತ್ತೊಂದು ವಸ್ತುವನ್ನಾಗಿ
ಭ್ರಮಿಸುವುದಕ್ಕ ಕಾರಣವುಂಟು ದೇಹಕ್ಕೂ ಆತ್ಮಕ್ಕೂ ಹಾಗೆ ಯಾವ
ಗುಣದಲ್ಲಿಯೂ ಸಾಮ್ಯವಿಲ್ಲ ಆದುದರಿಂದ ದೇಹಾತ್ಮಭ್ರಮವು ಗು
ಣಸಾದೃಶ್ಯದಿಂದ ಏರ್ಪಟ್ಟುದಲ್ಲ ಅಗ್ನಿಯ ಸಂಬಂಧದಿಂದ ಸ್ವಲ್ಪಕಾಲದ
ವರೆಗೆ ನೀರು ಬಿಸಿಯಾಗಿದ್ದಮಾತ್ರಕ್ಕೆ, ನೀರಿನಲ್ಲಿ ಉಷ್ಣಗುಣವುಂಟೆಂದು
ಭ್ರಮಿಸಬಹುದೆ?ಹಾಗೆಯೇ ಆತ್ಮಸಂಬಂಧವಿದ್ದಾಗಮಾತ್ರ ಶರೀರದಲ್ಲಿಕಾ
ಣುವ ಗುಣಗಳನ್ನು ನೋಡಿ ಅದನ್ನೇ ಆತ್ಮವೆಂದು ತಿಳಿಯುವುದು ಕೇವಲ
ಭ್ರಮವು ಇದಲ್ಲದೆ ಕೆಲವರು ನಿದ್ರೆಮಾಡುವಾಗ ಸ್ವಪ್ನದಲ್ಲಿಯೇ ಒ
ಮ್ಮೊಮ್ಮೆ ಎಚ್ಚರದಿಂದ ಕೆಲಸಮಾಡುವಂತೆಯೂ, ಮತ್ತೊಮ್ಮೆ ಮಲಗಿ
ದ್ದಂತೆಯೂ ಕನಸನ್ನು ಕಾಣುವುದುಂಟು ಅವರಿಗೆ ಆ ನಿದ್ರೆಯಿಂದೆಚ್ಚರ
ವಾದಮೇಲೆ, ತಾವು ಕನಸಿನಲ್ಲಿ ಎಚ್ಚರಗೊಂಡಿದ್ದಹಾಗೆ ತೋರಿದುದೆಲ್ಲವೂ
ಸುಳ್ಳೆಂದು ತಿಳಿಯುವುದಲ್ಲವೆ? ಹೀಗೆಯೇ ಆತ್ಮಜ್ಞಾನವಿಲ್ಲದ ಸಂಸಾರಿಗಳು,
ತಾವು ಬಲ್ಲೆವೆಂದೂ, ಕಾಣೆವೆಂದೂ ತಿಳಿಯುವ ತಮ್ಮ ಜ್ಞಾನವಿಷಯ
ವಾದ ವಿಧಿನಿಷೇಧಗಳೆಲ್ಲವೂ ಅಜ್ಞಾನಕಾರ್ಯಗಳೇ ! ಆತ್ಮಜ್ಞಾನವಿಲ್ಲದವ
ರಿಗೆ ಇತರವಿಷಯವಾಗಿ ತೋರುವ ತಿಳುವಳಿಕೆಗಳೆಲ್ಲವೂ ಅಜ್ಞಾನಗಳು.
ಆತ್ಮತತ್ವವನ್ನು ತಿಳಿದವರಿಗೆ ಅದುಹೊರತು ಇತರವಿಷಯಕವಾದ ಜ್ಞಾ
ನವೇ ಹುಟ್ಟದು ಏಕೆಂದರೆ, ಪರಮಾತ್ಮೋಪಾಸಕನು ಭಾವಾದ್ವೈತ,
ಕ್ರಿಯಾದ್ವೈತ, ದ್ರವ್ಯಾದ್ವೈತಗಳೆಂಬ ಮೂರುಬಗೆಯ ಅದ್ವೈತಬುದ್ಧಿ
ಯನ್ನೂ ಮನಸ್ಸಿನಲ್ಲಿ ದೃಢವಾದ ನಿಶ್ಚಯದಿಂದ ತಿಳಿದು, ದೇಹಕ್ಕಿಂ
ತಲೂ ವಿಲಕ್ಷಣವಾಗಿಯೂ, ಪರಮಪುರುಷನಿಗೆ ಅಧೀನವಾಗಿಯೂ ಇರುವ
ಆತ್ಮಸ್ವರೂಪವನ್ನೂ ಚೆನ್ನಾಗಿ ವಿಮರ್ಶಿಸಿ, ಈಮೇಲಿನ ಮೂರುವಿಷಯ
ಗಳಲ್ಲಿಯೂ ಭ್ರಮರೂಪವಾದ ಭೇದಬುದ್ಧಿಯನ್ನು ಬಿಟ್ಟುಬಿಡುವನು.
ನೂಲಿನ ಸ್ವರೂಪವೇ ಬಟ್ಟೆಯಾಗಿ ಪರಿಣಮಿಸುವಂತೆ, ಕಾರ್ಯಕಾರಣಗಳೆರ
ಡೂ ಒಂದೇ ಎಂಬ ಬುದ್ಧಿಯು ಭಾವಾದ್ವೈತವು. ಇದರಿಂದ, ಚೇತನ,

ಅಚೇತನ, ಈಶ್ವರರೆಂಬ ಮೂರು ತತ್ವಗಳಿಂದ ಕೂಡಿದ ಈ ಸ್ಥೂಲಪ್ರಪಂ ಚವೆಲ್ಲವೂ, ಸೂಕ್ಷ್ಮಚೇತನಾಚೇತನಗಳೊಡಗೂಡಿದ ಪರಮಪುರುಷನಿ ಗಿಂತಲೂ ಬೇರ್ಪಟ್ಟುದಲ್ಲವೆಂದು ತಿಳಿಯುವುದೇ ಭಾವಾದ್ವೈತವು ಈ ತಿಳುವಳಿಕೆಯಿಂದ ಪರಮಪುರುಷನಲ್ಲದ ಬೇರೆ ವಸ್ತುವುಂಟೆಂಬ ಭ್ರಮವು ನೀಗುವುದು ಕ್ರಿಯಾದ್ವೈತವೆಂದರೆ ಮನೋವಾಕ್ಕಾಯಗಳೆಂಬ ತ್ರಿಕರಣ ಗಳಿಂದ ತಾವು ನಡೆಸತಕ್ಕ ಕರ್ಮಗಳೆಲ್ಲಕ್ಕೂ ಆ ಪರಮಪುರುಷನೊಬ್ಬನೇ ವಿಷಯವೆಂಬ ಭಾವವು. ಇದರಿಂದ ಈಶ್ವರಾನುಗ್ರಹವಿಲ್ಲದೆ ಕರ್ಮಗಳು ತಾ ವೇ ಫಲವನ್ನು ಕೊಡುವುವೆಂಬ ಭ್ರಮವು ನೀಗುವುದು ದ್ರವ್ಯಾದ್ವೈತ ವೆಂದರೆ, ತಾನು ಸಂಪಾದಿಸಿ ತನ್ನದೆಂದಿಟ್ಟು ಕೊಂಡಿರತಕ್ಕ ಹಣ, ಕಾಸು, ಮನೆ, ಮಠ, ಭೋಗಸಾಮಗ್ರಿ, ಮುಂತಾದುವೆಲ್ಲವೂ, ತನಗೂ ತನ್ನ ಹೆಂಡಿ ರು ಮಕ್ಕಳಿಗೂ ಹೇಗೋ,ಹಾಗೆಯೇ, ಇತರಪ್ರಾಣಿಗಳಿಗೂ ಸಮಾನವಾದ ಭೋಗ್ಯವಸ್ತುವೆಂದು ತಿಳಿಯುವುದು. ಇದರಿಂದ ತಾನು ಸಂಪಾದಿಸಿದ ವ ಸ್ತುವೆಲ್ಲವೂತನ್ನದೆಂಬ ಭ್ರಮವುನೀಗುವುದು (ಅಥವಾ ಜೀವಾತ್ಮಗಳೆಲ್ಲವೂ ಜ್ಞಾನಸ್ವರೂಪವಾದುದರಿಂದ,ಎಲ್ಲಾಜೀವವೂ ಒಂದೇ ಎಂಬಭಾವವೂ,ಮ ನೆ,ಮಠ,ಹಣ, ಕಾಸು ಮುಂತಾದ ಇತರವಸ್ತುಗಳೆಲ್ಲವೂ ಪ್ರಕೃತಿಯ ಪರಿ ಣಾಮಗಳಾದುದರಿಂದ, ಅವೆಲ್ಲವೂ ಒಂದೇಎಂಬಭಾವವೂ ದ್ರವ್ಯಾದ್ವೈತ ವೆನಿಸುವುದು ಇದರಿಂದ ತಾನಲ್ಲದ ಬೇರೆ ಜೀವಗಳಲ್ಲಿಯೂ, ತನ್ನದಲ್ಲ ಇತರವಸ್ತುಗಳಲ್ಲಿಯೂ ಭೇದಬುದ್ಧಿಯು ನೀಗುವುದು ) ಓ ಧರ್ಮರಾಜಾ! ಜ್ಞಾನಿಯಾದವನು ಈ ಮೂರುಬಗೆಯ ಅದ್ವೈತವನ್ನೇ ಅಲ್ಲದೆ, ಶಾಸ್ತ್ರಸ ಮ್ಮತವಾದ ಬೇರೆ ಕೆಲವು ವಿಷಯಗಳಲ್ಲಿಯೂ, ಅದ್ವೈತಬುದ್ಧಿಯನ್ನು ಅ ನುಸಂಧಾನಮಾಡಬೇಕು. ಎಂದರೆ, ಯಾವಪುರುಷನಿಗೂ, ಯಾವವಸ್ತುವಿ ಗೂ ಯಾವಶಾಸ್ತ್ರದಿಂದ,ಯಾವವಸ್ತುವಿನ ಮೂಲಕವಾಗಿ,ಯಾವಬಗೆಯ ಅದ್ವೈತವು ಅನುಮತಿಸಲ್ಪಡುವುದೋ,ಆ ಅದ್ವೈತಭಾವನೆಯಿಂದಲೇತಾನು ನಡೆಸಬೇಕಾದ ಕರ್ಮಗಳನ್ನು ನಡೆಸಬೇಕು ಇಷ್ಟೇಹೊರತು ಜ್ಞಾನದಶೆ ಯಲ್ಲಿರುವವನು ಶಾಸ್ತ್ರಾನುಮತವಲ್ಲದ ಅದ್ವೈತವನ್ನು ಅನುಸಂಧಾನಮಾ ಡಿಕೊಂಡು ಕರ್ಮಗಳನ್ನು ನಡೆಸಬಾರದು. ಓ, ಧರ್ಮರಾಜಾ! ಹೀಗೆ ಮೇದೋ

ಕ್ತಗಳಾದ ಭಾವಾದ್ವೈತಾದಿಗಳನ್ನು ಅನುಸಂಧಾನಮಾಡುವುದರಿಂದಲೂ, ದೇಹಕ್ಕೂ, ಜೀವನಿಗೂ, ಈಶ್ವರನಿಗೂ ಇರುವ ಪರಸ್ಪರವೈಲಕ್ಷಣ್ಯವನ್ನು ವಿಮರ್ಶಿಸುವುದರಿಂದಲೂ, ತಮ್ಮತಮ್ಮ ವರ್ಣಾಶ್ರಮಗಳಿಗೆ ಯುಕ್ತವಾದ ಕರ್ಮಗಳನ್ನು ನಡೆಸುವುದರಿಂದಲೂ, ಭಗವಂತನಲ್ಲಿ ಭಕ್ತಿಯನ್ನು ಸಾಧಿಸಬೇಕು ಇದರಿಂದ ಗೃಹಸ್ಥನಾದರೂ ಮುಕ್ತಿಯನ್ನು ಹೊಂದಬಹುದು ಓ ರಾಜೇಂದ್ರಾ! ನೀನು "ನಮ್ಮಂತಹ ಮೂಢಬುದ್ಧಿಯುಳ್ಳವರು ಸಂಸಾರವನ್ನು ದಾಟುವುದು ಹೇಗೆ" ಎಂದು ಕೇಳಿದೆಯಲ್ಲವೆ? ನಿನ್ನ ಬಾಯಿಂದಮಾತ್ರ ಆ ಮಾತುಹೊರಡಬಾರದು ಏಕೆಂದರೆ, ಸರ್ವಶಕ್ತನಾದ ಶ್ರೀಕೃಷ್ಣನೇ ನಿಮಗೆಸರ್ವವಿಧಬಂಧುವಾಗಿರುವನು ಅವನ ಅನುಗ್ರಹದಿಂದಲೇ ನೀವು ಇದುವರೆಗೆ ದಾಟಲಸಾಧ್ಯವಾದ ಎಷ್ಟೋ ಮಹಾವಿಪತ್ತುಗಳನ್ನೂ ದಾಟಿದಿರಿ! ಮತ್ತು ಆ ಕೃಷ್ಣನ ಪಾದಸೇವಾಪ್ರಭಾವದಿಂದಲೇ ನೀನು ದಿಕ್ಪಾಲಕರೆಲ್ಲರನ್ನೂ ಜಯಿಸಿ, ಮಹರ್ಷಿಗಳೊಡನೆ ಸೇರಿ ಯಾಗಗಳನ್ನೂ ನಡೆಸಿದೆ. ಮುಂದೆಯೂ ಆ ಕೃಷ್ಣನ ಅನುಗ್ರಹದಿಂದಲೇ ನಿತ್ಯಾನಂದರೂಪವಾದ ಮೋಕ್ಷವನ್ನೂ ಹೊಂದುವೆ ಆದುದರಿಂದ ನಿಮ್ಮ ವಿಷಯವಾಗಿ ನೀವು ಯಾವ ಭಾಗದಲ್ಲಿಯೂ ಚಿಂತಿಸಬೇಕಾದುದಿಲ್ಲ ಭಗವದನುಗ್ರಹಕ್ಕೆ ಪಾತ್ರರಾದ ನಿಮಗೆ ಯಾವವಿಧದಲ್ಲಿಯೂ ಕೊರತೆಯಿಲ್ಲ ಇದಕ್ಕೆ ನಾನೇ ನಿದರ್ಶನವು. ನಾನು ಹಿಂದಿನಕಲ್ಪದಲ್ಲಿ ಉಪಬರ್ಹಣನೆಂಬ ಒಬ್ಬ ಗಂಧರ್ವನಾಗಿದ್ದೆನು. ಗಂಧರ್ವಕುಲದವರೆಲ್ಲರೂ ನನ್ನ ಗುಣಕ್ಕಾಗಿ ನನ್ನನ್ನು ಬಹಳಗೌರವಿಸಿ ಪೂಜಿಸುತಿದ್ದರು ಆಗ ನಾನು ಸೌಂದರ್ಯ ಸೌಕುಮಾರ್ಯ ಮಾಧುರ್ಯಾದಿರೂಪಸಂಪತ್ತಿಯಿಂದಲೂ, ಚಂದನಾದ್ಯಲಂಕಾರಗಳಿಂದಲೂ ನೋಡಿದವರೆಲ್ಲರಿಗೂ ಆಶೆಹುಟ್ಟಿಸುವಂತಿದ್ದೆನು ಕಂಡಕಂಡ ಸ್ತ್ರೀಯರೆಲ್ಲರೂ ನನ್ನನ್ನು ಮೋಹಿಸುತ್ತಿದ್ದರು ಇದರಿಂದ ನಾನು ಬಹಳ ಮದಾಂಧನಾಗಿ, ವಿಷಯಸುಖದಲ್ಲಿ ಯಥೇಚ್ಛವಾಗಿ ಮುಳುಗಿ ತೇಲುತಿದ್ದೆನು ಹೀಗಿರುವಲ್ಲಿ ಒಮ್ಮೆ ಪ್ರಜಾಧಿಪತಿಗಳೆಲ್ಲರೂ ಸೇರಿ, ಬ್ರಹ್ಮಸತ್ರವೆಂಬ ಯಾಗವನ್ನು ತೊಡಗಿ, ಆಕಾಲದಲ್ಲಿ ಹರಿಚರಿತ್ರಗಳನ್ನು ಗಾನಮಾಡಿಸುವುದಕ್ಕಾಗಿ, ಅನೇಕಗಂಧರ್ವರನ್ನೂ ಅಪ್ಸರರಸಿಯರನ್ನೂ ಕರೆಸಿದರು ಇದನ್ನು ಕೇಳಿ ನಾನೂ ನನ್ನ ಅನೇಕಸ್ತ್ರೀ

ಯರೊಡನೆ ಅಲ್ಲಿಗೆ ಹೋದೆನು ಆದರೆ! ಅಲ್ಲಿಯೂ ನಾನು ಮದಾಂಧನಾಗಿ, ಹರಿಗುಣಗಳನ್ನು ಕೀರ್ತಿಸದೆ,ಬಾಯಿಗೆ ಬಂದಂತೆ ಬೇರೆಬೇರೆ ಹಾಡುಗಳನ್ನು ಹಾಡುತ್ತಿದ್ದೆನು ಅಲ್ಲಿದ್ದ ಪ್ರಜಾಧಿಪತಿಗಳು ನನ್ನ ಅಪರಾಧವನ್ನು ತಿಳಿದು ನನ್ನನ್ನು ನೋಡಿ ಕೋಪದಿಂದ “ಎಲ ಮದಾಂಧಾ ! ನಿನ್ನ ಹೆಮ್ಮೆಯೆಲ್ಲವೂ ಅಡಗಲಿ ! ನೀನು ಭಾಗ್ಯಹೀನನಾಗಿ ಶೂದ್ರಯೋನಿಯಲ್ಲಿ ಜನಿಸು” ಎಂದರು ಅದರಂತೆ ನಾನು ಒಬ್ಬ ದಾಸಿಯ ಮಗನಾಗಿ ಹುಟ್ಟಿದೆನು ಆದರೇನು? ಶೂದ್ರಜಾತಿಯಲ್ಲಿ ಹುಟ್ಟಿದ್ದರೂ ಬ್ರಹ್ಮವಿದರಾದ ಬ್ರಾಹ್ಮಣೋತ್ತಮರ ಸಹವಾಸದಿಂದಲೂ,ಅವರ ಪಾದಶುಶ್ರೂಷೆಯಿಂದಲೂ ನಾನು ಪಾಪವಿಮುಕ್ತನಾಗಿ,ಈ ಕಲ್ಪದಲ್ಲಿ ಸಾಕ್ಷಾದ್ಬ್ರಹ್ಮದೇವನಿಗೆ ಪುತ್ರನಾಗಿ ಜನಿಸಿದೆನು ಧರ್ಮರಾಜಾ! ಹೀಗೆ ನಾನು ಭಗವದ್ಭಕ್ತರ ಸಹವಾಸದಿಂದಲೇ ಈ ಉತ್ತಮ ಜನ್ಮವನ್ನು ಹೊಂದಿರುವಾಗ, ಆ ಭಗವಂತನೊಡನೆಯೇ ಸಾಕ್ಷಾತ್ತಾಗಿ ಸಹವಾಸಮಾಡುತ್ತಿರುವ ನಿನಗೆ ಮುಕ್ತಿಯುಂಟಾಗುವುದರಲ್ಲಿ ಸಂದೇಹವೇನಿದೆ? ಅದು ಹಾಗಿರಲಿ!ಗೃಹಸ್ಥನು ಯಾವ ಧರ್ಮಗಳಿಂದ ತನ್ನ ಪಾಪಗಳನ್ನು ನೀಗುವನೋ, ಯಾವ ಧರ್ಮಗಳಿಂದ ಮುಕ್ತಿಯನ್ನು ಹೊಂದುವನೋ ಅವೆಲ್ಲವನ್ನೂ ನಿನಗೆ ತಿಳಿಸಿದುದಾಯಿತು. ಆದರೆ ಇವುಗಳನ್ನು ಕೇಳಿ ನೀವು ಮಾಡಬೇಕಾದುದೇನೂ ಇಲ್ಲ ಈ ಮನುಷ್ಯಲೋಕದಲ್ಲಿ ನೀವು ಮಹಾಭಾಗ್ಯಶಾಲಿಗಳು ! ಸಾಕ್ಷಾತ್ಪರಬ್ರಹ್ಮನೇ ಮನುಷ್ಯರೂಪದಿಂದ ನಿಮ್ಮ ಮನೆಯಲ್ಲಿ ರಹಸ್ಯವಾಗಿ ವಾಸಮಾಡುವನೆಂಬುದನ್ನು ತಿಳಿದು, ಲೋಕಪಾವನರಾದ ಮಹರ್ಷಿಗಳೂಕೂಡ ನಿಮ್ಮನ್ನ,ಹುಡುಕಿಕೊಂಡು ನಿಮ್ಮ ಮನೆಗೆ ಬರುತ್ತಿರುವರು! ಧರ್ಮರಾಜಾ! “ಆದರೆ ನಿನ್ನ ತಾಯಿಗೆ ಒಡಹುಟ್ಟಿದ ಆ ಶ್ರೀಕೃಷ್ಣನನ್ನು ಪರಬ್ರಹ್ಮವೆಂದು ಹೇಳುವುದು ಹೇಗೆ?” ಎಂದು ನೀನು ಶಂಕಿಸಬೇಡ! ಮಹಾಯೋಗಿಗಳೂ ಯಾವನನ್ನು ಧ್ಯಾನದೃಷ್ಟಿಯಿಂದ ಹುಡುಕುತ್ತಿರುವರೋ, ಯಾವನು ಕೇವಲ ಜ್ಞಾನಾನಂದಸ್ವರೂಪನೆನಿಸಿಕೊಂಡಿರುವನೋ, ಆ ಪರಮಪುರುಷನೇ ನಿನ್ನ ಮಾವನೆಂದು ತಿಳಿ ಅವನು ನಿನಗೆ ಸೋದರಮಾವನು ಮಾತ್ರವಲ್ಲ ನಿಮ್ಮ ಪ್ರಿಯಮಿತ್ರನಾಗಿ ಆಗಾಗ ಹಿತವನ್ನು ಹೇಳುವನು. ರಾಜನಂತೆ ನಿಯಮಿಸುವನು. ಗುರುವಿನಂತೆ ನಿಮಗೆ

ಹಿತೋಪದೇಶವನ್ನು ಮಾಡುವನು. ನಿಮ್ಮ ಹೃದಯದಲ್ಲಿ ವಾಸಮಾಡ ತಕ್ಕ ಅಂತರಾತ್ಮನೂ ಅವನೇ! ಇನ್ನು ನಿಮ್ಮ ಭಾಗ್ಯವನ್ನು ಹೇಳಬೇಕಾ ದುದೇನು ? ಬ್ರಹ್ಮರುದ್ರರೇ ಮೊದಲಾದ ಎಂತಹ ಜ್ಞಾನಿಗಳೂಕೂಡ ಇಂದ್ರಿಯಗಳನ್ನು ಜಯಿಸಿ ಆ ಭಗವಂತನ ದಿವ್ಯಮಂಗಳವಿಗ್ರಹವನ್ನು ಧ್ಯಾನಿ ಸಿ, ಭಕ್ತಿಯಿಂದ ಆರಾಧಿಸುವುದುಮಾತ್ರವೇ ಹೊರತು, ಎಷ್ಟೇ ದೂರದೃ ಷ್ಟಿಯಿಂದ ನೋಡಿದರೂ ಅವನ ನಿಜಸ್ಥಿತಿಯನ್ನು ತಿಳಿಯಲಾರರು ಯೋಗೀಶ್ವರರಿಗೆ ಪ್ರಭುವಾದ ಆ ಸರ್ವೇಶ್ವರನು ನಮ್ಮಲ್ಲಿ ಪ್ರಸನ್ನನಾಗಲಿ" ಎಂದನು

ಓ ಪರೀಕ್ಷಿದ್ರಾಜಾ ! ನಾರದನು ಹೇಳಿದ ಈ ಸಚ್ಚರಿತ್ರೆಗಳೆಲ್ಲವ ನ್ನೂ ಕೇಳಿ ಧರ್ಮರಾಜನು,ಪರಮಸಂತೋಷಗೊಂಡವನಾಗಿ, ಆ ಸಭೆಯಲ್ಲಿ ದ್ದ ಶ್ರೀ ಕೃಷ್ಣನನ್ನೂ ನಾರದನನ್ನೂ ಯಥೋಚಿತವಾಗಿ ಪೂಜಿಸಿದನು. ನಾರದನೂಕೂಡ ಶ್ರೀಕೃಷ್ಣನನ್ನೂ ಧರ್ಮರಾಜನನ್ನೂ ಮನ್ನಿಸಿ, ಅವರ ಅನುಮತಿಯನ್ನು ಪಡೆದು ತನ್ನ ಲೋಕಕ್ಕೆ ಹಿಂತಿರುಗಿದನು ಧರ್ಮರಾ ಜನು ತನ್ನ ರಾಜಸೂಯಯಾಗವನ್ನು ಮುಗಿಸಿದಮೇಲೆ, ಸಂತೋಷದಿಂದ ರಾಜ್ಯವನ್ನಾಳುತಿದ್ದನು ರಾಜೇಂದ್ರಾ! ದಕ್ಷಕುಮಾರಿಯರಾದ ದಿತಿ ಮೊದ ಲಾದವರ ವಂಶಚರಿತ್ರವನ್ನು ಬೇರೆಬೇರೆಯಾಗಿ ನಿನಗೆ ವಿವರಿಸಿ ತಿಳಿಸಿದೆನು ಈ ದಕ್ಷಕುಮಾರಿಯರಿಂದಲೇ ದೇವಾಸುರಮನುಷ್ಯರೇ ಮೊದಲಾದ, ಚ ರಾಚರಗಳನ್ನೊಳಕೊಂಡ ಈ ಪ್ರಪಂಚವೆಲ್ಲವೂ ವಿಸ್ತರಿಸಿರುವುದು ಎಂದನು. ಇದು ಹದಿನೈದನೆಯ ಅಧ್ಯಾಯವು

ಸಪ್ತಮಸ್ಕಂಧವು ಸಮಾಪ್ತವು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ





ಶ್ರೀಃ

# ಶ್ರೀಮದ್ಭಾಗವತವು

## ಅಷ್ಟಮಸ್ಕಂಧವು.

{ ಸ್ವಾಯಂಭುವನೇ ಮೊದಲಾದ ನಾಲ್ಕುಮನ್ವಂತ
ರಗಳ ಚರಿತ್ರವು }

ಪರೀಕ್ಷಿದ್ರಾಜನು ಶುಕಮುನಿಯನ್ನು ತಿರುಗಿ ಪ್ರಶ್ನೆಮಾಡುವನು "ಓ ಗುರುವರ್ಯಾ! ನಿನ್ನಿಂದ ನಾನು ಸ್ವಾಯಂಭುವಮನುವಿನ ವಂಶಾನು ಕ್ರಮವೆಲ್ಲವನ್ನೂ ವಿವರವಾಗಿ ಕೇಳಿದುದಾಯಿತು. ಅದರಿಂದ ವರ್ಣಾ ಶ್ರಮಧರ್ಮಗಳೆಲ್ಲವೂ ತಿಳಿದುಬಂದುವು ಅದರಲ್ಲಿ ಮರೀಚಿ ಮೊದಲಾದ ಪ್ರಜಾಧಿಪತಿಗಳ ಸಂತತಿಯೂ ನನಗೆ ತಿಳಿದುಬಂದಿತು. ಹೀಗೆಯೇ ಇತರ ಮನುಗಳ ಚರಿತ್ರವನ್ನೂ, ಅವರ ವಂಶಾನುಕ್ರಮವನ್ನೂ ನನಗೆ ತಿಳಿಸಬೇ ಕು. ಆ ಪರಮಪುರುಷನು ಯಾವಯಾವ ಮನ್ವಂತರಗಳಲ್ಲಿ ಯಾವಯಾವ ಅವತಾರಗಳನ್ನೆತ್ತಿರುವನು? ಯಾವಯಾವ ಅದ್ಭುತಕಾರ್ಯಗಳನ್ನು ನಡೆಸಿ ರುವನು? ಅವೆಲ್ಲವನ್ನೂ ತಿಳಿಸಬೇಕು. ಇದುವರೆಗೆ ಕಳೆದುಹೋದ ಮನ್ವಂ ತರಗಳೆಷ್ಟು ? ಈಗ ನಡೆಯುವ ಮನ್ವಂತರವಾವುದು? ಮುಂದಿನ ಮನ್ವಂ ತರಗಳಲ್ಲಿ ಭಗವಂತನಿಂದ ನಡೆಯಬೇಕಾದ ಕಾರ್ಯವೇನು? ಎಂದನು. ಅ ದಕ್ಕಾ ಶುಕಮುನಿಯು "ರಾಜೇಂದ್ರಾ ಕೇಳು! ಈ ಕಲ್ಪದಲ್ಲಿ ಇದುವರೆಗೆ ಸ್ವಾಯಂಭುವನೇ ಮೊದಲಾದ ಆರುಮಂದಿ ಮನುಗಳ ಆಳ್ವಿಕೆಯು ಕಳೆದು ಹೋಯಿತು ಇವರಲ್ಲಿ ಮೊದಲನೆಯವನೇ ಸ್ವಾಯಂಭುವನು. ಅವನ ಚರಿ ತ್ರವನ್ನೂ, ದೇವತೆಗಳ ಉತ್ಪತ್ತಿಗೆ ಕಾರಣವಾದ ಅವನ ಸಂತತಿಯನ್ನೂ ನಿನ

ಗೆ ಮೊದಲೇ ವಿವರಿಸಿರುವೆನು ಆ ಸ್ವಾಯಂಭುವನಿಗೆ ಆಕೂತಿಯೆಂದೂ,ದೇವಹೂತಿಯೆಂದೂ ಇಬ್ಬರು ಕುಮಾರಿಯರಿದ್ದರೆಂದೂ ಹೇಳಿದ್ದೆನಲ್ಲವೆ ? ಆ ಕನ್ನೆಯರಿಬ್ಬರಲ್ಲಿ ಭಗವಂತನು, ಆಕೂತಿಗೆ ಯಜ್ಞನೆಂಬ ಹೆಸರಿನಿಂದಲೂ, ದೇವಹೂತಿಗೆ ಕಪಿಲನೆಂಬ ಹೆಸರಿನಿಂದಲೂ ಪುತ್ರನಾಗಿಜನಿಸಿದನು ಕಪಿಲನ ಚರಿತ್ರವನ್ನು ಮೊದಲೇ ನಿನಗೆ ತಿಳಿಸಿರುವೆನು ಯಜ್ಞನೆಂಬ ಹೆಸರಿನಿಂದ ಆ ಭಗವಂತನು ನಡೆಸಿದ ಕಾರ್ಯಗಳನ್ನೂ ಹೇಳುವೆನು ಕೇಳು. ಪೂರ್ವದಲ್ಲಿ ಸ್ವಾಯಂಭುವಮನುವು, ಶಬ್ದಾದಿವಿಷಯಗಳಲ್ಲಿ ವಿರಕ್ತನಾಗಿ, ರಾಜ್ಯವನ್ನು ಬಿಟ್ಟು, ತನ್ನ ಪತ್ನಿಯಾದ ಶತರೂಪೆಯೊಡನೆ ತಪಸ್ವಿಯಾಗಿ ಕಾಡಿಗೆ ಹೋದನು ಸುನಂದಾನದಿಯಲ್ಲಿ ಸ್ನಾನಮಾಡಿ, ಒಂದೇ ಕಾಲಿನಿಂದ ನಿಂತು ಘೋರವಾದ ತಪಸ್ಸನ್ನು ಹಿಡಿದು ಭಗವಂತನನ್ನು ಹೀಗೆಂದು ಸ್ತುತಿಸುವನು ‘‘ಯಾವನಿಂದಲೇ ಈ ಜಗತ್ತೆಲ್ಲವೂ ತನ್ನ ವ್ಯಾಪಾರಗಳಲ್ಲಿ ಸಮರ್ಥವಾಗವುದೋ,ಯಾವನು ಬೇರೊಬ್ಬರ ಪ್ರೇರಣೆಯಿಲ್ಲದೆ, ತಾನಾಗಿಯೇ ತನ್ನ ಸ್ವೇಚ್ಛೆಯಿಂದ ಕಾರ್ಯಗಳನ್ನು ನಡೆಸುವನೋ,ಆ ಪರಮಾತ್ಮನು ನನಗೆ ರಕ್ಷಕನಾಗಲಿ! ಲೋಕವೆಲ್ಲವೂ ಪ್ರಕೃತಿಸಂಬಂಧದಿಂದ ದೇಹಾತ್ಮಭ್ರಮಕ್ಕೆ ಗುರಿಯಾಗಿ, ಆತ್ಮಪರಮಾತ್ಮಗಳ ಸ್ಥಿತಿಯನ್ನು ತಿಳಿಯದೆ ನಿದ್ರೆಮಾಡುವಂತಿರುವಾಗಲೂ,ಯಾವನೊಬ್ಬನುಮಾತ್ರ ಎಚ್ಚರಗೊಂಡು ಅವೆಲ್ಲವನ್ನೂ ನೋಡುತ್ತಿರುವನೋ, ಯಾವನ ನಿಜಸ್ಥಿತಿಯನ್ನು ಈ ಜಗತ್ತು ಕಾಣಲಾರದೋ, ಆ ಪರಮಪುರುಷನು ನನಗೆ ರಕ್ಷಕನಾಗಲಿ!ಎಲ್ಲವನ್ನೂ ತನ್ನಲ್ಲಿ ನಿಯಮಿಸತಕ್ಕ ಆ ಪರಮಪುರುಷನಿಗೆ ಅಧೀನವಲ್ಲದ ಸ್ವತಂತ್ರವಸ್ತುವು ಯಾವುದೂ ಇರುವುದಿಲ್ಲ ದೇಹವೂ, ಹೆಂಡಿರುಮಕ್ಕಳು ಮೊದಲಾದ ಆ ದೇಹಾನುಬಂಧಿಗಳೂ, ಮನೆಮಠಗಳೂ ಇವೆಲ್ಲವೂ, ಆತನಿಗೇ ಅಧೀನವಾಗಿರುವುದರಿಂದ,ಅವುಗಳಲ್ಲಿ ಯಾವುದನ್ನೂ ತನ್ನದೆಂದು ಅಭಿಮಾನಿಸಬಾರದು ಜೀವನ ಜ್ಞಾನದಂತೆ ಆ ಪರಮಪುರುಷನ ಜ್ಞಾನವು ಕರ್ಮದಿಂದ ಸಂಕುಚಿತವಾಗತಕ್ಕುದಲ್ಲ ಆದುದರಿಂದ ಆವನು ಎಲ್ಲವನ್ನೂ ಒಮ್ಮೆಯೇ ಸಾಕ್ಷಾತ್ಕರಿಸಬಲ್ಲನು ತಮ್ಮತಮ್ಮ ಕರ್ಮದಿಂದ ಜ್ಞಾನಸಂಕೋಚಹೊಂದುವ ಜೀವವರ್ಗಗಳು ಅವನನ್ನು ಸಾಕ್ಷಾತ್ಕರಿಸಲಾರವು. ಸಮಸ್ತಭೂತಗಳಿಗೂ ಆಧಾ

ನಾಗಿ, ಸ್ವಯಂಪ್ರಕಾಶನಾಗಿ, ಗೂಡಿನಲ್ಲಿರುವ ಹಕ್ಕಿಯಂತೆ ಜೀವನೊಡನೆ ತಾನೂ ಆಯಾಶರೀರಗಳಲ್ಲಿ ಸೇರಿರತಕ್ಕ ಆ ಪರಮಪುರುಷನನ್ನು ಉಪಾಸನೆಮಾಡಿರಿ! ಅವನು ಆದಿಮಧ್ಯಾಂತಗಳಿಲ್ಲದವನು ಇತರರಲ್ಲಿ ತನ್ನವನೆಂದೂ, ಇತರನೆಂದೂ ಭೇದಬುದ್ಧಿಯಿಲ್ಲದವನು ಹೊರಗೆಂದೂ, ಒಳಗೆಂದೂ ವ್ಯತ್ಯಾಸವಿಲ್ಲದೆ ಸರ್ವವ್ಯಾಪಿಯಾಗಿರುವನು ಲೋಕದ ಸೃಷ್ಟಿಸ್ಥಿತಿಲಯಗಳೆಲ್ಲಕ್ಕೂ ಕಾರಣನು. ಸ್ವರೂಪಸ್ವಭಾವಗಳಲ್ಲಿ ವಿಕಾರವಿಲ್ಲದವನು ತಾನೇ ಪ್ರಪಂಚರೂಪವಾಗಿ ದೇವಮನುಷ್ಯಾದಿನಾಮಗಳಿಂದ ಕರೆಯಲ್ಪಡುವನು. ಹಾಗಿದ್ದರೂ ಕರ್ಮಾಧೀನವಾದ ಜನನಮರಣಗಳಿಲ್ಲದವನು ತನ್ನ ಶರೀರವೆನಿಸಿಕೊಂಡ ಚೇತನಾಚೇತನಗಳ ದೋಷಕ್ಕೆ ತಾನು ಈಡಾಗದೆ, ಅವೆಲ್ಲವನ್ನೂ ಒಳಹೊಕ್ಕು ನಿಯಮಿಸುತ್ತಿರುವನು ಎಲ್ಲಕ್ಕೂ ಆತನೇ ರಕ್ಷಕನು ಅವನು ತನ್ನ ಶಕ್ತಿಯೆನಿಸಿಕೊಂಡ ಪ್ರಕೃತಿಯಿಂದಲೇ ಲೋಕದ ಸೃಷ್ಟ್ಯಸ್ಥಿತಿಸಂಹಾರಗಳನ್ನೂ ನಡೆಸುವನು ಆಪ್ರಕೃತಿಸಂಬಂಧದಿಂದುಂಟಾಗುವ ದೋಷವನ್ನು ತನ್ನ ಜ್ಞಾನಬಲದಿಂದ ಪರಿಹರಿಸಿಕೊಂಡು, ನಿರಪೇಕ್ಷನಾಗಿ, ನಿರ್ವ್ಯಾಪಾರನಾಗಿರುವನು. ಲೋಕದಲ್ಲಿ ಜೀವರಾಶಿಗಳು ತಮ್ಮ ಸುಖವನ್ನುದ್ದೇಶಿಸಿ ಮಾಡತಕ್ಕ ಕರ್ಮಗಳೆಲ್ಲವೂ ಅವರಿಗೆ ಕೇವಲ ದುಃಖರೂಪವಾದ ವಿಪರೀತಫಲವನ್ನೇ ಉಂಟುಮಾಡುವುವು ಆದುದರಿಂದಲೇ ಜ್ಞಾನಿಗಳು,ಕರ್ಮಾಭಿಲಾಷೆಯನ್ನು ಬಿಟ್ಟು,ವಿರಕ್ತಿಮಾರ್ಗವನ್ನೇ ಅನುಸರಿಸಿರುವರು ಸರ್ವೇಶ್ವರನಾದ ಭಗವಂತನು, ಜೀವಾತ್ಮರನ್ನು ಅವರವರ ಕರ್ಮಾನುಸಾರವಾಗಿ ಸುಖದುಃಖಗಳಿಗೆ ಗುರಿಮಾಡುತ್ತ, ತಾನು ಜೀವಶರೀರಕನಾಗಿದ್ದರೂ, ಆಸುಖದುಃಖಗಳಿಗೆ ತಾನು ಗುರಿಯಾಗದೆ, ನಿತ್ಯಾನಂದಸ್ವರೂಪನಾಗಿ, ತನ್ನನ್ನು ತಾನೇ ಅನುಭವಿಸುತ್ತ ಪೂರ್ಣಕಾಮನಾಗಿರುವನು ತಾನುಮಾತ್ರವೇ ಅಲ್ಲದೆ, ತನ್ನನ್ನು ಆಶ್ರಯಿಸಿದ ಪ್ರಾಣಿಗಳಿಗೂ, ಕರ್ಮಗಳಲ್ಲಿ ಆಸಕ್ತಿಯಿಲ್ಲದಂತೆ ಮಾಡಿ,ಅವರನ್ನುದ್ಧರಿಸುವನು ಹೀಗೆ ಜೀವಗಳನ್ನು ಕರ್ಮಾನುಸಾರವಾಗಿ ಪ್ರೇರಿಸುತ್ತ, ಅಹಂಕಾರ ರಹಿತನಾಗಿಯೂ, ಸರ್ವಜ್ಞನಾಗಿಯೂ, ಪರಿಪೂರ್ಣನಾದುದರಿಂದ ನಿರಪೇಕ್ಷನಾಗಿಯೂ ಇರುವ ಆ ಪರಮಪುರುಷನು ನಮಗೆ ರಕ್ಷಕನಾಗಲಿ! ಅವನು ಮ

ತ್ತೊಬ್ಬರಿಗೆ ಅಧೀನನಲ್ಲದೆ, ತನ್ನ ಭಕ್ತರನ್ನೂ ತನಗೆ ಸಮಾನವಾಗಿ ಮಾಡಿ ಕೊಳ್ಳತಕ್ಕವನು ನಿಜಸ್ವಭಾವದಲ್ಲಿಯೇ ಬೆಳಗತಕ್ಕವನು ಸರ್ವಶಕ್ತನು. ಸ ಮಸ್ತಧರ್ಮಗಳನ್ನೂ ಪಾಲಿಸತಕ್ಕವನು ಅಂತಹ ಪರಮಪುರುಷನನ್ನು ಶರ ಣುಹೊಂದುವೆವು" ಎಂದು, ಮಂತ್ರಾತ್ಮಕವಾದ ಈ ಉಪನಿಷತ್ತನ್ನು ದೃ ಢಮನಸ್ಸಿನಿಂದ ಜಪಿಸುತಿದ್ದನು. ಹೀಗೆ ಸ್ವಾಯಂಭುವನು ತಪಸ್ಸಿನಲ್ಲಿರು ವಾಗ, ಹಸಿವಿನಿಂದ ಪೀಡಿತರಾದ ಕೆಲವು ರಾಕ್ಷಸರು, ಅವನನ್ನು ಕೊಂದು ತಿನ್ನಬೇಕೆಂದು ಸಮೀಪಿಸಿದರು ಹೀಗೆ ಘೋರಕಾರ್ಯಕ್ಕಾಗಿ ನಿಶ್ಚಯಿಸಿ ಮುಂದೆ ಬರುತ್ತಿರುವ ಆ ರಾಕ್ಷಸರನ್ನು ನೋಡಿ, ಸರ್ವಾಂತರ್ಯಾಮಿಯಾ ದ ಭಗವಂತನು, ಆಗಲೇ ಯಜ್ಞನೆಂಬ ಹೆಸರಿನಿಂದವತರಿಸಿ, ಯಾಮ ರೆಂಬ ದೇವಗಣಗಳೊಡನೆ ಸೇರಿಬಂದು,ಆ ರಾಕ್ಷಸರೆಲ್ಲರನ್ನೂ ಧ್ವಂಸಮಾಡಿ, ತಾನೇ ಇಂದ್ರನಾಗಿ ಸ್ವರ್ಗವನ್ನು ಪಾಲಿಸುತಿದ್ದನು

ಓ ಪರೀಕ್ಷಿದ್ರಾಜಾ ! ಪ್ರತಿಮನ್ವಂತರಕಾಲದಲ್ಲಿಯೂ, ಹೀಗೆಯೇ ಮನುಗಳೂ, ಮನುಪುತ್ರರೂ, ದೇವತೆಗಳೂ, ದೇವೇಂದ್ರನೂ,ಋಷಿಗಳೂ, ವಿಷ್ಣುವಿನ ಅವತಾರಗಳೂ ಬೇರೆಬೇರೆಯಾಗಿರುವುವು ಮೊದಲನೆಯ ಮ ನ್ವಂತರದಲ್ಲಿ ಸ್ವಾಯಂಭುವನೇ ಮನುವು. ಪ್ರಿಯವ್ರತಾದಿಗಳು ಮನುಪು ತ್ರರು ಮರೀಚಿ ಮೊದಲಾದವರು ಸಪ್ತಋಷಿಗಳು ಯಜ್ಞಪುತ್ರರಾದ ಯಾಮಾದಿಗಳೇ ದೇವಗಣಗಳು. ಭಗವಂತನೇ ಯಜ್ಞರೂಪದಿಂದ ಇಂ ದ್ರನಾಗಿದ್ದನು.

ಎರಡನೆಯ ಮನ್ವಂತರದಲ್ಲಿ ಅಗ್ನಿಕುಮಾರನಾದ ಸ್ವಾರೋಚಿಷನೆಂ ಬವನು ಮನುವು ದ್ಯುಮಂತ, ಸುಷೇಣ ಮೊದಲಾದವರು ಮನುಪುತ್ರ ರು ರೋಚನನೆಂಬವನೇ ಇಂದ್ರನು ತುಷಿತಾದಿಗಳು ದೇವಗಣಗಳು ಊ ರ್ಜಸ್ತಂಭನೇ ಮೊದಲಾದವರು ಸಪ್ತಋಷಿಗಳು. ಈ ಕಾಲದಲ್ಲಿ ವೇದಶಿರ ನೆಂಬೊಬ್ಬ ಋಷಿಯಿದ್ದನು. ಅವನ ಪತ್ನಿಗೆ ತುಷಿತೆಯೆಂದು ಹೆಸರು ಭಗ ವಂತನು ವಿಭುವೆಂಬ ಹೆಸರಿನಿಂದ ಅವರ ಕುಮಾರನಾಗಿ ಅವತರಿಸಿದನು. ಎಂಬತ್ತುಸಾವಿರ ಮಹರ್ಷಿಗಳು ಬ್ರಹ್ಮಚಾರಿಯಾಗಿದ್ದ ಆ ವಿಭುವಿನ ಆಚಾ ರವನ್ನೇ ಅನುಸರಿಸುತಿದ್ದು, ಸದ್ಗತಿಯನ್ನು ಹೊಂದಿದರು.

ಪ್ರಿಯವ್ರತನ ಮಗನಾದ ಉತ್ತಮನು ಮೂರನೆಯ ಮನುವು.ಸವನ, ಸೃಂಜಯ,ಮೊಲಾದವರು ಮನುಪುತ್ರರು ವಸಿಷ್ಠಪುತ್ರರಾದ ಪ್ರಮದಾದಿಗಳೇ ಸಪ್ತಋಷಿಗಳು. ಸತ್ಯಜಿತ್ತೆಂಬವನು ಇಂದ್ರಪದವಿಯಲ್ಲಿದ್ದನು. ಸತ್ಯರೆಂದೂ, ದೇವಶ್ರುತರೆಂದೂ ಭದ್ರರೆಂದೂ ಹೆಸರುಗೊಂಡವರು ಆಗಿನ ದೇವತೆಗಳು ಆ ಕಾಲದಲ್ಲಿ ಭಗವಂತನು ಧರ್ಮನೆಂಬವನಿಗೆ, ಸೂನೃತೆಯೆಂಬ ಭಾರ್ಯೆಯಲ್ಲಿ ಸತ್ಯಸೇನನೆಂಬ ಹೆಸರಿಂದ ಹುಟ್ಟಿ, ಇಂದ್ರನಿಗೆ ಸಹಾಯಕನಾಗಿ, ಯಕ್ಷರಾಕ್ಷಸರನ್ನೂ, ಲೋಕವನ್ನು ಹಿಂಸಿಸತಕ್ಕ ಇತರ ಭೂತಗಣಗಳನ್ನೂ ಸಂಹರಿಸಿದನು.

ಉತ್ತಮನ ತಮ್ಮನಾದ ತಾಮಸನು ನಾಲ್ಕನೆಯ ಮನುವಾದನು ವೃಷ, ಖ್ಯಾತಿ,ನರ, ಕೇತು ಮೊದಲಾದವರು ಹತ್ತುಮಂದಿ ಮನುಪುತ್ರರು. ಸತ್ಯಕರೆಂದೂ, ಹರಿಗಳೆಂದೂ,ವೀತರೆಂದೂ ಹೆಸರುಗೊಂಡವರು ದೇವಗಣಗಳು. ತ್ರಿಶಿಖನೆಂಬವನು ಇಂದ್ರನಾಗಿದ್ದನು ಜ್ಯೋತಿರ್ವ್ಯೋಮ ಮೊದಲಾದವರು ಸಪ್ತರ್ಷಿಗಳು ಆ ಕಾಲದಲ್ಲಿ ವಿಧೃತಿಯಮಕ್ಕಳಾದ ವೈಧೃತಿಗಳೆಂಬವರು ಕಾಲವಶದಿಂದ ನಷ್ಟವಾಗುತಿದ್ದ ವೇದಗಳನ್ನು ರಕ್ಷಿಸಿಟ್ಟರು. ಆಗ ಭಗವಂತನು,ಹರಿಮೇಧನೆಂಬವನಿಗೆ ಹರಿಣಿಯೆಂಬ ಭಾರ್ಯೆಯಲ್ಲಿ ಹರಿಯೆಂಬ ಹೆಸರಿನಿಂದ ಹುಟ್ಟಿ ಮೊಸಳೆಯ ಬಾಯಿಗೆ ಸಿಕ್ಕಿದ ಗಜೇಂದ್ರನನ್ನು ಬಿಡಿಸಿ ರಕ್ಷಿಸಿದನು" ಎಂದನು.

ಇದನ್ನು ಕೇಳಿ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು "ಓ ಮಹರ್ಷೀ!ಆ ಗಜೇಂದ್ರಮೋಕ್ಷದ ಕಥೆಯನ್ನು ನನಗೆ ವಿವರಿಸಿ ತಿಳಿಸಬೇಕು. ಎಲ್ಲಾ ಭಗವತ್ಕಥೆಗಳಿಗಿಂತಲೂ ಅದು ಬಹಳಪವಿತ್ರವೆಂದೂ, ಪುಣ್ಯಕಾರಣವೆಂದೂ ಕೇಳಿರುವೆನು. ಆ ವೃತ್ತಾಂತವು ಸರ್ವವಿಧದಲ್ಲಿಯೂ ಶ್ರೇಯಸ್ಕರವಾದುದರಿಂದ ಅದನ್ನುಅವಶ್ಯವಾಗಿ ನನಗೆ ತಿಳಿಸಬೇಕು"ಎಂದನು. ಹೀಗೆ ಪ್ರಾಯೋಪವಿಷ್ಟನಾಗಿದ್ದ ಪರೀಕ್ಷಿದ್ರಾಜನು ಮಾಡಿದ ಪ್ರಶ್ನೆಗೆ, ಶುಕಮಹರ್ಷಿಯು ಬಹಳ ಸಂತೋಷಪಟ್ಟು, ಅಲ್ಲಿದ್ದ ಬ್ರಾಹ್ಮಣರೆಲ್ಲರೂ ಕೇಳುತ್ತಿರುವಹಾಗೆಯೇ, ಆ ಕಥೆಯನ್ನು ಹೇಳತೊಡಗಿದನು ಇಲ್ಲಿಗೆ ಮೊದಲನೆಯ ಅಧ್ಯಾಯವು.

## ಗಜೇಂದ್ರಮೋಕ್ಷದ ಕಥೆ

### ತ್ರಿಕೂಟ ವರ್ಣನವು

ಓ ರಾಜೇಂದ್ರಾ! ತ್ರಿಕೂಟವೆಂಬ ಪರ್ವತಶ್ರೇಷ್ಠವೊಂದುಂಟು ಅದು ಕ್ಷೀರಸಮುದ್ರದಿಂದಾವರಿಸಲ್ಪಟ್ಟು, ತನ್ನ ಕಾಂತಿವಿಶೇಷದಿಂದ ಆ ಸಮುದ್ರವನ್ನೂ, ಹತ್ತುದಿಕ್ಕುಗಳನ್ನೂ ಬೆಳಗುತ್ತ, ಹತ್ತುಸಾವಿರಯೋಜನಗಳ ಎತ್ತರವುಳ್ಳುದಾಗಿ, ಸುತ್ತಲೂ ಅಷ್ಟೇ ದೂರಕ್ಕೆ ವ್ಯಾಪಿಸಿರುವುದು ಅದರ ಮೂರು ಶಿಖರಗಳಲ್ಲಿ ಒಂದು ರಜತಮಯವಾಗಿಯೂ, ಮತ್ತೊಂದು ಅಯೋಮಯವಾಗಿಯೂ, ಮತ್ತೊಂದು ಸುವರ್ಣಮಯವಾಗಿಯೂ ಇರುವುದು ರತ್ನಗಳಿಂದಲೂ, ಇತರಗೈರಿಕಾದಿ ಧಾತುಗಳಿಂದಲೂ ವಿಚಿತ್ರವಾದ ಆ ಪರ್ವತವು, ತನ್ನ ಕಾಂತಿಯಿಂದಲೇ ತನ್ನ ಸುತ್ತಿನ ಸಮಸ್ತಭಾಗಗಳನ್ನೂ ಬೆಳಗುತ್ತಿರುವುದು ಮತ್ತು ಅದು, ಬಗೆಬಗೆಯ ಗಿಡುಬಳ್ಳಿಗಳಿಂದಲೂ, ಗಿರಿನದಿಗಳ ಪ್ರವಾಹಘೋಷದಿಂದಲೂ, ಕಣ್ಣುಗಳಿಗೂ, ಕಿವಿಗೂ ಆನಂದಕರವಾಗಿರುವುದು ಆಪರ್ವತದ ಬುಡವು, ಸುತ್ತಲೂ ಕ್ಷೀರಸಮುದ್ರದ ಅಲೆಗಳಿಂದ ತೊಳೆಯಲ್ಪಡುತ್ತಿರುವುದು ಮತ್ತು ಆ ಪರ್ವತವು ತನ್ನಲ್ಲಿರುವ ಮರಕತರತ್ನಗಳ ಕಾಂತಿಯಿಂದ, ತನ್ನ ಸುತ್ತಿನ ನೆಲವನ್ನೆಲ್ಲಾ ಹಸುರುಬಣ್ಣಕ್ಕೆ ತಿರುಗಿಸುತ್ತಿರುವುದು. ಆ ಪರ್ವತದ ತಪ್ಪಲುಗಳಲ್ಲಿ ಸಿದ್ಧರೂ, ಚಾರಣರೂ, ಗಂಧರ್ವರೂ, ವಿದ್ಯಾಧರರೂ, ಪನ್ನಗರೂ, ಕಿನ್ನರರೂ, ಅಪ್ಸರಸ್ಸುಗಳೂ ಸಂತೋಷದಿಂದ ವಿಹರಿಸುತ್ತಿರುವರು ಆಗಾಗ ಗಂಧರ್ವರ ಗಾನಧ್ವನಿಯು, ಗುಹೆಗಳಲ್ಲಿ ಪ್ರತಿಧ್ವನಿಸುವುದನ್ನು ಕೇಳಿ, ಅಲ್ಲಿನ ಗುಹೆಯಲ್ಲಿ ವಾಸಮಾಡತಕ್ಕ ಸಿಂಹಗಳು, ಅದನ್ನೇ ಇತರಸಿಂಹಗಳ ಗರ್ಜನೆಯೆಂದು ತಿಳಿದು ಕೋಪದಿಂದ ಗರ್ಜಿಸುವುವು. ಮತ್ತು ಆ ಪರ್ವತವು ಬಗೆಬಗೆಯ ಮರಗಳ ತೋಪುಗಳಿಂದಲೂ, ಅನೇಕಜಾತಿಯ ಮೃಗಗಳಿಂದಲೂ, ಉದ್ಯಾನಗಳಲ್ಲಿ ಕರ್ಣಾನಂದಕರವಾಗಿ ಕೂಗುತ್ತಿರುವ ಗಿಳಿ, ಕೋಗಿಲೆ, ಮೊದಲಾದ ಪಕ್ಷಿಗಳಿಂದಲೂ ಅಲಂಕೃತವಾಗಿರುವುದು ಎಲ್ಲಿ ನೋಡಿದರೂ ಸ್ವಚ್ಛಜಲವುಳ್ಳ ನದಿಗಳೂ, ಸರೋವರಗಳೂ ಕಂಗೊಳಿಸುತ್ತಿರುವುವು. ಒಂದೊಂದು ನದೀತೀರವೂ, ರತ್ನಮಿಶ್ರವಾದ

ಮರಳುದಿಣ್ಣೆಗಳಿಂದ ಶೋಭಿಸುತ್ತಿರುವುದು ಅಲ್ಲಿನ ಸರೋವರಗಳಲ್ಲಿ ದೇವಸ್ತ್ರೀಯರುಆಗಾಗ ಬಂದು ಜಲಕ್ರೀಡೆಯನ್ನಾಡುವುದರಿಂದ, ಅಲ್ಲಿನ ಜಲವೂ, ಅದರಿಂದ ಹೊರಟುಬರುವ ತಂಗಾಳಿಯೂ, ಸುತ್ತಲೂ ಸುವಾಸನೆಯನ್ನು ಬೀರುತ್ತಿರುವುದು. ಆ ಪರ್ವತದ ತಪ್ಪಲಲ್ಲಿ, ಪೂಜ್ಯನಾದ ವರುಣದೇವನ ಉದ್ಯಾನವೊಂದುಂಟು ಆ ಉದ್ಯಾನವನಕ್ಕೆ ಋತುಮಂತವೆಂದು ಹೆಸರು ಅದು ದೇವಸ್ತ್ರೀಯರಿಗೆ ಅತ್ಯಂತಪ್ರಿಯವಾದ ಕ್ರೀಡಾಸ್ಥಾನವಾಗಿರುವುದು. ಆ ವನದಲ್ಲಿ ಯಾವಾಗಲೂ ಫಲಪುಷ್ಪಗಳಿಂದ ತುಂಬಿದ ಮಂದಾರ, ಪಾರಿಜಾತ, ಪಾದರಿ, ಅಸುಗೆ, ಸಂಪಗೆ, ಮಾವು, ಪ್ರಿಯಂಗು, ಹಲಸು, ಆಮ್ರ, ಆಮ್ರಾತಕ, ಅಡಕೆ, ತೆಂಗು, ಖರ್ಜೂರ, ದಾಳಿಂಬೆ, ಮಧೂಕ, ತಾಳೆ, ಸಾಲೆ, ಹೊಂಗೆ ಬಂದುಗೆ, ಅರ್ಜುನ, ಅರಿಷ್ಟ, ಅತ್ತಿ, ಆಲ, ಬಸರಿ, ಮುಳ್ಳುಮುತ್ತುಗ, ಚಂದನ, ಕೋವಿದಾರ, ಸರಳ, ದೇವದಾರು, ಪಿಚುಮಂದ, ದ್ರಾಕ್ಷೆ, ಬಾಳೆ, ನೇರಳೆ, ಬದರಿ, ಅಕ್ಷ, ಬಿಲ್ವ, ಬೇಲ, ಜಂಬೀರ, ಭಲ್ಲಾತಕ ಮುಂತಾದ ಬಗೆಬಗೆಯ ವೃಕ್ಷಗಳೆಲ್ಲವೂ ತುಂಬಿರುವುವು ಮತ್ತು ಆ ಉದ್ಯಾನವನದ ನಡುವೆ, ವಿಶಾಲವಾಗಿಯೂ, ಸುವರ್ಣಚ್ಛಾಯೆಯುಳ್ಳ ಕಮಲಗಳಿಂದ ತುಂಬಿದುದಾಗಿಯೂ, ಬಿಳೀನೈದಿಲೆ, ಕರೀನೈದಿಲೆ, ಸೌಗಂಧಿಕ, ಕೆಂದಾವರೆ, ಮುಂತಾದ ನೀರುಹೂಗಳಿಂದ ಶೋಭಿತವಾಗಿಯೂ ಇರುವ ಸರೋವರವೊಂದುಂಟು. ಆ ಸರೋವರದಲ್ಲಿ, ಕಮಲದ ಮಕರಂದವನ್ನು ಪಾನಮಾಡಿ ಮದಿಸಿದ ಭ್ರಮರಗಳೂ, ಮಧುರಧ್ವನಿಯುಳ್ಳ ಪಕ್ಷಿಗಳೂ ಕಿವಿಗಿಂಪಾಗಿ ಕೂಗುತ್ತಿರುವುವು. ಮತ್ತು ಅದರಲ್ಲಿ ಹಂಸಗಳು, ಕಾರಂಡವಗಳು, ಚಕ್ರವಾಕಗಳು, ಸಾರಸಗಳು, ನೀರುಕೋಳಿಗಳು, ಟಿಟ್ಟಿಭಗಳು, ದಾತ್ಯೂಹವೆಂಬ ಜಲಪಕ್ಷಿಗಳು, ಇವೆಲ್ಲವೂ ಉತ್ಸಾಹದಿಂದ ಕೂಗುತ್ತಿರುವುವು. ಮತ್ತು ಆ ಕೊಳದ ನೀರಿನಲ್ಲಿ ಮೀನು, ಆಮೆ ಮೊದಲಾದ ಜಲಜಂತುಗಳು ವೇಗದಿಂದ ಅತ್ತಿತ್ತ ಸಂಚರಿಸುವಾಗ, ಕಮಲದಿಂದುದಿರಿದ ಪುಷ್ಪಧೂಳಿಯು,ಆ ಸರೋವರವೆಲ್ಲವನ್ನೂ ಹೊಂಬಣ್ಣಕ್ಕೆ ತಿರುಸುತ್ತಿರುವುದು ಆ ಸರೋವರದ ಸುತ್ತಲೂ, ಕಡವು, ನೀರಂಜಿ, ನಲ, ನೀಪ, ಪಗಡೆ, ಮೊಲ್ಲೆ, ಗೋರಂಟೆ, ಅಸುಗೆ,

ಬಾಗೆ, ಚೆಟ್ಟಿಪದಮಲ್ಲಿಗೆ, ಇಂಗಳ,ಸ್ವರ್ಣಯೂಥಿ, ನಾಗ ಪುನ್ನಾಗ, ಜಾಜಿ, ಮಲ್ಲಿಗೆ, ನೆಲದಾವರೆ, ವಾಸಂತಿಕೆ, ಜಾಲ, ಮುಂತಾಗಿ ಇನ್ನೂ ಬಗೆಬಗೆಯ ತೀರವೃಕ್ಷಗಳು, ಸಾರ್ವರ್ತುಕವಾದ ಫಲಪುಷ್ಪಗಳಿಂದ ತುಂಬಿ ಶೋಭಿ ಸುತ್ತಿರುವುದು. ಇಂತಹ ತ್ರಿಕೂಟಪರ್ವತದ ತಪ್ಪಲಲ್ಲಿ ಅನೇಕಪರಿವಾರ ಗಳೊಡನೆ ವಾಸಮಾಡುತಿದ್ದ ಒಂದಾನೊಂದು ಕಾಡಾನೆಯು, ಒಮ್ಮೆ ತನ್ನ ಪರಿವಾರಗಳೊಡನೆ ಅಲ್ಲಲ್ಲಿ ವಿಹರಿಸುತ್ತ, ಮುಳ್ಳಿನ ಪೊದೆಗಳನ್ನೂ ಬಿದಿರುಮೆಳೆಗಳನ್ನೂ, ಗಿಡುಬಳ್ಳಿಗಳನ್ನೂ ತನ್ನ ಸುಂಡಿಲಿನಿಂದ ಮುರಿದು ಹಾಕುತಿತ್ತು, ಆ ಪರ್ವತದ ಕಾಡುಗಳಲ್ಲಿ ತನಗೆ ಯಾವ ಮೃಗವೂ ಇದಿರಿಲ್ಲದಂತೆ ತಾನೇ ತಾನಾಗಿ ತಿರುಗುತಿತ್ತು ಈ ಆನೆಯು ಬರುವ ದಾರಿಯಲ್ಲಿ, ಇದರ ವಾಸನೆಯನ್ನು ತಿಳಿದಮಾತ್ರಕ್ಕೆ, ಅಲ್ಲಲ್ಲಿ ! ತಿರುಗುತಿ ದ್ದ ಸಿಂಹಗಳೂ, ಇತರಗಜಗಳೂ, ಹುಲಿಗಳೂ, ವ್ಯಾಳಗಳೂ, ಖ ಡ್ಗಮೃಗಗಳೂ, ಹೆಬ್ಬಾವುಗಳೂ, ಬಿಳುಪು ಮತ್ತು ಕಪ್ಪುಬಣ್ಣವುಳ್ಳ ಶರಭಗಳೂ, ಚಮರಮೃಗಗಳೂ- ಭಯದಿಂದ ಚದರಿ ದಿಕ್ಕುದಿಕ್ಕಿಗೆ ಪ ಲಾಯನಮಾಡುತಿದ್ದುವು ಇದಲ್ಲದೆ ತೋಳ, ಹಂದಿ, ಕಾಡೆಮ್ಮೆ, ಕರ ಡಿ, ಮುಳ್ಳುಹಂದಿ, ಗೋಲಾಂಗೂಲ, ನರಿ, ಕಪಿ, ಕಡವೆ, ಮುಂ ತಾದುವುಗಳೂ, ಜಿಂಕೆ, ಮೊಲ, ಮೊದಲಾದ ಕ್ಷುದ್ರಮೃಗಗಳೂ, ಆನೆ ಯನ್ನು ಕಂಡಾಗಲೂ! ಅದು ತಮ್ಮಮೇಲೆ ಕೈಮಾಡಲಾರದೆಂಬ ನಂಬಿಕೆ ಯಿಂದ ನಿರ್ಭಯವಾಗಿ ಸಂಚರಿಸುತಿದ್ದುವು ಬೇರೆ ಕೆಲವು ಸಣ್ಣಮೃಗಗಳು, ಆ ಆನೆಯನ್ನೇ ಹಿಂಬಾಲಿಸುತ್ತ, ಅದರ ಬಲದಿಂದ ಇತರಮೃಗಗಳ ಬಾಧೆಗೆ ಗುರಿಯಾಗದಂತೆ ನಿರ್ಭಯವಾಗಿ ಸುತ್ತುತಿದ್ದುವು ಹೀಗೆ ತನ್ನ ಮರಿಗ ಳನ್ನೂ, ಹೆಣ್ಣಾನೆಗಳನ್ನೂ ಕಟ್ಟಿಕೊಂಡು, ಎಣೆಯಿಲ್ಲದ ಹೆಮ್ಮೆಯಿಂದ ಯಥೇಚ್ಛವಾಗಿ ಕಾಡಿನಲ್ಲಿ ತಿರುಗುತಿದ್ದ ಆ ಮಹಾಗಜವು, ಒಮ್ಮೆ ಬೇಸಗೆ ಯ ತಾಪದಿಂದ ಬಹಳವಾಗಿ ಬಳಲಿ, ನೀರನ್ನು ಹುಡುಕುತ್ತಾ ಅಲ್ಲಲ್ಲಿ ಸುತ್ತುತಿತ್ತು ಮದಗಂಧಕ್ಕಾಗಿ ಸಾಲುಸಾಲಾಗಿ ಬಂದು ಮುತ್ತುವ ಭ್ರ ಮರಗಳ ಝುಂಕಾರದೊಡನೆ ಬಿಸಿಲಿನಲ್ಲಿ ಬಹಳವಾಗಿ ಸುತ್ತಿ ಬೆಂಡಾದ ಆ ಕಾಡಾನೆಯು, ತನ್ನ ಭಾರದಿಂದ ಆ ಪರ್ವತವನ್ನು ನಡುಗಿಸುವಂತೆ ಪರಿವಾ

ರಗಳೊಡನೆ ಅಲ್ಲಲ್ಲಿ ಸಂಚರಿಸುತ್ತಿರುವಾಗ ಇತ್ತಲಾಗಿ ಪದ್ಮಸರೋವರದಿಂದ ಹೊರಟುಬಂದ ತಂಗಾಳಿಯು ಅದರ ಮೈಮೇಲೆ ಬೀಸಿತು. ಇದರಿಂದ ಆ ಆನೆಯು, ಸಮಿಪದಲ್ಲಿಯೇ ಕಮಲಸರೋವರವಿರಬಹುದೆಂದು ನಿಶ್ಚಯಿಸಿ,ಆ ಕಡೆಗೆ ಬಂದಿತು. ಆ ಸರೋವರದಲ್ಲಿ ಕಮಲರಜಸ್ಸಿನಿಂದ ಸುವಾಸಿತವಾಗಿರುವ ಸ್ವಚ್ಛವಾದ ನೀರನ್ನು ಕಂಡು, ಅದರಲ್ಲಿಳಿದು, ಅಮೃತದಂತೆ ಮಧುರವಾಗಿದ್ದ ಆ ನೀರನ್ನು ಸುಂಡಿಲಿನಿಂದ ತೆಗೆದುತೆಗೆದು ಕುಡಿಯುವುದಕ್ಕಾರಂಭಿಸಿತು ಯಥೇಷ್ಟವಾಗಿ ನೀರನ್ನು ಕುಡಿದಮೇಲೆ, ಬಿಸಿಲಿನತಾಪವೆಲ್ಲವೂ ಕಳೆಯುವಂತೆ, ಬೇಕಾದಷ್ಟು ನೀರನ್ನು ತನ್ನಮೈಮೇಲೆ ಸುರಿದುಕೊಂಡಿತು ನೀರಿನಲ್ಲಿ ಮುಳುಗಿ ಯಥೇಚ್ಛವಾಗಿ ವಿಹರಿಸಿತು ತನ್ನ ಸುಂಡಿಲಿನಿಂದ ತನ್ನ ಮರಿಗಳಿಗೂ ನೀರನ್ನು ಕುಡಿಸಿತು ಆ ಮರಿಗಳಮೇಲೆಯೂ,ಹೆಣ್ಣಾನೆಗಳಮೇಲೆಯೂ ತನ್ನ ಸುಂಡಿಲಿನಿಂದ ನೀರನ್ನು ಚಿಮುಕಿಸಿತು ಲೋಕದಲ್ಲಿ ಸಂಸಾರಿಯು· ಅಲ್ಲಲ್ಲಿ ಶ್ರಮಪಟ್ಟು ಬೇಕುಬೇಕಾದ ವಸ್ತುಗಳನ್ನು ಸಂಪಾದಿಸಿ ತಂದು, ತನ್ನ ಹೆಂಡಿರುಮಕ್ಕಳನ್ನು ತೃಪ್ತಿಪಡಿಸುವಂತೆ, ಈ ಗಜರಾಜನು,ಆಕೊಳದ ನೀರನ್ನು ಸುಂಡಿಲಿನಿಂದ ತುಂಬಿತಂದು ತನ್ನ ಸುತ್ತಿಮುತ್ತಿನ ಪರಿವಾರಗಳನ್ನೆಲ್ಲಾ ಸಂತೋಷಪಡಿಸುತಿತ್ತು ಹೀಗೆ ತನಗೂ, ಮತ್ತು ತನ್ನಪರಿವಾರಗಳಿಗೂ, ದೇಹಶ್ರಮವು ತಗ್ಗಿದಮೇಲೆಯೂ, ಆ ಕೊಳವನ್ನುಬಿಟ್ಟು ಬರಲಾರದೆ, ಆ ನೀರಿನಲ್ಲಿಯೇ ಸಂತೋಷದಿಂದ ವಿಹರಿಸುತಿತ್ತು ಆಹಾ ! ಭಗವನ್ಮಾಯೆಯಿಂದ ಮೇಲೆ ಬಂದು ಬೀಳುವ ಮಹಾವಿಪತ್ತನ್ನು ಯಾರು ತಾನೇ ತಿಳಿಯಬಲ್ಲರು? ಆ ಗಜಯೂಥಪವು, ಹೀಗೆ ನೀರಿನಲ್ಲಿಳಿದು ಸಂತೋಷದಿಂದ ಜಲಕ್ರೀಡೆಯನ್ನಾಡುತ್ತಿರುವಾಗ, ದೈವಚೋದಿತವಾದ ಒಂದಾನೊಂದು ದೊಡ್ಡ ಮೊಸಳೆಯು, ಇದರ ಉತ್ಸಾಹಗರ್ಜನವನ್ನು ಕೇಳಿ ವೇಗದಿಂದ ಬಂದು, ಇದರ ಕಾಲನ್ನು ಹಿಡಿದುಕೊಂಡಿತು ಆಕಸ್ಮಿಕವಾಗಿ ಸಂಭವಿಸಿದ ಈ ವಿಪತ್ತನ್ನು ತಪ್ಪಿಸಿಕೊಳ್ಳಬೇಕೆಂದು,ಆ ಕಾಡಾನೆಯೂ ತನ್ನ ಶಕ್ತಿಮೀರಿ ಪ್ರಯತ್ನಿಸಿತು ಆದರೇನು?ಇದರ ಪ್ರಯತ್ನವೊಂದೂ ಸಫಲವಾಗದೆಹೋಯಿತು. ತನಗಿಂತಲೂ ಆ ಮೊಸಳೆಯು ಬಹಳ ಬಲಾಢ್ಯವಾಗಿದ್ದುದರಿಂದ, ಅದರ ಬಾ

ಯಿಂದ ತಪ್ಪಿಸಿಕೊಂಡು ಬರುವುದಕ್ಕೆ ಸಾಧ್ಯವಿಲ್ಲದಂತಾಯಿತು. ಕೊನೆಗೆ ತನ್ನ ಕೈಸಾಗದಿರುವುದನ್ನುನೋಡಿ ದೈನ್ಯದಿಂದ ಕೂಗಿಡುವುದಕ್ಕೆ ತೊಡಗಿತು ಹೀಗೆ ದುಃಖದಿಂದ ಮೊರೆಯಿಡುತ್ತಿರುವ ಆ ಸಲಗನನ್ನು ನೋಡಿ, ಅಲ್ಲಿದ್ದ ಹೆಣ್ಣಾನೆಗಳೂ, ಇತರ ಗಜಗಳೂ, ಮುಂದೆಬಂದು, ಸುಂಡಿಲನ್ನು ನೀಡಿ ಅದನ್ನು ಹಿಡಿದು ತಡಿಗೆ ಸೇರಿಸಬೇಕೆಂದು ಪ್ರಯತ್ನಿಸಿದುವು ಅವುಗಳ ಪ್ರಯತ್ನವೂ ಸಾಗದೆಹೋಯಿತು. ಕೊನೆಗೆ ಆ ಆನೆಯ ಹಿಂಡುಗಳೆಲ್ಲವೂ ತಡಿಯಲ್ಲಿ ನಿಂತು ಗೋಳಿಡುವುದಕ್ಕೆ ತೊಡಗಿದುವು ನೀರಿನಲ್ಲಿ ಆನೆಮೊಸಳೆಗಳೆರಡೂ ಹೋರಾಡುತಿದ್ದವು ಆನೆಯು ತೀರದಕಡೆಗೂ, ಮೊಸಳೆಯು ನೀರಿನ ಕಡೆಗೂ ಎಳೆದಾಡುತಿದ್ದುವು ಓ ಪರೀಕ್ಷಿದ್ರಾಜಾ ! ಹೀಗೆ ಮಹಾಬಲವುಳ್ಳ ಆ ಆನೆಮೊಸಳೆಗಳೆರಡೂ ಹೊರಾಡುವುದರಲ್ಲಿಯೇ ಒಂದು ಸಾವಿರವರುಷಗಳು ಕಳೆದುಹೋದುವು ಈ ಹೋರಾಟವನ್ನು ನೋಡಿ ದೇವತೆಗಳೆಲ್ಲರೂ ಆಶ್ಚರ್ಯಪಡುತಿದ್ದರು ಹೀಗೆಸಾವಿರವರುಷಗಳು ಕಳೆಯುವಷ್ಟರಲ್ಲಿ, ಕೊನೆಕೊನೆಗೆ ಆ ಆನೆಯ ಉತ್ಸಾಹಶಕ್ತಿಯೂ, ದೇಹಬಲವೂ ಇಂದ್ರಿಯಬಲವೂ ಕ್ರಮಕ್ರಮವಾಗಿ ತಗ್ಗುತ್ತ ಬಂದಿತು ಮೃತ್ಯುವಿನಿಂದಲೂ, ಮೊಸಳೆಯಿಂದಲೂ ಆಕರ್ಷಿಸಲ್ಪಡುತಿದ್ದ ಆ ಆನೆಗೆ, ತನ್ನ ಪ್ರಾಣದಲ್ಲಿ ಆಸೆಯು ತಪ್ಪಿಹೋಯಿತು ಜಲಜಂತುವಾದ ಮೊಸಳೆಯು ನೀರಿನಲ್ಲಿಯೇ ಇದ್ದುದರಿಂದ, ಅದಕ್ಕೆ ಮೇಲೆಮೇಲೆ ಉತ್ಸಾಹವೂ, ಬಲವೂ ಹೆಚುತ್ತಬಂದಿತು ಕೊನೆಕೊನೆಗೆ ಆ ಗಜೇಂದ್ರವು, ತನ್ನನ್ನು ಬಿಡಿಸಿಕೊಳ್ಳುವುದಕ್ಕೆ ಶಕ್ತಿಯಿಲ್ಲದೆ, ಜೀವದಾಸೆಯನ್ನು ಬಿಟ್ಟು,ಬಹುಕಾಲದವರೆಗೆ ಚಿಂತಾಕ್ರಾಂತವಾಗಿದ್ದು, ಕೊನೆಗೆ ಮನಸ್ಸಿನಲ್ಲಿ ಹೀಗೆಂದು ಯೋಚಿಸುವುದು. ‹‹ಆಹಾ!ನನಗೆ ಎಷ್ಟುಮಂದಿ ಬಂಧುಗಳಿದ್ದರೇನು? ನನ್ನ ಕಷ್ಟವನ್ನು ಯಾರೂ ಬಿಡಿಸಲಾರದೆ ಹೋದರು ಈ ನನ್ನ ಪರಿವಾರಗಳ ಕಣ್ಣಿದಿರಾಗಿಯೇ ನಾನು ಇಷ್ಟುಸಂಕಟಕ್ಕೆ ಗುರಿಯಾದೆನು ಇಷ್ಟುಮಂದಿಯಿಂದಲೇ ಸಾಧ್ಯವಿಲ್ಲದಿರುವಾಗ, ನನ್ನನ್ನು ಬಿಡಿಸಿಕೊಳ್ಳಬೇಕೆಂದರೆ ನನ್ನೊಬ್ಬನಿಂದ ಸಾಧ್ಯವೆ? ಈಗ;ನನಗೆ ದೈವವೇ ಪ್ರತಿಕೂಲವಾಗಿ ನನ್ನನ್ನು ಈ ಮೊಸಳೆಯೆಂಬ ಪಾಶದಲ್ಲಿ ಕಟ್ಟಿಹಾಕಿರುವುದು. ಆದೈವವೇ ನನ್ನನ್ನು ಬಿಡಿಸಬೇ

ಕಲ್ಲದೆ ನನ್ನಿಂದಾಗಲಿ, ಬೇರೆಯವರಿಂದಾಗಲಿ ಸಾಧ್ಯವೆ ? ಎಂದಿಗೂ ಸಾಧ್ಯವಿಲ್ಲ. ಇನ್ನು ಮೇಲೆ ಪ್ರಯತ್ನಪಟ್ಟರೂ ಫಲವಿಲ್ಲ. ಆದುದರಿಂದ ನನ್ನ ಪ್ರಯತ್ನಗಳೆಲ್ಲವನ್ನೂ ಬಿಟ್ಟು, ಅಪ್ಪೈವವನ್ನೇ ಮರೆಹೊಗುವೆನು ಪ್ರಚಂಡವೇಗವುಳ್ಳ ಮೃತ್ಯುವೆಂಬ ಮಹಾಸರ್ಪದ ಬಾಯಿಗೆ ಸಿಕ್ಕಿದವನನ್ನೂ ಯಾವನು ರಕ್ಷಿಸಬಲ್ಲನೋ, ಯಾವನಿಗಾಗಿ ಮೃತ್ಯುವೂ ಭಯಪಟ್ಟು ಓಡುತ್ತಿರುವುದೋ, ಆ ಪರಮೇಶ್ವರನನ್ನೇ ಶರಣುಹೊಂದುವೆನು. ಆತನನ್ನೇ ಧ್ಯಾನಿಸುವೆನು" ಎಂದು ನಿಶ್ಚಯಿಸಿಕೊಂಡಿತು ಇಲ್ಲಿಗೆ ಎರಡನೆಯ ಅಧ್ಯಾಯವು.

---

{ಗಜೇಂದ್ರನು ಭಗವಂತನನ್ನು ಸ್ತುತಿಸಿದುದು. ಭಗವಂತನು ಅವನನ್ನು ರಕ್ಷಿಸಿದುದು}

ಹೀಗೆ ಆ ಗಜೇಂದ್ರವು, ತನ್ನ ಬುದ್ಧಿಯಿಂದ ನಿಶ್ಚಯಿಸಿಕೊಂಡು ತನ್ನ ಮನಸ್ಸನ್ನು ಬೇರೆ ವಿಷಯದಲ್ಲಿ ಪ್ರವರ್ತಿಸದಂತೆ ಹೃದಯದಲ್ಲಿ ನೆಲೆಗೊಳಿಸಿ, ಪೂರ್ವಜನ್ಮದಲ್ಲಿ ತಾನು ಅಭ್ಯಸಿಸಿದ್ದ ಮಹಾಮಹಿಮೆಯುಳ್ಳ ಸ್ತೋತ್ರವನ್ನು ಜಪಿಸಲಾರಂಭಿಸಿದನು "ಓಂ! ಚೇತನಾಚೇತನರೂಪವಾದ ಈ ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳಿಗೆಲ್ಲಾ ಆದಿಕಾರಣನಾಗಿಯೂ, ಸರ್ವೇಶ್ವರನಾಗಿಯೂ ಷಾಡ್ಗುಣ್ಯಪರಿಪೂರ್ಣನಾಗಿಯೂ ಇರುವ ಭಗವಂತನಿಗೆ ನಮಸ್ಕಾರವು! ಈ ಪ್ರಪಂಚವೆಲ್ಲವೂ ಯಾವನಲ್ಲಿ ನೆಲೆಗೊಂಡಿರುವುದೋ, ಯಾವನು ತನ್ನ ಸ್ವರೂಪದಿಂದ ತಾನೇ ಇದನ್ನು ಸೃಷ್ಟಿಸಿ, ತಾನೇ ಈ ಪ್ರಪಂಚರೂಪದಿಂದ ಕಾಣಿಸುತ್ತಿರುವನೋ, ಯಾವನು ಸರ್ವಗತನಾಗಿದ್ದರೂ ತಾನು ಸೇರಿರುವ ಆ ಚೇತನಾಚೇತನಗಳಿಗಿಂತಲೂ ವಿಲಕ್ಷಣನಾಗಿ, ತನ್ನ ಸ್ಥಿತಿಗತಿಗಳಿಗೆ ತಾನೇ ಸ್ವತಂತ್ರನಾಗಿರುವನೋ, ಅಂತಹ ಪರಮಪುರುಷನನ್ನು ಶರಣುಹೊಂದುವೆನು ಆ ಭಗವಂತನು ತನ್ನ ಮಾಯಾಶಕ್ತಿಯಿಂದ ತನ್ನಲ್ಲಿತಾನೇ ದೇವಮನುಷ್ಯಾದಿಭೇದಗಳನ್ನು ಕಲ್ಪಿಸಿಕೊಂಡು ಪ್ರಪಂಚರೂಪವಾಗಿ ತೋರುತ್ತ, ಮತ್ತೊಮ್ಮೆ ನಾಮರೂಪಭೇದಗಳೊಂದೂ ಕಾಣದಂತೆ ಅದನ್ನು ತನ್ನಲ್ಲಿಯೇ ಮರೆಸಿಟ್ಟುಕೊಳ್ಳುವನು. ಹೀಗೆ

ಕಾರಣದಶೆಯಲ್ಲಿ ಸೂಕ್ಷ್ಮವಾಗಿಯೂ, ಕಾರ್ಯದಶೆಯಲ್ಲಿ ಸ್ಥೂಲವಾಗಿಯೂ, ಇರುವ ಈ ಪ್ರಪಂಚವನ್ನು ಆ ಎರಡು ಸ್ಥಿತಿಗಳಲ್ಲಿಯೂ ತನ್ನ ಜ್ಞಾನಾತಿಶಯದಿಂದ ಕಾಣಬಲ್ಲನು ತನಗೆ ತಾನೇ ಕಾರಣವೆನಿಸಿಕೊಂಡು, ಪ್ರಕೃತಿ ಪುರುಷರಿಬ್ಬರಿಗಿಂತಲೂ ವಿಲಕ್ಷಣನಾದ ಆ ಪರಮಪುರುಷನು ನನ್ನನ್ನು ರಕ್ಷಿಸಲಿ! ಎರಡು ಪರಾರ್ಧಕಾಲವನ್ನೊಳಕೊಂಡ ಒಂದೊಂದು ಕಲ್ಪದ ಕೊನೆಯಲ್ಲಿಯೂ, ಈ ಸ್ಥೂಲಪ್ರಪಂಚಕ್ಕೆ ಕಾರಣವೆನಿಸಿಕೊಂಡ ಪಂಚಭೂತಗಳೂ, ಆ ಪಂಚಭೂತಗಳಿಂದೇರ್ಪಟ್ಟ ಸಮಸ್ತಲೋಕಗಳೂ, ಆ ಲೋಕಗಳನ್ನು ರಕ್ಷಿಸತಕ್ಕ ಬ್ರಹ್ಮಾದಿಗಳೂ ಮೊತ್ತಕ್ಕೆ ನಾಶಹೊಂದಿದಮೇಲೆ,ಹೀಗೆಂದು ತಿಳಿಯುವುದಕ್ಕೂ ಇಷ್ಟೆಂದು ನಿರ್ಣಯಿಸುವುದಕ್ಕೂ ಸಾಧ್ಯವಲ್ಲದೆ ಅತ್ಯಂತಸೂಕ್ಷ್ಮವಾಗಿ, ತಮಸ್ಸುಮಾತ್ರವೇ ಉಳಿದಿದ್ದಾಗ, ಯಾವಸರ್ವೇಶ್ವರನು,ಆ ತಮಸ್ಸಿಗೂ ತಾನು ಅಂತರ್ಯಾಮಿಯಾಗಿ ನಿಯಮಿಸುತ್ತ,ಆಗಲೂ ಜ್ಞಾನಸಂಕೋಚವಿಲ್ಲದೆ ಅದನ್ನು ಮೀರಿ ಬೆಳಗುತ್ತಿರುವನೋ,ಆಪರಮಪುರುಷನು ನನಗೆ ರಕ್ಷಕನಾಗಿರಲಿ! ಸತ್ವಪ್ರಧಾನರಾದ ಮಹಾಯೋಗಿಗಳೂಕೂಡ ಯಾವನ ನಿಜಸ್ಥಿತಿಯನ್ನು ತಿಳಿಯಲಾರರೋ ಅಂತವನ ಸ್ಥಿತಿಯನ್ನು ತಿಳಿಯುವುದಕ್ಕಾಗಲಿ,ಅವನ ಗುಣಗಳನ್ನು ಬಾಯಿಂದ ಹೇಳುವುದಕ್ಕಾಗಲಿ ನಮ್ಮಂತಹ ಮೂಢಜನಗಳಿಗೆ ಸಾಧ್ಯವೆ? ಸಾಧಾರಣವಾಗಿ ನಾಟಕದಲ್ಲಿ ವೇಷಧಾರಿಗಳಾಗಿ ಬಂದವರ ನಿಜಸ್ವರೂಪವನ್ನು ತಿಳಿಯುವುದಕ್ಕೂ ಒಂದೊಂದುವೇಳೆ ಸಾಧ್ಯವಿಲ್ಲದೆ ಹೋಗುವುದು, ಹೀಗಿರುವಾಗ ಚರ್ಮಮಯವಾದ ದೃಷ್ಟಿಗೆ ಗೋಚರನಲ್ಲದ ಆ ಸರ್ವೇಶ್ವರನ ತತ್ವವನ್ನು ತಿಳಿಯುವುದಕ್ಕೆ,ಜ್ಞಾನಹೀನರಾದ ಸಂಸಾರಿಗಳು ಹೇಗೆತಾನೇ ಸಮರ್ಥರಾಗುವರು? ಇಂತಹ ಅಪ್ರಮೇಯಸ್ವರೂಪವುಳ್ಳ ಸರ್ವೇಶ್ವರನು ನನ್ನನ್ನು ಕಾಪಾಡಲಿ! ನಿತ್ಯಾನಂದಮಯನಾದ ಯಾವ ಪರಮಪುರುಷನ ಸ್ವರೂಪವನ್ನು ತಿಳಿಯಬೇಕೆಂಬುದಕ್ಕಾಗಿಯೇ, ಎಷ್ಟೋಮಹರ್ಷಿಗಳು ಸರ್ವಸಂಗಪರಿತ್ಯಾಗಮಾಡಿ, ಸಾಧುಗುಣವುಳ್ಳವರಾಗಿ, ಸಮಸ್ತಭೂತಗಳನ್ನೂ ತಮಗೆ ಸಮಾನವಾಗಿ ಭಾವಿಸುತ್ತ,ಸರ್ವಭೂತಹಿತಪರರಾಗಿದ್ದು,ಬೇರೊಬ್ಬರಿಂದ ಸಾಧಿಸುವುದಕ್ಕಾಗದ ಭಗವದುಪಾಸನವೆಂಬ ದೃಢವ್ರತವನ್ನು ಸಾಧಿಸುತ್ತಿರು

ವರೋ,ಆ ಪರಮಪುರುಷನನ್ನು ಬಿಟ್ಟು ಈಗ ನನಗೆ ಬೇರೆ ದಿಕ್ಕಿಲ್ಲವು. ಯಾವನು, ತನಗೆ ಬೇರೆ ಜೀವಗಳಂತೆ ಕರ್ಮಮೂಲಕವಾದ ಜನನಮರಣಗಳಾಗಲಿ, ನಾಮರೂಪಗಳಾಗಲಿ, ಗುಣದೋಷಗಳಾಗಲಿ,ಕಾರ್ಯಪ್ರವೃತ್ತಿಯಾಗಲಿ ಇಲ್ಲದಿದ್ದರೂ,ದುಷ್ಟನಿಗ್ರಹ ಶಿಷ್ಟಪರಿಪಾಲನಾರ್ಥವಾಗಿಯೇ ಆಗಾಗ ತನ್ನ ಸ್ವೇಚ್ಛೆಯಿಂದ ಅವತಾರಗಳನ್ನೆತ್ತಿ, ಲೋಕವನ್ನು ರಕ್ಷಿಸುತ್ತಿರುವನೋ, ಆ ಪರಮಪುರುಷನು ನನಗೆ ರಕ್ಷಕನಾಗಲಿ'ಬ್ರಹ್ಮಾದಿಗಳಿಗೂ ಪ್ರಭುವಾಗಿಯೂ,ಅನಂತ ಶಕ್ತಿಯುಳ್ಳವನಾಗಿಯೂ,ಕರ್ಮದಿಂದುಂಟಾದ ಶರೀರಭೇದಗಳಿಲ್ಲದವನಾಗಿಯೂ, ತನ್ನ ಸಂಕಲ್ಪದಿಂದಲೇ ಅನೇಕರೂಪಗಳನ್ನು ಧರಿಸತಕ್ಕವನಾಗಿಯೂ ಇರುವ ಅದ್ಭುತಶಕ್ತಿಯುಳ್ಳ ಪರಬ್ರಹ್ಮನಿಗೆ ನಮಸ್ಕಾರವು ತನಗೆತಾನೇಪ್ರಕಾಶಿಸತಕ್ಕವನಾಗಿಯೂ,ಸರ್ವಸಾಕ್ಷಿಯಾಗಿಯೂ, ಎಲ್ಲಕ್ಕೂ ಅಂತರ್ಯಾಮಿಯಾಗಿ ನಿಯಮಿಸತಕ್ಕವನಾಗಿಯೂ,ಸರ್ವಾಧಾರನಾಗಿಯೂ, ವಾಕ್ಕಿಗೂ, ಮನಸ್ಸಿಗೂ, ಸತ್ವಪ್ರಧಾನವಾದ ಚಿತ್ತಕ್ಕೂ ಅಗೋಚರನಾದ ಮಹಾಮಹಿಮೆಯುಳ್ಳವನಾಗಿಯೂ ಇರುವ ಪರಮಪುರುಷನಿಗೆ ನಮಸ್ಕಾರವು. ನಿಷ್ಕಾಮರಾದ ಜ್ಞಾನಿಗಳಿಗೆ ಮಾತ್ರ, ನಿವೃತ್ತಿಧರ್ಮದಿಂದ ಲಭಿಸತಕ್ಕವನಾಗಿಯೂ, ಮೋಕ್ಷಪ್ರದನಾಗಿಯೂ ಇರುವಭಗವಂತನಿಗೆ ನಮಸ್ಕಾರವು. ಹಸಿವು, ಬಾಯಾರಿಕೆ,ಮುಂತಾದ ಷಡೂರ್ಮಿಗಳಿಲ್ಲದವನಾಗಿಯೂ,ಸಾಧುಗಳಿಗೆ ಅನುಕೂಲನಾಗಿಯೂ,ದುಷ್ಟರಿಗೆ ಭಯಂಕರನಾಗಿಯೂ, ಅಜ್ಞಾನಿಗಳಿಗೆ ಅಗೋಚರನಾಗಿಯೂ, ಸತ್ವಾದಿಗುಣಗಳಿಗೆ ಆಧಾರನಾಗಿಯೂ ಇರುವ ಭಗವಂತನಿಗೆ ನಮಸ್ಕಾರವು, ಯಾವನು ಸತ್ವಾದಿಗುಣಗಳಿಗೆ ತಾನೇ ಆಧಾರನಾಗಿದ್ದರೂ,ಅದರಿಂದುಂಟಾಗುವ ದೋಷಕ್ಕೀಡಾಗದೆ ನಿರ್ವಿಕಾರನಾಗಿರುವನೋ, ಯಾವನು ಪಕ್ಷಪಾತವಿಲ್ಲದೆ ಸರ್ವಭೂತಗಳಿಗೂ ಸಮನಾಗಿರುವನೋ,ಯಾವನು ಜ್ಞಾನದ ಗಟ್ಟಿಯೆನಿಸಿಕೊಂಡಿರುವನೋ,ಅಂತಹ ಸರ್ವೇಶ್ವರನಿಗೆ ನಮಸ್ಕಾರವು.ಓ ಜಗದೀಶಾ'ನೀನು ಜೀವಶರೀರಕನು. ಸಮಸ್ತಪ್ರಾಣಿಗಳಿಗೂ ನೀನೇ ಪ್ರಭುವು!ಎಲ್ಲವನ್ನೂ ಸಾಕ್ಷಾತ್ಕರಿಸಬಲ್ಲವನು' ಸರ್ವನಿಯಾಮಕನು' ನಿನಗೆ ನೀನೇ ಕಾರಣವಲ್ಲದೆ ನಿನಗೆ ಬೇರೊಂದು ಕಾರಣವಸ್ತುವಿಲ್ಲ. ಸಮಸ್ತಲೋಕಗಳಿಗೂ ನೀನೇ

ಉಪಾದಾನಕಾರಣವಾಗಿರುವೆ. ಇಂತಹ ನಿನಗೆ ನಮಸ್ಕಾರವು ಓ ದೇವಾ! ನೀನು ಸರ್ವೇಂದ್ರಿಯಗಳನ್ನೂ, ಅವಕ್ಕೆ ಬೇಕಾದ ಶಬ್ದಾದಿವಿಷಯಗಳನ್ನೂ ಸರ್ವಕಾಲದಲ್ಲಿಯೂ ಸಾಕ್ಷಾತ್ಕರಿಸಬಲ್ಲವನು. ಸಂಶಯ, ವಿಪರೀತಜ್ಞಾನ, ಅನ್ಯಥಾಜ್ಞಾನಗಳೆಂಬ ಮನೋಧರ್ಮಗಳಿಗೂ ನೀನೇ ಕಾರಣನು! ಯಾವಾಗಲೂ ವಿಕಾರಹೊಂದುವ ಸ್ವಭಾವವುಳ್ಳುದಾಗಿಯೂ, ಛಾಯೆಯಂತೆ ನಿನ್ನನ್ನು ಬಿಟ್ಟು ಅಗಲಿಸುದಾಗಿಯೂ ಇರುವ ಪ್ರಕೃತಿಯು, ಅಚೇತನವಾದುದರಿಂದ, ಅದಕ್ಕೆ ಸಹಜವಾದ ಕಾರ್ಯಪ್ರವೃತ್ತಿಯಿಲ್ಲ ಹೀಗೆ ತನ್ನ ಸ್ವರೂಪದಿಂದಲೇ ಅದು ನೀನು ಪ್ರೇರಕನೆಂಬುದನ್ನು ತಿಳಿಸುವುದು ನೀನೇ ಸಮಸ್ತವನ್ನೂ ಪ್ರಕಾಶಗೊಳಿಸತಕ್ಕವನು. ಅಪ್ರಾಕೃತವಾದ ದಿವ್ಯಮಂಗಳವಿಗ್ರಹದಿಂದ ಕೂಡಿದವನು ನಿನ್ನ ರೂಪವು ಸಾಧುಗಳಾದ ಯೋಗಿಗಳಿಗೆಮಾತ್ರವೇ ಗೋಚರಿಸುವುದು ಇಂತಹ ನಿನಗೆ ನಮಸ್ಕಾರವು. ನೀನೇ ಎಲ್ಲಕ್ಕೂ ಕಾರಣವೇಹೊರತು ನಿನಗೆ ಬೇರೊಂದು ಕಾರಣವಸ್ತುವಿಲ್ಲ. ಲೋಕದಲ್ಲಿ ಕಾರಣವೆಂದು ಹೇಳಿಸಿಕೊಳ್ಳತಕ್ಕ ಎಲ್ಲಾವಸ್ತುಗಳೂ ನಿನ್ನ ಶರೀರಗಳು. ನೀನು ಪ್ರಪಂಚರೂಪದಿಂದ ವಿಸ್ತರಿಸುವಾಗ, ನಿನ್ನ ಶರೀರವಾಗಿದ್ದ ಚೇತನಾಚೇತನಗಳುಮಾತ್ರ ರೂಪಾಂತರಗಳನ್ನು ಹೊಂದುತ್ತಿರುವುವೇಹೊರತು, ನೀನು ವಿಕಾರವಿಲ್ಲದೆ ಒಂದೇಸ್ಥಿತಿಯಲ್ಲಿರತಕ್ಕವನು ಗಡಿಗೆಗೆ ಮಣ್ಣು ಹೇಗೋ ಹಾಗೆ ಚೇತನಾಚೇತನಗಳನ್ನು ಶರೀರವಾಗಿ ಉಳ್ಳ ನೀನೇ ಈಪ್ರಪಂಚಕ್ಕೆ ಉಪಾದಾನಕಾರಣವಾಗಿದ್ದರೂ, ಮಣ್ಣಿನ ಮುದ್ದೆಯೇ ಗಡಿಗೆಯ ಆಕಾರಕ್ಕೆ ತಿರುಗುವಂತೆ ನೀನೇ ಈ ರೂಪಾಂತರವನ್ನು ಹೊಂದತಕ್ಕವನಲ್ಲ ಇವರಿಂದ ನಿನ್ನ ಜಗತ್ಕಾರಣತ್ವವು ಅತ್ಯಾಶ್ಚರ್ಯವಾಗಿರುವುದು ಪ್ರವಾಹಗಳೆಲ್ಲವೂ ಸಮುದ್ರದಲ್ಲಿ ಹೋಗಿ ಬೀಳುವಂತೆ, ಶ್ರುತಿಸ್ಮೃತಿಪುರಾಣಾದಿಗಳೆಲ್ಲವೂ ನಿನ್ನನ್ನೇ ಮುಖ್ಯವಾಗಿ ಲಕ್ಷೀಕರಿಸುವುವು. ಮುಕ್ತಿಯನ್ನು ಹೊಂದಿಸತಕ್ಕವನೂ ನೀನೇ! ಮೋಕ್ಷಾರ್ಥಿಗಳು ಮುಕ್ತಿಯಲ್ಲಿ ಪಡೆಯತಕ್ಕ ವಸ್ತುವೂ ನೀನೇ! ಅಂತಹ ನಿನಗೆ ನಮಸ್ಕಾರವು. ಸತ್ವಾದಿಗುಣಮಯವಾದ ಪ್ರಕೃತಿಯೆಂಬ ಅರಣಿಕಾಷ್ಠದಲ್ಲಿ ಮರೆಸಿಕೊಂಡಿರುವ ಜೀವಸಮಷ್ಟಿಯೆಂಬ ಅಗ್ನಿಯನ್ನು, ಲೋಕಸಂಹಾರಕಾಲದಲ್ಲಿ ಪಾನಮಾಡತಕ್ಕವನೂ

ನೀನೇ!ಸೃಷ್ಟಿಕಾಲದಲ್ಲಿ ಸ್ವೇಚ್ಛೆಯಿಂದ ಅವುಗಳನ್ನು ಪ್ರಪಂಚರೂಪವಾಗಿ ಹೊರಕ್ಕೆ ಕಕ್ಕುವವನೂ ನೀನೇ! ನಿನ್ನ ಭಕ್ತರನ್ನು ನಿವೃತ್ತಿಮಾರ್ಗದಲ್ಲಿರಿಸಿ ಆಮೂಲಕವಾಗಿ ಅವರನ್ನು ಮುಕ್ತಿಗೆ ಸೇರಿಸತಕ್ಕವನೂ ನೀನೇ! ಜ್ಞಾನಾನಂದಮಯವಾದ ನಿನ್ನ ಸ್ವರೂಪವು ಮನಸ್ಸಿಗಾಗಲಿ, ವಾಕ್ಕಿಗಾಗಲಿ ಗೋಚರಿಸತಕ್ಕುದಲ್ಲ ಶಾಸ್ತ್ರಮರ್ಯಾದೆಗಳನ್ನು ದಾಟಿ ಮೋಕ್ಷವನ್ನು ಹೊಂದಿದ ಮುಕ್ತರಿಗೆಮಾತ್ರವೇ ನೀನು ಗೋಚರಿಸತಕ್ಕವನು. ಅಂತಹ ನಿನಗೆ ನಮಸ್ಕಾರವು. ನನ್ನಂತೆ ಸಂಸಾರಪಾಶದಲ್ಲಿ ಬಿಗಿಯಲ್ಪಟ್ಟು ಪಶುಪ್ರಾಯರಾದವರು, ತನ್ನ ಪಾದವನ್ನಾಶ್ರಯಿಸಿದಾಗ ಅವರನ್ನು ಆ ಕಟ್ಟಿನಿಂದ ಬಿಡಿಸತಕ್ಕವನಾಗಿಯೂ, ಎಂದೆಂದಿಗೂ ತಾನು ಆಕಟ್ಟಿನಲ್ಲಿ ಸಿಕ್ಕದವನಾಗಿಯೂ, ದಯಾಸಮುದ್ರನಾಗಿಯೂ, ಶಬ್ದಾದಿವಿಷಯಗಳಲ್ಲಿ ತೊಳಲುವ ಚೇತನರ ಮನಸ್ಸನ್ನು ತನ್ನಲ್ಲಿ ಸ್ಥಿರಗೊಳಿಸತಕ್ಕವನಾಗಿಯೂ, ತನ್ನ ಅಂಶಭೂತರಾದ ಜೀವಾತ್ಮಗಳಲ್ಲಿ (ಯೋಗಿಗಳಲ್ಲಿ) ಅಂತರಾತ್ಮನಾಗಿ ಆಯಾರೂಪದಿಂದಲೇ ತೋರತಕ್ಕವನಾಗಿಯೂ, ಅಪ್ರಮೇಯಸ್ವರೂಪಸ್ವಭಾವಗಳುಳ್ಳವನಾಗಿಯೂ ಇರುವ ಭಗವಂತನಿಗೆ ನಮಸ್ಕಾರವು ದೇವಾ! ದೇಹದಲ್ಲಿಯೂ, ಹೆಂಡಿರು, ಮಕ್ಕಳು ಮೊದಲಾದ ದೇಹಾನುಬಂಧಿಗಳಲ್ಲಿಯೂ, ಮಿತ್ರರಲ್ಲಿಯೂ, ಹಣದಲ್ಲಿಯೂ, ಪರಿಜನರಲ್ಲಿಯೂ ಅಭಿಮಾನವುಳ್ಳವರು ಎಷ್ಟೆಷ್ಟು ಶ್ರಮಪಟ್ಟರೂ ನಿನ್ನನ್ನುಪಡೆಯಲಾರರು ನೀನು ಶಬ್ದಾದಿವಿಷಯಗಳ ಸಂಗವನ್ನು ಬಿಟ್ಟವನು ಮುಕ್ತರಿಗೆ ಅವರವರ ಹೃದಯದಲ್ಲಿಯೇ ಗೋಚರಿಸತಕ್ಕವನು. ಜ್ಞಾನಸ್ವರೂಪನು ಷಾಡ್ಗುಣ್ಯಪರಿಪೂರ್ಣನು ಸರ್ವಸ್ವತಂತ್ರನು, ಇಂತಹ ನಿನಗೆ ನಮಸ್ಕಾರವು. ದೇವಾ ! ಧರ್ಮಾರ್ಥಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಯಾರು ಯಾವುದನ್ನು ಕೋರಿ ನಿನ್ನನ್ನು ಭಜಿಸಿದರೂ, ಅವರವರಿಗೆ ಆಯಾ ಇಷ್ಟಾರ್ಥಗಳನ್ನು ಸಲ್ಲಿಸತಕ್ಕವನೂ ನೀನೇ! ನಿನ್ನ ಭಕ್ತರು ತಾವಾಗಿ ಅಪೇಕ್ಷಿಸದಿದ್ದ ಕೋರಿಕೆಗಳನ್ನೂ ನೀನಾಗಿಯೇ ಕೊಟ್ಟುಪೋಷಿಸುವೆ!ಅವರಿಗೆ ಅಕ್ಷಯವಾದ ದೇಹವನ್ನು (ಮೋಕ್ಷವನ್ನು)ಕೊಟ್ಟು ಉದ್ಧರಿಸತಕ್ಕವನೂ ನೀನೇ!ಇಂತಹ ಅಪಾರಕರುಣೆಯುಳ್ಳ ನೀನು ನನಗೆ ಮೋಕ್ಷವನ್ನು ಕೊಡುವನಾಗು!

ದೇವಾ! ನಿನ್ನ ಪಾದಾಶ್ರಿತರು, ಯಾವ ಪ್ರಯೋಜನವನ್ನೂ ಅಪೇಕ್ಷಿಸದೆ, ನಿರತಿಶಯವಾದ ಮೋಕ್ಷೈಶ್ವರ್ಯಕ್ಕೂ ಆಸೆಪಡದೆ, ಅನವರತವೂ ನಿನ್ನ ಮಂಗಳಚರಿತ್ರಗಳನ್ನು ಹಾಡುತ್ತ, ನಿನ್ನ ಗುಣಾನುಭವವೆಂಬ ಆನಂದ ಸಮುದ್ರದಲ್ಲಿ ಮುಳುಗಿ ತೇಲುತ್ತಿರುವರು ಇಂತಹ ಅತ್ಯದ್ಭುತವಾದ ಮ ಹಿಮೆಯುಳ್ಳ ನಿನಗೆ ನಮಸ್ಕಾರವು.ಎಂದೆಂದಿಗೂ ನಾಶವಿಲ್ಲದವ ನಾಗಿಯೂ ಪರಬ್ರಹ್ಮಶಬ್ದವಾಚ್ಯನಾಗಿಯೂ, ಬ್ರಹ್ಮಾದಿಗಳಿಗೂ ಪ್ರಭುವಾಗಿಯೂ, ಅವ್ಯಕ್ತನಾಗಿಯೂ, ಭಕ್ತಿಯೋಗದಿಂದಮಾತ್ರವೇ ಗೋಚರಿಸತಕ್ಕವನಾ ಗಿಯೂ, ಅತಿದೂರದಲ್ಲಿರುವ ಸೂಕ್ಷ್ಮವಸ್ತುವಿನಂತೆ ಇಂದ್ರಿಯಜ್ಞಾನ ಕ್ಕೆ ಸಿಕ್ಕದವನಾಗಿಯೂ, (ಅಣುವಿಗಿಂತಲೂ ಅಣುವಾಗಿ, ಮಹತ್ತಿಗಿಂತ ಲೂ ಮಹತ್ತಾಗಿ ಬಹುದೂರದಲ್ಲಿರತಕ್ಕವನಾಗಿಯೂ) ಆದಿಪುರುಷನಾಗಿ ಯೂ, ಸರ್ವತ್ರಪರಿಪೂರ್ಣನಾಗಿಯೂ ಇರುವ ಭಗವಂತನನ್ನು ನಮಸ್ಕರಿ ಸುವೆನು ಯಾವನ ಅತಿಸೂಕ್ಷ್ಮವಾದ ಕಲಾಮಾತ್ರದಿಂದಲೇ ಬ್ರಹ್ಮಾದಿ ದೇವತೆಗಳೂ,ವೇದಗಳೂ,ಚರಾಚರಾತ್ಮಕವಾದ ಸಮಸ್ತಲೋಕಗಳೂ,ಬೇರೆ ಬೇರೆ ನಾಮರೂಪವಿಭಾಗಗಳಿಂದ ತೋರುತ್ತಿರುವುವೋ, ಆ ಭಗವಂತನಿಗೆನ ಮಸ್ಕಾರವು ಅಗ್ನಿಯಿಂದ ಜ್ವಾಲೆಗಳೂ,ಸೂರ್ಯನಿಂದ ಕಿರಣಗಳೂ,ಅದರ ದರ ಅಂಶರೂಪವಾಗಿ ಹೊರಟು, ಕೊನೆಗೆ ಅಲ್ಲಿಯೇ ಲಯಹೊಂದುವಂತೆ, ಬುದ್ಧಿ, ಮನಸ್ಸು, ಇಂದ್ರಿಯಗಳು, ದೇವಾದಿಶರೀರಗಳು, ಮುಂತಾಗಿ ಗು ಣಪರಿಣಾಮರೂಪವಾದ ಪ್ರಪಂಚವೆಲ್ಲವೂ ಯಾವನ ಅಂಶರೂಪವಾಗಿ ಹುಟ್ಟಿ, ಯಾವನಲ್ಲಿಯೇ ಲಯಹೊಂದುತ್ತಿರುವುವೋ ಅಂತಹ ಭಗವಂತನಿಗೆ ನಮಸ್ಕಾರವು.ಇದಲ್ಲವೇ ಆಶ್ಚರ್ಯವು! ಆಪರಮಪುರುಷನುದೇವನಲ್ಲ! ಅಸುರನೂ ಅಲ್ಲ! ಮನುಷ್ಯನೂ ಅಲ್ಲ! ತಿರ್ಯಕ್ಕೂ ಅಲ್ಲ! ಹೆಣ್ಣೂ ಅಲ್ಲ! ಗಂಡೂಅಲ್ಲ! ನಪುಂಸಕನೂ! ಅಲ್ಲ! ಪ್ರಾಣವುಳ್ಳ ಇತರಜಂತುವೂ ಅಲ್ಲ! ಗುಣಕರ್ಮಗಳ ಸಂಬಂಧವಿಲ್ಲದುದರಿಂದ, ಅಚೇತನವರ್ಗಗಳಲ್ಲಿಯಾಗಲಿ, ಚೇತನವರ್ಗಗಳಲ್ಲಿ ಯಾಗಲಿ ಸೇರಿದವನಲ್ಲ! ಹೀಗೆ ಇವೆಲ್ಲಕ್ಕಿಂತಲೂ ವಿಲಕ್ಷಣನಾಗಿ, ಇವೆಲ್ಲವು ಗಳಲ್ಲಿಯೂ ವ್ಯಾಪಿಸಿ, ಅವೆಲ್ಲವೂ ತಾನೇ ಎಂಬಂತೆ ತೋರುತ್ತಿರುವ ಆ ಭಗ ವಂತನು ಸರ್ವೋತ್ಕೃಷ್ಟನಾಗಿರಲಿ!(ಆತನು ಮೋಕ್ಷವಿರೋಧಿಗಳಾದ ನನ್ನ

ಪಾಪಗಳೆಲ್ಲವನ್ನೂ ನೀಗಿಸಲಿ) ಆ ಭಗವಂತನು ಈಗ ನನ್ನನ್ನು ಈಮೊಸಳೆ
ಯ ಬಾಯಿಂದ ಬಿಡಿಸಿದಮಾತ್ರಕ್ಕೆ ನಾನು ಮುಕ್ತನಾಗಲಿಲ್ಲ ಈ ಅಪಾ
ಯದಿಂದ ತಪ್ಪಿಸಿಕೊಂಡು ಹೀಗೆಯೇ ಆನೆಯ ಜನ್ಮದಲ್ಲಿ ಬದುಕಿರಬೇಕೆಂ
ದೂ ನಾನು ಆಸೆಪಡತಕ್ಕವನಲ್ಲ ಒಳಗೂ, ಹೊರಗೂ ನನ್ನ ಸ್ವರೂಪವ
ನ್ನು ಮರೆಸಿಬಿಟ್ಟುಕೊಂಡು, ಅಹಂಕಾರ, ಮಮಕಾರಗಳನ್ನು ಹೆಚ್ಚಿಸುತ್ತಿರುವ
ಈ ಆನೆಯ ಜನ್ಮದಿಂದ ನಾನು ಪಡೆಯಬೇಕಾದ ಪುರುಷಾರ್ಥವೇನಿರುವು
ದು? ಪ್ರಕೃತಿಸಂಬಂಧದಿಂದ, ಹೀಗೆ ಆತ್ಮಸ್ವರೂಪವನ್ನು ಮರೆಸಿಬಿಡ
ತಕ್ಕ ಕರ್ಮಗಳಿಂದ ಮುಕ್ತನಾಗಬೇಕೆಂಬುದೇ ಈಗ ನನ್ನ ಕೋರಿಕೆ! ಕರ್ಮ
ಪಾಶದಿಂದ ಬಿಡುಗಡೆ ಹೊಂದುವುದೇ ಮೋಕ್ಷವೇ ಹೊರತು, ಈ ಮೊಸಳೆ
ಯಬಾಯಿಂದ ತಪ್ಪಿಬರುವುದು ಮುಕ್ತಿಯಲ್ಲ ಆ ಮುಕ್ತಿಯನ್ನು ಪಡೆದಾ
ಗಲೇ ಎಂದೆಂದಿಗೂ ಚ್ಯುತಿಯಿಲ್ಲದ ಮಹಾನಂದವನ್ನನುಭವಿಸಬಹುದು ಆ
ದುದರಿಂದ ಆ ಮುಕ್ತಿಯನ್ನು ಬಯಸಿಯೇ ನಾನು ಭಗವಂತನನ್ನು ಪ್ರಾರ್ಥಿ
ಸುವೆನು ಸಮಸ್ತಲೋಕಗಳನ್ನೂ ಸೃಷ್ಟಿಸತಕ್ಕವನಾಗಿಯೂ, ಪ್ರಪಂಚ
ಶರೀರಕನಾಗಿಯೂ, ಆ ಪ್ರಪಂಚಕ್ಕಿಂತಲೂ ವಿಲಕ್ಷಣನಾಗಿಯೂ, ಆ
ಪ್ರಪಂಚವೆಲ್ಲವನ್ನೂ ತಿಳಿಯತಕ್ಕವನಾಗಿಯೂ, ಆ ಸಮಸ್ತಪ್ರಪಂಚಕ್ಕೂ
ಪುರುಷಾರ್ಥಸ್ವರೂಪನಾಗಿಯೂ, ಆ ಪ್ರಪಂಚದಲ್ಲಿ ಒಳಹೊಕ್ಕು ಧರಿಸತ
ಕ್ಕವನಾಗಿಯೂ, ಕರ್ಮಸಂಬಂಧವಾದ ಜನನವಿಲ್ಲದವನಾಗಿಯೂ,
ಕಲ್ಯಾಣಗುಣಪರಿಪೂರ್ಣನಾಗಿಯೂ. ಚೇತನರಿಗೆ ಉತ್ತಮಗತಿಯಾಗಿ
ಯೂ, ಇರುವ ಆ ಪರಮಪುರುಷನನ್ನು ನಮಸ್ಕರಿಸುವೆನು. ಆ ಭಗವಂತನ
ನ್ನು ಪ್ರಸನ್ನನಾಗಿ ಮಾಡಿಕೊಳ್ಳುವುದಕ್ಕೆ ಈ ನಮಸ್ಕಾರವೊಂದನ್ನು ಹೊ
ರತು ನಾನು ಬೇರೆ ಯಾವ ಉಪಾಯವನ್ನೂ ಕಾಣೆನು ಯೋಗಬಲದಿಂ
ದ ತಮ್ಮ ಕರ್ಮಪಾಶವನ್ನು ಹರಿದ ಯೋಗೀಶ್ವರರುಮಾತ್ರ ಯೋಗ
ಶುದ್ಧವಾದ ತಮ್ಮ ಹೃದಯದಲ್ಲಿ ಅವನನ್ನು ಸಾಕ್ಷಾತ್ಕರಿಸಬಲ್ಲರು
ಆ ಶಕ್ತಿಯಿಲ್ಲದ ನಾನು ಯೋಗೇಶ್ವರನಾದ ಆ ಪರಮಪುರುಷನನ್ನು ಈ
ನಮಸ್ಕಾರಮಾತ್ರದಿಂದಲೇ ಆರಾಧಿಸುವೆನು ಓ ಜಗದೀಶ್ವರಾ ! ಸೃಷ್ಟಿ
ಸ್ಥಿತಿಸಂಹಾರಗಳೆಂಬ ಮೂರುವಿಧವಾದ ನಿನ್ನ ಶಕ್ತಿಯ ವೇಗವನ್ನು ಯಾ

ರಿಂದಲೂ ತಡೆಯಲಸಾಧ್ಯವು ನೀನು ಅಘಟಿತಘಟನಾಸಮರ್ಥನು.
ಮನುಷ್ಯರಿಗೆ ಉಂಟಾಗುವ ಸಂಶಯ,ವಿಪರ್ಯಯ,ಮೊದಲಾದ ಬುದ್ಧಿಗು
ಣಗಳೆಲ್ಲವೂ ನಿನ್ನಿಂದಲೇ ಏರ್ಪಡುವುವು. ನೀನು ಆಶ್ರಿತರನ್ನು ರಕ್ಷಿಸತ
ಕ್ಕವನು ಅಪಾರಶಕ್ತಿಯುಳ್ಳವನ್ನು ಇಂದ್ರಿಯವನ್ನು. ಜಯಸಲಾರದವ
ರು ನಿನ್ನ ನಿಜಸ್ಥಿತಿಯನ್ನು ತಿಳಿಯಲಾರರು ಇಂತಹ ವಿಚಿತ್ರಶಕ್ತಿಯುಳ್ಳ
ನಿನಗೆ ನಮಸ್ಕಾರವು ನನ್ನಂತೆ ಈಪ್ರಪಂಚದಲ್ಲಿರುವ ಜನವೆಲ್ಲವೂ ಯಾವನ
ಮಾಯೆಯಿಂದ ದೇಹವನ್ನೇ ಆತ್ಮವೆಂದು ಭ್ರಮಿಸಿ, ಆತ್ಮಸ್ವರೂಪವನ್ನು
ಕೆಡಿಸಿಕೊಂಡು, ಆಸ್ವರೂಪಹಾನಿಯನ್ನೂ ತಾವು ತಿಳಿಯಲಾರದಿರುವೆವೋ,
ಯಾವನು ಅಪ್ರಮೇಯಪ್ರಭಾವವುಳ್ಳವನೋ, ಅಂತಹ ಭಗವಂತನನ್ನು
ಮರೆಹುಗುವೆನು" ಎಂದನು

ಪರೀಕ್ಷಿದ್ರಾಜಾ ! ಹೀಗೆ ಗಜೇಂದ್ರನು ಭಕ್ತಿಯುಕ್ತನಾಗಿ, ಬ್ರಹ್ಮ
ನೇ ಮೊದಲಾದ ಬೇರೆ ಯಾವದೇವತೆಗಳಲ್ಲಿಯೂ ಇಲ್ಲದ ವಿಶೇಷಗುಣಗಳ
ನ್ನು ವರ್ಣಿಸಿ ಸ್ತುತಿಸುತ್ತಿರುವಾಗ, ಆ ಸ್ತುತಿವಾಕ್ಯಗಳಲ್ಲಿ, ತಮ್ಮ ಚಿಹ್ನಗ
ಳಾಗಲಿ, ತಮ್ಮ ನಾಮರೂಪವರ್ಣನೆಗಳಾಗಲಿ, ಯಾವುದೂ ಇಲ್ಲದುದರಿಂ
ದ, ಬ್ರಹ್ಮರುದ್ರಾದಿದೇವತೆಗಳಲ್ಲಿ ಯಾರೂ ಆ ಗಜೇಂದ್ರನ ಕಷ್ಟವನ್ನು
ಬಿಡಿಸುವುದಕ್ಕೆ ಮುಂದೆಬಾರದೆ ತಟಸ್ಥರಾಗಿದ್ದರು. ಆ ಗಜೇಂದ್ರನು ವ
ರ್ಣಿಸಿದ ಅಸಾಧಾರಣಗುಣಗಳೆಲ್ಲವೂ ತನ್ನಲ್ಲಿಮಾತ್ರವೇ ಇದ್ದುದನ್ನು
ನೋಡಿ, ಶ್ರೀಮನ್ನಾರಾಯಣನೇ ಸಾಕ್ಷಾತ್ತಾಗಿ ಬರಬೇಕಾಯಿತು ಆ ಗ
ಜೇಂದ್ರನು ಮೊಸಳೆಯ ಬಾಯಿಗೆ ಸಿಕ್ಕಿ ಸಂಕಟಪಡುತ್ತಿರುವುದನ್ನು
ನೋಡಿ,ಸರ್ವಾಂತರ್ಯಾಮಿಯಾದ,ಭಗವಂತನು,ಅವನ ಸ್ತುತಿವಾಕ್ಯಗಳಿಗೆ
ಸಂತೋಷಪಟ್ಟು, ವೇದಸ್ವರೂಪಿಯಾದ ಗರುಡನನ್ನೇರಿ, ಕೈಯಲ್ಲಿ ಚಕ್ರಾ
ಯುಧವನ್ನು ಹಿಡಿದು, ಅನೇಕದೇವತೆಗಳಿಂದ ಸ್ತುತಿಸಲ್ಪಡುತ್ತ ಆ ಗಜೇಂ
ದ್ರನಿದ್ದ ಸರೋವರದಬಳಿಗೆ ಬಂದನು. ಅಲ್ಲಿ ಮೊಸಳೆಬಾಯಿಗೆ ಸಿಕ್ಕಿಬಿ
ದ್ದ ಗಜೇಂದ್ರನು, ಆಕಾಶದಲ್ಲಿ ಗರುಡಾರೂಢನಾಗಿ ಕೈಯಲ್ಲಿ ಚಕ್ರಾ
ಯುಧವನ್ನು ಹಿಡಿದು, ಬರುತ್ತಿರುವ ಭಗವಂತನನ್ನು ಕಂಡೊಡನೆ,
ಯೇ, ಆ ಕೊಳದಲ್ಲಿದ್ದ ಒಂದಾನೊಂದು ಕಮಲವನ್ನು ತನ್ನ ಸುಂಡಿಲಿನಿಂ



1437. ಶ್ರೀಮನ್ನಾರಾಯಣನು ಗಜೇಂದ್ರನಿಗೆ ಪ್ರತ್ಯಕ್ಷನಾಗಿ ಮೊಸಳೆಯನ್ನು ಭೇದಿಸಿದುದು.

ದ ಮೇಲಕ್ಕೆತ್ತಿ ಹಿಡಿದು, "ಓ ನಾರಾಯಣಾ! ಓ ಲೋಕಗುರೂ! ಓ ಭಗವಂತಾ! ನಿನಗೆ ನಮಸ್ಕಾರವು" ಎಂದು ಗದ್ಗದಸ್ವರದಿಂದ ಪ್ರಯಾ ಸಪಟ್ಟು ಕೂಗಿಕೊಂಡನು ಹೀಗೆ ಅತ್ಯಂತದುಃಖಿತನಾಗಿ ದೈನ್ಯದಿಂದ ಮೊ ರೆಯಿಡುವ ಆ ಆನೆಯನ್ನು ಕಂಡೊಡನೆ, ದಯಾಸಮುದ್ರನಾದ ಭಗವಂತ ನು, ಥಟ್ಟನೆ ಗರುಡನ ಬೆನ್ನಿನಿಂದಹಾರಿ, ವೇಗದಿಂದ ಕೆಳಕ್ಕಿಳಿದು, ಆಗಜೇಂ ದ್ರನನ್ನು ಸಮೀಪಿಸಿ, ಸಮಸ್ತದೇವತೆಗಳೂ ಆಶ್ಚರ್ಯದಿಂದ ನೋಡುತ್ತಿ ರುವಹಾಗೆಯೇ ತನ್ನ ಚಕ್ರಾಯಧದಿಂದ ಅ ಮೊಸಳೆಯ ಕಂಠವನ್ನು ಕ ತ್ತರಿಸಿ ಬಿಟ್ಟನು ಗಜೇಂದ್ರನನ್ನು ಆ ಮಡುವಿನಿಂದ ಮೇಲಕ್ಕೆ ಕರೆತಂದು ಸಮಾಧಾನಪಡಿಸಿದನು ಇಲ್ಲಿಗೆ ಮೂರನೆಯ ಅಧ್ಯಾಯವು

---

### ಆನೆಮೊಸಳೆಗಳ ಪೂರ್ವವೃತ್ತಾಂತವು.

ಓ ಪರೀಕ್ಷಿದ್ರಾಜಾ! ಕೇಳು! ಆಗ ದೇವತೆಗಳೂ, ಋಷಿಗ ಳೂ, ಗಂಧರ್ವರೂ, ಬ್ರಹ್ಮರುದ್ರರನ್ನು ಮುಂದಿಟ್ಟುಕೊಂಡು ಭಗವಂತನ ಈ ಅದ್ಭುತಕಾರ್ಯವನ್ನು ಕೊಂಡಾಡುತ್ತ, ಪುಷ್ಪವರ್ಷವನ್ನು ಕರೆದರು. ದೇವದುಂದುಭಿಗಳು ಮೊಳಗಿದುವು ಗಂಧರ್ವರು ಅಪ್ಸರಸ್ಸುಗಳೊಡನೆ ಗಾನನರ್ತನಗಳನ್ನು ಮಾಡುತಿದ್ದರು ಓ ರಾಜೇಂದ್ರಾ! ಭಗವಂತನಿಂದ ರೂ, ಭಗವಂತನನ್ನು ಸ್ತುತಿಸುತಿದ್ದರು. ಓ ರಾಜೇಂದ್ರಾ! ಭಗವಂತನಿಂದ ಖಂಡಿಸಲ್ಪಟ್ಟ ಅ ಮೊಸಳೆಗೆ,ಒಡನೆಯೇ ಅತ್ಯಾಶ್ಚರ್ಯಕರವಾದ ಗಂಧರ್ವ ರೂಪವುಂಟಾಯಿತು ಇದಕ್ಕೆ ಕಾರಣವಾದಪೂರ್ವವೃತ್ತಾಂತವನ್ನು ತಿಳಿಸು ವೆನು ಕೇಳು ಪೂರ್ವದಲ್ಲಿ ಹೂಹೂ ಎಂಬ ಗಂಧರ್ವನೊಬ್ಬನಿದ್ದನು ಆ ಗಂಧರ್ವನು ದೇವಲಮಹಾಮುನಿಯ ಶಾಪದಿಂದ ಹೀಗೆ ಮೊಸಳೆಯಾಗಿ ಹುಟ್ಟಿದನು ಆ ಶಾಪಕ್ಕೆ ಈಗ ವಿಮೋಚನಕಾಲವು ಬಂದುದರಿಂದಲೇ ಅವ ನು ತನ್ನ ಪೂರ್ವಾಕೃತಿಯನ್ನು ಹೊಂದಿದನು. ಹೀಗೆ ಶಾಪವಿಮುಕ್ತನಾದ ಆಗಂಧರ್ವನು,ಪುಣ್ಯಶ್ಲೋಕನಾದ ಭಗವಂತನಮುಂದೆ ನಿಂತು ಅವನ ಯಶ ಸ್ಸನ್ನೂ, ಗುಣವನ್ನೂ ಗಾನಮಾಡತೊಡಗಿದನು. ಭಗವಂತನು ಆ ಗಾ ನಕ್ಕಾಗಿ ಸಂತೋಷಪಟ್ಟು ಅವನನ್ನನುಗ್ರಹಿಸಿದನು. ಆ ಗಂಧರ್ವನು ಪಾಪ

ನಿವೃತ್ತನಾಗಿ, ಭಗವಂತನಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ,ಸಮಸ್ತ ಜನವೂ ನೋಡುತಿದ್ದಹಾಗೆಯೇ ತನ್ನ ಲೋಕಕ್ಕೆ ಹೋದನು ಇತ್ತಲಾಗಿ ಗಜೇಂದ್ರನಿಗೂಕೂಡ ಭಗವಂತನ ಹಸ್ತಸ್ಪರ್ಶದಿಂದ ಅವನ ಅಜ್ಞಾನ ವೆಲ್ಲವೂ ನೀಗಿ,ಅವನಿಗೆ ನಾಲ್ಕುಭುಜಗಳೂ,ಮೈಮೇಲೆ ಪೀತಾಂಬರವೂ ಕಾ ಣಿಸಿಕೊಂಡುವು ಕಾಡಾನೆಗೆ ಈವಿಧವಾದ ಭಗವತ್ಸಾರೂಪ್ಯವುಂಟಾಗು ವುದಕ್ಕೂ ಕಾರಣವನ್ನು ತಿಳಿಸುವೆನು ಕೇಳು ಇವನು ಪೂರ್ವಜನ್ಮದಲ್ಲಿ ಇಂ ದ್ರದ್ಯುಮ್ನನೆಂಬ ಪ್ರಸಿದ್ಧರಾಜನಾಗಿ ಪಾಂಡ್ಯದೇಶವನ್ನಾಳುತಿದ್ದನು ಆಗ ಅವನು ಕೇವಲವಿಷ್ಣುಭಕ್ತಿಪರಾಯಣನಾಗಿ, ವಿಷ್ಣುಭಜನೆಯನ್ನೇ ವ್ರತ ವಾಗಿ ಹಿಡಿದು, ಜಟಾಧರನಾಗಿ ಮಲಯಪರ್ವತದ ತಪ್ಪಲಲ್ಲಿ ಆಶ್ರ ಮವನ್ನು ಮಾಡಿಕೊಂಡಿದ್ದನು ಈ ರಾಜನು ಒಂದಾನೊಂದುಕಾಲದಲ್ಲಿ ಭಗವದಾರಾಧನವನ್ನು ಮಾಡತೊಡಗಿ ಅದರಲ್ಲಿಯೇ ನಟ್ಟಮನಸ್ಸುಳ್ಳ ವನಾಗಿ ಮೌನದೊಡನೆ ಪೂಜೆಯನ್ನು ಮಾಡುತಿದ್ದನು ಈ ಸಮಯದಲ್ಲಿ ಮಹಾಯಶಸ್ವಿಯಾದ ಅಗಸ್ತ್ಯಮುನಿಯು ತನ್ನ ಶಿಷ್ಯರೊಡಗೂಡಿ ಆ ಆಶ್ರಮಕ್ಕೆ ಬಂದನು ಆ ಮಹರ್ಷಿಯನ್ನು ನೋಡಿಯೂ ಇಂ ದ್ರದ್ಯುಮ್ನನು, ಅವನಿಗೆ ಅರ್ಘ್ಯಪಾದ್ಯಾದಿಸತ್ಕಾರಗಳನ್ನು ಮಾಡದೆ, ಆ ಪೂಜಾಕಾರ್ಯದಲ್ಲಿಯೇ ಇದ್ದುಬಿಟ್ಟನು ಆಗ ಅಗಸ್ತ್ಯನು ಕೋ ಪಾವಿಷ್ಟನಾಗಿ ಹೀಗೆಂದು ಶಪಿಸುವನು "ಆಹಾ! ದುರಾತ್ಮನಾದ ಈ ರಾಜನು, ಮನೆಗೆ ಬಂದ ಬ್ರಾಹ್ಮಣರನ್ನೂ ಅವಮಾನಪಡಿಸುತ್ತಿರುವನು! ಆದುದರಿಂದ ಇವನ ಮನಸ್ಸು ಅಜ್ಞಾನದಲ್ಲಿಯೇ ಮುಳುಗಿರಲಿ! ಇವನು ಆನೆಯಂತೆ ಮತ್ತನಾಗಿ ನಮ್ಮನ್ನು ನಿರಾಕರಿಸಿದುದರಿಂದ, ಆನೆಯ ಜ ನ್ಮವನ್ನೇ ಹೊಂದಲಿ" ಎಂದು ಶಪಿಸಿದನು ಹೀಗೆಂದು ಶಪಿಸಿ, ಅಗಸ್ತ್ಯನು ತನ್ನ ಶಿಷ್ಯರೊಡನೆ ಆ ಸ್ಥಳವನ್ನು ಬಿಟ್ಟು ಹೊರಟುಹೋದಮೇಲೆ, ಇಂ ದ್ರದ್ಯುಮ್ನನು, ತನ್ನ ತಪ್ಪಿಗಾಗಿ ಪಶ್ಚಾತ್ತಾಪಪಡುತ್ತ, ಆ ಋಷಿಶಾಪಕ್ಕೆ ತನ್ನ ಪ್ರಾರಬ್ಧಕರ್ಮವೇ ಕಾರಣವೆಂದೂ,ಅದನ್ನು ತಾನು ಅನುಭವಿಸಿಯೇ ತೀರಿಸಬೇಕೆಂದೂ ನಿಶ್ಚಯಿಸಿಕೊಂಡನು. ಒಡನೆಯೇ ಅವನಿಗೆ ಆನೆಯ ಜ ನ್ಮವುಂಟಾಯಿತು ಪೂರ್ವಸ್ಮರಣವೆಲ್ಲವೂ ಮರೆತುಹೋಯಿತು. ಆದರೇ

ನು ?! ಅವನು ಗಜರೂಪದಲ್ಲಿದ್ದರೂ, ಪೂರ್ವದಲ್ಲಿ ತಾನು ಮಾಡಿದ ಹರಿಭ
ಜನೆಯ ಪ್ರಭಾವದಿಂದ, ಕೊನೆಗಾಲಕ್ಕೂ ಅವನಿಗೆ ಪರಮಾತ್ಮಸ್ಮರಣೆ ಉಂ
ಟಾಗಿ, ಭಗವಂತನು ಅವನಿಗೆ ಪ್ರತ್ಯಕ್ಷನಾದನು ಓ ಪರೀಕ್ಷಿದ್ರಾ
ಜಾ ! ಹೀಗೆ ಭಗವಂತನು ಆ ಗಜೇಂದ್ರನನ್ನು ಕಷ್ಟದಿಂದ ಬಿಡಿಸಿದುದಲ್ಲದೆ
ಆತನನ್ನು ತನ್ನ ಪಾರ್ಷದಗಣದಲ್ಲಿ ಸೇರಿಸಿಕೊಂಡನು ಗಂಧರ್ವರೂ, ಸಿ
ದ್ಧರೂ, ದೇವತೆಗಳೂ ಆ ಭಗವಂತನ ಅದ್ಭುತಕಾರ್ಯವನ್ನು ಕೊಂಡಾಡು
ತ್ತಿದ್ದರು ವಿಷ್ಣುವು ತನ್ನ ಭಕ್ತವರ್ಗದಲ್ಲಿ ಸೇರಿದ ಆ ಗಜೇಂದ್ರನನ್ನೂ ಕರೆ
ದುಕೊಂಡು ಗರುಡಾರೂಢವಾಗಿ, ತನ್ನ ಸ್ಥಾನವನ್ನು ಸೇರಿದನು ಓ ಪರೀಕ್ಷಿ
ದ್ರಾಜಾ ! ನಿನ್ನ ಕೋರಿಕೆಯಂತೆ ಭಗವಂತನ ಪ್ರಭಾವವನ್ನು ತಿಳಿಸತಕ್ಕ
ಗಜೇಂದ್ರಮೋಕ್ಷಣಕಥೆಯನ್ನು ವಿವರಿಸಿ ತಿಳಿಸಿರುವೆನು ಇದನ್ನು ಕೇಳಿದ
ಮಾತ್ರಕ್ಕೆ ಜನರು ಪುಣ್ಯಭಾಗಿಗಳಾಗಿ ಸದ್ಗತಿಯನ್ನು ಹೊಂದುವರು
ಉತ್ತಮವಾದ ಯಶಸ್ಸಿಗೂ ಪಾತ್ರರಾಗುವರು. ಇದನ್ನು ಕೇಳುವುದರಿಂ
ದ ಕಲಿಕಲ್ಮಷವೆಲ್ಲವೂ ನೀಗುವುದು ಇದು ದುಸ್ಸ್ವಪ್ನದೋಷಗಳನ್ನು ನಾ
ಶಮಾಡುವುದರಿಂದ, ಪ್ರಾತಃಕಾಲದಲ್ಲಿ ಹಾಸಿಗೆಯಿಂದೆದ್ದ ಕೂಡ
ಲೆ, ಪರಿಶುದ್ಧರಾಗಿ ಈ ಚರಿತ್ರವನ್ನು ಪಠಿಸಬೇಕು ಇದರ ಮಹಿಮೆಯ
ನ್ನು ಕುರಿತು ಭಗವಂತನು ತಾನಾಗಿಯೇ ಆ ಗಜೇಂದ್ರನೊಡನೆ ಹೀಗೆಂದು
ಹೇಳಿರುವನು.

ಓ ಗಜೇಂದ್ರಾ ! ಲೋಕದಲ್ಲಿ ಯಾವ ಪುರುಷನು ನನ್ನನ್ನೂ
ನಿನ್ನನ್ನೂ, ಈ ಸರೋವರವನ್ನೂ, ಈ ಅರಣ್ಯವನ್ನೂ, ಇಲ್ಲಿನ ಪರ್ವತಗು
ಹೆಗಳನ್ನೂ ಇಲ್ಲಿನ ಬಿದಿರುಮೆಳೆಗಳನ್ನೂ, ಪೊದೆಗಳನ್ನೂ, ಮಂದಾರಾದಿ
ವೃಕ್ಷಗಳನ್ನೂ, ತ್ರಿಮೂರ್ತಿಗಳಿಗೆ ನೆಲೆಯಾದ ಇಲ್ಲಿನ ಪರ್ವತಶಿಖರಗಳನ್ನೂ
ನನಗೆ ಪರಮಪ್ರಿಯವಾದ ಕ್ಷೀರಸಮುದ್ರವನ್ನೂ, ಅದರೊಳಗಿನ ಶ್ವೇತ
ದ್ವೀಪವನ್ನೂ, ನನಗೆ ಅಸಾಧಾರಣಚಿಹ್ನಗಳಾದ ಶ್ರೀವತ್ಸ, ಕೌಸ್ತುಭ,
ವನಮಾಲಿಕೆಗಳನ್ನೂ, ಕೌಮೋದಕಿಯೆಂಬ ನನ್ನ ಗದೆಯನ್ನೂ, ಪಾಂಚ
ಜನ್ಯ ಸುದರ್ಶನಗಳೆಂಬ ನನ್ನ ಶಂಖಚಕ್ರಗಳನ್ನೂ, ನನಗೆ ವಾಹನವಾದ
ಗರುತ್ಮಂತನನ್ನೂ, ನನ್ನ ಹಾಸಿಗೆಯಾದ ಆದಿಶೇಷನನ್ನೂ, ನನ್ನ ಸೂಕ್ಷ್ಮಕ

ಳೆಯೆನಿಸಿಕೊಂಡು, ನನಗೆ ನಿತ್ಯಾನಪಾಯಿನಿಯಾಗಿರುವ ಲಕ್ಷ್ಮೀದೇವಿ ಯನ್ನೂ, ಬ್ರಹ್ಮದೇವನನ್ನೂ, ನಾರದಮುನಿಯನ್ನೂ, ರುದ್ರನನ್ನೂ, ಪ್ರ ಹ್ಲಾದನನ್ನೂ, ನಾನು ಧರಿಸಿದ ಮತ್ಸ್ಯ, ಕೂರ್ಮ,ವರಾಹಾದ್ಯವತಾರಗಳ ನ್ನೂ, ಆಯಾ ಅವತಾರಗಳಲ್ಲಿ ನಡೆಸಿದ ಕಾರ್ಯಗಳನ್ನೂ, ಸೂರ್ಯಚಂ ದ್ರಾಗ್ನಿಗಳನ್ನೂ, ಓಂಕಾರವನ್ನೂ, ಭೂತಹಿತರೂಪವಾದ ಧರ್ಮವನ್ನೂ, ಅವ್ಯಕ್ತವೆಂಬ ಪ್ರಕೃತಿಯನ್ನೂ, ಭಕ್ತಿರೂಪವಾದ ಧರ್ಮವನ್ನೂ, ಚಂದ್ರ ಕಶ್ಯಪರ ಭಾರ್ಯೆಯರಾದ ದಕ್ಷಕುಮಾರಿಯರನ್ನೂ, ಗಂಗೆ, ಯಮುನೆ,ಸರ ಸ್ವತಿ, ನಂದೆ ಎಂಬ ಪುಣ್ಯನದಿಗಳನ್ನೂ, ಐರಾವತವನ್ನೂ, ಧ್ರುವನನ್ನೂ,ಸ ಪ್ತರ್ಷಿಗಳನ್ನೂ, ಧರ್ಮಶೀಲರಾದ ಪುರುಷರನ್ನೂ, ಪ್ರಾತಃಕಾಲದಲ್ಲಿ ಸ ಮಾಧಾನಮನಸ್ಸಿನಿಂದ ಸ್ಮರಿಸುವರೋ, ನನಗೆ ಶರೀರಭೂತರಾದ ಆ ಪು ಣ್ಯಾತ್ಮರೆಲ್ಲರೂ ಪಾಪವಿಮುಕ್ತರಾಗಿ ಸುಖಿಸುವರು. ಈ ಗಜೇಂದ್ರಮೋ ಕ್ಷಣಸ್ತೋತ್ರದಿಂದ ಪ್ರತಿದಿನವೂ ಪ್ರಾತಃಕಾಲದಲ್ಲಿ ನನ್ನ ಸ್ಮರಣವುಂಟಾ ಗುವುದು" ಎಂದು ಹೇಳಿ, ಭಗವಂತನು ತನ್ನ ಪಾಂಚಜನ್ಯಶಂಖವನ್ನು ಧ್ವ ನಿಮಾಡಿ, ಬ್ರಹ್ಮಾದಿಗಳನ್ನು ಸಂತೋಷಪಡಿಸಿ, ಗರುಡಾರೂಢನಾಗಿ ಹೊರ ಟುಹೋದನು. ಆದುದರಿಂದ ಓ ರಾಜೇಂದ್ರಾ! ಈ ಚರಿತ್ರವು ಮಹಾಮ ಹಿಮೆಯುಳ್ಳುದು" ಎಂದನು ಇದು ನಾಲ್ಕನೆಯ ಅಧ್ಯಾಯವು

---

## ಐದನೆಯ ಮನ್ವಂತರವು.

### ಸಮುದ್ರಮಥನ ವೃತ್ತಾಂತವು.

ಓ ರಾಜೇಂದ್ರಾ ! ನಾಲ್ಕನೆಯದಾದ ತಾಮಸಮನ್ವಂತರವನ್ನೂ, ಅದರಲ್ಲಿ ನಡೆದ ಸರ್ವಪಾಪನಿವಾರಕವಾದ ಗಜೇಂದ್ರಮೋಕ್ಷದ ಕಥೆಯ ನ್ನೂ ನಿನಗೆ ವಿವರಿಸಿದೆನು ಇನ್ನು ಐದನೆಯ ಮನ್ವಂತರವನ್ನೂ ಅದರಲ್ಲಿ ನಡೆದ ಭಗವದವತಾರಚರಿತ್ರವನ್ನೂ ವಿವರಿಸುವೆನು ಕೇಳು ರೈವತನೆಂಬ ವನು ಐದನೆಯ ಮನುವು. ಇವನು ತಾಮಸಮನುವಿಗೆ ಒಡಹುಟ್ಟಿದವನು. ಬಲಿ, ವಿಂಧ್ಯ ಮೊದಲಾದವರು ಆ ಮನುವಿನ ಮಕ್ಕಳು. ಈ ಮನುಪುತ್ರ ರಲ್ಲಿ ಅರ್ಜುನನೆಂಬವನು ಪ್ರಧಾನನು ಈ ಮನ್ವಂತರದಲ್ಲಿ ವಿಭುವೆಂಬವ

ನು ಇಂದ್ರನಾಗಿದ್ದನು. ಭೂತರಯ ಮೊದಲಾದವರು ದೇವತೆಗಳಾಗಿ ಯೂ, ಹಿರಣ್ಯರೋಮಾದಿಗಳು ಸಪ್ತಋಷಿಗಳಾಗಿಯೂ ಇದ್ದರು. ಶುಭ್ರ ನೆಂಬವನಿಗೆ ವಿಕುಂಠೆಯೆಂಬ ಭಾರ್ಯೆಯಲ್ಲಿ ಭಗವಂತನು ವೈಕುಂಠನೆಂಬ ಹೆ ಸರಿನಿಂದ ಅವತರಿಸಿದನು! ಆ ವೈಕುಂಠನು ತನ್ನ ಪ್ರಿಯೆಯಾದ ಲಕ್ಷ್ಮೀ ದೇವಿಯ ಪ್ರೀತ್ಯರ್ಥವಾಗಿ, ಚಕ್ರವಾಳಪರ್ವತದಮೇಲೆ ವೈಕುಂಠವೆಂಬ ನಗ ರವನ್ನು ಕಲ್ಪಿಸಿದನು ಆ ಸ್ಥಾನವು ಸಕಲಲೋಕಪೂಜ್ಯವಾಗಿರುವುದು ಆ ವೈಕುಂಠನ ಪ್ರಭಾವಗಳನ್ನೂ ಕೂಡ ಇದಕ್ಕೆಮೊದಲೇ ನಿನಗೆ ಸ್ವಲ್ಪಮ ಟ್ಟಿಗೆ ವರ್ಣಿಸಿರುವೆನು ಓ ರಾಜೇಂದ್ರಾ! ಭೂಮಿಯಲ್ಲಿರುವ ರೇಣುಗಳ ನ್ನಾದರೂ ಎಣಿಸಬಹುದೇಹೊರತು, ಆ ಭಗವಂತನ ಗುಣಗಳನ್ನು ಲೆಕ್ಕಿಸ ಲಾರೆವು

ಆರನೆಯ ಮನುವು ಚಕ್ಷುಸ್ಸಿನ ಮಗನಾದ ಚಾಕ್ಷುಷನೆಂಬವನು. ಪುರು, ಪುರುಷ, ಸುದ್ಯುಮ್ನ, ಮೊದಲಾದವರು ಮನುಪುತ್ರರಾಗಿದ್ದರು. ಮಂತ್ರದ್ರುಮನೆಂಬವನು ಇಂದ್ರಪದವಿಯಲ್ಲಿದ್ದನು. ಆಪ್ಯಾದಿಗಳು ಆಗಿನ ದೇವಗಣಗಳಾಗಿದ್ದರು. ಆ ಮನ್ವಂತರದಲ್ಲಿ ವೈರಾಜನೆಂಬವನಿಗೆ ಸಂ ಭೂತಿಯೆಂಬ ಭಾರ್ಯೆಯಲ್ಲಿ, ಭಗವಂತನು ನಿಜಾಂಶದಿಂದವತರಿಸಿ,ಅಜಿತನೆಂ ಬ ಹೆಸರಿನಿಂದ ಪ್ರಖ್ಯಾತನಾಗಿದ್ದನು ಈ ಅಜಿತನೇ ಪೂರ್ವದಲ್ಲಿ ಕ್ಷೀರ ಸಾಗರವನ್ನು ಮಥಿಸಿ, ಅದರಿಂದ ಅಮೃತವನ್ನು ಸಂಪಾದಿಸಿ ದೇವತೆಗಳಿಗೆ ಕೊಟ್ಟನು ಮತ್ತು ಕೂರ್ಮರೂಪವನ್ನು ತಾಳಿ ಸಮುದ್ರದಲ್ಲಿ ಮುಳುಗಿ ಹೋಗುತಿದ್ದ ಮಂದರಪರ್ವತವನ್ನು ತನ್ನ ಬೆನ್ನಮೇಲೆ ಧರಿಸಿದನು" ಎಂದ ನು. ಆಗ ಪರೀಕ್ಷಿದ್ರಾಜನು ಶುಕಮಹರ್ಷಿಯನ್ನು ಕುರಿತು, "ಓ ಮುನೀಂ ದ್ರಾ! ಭಗವಂತನು ಕ್ಷೀರಸಮುದ್ರವನ್ನು ಮಥಿಸಿದುದೇಕೆ? ಯಾರಿಗಾಗಿ ಕೂರ್ಮರೂಪವನ್ನು ತಾಳಿ ಮಂದರಪರ್ವತವನ್ನುದ್ಧರಿಸಿದನು" ಆಗ ಸಮುದ್ರದಿಂದ ಅಮೃತವು ಹೇಗೆ ಹುಟ್ಟಿತು? ಆ ಸಮುದ್ರಮಥನಕಾಲದ ಲ್ಲಿ ಇನ್ನೂ ಯಾವಯಾವ ವಸ್ತುಗಳು ಹುಟ್ಟಿದುವು? ಬಹುಕಾಲದಿಂದ ತಾ ಪತ್ರಯಪೀಡಿತವಾದ ನನ್ನ ಮನಸ್ಸು ಅದ್ಭುತಚರಿತ್ರೆಯುಳ್ಳ ಆ ಭಗವಂ ತನ ಮಹಿಮೆಯನ್ನು ಎಷ್ಟೆಷ್ಟು ಕೇಳಿದರೂ ತೃಪ್ತಿಹೊಂದದಿರುವುದು"

ಎಂದನು. ಪರೀಕ್ಷಿದ್ರಾಜನ ಪ್ರಶ್ನೆಗೆ ಸಂತೋಷಪಟ್ಟು ಶುಕಮುನಿಯು, ಭಗವಂತನ ಪ್ರಭಾವವನ್ನು ಸೂಚಿಸತಕ್ಕ ಆ ಕಥೆಯನ್ನು ಹೇಳತೊಡಗಿ "ರಾಜಾ! ಪೂರ್ವದಲ್ಲಿ ದೇವಾಸುರರಿಗೆ ಘೋರಯುದ್ಧವು ನಡೆಯಿತು. ಆಗ ಅಸುರರು ಜಯಶೀಲರಾಗಿ, ಕಂಡಕಂಡ ಕಡೆಯಲ್ಲಿ ದೇವತೆಗಳನ್ನು ತೀಕ್ಷ್ಣಬಾಣಗಳಿಂದ ಕೊಲ್ಲುತ್ತಬಂದರು ಅನೇಕದೇವತೆಗಳು ಸತ್ತುಬಿದ್ದರು. ದೇವತೆಗಳಿಗೆ ಉಳಿಗಾಲವಿಲ್ಲದಂತಾಯಿತು ಇದಕ್ಕೊಂದು ಕಾರಣವುಂಟು. ಹಿಂದೆ ದೇವೇಂದ್ರನು ಸ್ವರ್ಗಸಾಮ್ರಾಜ್ಯವನ್ನನುಭವಿಸುವಕಾಲದಲ್ಲಿ, ಐರಾವತದಮೇಲೆ ಕುಳಿತು, ಅಟ್ಟಹಾಸದಿಂದ ಮೆರವಣಿಗೆಬರುತ್ತಿರುವಾಗ, ದೂರ್ವಾಸಮುನಿಯು ಮಾರ್ಗವಶದಿಂದ ಇದಿರಾಗಿ ಬರುತಿದ್ದನು ಆಗ ದೂರ್ವಾಸನು, ತಾನು ಶಿವಪೂಜೆಯನ್ನುಮಾಡಿ ತಂದ ಒಂದಾನೊಂದು ಪುಷ್ಪಮಾಲಿಕೆಯನ್ನು ಪ್ರಸಾದರೂಪವಾಗಿ ಇಂದ್ರನ ಕೈಗೆ ಕೊಟ್ಟನು. ಇಂದ್ರನು, ಅದನ್ನು ಅಲಕ್ಷ್ಯದಿಂದ ಕೈಗೆ ತಗೆದುಕೊಂಡು, ಐರಾವತದ ಕುಂಭಸ್ಥಳದಮೇಲೆ ಇಟ್ಟುಬಿಟ್ಟನು ಆಗ ಐರಾವತವು ಆ ಮಾಲೆಯನ್ನು ಸುಂಡಿಲಿನಿಂದ ತೆಗೆದು ಕಾಲಿನಿಂದ ತಿಕ್ಕಿಬಿಟ್ಟಿತು ಇದನ್ನು ನೋಡಿ ದೂರ್ವಾಸನಿಗೆ ಅತ್ಯಂತಕೋಪವುಂಟಾಯಿತು ಆ ಕೋಪದಿಂದ ದೂರ್ವಾಸನು, ಇಂದ್ರನನ್ನು ನೋಡಿ "ಎಲ ಮದಾಂಧಾ! ನೀನು ಐಶ್ವರ್ಯಮದದಿಂದಲ್ಲವೇ ಈ ಭಗವತ್ಪ್ರಸಾದವನ್ನೂ ಅಲಕ್ಷ್ಯಮಾಡಿದೆ? ಸಮಸ್ತಲೋಕಪಾಲಕರೊಡನೆ ನೀನು ರಾಜ್ಯಭ್ರಷ್ಟನಾಗು ನಿನ್ನ ಐಶ್ವರ್ಯವೆಲ್ಲವೂ ನಷ್ಟವಾಗಲಿ!" ಎಂದು ಶಪಿಸಿದನು ಈ ಎರಡು ಕಾರಣಗಳಿಂದ ಇಂದ್ರನಿಗೆ ರಾಜ್ಯಾಧಿಕಾರವು ತಪ್ಪಿಹೋಗಿ, ಸ್ವರ್ಗ ಮರ್ತ್ಯಪಾತಾಳಗಳೆಂಬ ಮೂರುಲೋಕಗಳೂ ಕಾಂತಿಗುಂದಿದುವು ಯಾಗಾದಿಕಾರ್ಯಗಳು ಹಿಂದಿನಂತೆ ದೇವತೆಗಳಿಗೆ ಶೋಭೆಯನ್ನುಂಟುಮಾಡದೆ ಹೋದುವು ಆಗ ಇಂದ್ರಾದಿದೇವತೆಗಳೆಲ್ಲರೂ ಒಂದಾಗಿ ಸೇರಿ, ನಷ್ಟವಾದ ತಮ್ಮ ಭಾಗ್ಯವನ್ನು ಸಂಪಾದಿಸುವುದಕ್ಕೂ, ಯುದ್ಧದಲ್ಲಿ ಸತ್ತುಬಿದ್ದ ದೇವತೆಗಳನ್ನು ಬದುಕಿಸುವುದಕ್ಕೂ ಉಪಾಯವೇನೆಂದು ತಮ್ಮೊಳಗೆ ತಾವೇ ಆಲೋಚಿಸಿದರು ಅವರಿಗೆ ಯಾವ ನಿಶ್ಚಯವೂ ತೋರದೆ,

ಕೊನೆಗೆ ಆ ದೇವತೆಗಳೆಲ್ಲರೂ ಮೇರುಶಿಖರದಲ್ಲಿರುವ ಬ್ರಹ್ಮಸಭೆಗೆ ಹೋಗಿ, ಅಲ್ಲಿ ಬ್ರಹ್ಮದೇವನಿಗೆ ನಮಸ್ಕರಿಸಿ, ತಮ್ಮ ಸ್ಥಿತಿಯನ್ನು ವಿಜ್ಞಾಪಿಸಿಕೊಂಡರು. ಆಗ ಬ್ರಹ್ಮನು ಇಂದ್ರಾದಿದೇವತೆಗಳ ದುರವಸ್ಥೆಯನ್ನೂ, ತ್ರೈಲೋಕ್ಯವೂ ಕಾಂತಿಹೀನವಾಗಿರುವುದನ್ನೂ, ತೇಜಸ್ಸಿನಿಂದಲೂ ಬಲದಿಂದಲೂ ದೈತ್ಯರು ಪ್ರಬಲಿಸುತ್ತಿರುವುದನ್ನೂ ನೋಡಿ, ಮನಸ್ಸಿನಲ್ಲಿ ಸ್ವಲ್ಪಹೊತ್ತಿನವರೆಗೆ ಚಿಂತಾಕುಲನಾಗಿದ್ದನು ಕೊನೆಗೆ ಪರಮಪುರುಷನನ್ನು ಸ್ಮರಿಸಿಕೊಂಡು, ಉಲ್ಲಾಸದಿಂದರಳಿದ ಮುಖವುಳ್ಳವನಾಗಿ ಹೇಳುವನು. 'ಎಲೈ ದೇವತೆಗಳಿರಾ ' ನಾನಾಗಲಿ, ರುದ್ರನಾಗಲಿ, ನೀವಾಗಲಿ, ನಿಮ್ಮ ಶತ್ರುಗಳಾದ ದೈತ್ಯರಾಗಲಿ, ಮನುಷ್ಯರಾಗಲಿ, ಪಶುಪಕ್ಷಿ ಮೊದಲಾದ ತಿರ್ಯಗ್ಜಂತುಗಳಾಗಲಿ ಸಸ್ಯವರ್ಗಗಳಾಗಲಿ, ಸ್ವೇದಜಗಳಾಗಲಿ ನಾವೆಲ್ಲರೂ ಯಾವನ ಕೋಟ್ಯಂಶಕಲಾಮಾತ್ರದಿಂದಲೇ ಹುಟ್ಟಿರುವೆವೋ, ಆ ಪರಮಪುರುಷನನ್ನೇ ಈಗ ನಾವು ಶರಣುಹೊಂದಬೇಕಲ್ಲದೆ ಬೇರೆ ರಕ್ಷಕರಿಲ್ಲ ಆದರೆ ಆ ಭಗವಂತನಿಗೆ ನಾವಾದರೇನು? ದೈತ್ಯರಾದರೇನು? ಇಬ್ಬರೂ ಸಮಾನವೇ!ಅವನಿಗೆ ಇಂತವರನ್ನೇ ರಕ್ಷಿಸಬೇಕೆಂದೂ, ಇಂತವರನ್ನೇ ಆದರಿಸಬೇಕೆಂದೂ ಭೇದಬುದ್ಧಿಯಿಲ್ಲ ಹಾಗಿದ್ದರೂ ಅವನು ಲೋಕದ ಸೃಷ್ಟಿಸ್ಥಿತಿಸಂಹಾರಗಳನ್ನು ನಡೆಸುವುದಕ್ಕಾಗಿ, ಸತ್ವಾದಿಗುಣಗಳನ್ನು ಸ್ವೇಚ್ಛೆಯಿಂದ ಕೈಕೊಂಡು, ಇತರಭೂತಗಳಿಗೂ,ಅವರವರ ಗುಣಕರ್ಮಗಳಿಗೆ ತಕ್ಕಂತೆ ಸುಖದುಃಖಗಳನ್ನುಂಟುಮಾಡುವನು ಸತ್ವಮೂರ್ತಿಯಾದ ಶ್ರೀಹರಿಯ ಕೃಪೆಯಿಂದ ಸತ್ವಪ್ರಧಾನರಾದ ದೇವತೆಗಳಿಗೆ ತಪ್ಪದೆ ಜಯವುಂಟಾಗುವುದು ಆದುದರಿಂದ ಲೋಕಗುರುವಾದ ಆ ಭಗವಂತನಲ್ಲಿಯೇ ನಾವೆಲ್ಲರೂ ಮರೆಹುಗುವೆವು ಅದರಿಂದ ನಮಗೆ ಕ್ಷೇಮವುಂಟು ಅವನು ದೇವತೆಗಳಲ್ಲಿ ಹೆಚ್ಚು ಪ್ರೇಮವುಳ್ಳವನಾದುದರಿಂದ ನಮ್ಮ ಕಾರ್ಯವನ್ನು ತಪ್ಪದೆ ನೆರವೇರಿಸುವನು" ಎಂದನು ಓ ಪರೀಕ್ಷಿದ್ರಾಜಾ! ಬ್ರಹ್ಮದೇವನು ಹೀಗೆ ದೇವತೆಗಳನ್ನು ಪ್ರೋತ್ಸಾಹಿಸಿ,ಅವರೆಲ್ಲರನ್ನೂ ಕರೆದುಕೊಂಡು,ತಮೋಮಂಡಲವನ್ನೂ ಮೀರಿದ ವಿಷ್ಣುಲೋಕಕ್ಕೆ ಬಂದನು ಅಲ್ಲಿ ಅಪ್ರಮೇಯಸ್ವರೂಪವಾಗಿಯೂ, ದೇ

ವತೆಗಳ ರಕ್ಷಣಾರ್ಥವಾಗಿ ಮೊದಲೇ ಅಜಿತರೂಪದಿಂದವತರಿಸಿದವನಾ
ಗಿಯೂ ಇರುವ ಆ ಭಗವಂತನನ್ನು ನಮಸ್ಕರಿಸಿ, ಸಾವಧಾನವಾಗಿ ಉಪ
ನಿಷದ್ವಾಕ್ಯಗಳಿಂದ ಆ ಭಗವಂತನನ್ನು ಹೀಗೆಂದು ಸ್ತುತಿಸುವರು. "ಓ
ದೇವಾ! ನೀನು ಸ್ವರೂಪದಲ್ಲಿಯೂ ಸ್ವಭಾವದಲ್ಲಿಯೂ ವಿಕಾರವಿಲ್ಲದವನು
ಆದಿಕಾರಣನು. ಪ್ರಾಣಿಗಳ ಹೃದಯಗುಹೆಯಲ್ಲಿ ವಾಸಿಸತಕ್ಕವನು ಅವಯ
ವಗಳಿಲ್ಲದವನು ನಿನ್ನ ಮಹಿಮೆಯನ್ನು ಹೀಗೆಂದು ಊಹಿಸುವುದಕ್ಕೂ ಸಾ
ಧ್ಯವಲ್ಲ ಮನೋವಾಕ್ಕುಗಳಿಗ ಅಗೋಚರನು ಸರ್ವದೇವೋತ್ತಮನು.
ಎಣೆಯಿವಿರಿಲ್ಲದವನು ಸಮಸ್ತಜೀವರಾಶಿಗಳಿಗೂ ಶರಣ್ಯನು ಇಂತಹ ನಿ
ನ್ನನ್ನು ನಮಸ್ಕರಿಸುವೆವು ಮತ್ತು ಹೇ ಪರಮಪುರುಷಾ! ನೀನು ಪ್ರಾಣ
ಗಳು, ಮನಸ್ಸು, ಬುದ್ಧಿ, ಆತ್ಮಗಳು ಇವೆಲ್ಲವನ್ನೂ ಸಾಕ್ಷಾತ್ಕರಿಸಬಲ್ಲವನು
ಜೀವಾತ್ಮರಿಗೆ ಇಂದ್ರಿಯಗಳನ್ನೂ, ಅವುಗಳಿಂದ ಅನುಭವಿಸಲ್ಪಡತಕ್ಕ ಶ
ಬ್ದಾದಿವಿಷಯಗಳನ್ನೂ ಪ್ರಕಾಶಗೊಳಿಸತಕ್ಕವನೂ ನೀನೇ! ಎಚ್ಚರ,
ಕನಸು, ಸುಷುಪ್ತಿಯೆಂಬ ಮೂರವಸ್ಥೆಗಳನ್ನೂ ಅತಿಕ್ರಮಿಸಿದವನು ಕರ್ಮ
ಮೂಲಕವಾದ ಶರೀರವಿಲ್ಲದವನು ಮತ್ತು ಜೀವಾತ್ಮರಿಗೆ ರಾಗದ್ವೇಷಾದಿ
ದೋಷಗಳನ್ನು ಹುಟ್ಟಿಸತಕ್ಕ ಅಜ್ಞಾನವಾಗಲಿ, ಅಜ್ಞಾನಪೂರ್ವವಾದ ಜ್ಞಾ
ನವಾಗಲಿ ನಿನಗೆ ಸಂಭವಿಸಲಾರವು ಆಕಾಶದಂತೆ ನೀನು ಎಲ್ಲೆಲ್ಲಿಯೂ
ವ್ಯಾಪಿಸಿದವನು ಷಾಡ್ಗುಣ್ಯಪರಿಪೂರ್ಣನು ಕೃತ ತ್ರೇತಾ ದ್ವಾಪರಗ
ಳೆಂಬ ಮೂರುಯುಗಗಳಲ್ಲಿ ಅವತರಿಸುವುದರಿಂದ, ತ್ರಿಯುಗನೆಂದು
ಪ್ರಸಿದ್ಧನಾದ ನಿನ್ನನ್ನು ನಾವು ಮರೆಹುಗುವೆವು ಪ್ರಾಣಿಗಳಿಗೆ ಅವರ
ವರ ಮನೋವ್ಯಾಪಾರದಿಂದ ನಿರ್ಮಿತವಾದ ಸಂಸಾರವೆಂಬ ಚಕ್ರವು ನಿನ್ನ
ಮಾಯೆಯಿಂದ ಪ್ರೇರಿತವಾಗಿ ಸುತ್ತುತ್ತಿರುವುದು ಆ ಚಕ್ರಕ್ಕೆ ದಶೇಂ
ದ್ರಿಯಗಳು, ಪಂಚಪ್ರಾಣಗಳು, ಇವು ಹದಿನೈದೂ ಅಡ್ಡಗಡ್ಡೆಗಳಾಗಿರು
ವುವು ಸತ್ವರಜಸ್ತಮಸ್ಸುಗಳೆಂಬ ಮೂರುಗುಣಗಳೂ ಆ ಚಕ್ರದ ನಾಭಿ
ಗಳು ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ
ಅಹಂಕಾರವೆಂಬೀ ಎಂಟುಬಗೆಯ ಪ್ರಕೃತಿಗಳೂ ಆ ಚಕ್ರದ ನೇಮಿಗಳು
ಸಂಸಾರಚಕ್ರವು ಮಿಂಚಿನಂತೆ ಹೊಳೆಯುತ್ತ, ನಿನ್ನ ಸಂಕಲ್ಪವೆಂಬ ಅಚ್ಚಿ

ನಮೇಲೆ ಅತಿವೇಗದಿಂದ ತಿರುಗುತ್ತಿರುವುದೆಂದು ಹಿರಿಯರು ನಿಶ್ಚಯಿಸಿರು
ವರು ಮತ್ತು ನೀನು ಎಂದೆಂದಿಗೂ ವಿಕಾರವಿಲ್ಲದೆ ಒಂದೇವಿಧವಾಗಿರತ
ಕ್ಕವನು ಎಲ್ಲಾ ಆತ್ಮಗಳಿಗೂ ಅಂತರಾತ್ಮನಾದುದರಿಂದ ಪರಮಾತ್ಮ
ನೆಂಬ ಪ್ರಸಿದ್ಧಿಗೊಂಡವನು ಅಂತಹ ನಿನ್ನನ್ನು ಶರಣುಹೊಂದುವೆವು ಓ
ದೇವಾ! ನಿನ್ನ ನಿವಾಸಸ್ಥಾನವಾದ ಪರಮಪದವೆಂಬುದು, ಕೇವಲಸತ್ವಮ
ಯವಾದುದರಿಂದ, ಎಂದೆಂದಿಗೂ ಕಾಂತಿಗುಂದದೆ, ಒಂದೇವಿಧವಾಗಿ ಬೆಳೆ
ಗುತ್ತಿರುವುದು ಅದು ಈ ಪ್ರಕೃತಿಮಂಡಲಕ್ಕಿಂತಲೂ ಹೊರಗಾಗಿ, ಸಂ
ಸಾರಿಗಳ ಕಣ್ಣಿಗೆ ಕಾಣದಂತೆ, ರಾಗಾದಿದೋಷಗಳ ಸಂಬಂಧವೇ ಇಲ್ಲದೆ,
ಶುದ್ಧಾತ್ಮರಾದ ಸಿದ್ಧರಿಗೆಮಾತ್ರ ನಿತ್ಯವಾಸವಾಗಿರುವುದು ಎಲ್ಲೆಯಿಲ್ಲದ
ಆ ನಿನ್ನ ಸ್ಥಾನವನ್ನು ಪಡೆಯುವುದಕ್ಕಾಗಿಯೇ,ಜ್ಞಾನಿಗಳು ಯೋಗಮಾರ್ಗ
ದಿಂದ ನಿನ್ನನ್ನುಪಾಸಿಸುವರು ಅಂತಹ ಉತ್ತಮಸ್ಥಾನದಲ್ಲಿ ನೆಲೆಗೊಂಡಿ
ರುವ ನಿನ್ನನ್ನು ಮರೆಹುಗುವೆವು ಈ ಪ್ರಪಂಚದಲ್ಲಿರುವ ಪ್ರತಿಜಂತುವೂ
ನಿನ್ನ ಮಾಯೆಗೆ ಮರುಳಾಗಿರುವುದು ಆದುದರಿಂದಲೇ ನೀನು ಸರ್ವಗತ
ನಾಗಿದ್ದರೂ ನಿನ್ನ ಸ್ವರೂಪವನ್ನು ತಿಳಿಯಲಾರದು. ನಿನ್ನ ಅನುಗ್ರಹಪಿದ್ಧ
ರುಮಾತ್ರವೇ ಚೇತನರು, ಆ ನಿನ್ನ ಮಾಯೆಯನ್ನು ದಾಟಿ, ಅಂತರಾತ್ಮನಾ
ದ ನಿನ್ನನ್ನು ತಿಳಿಯಬಲ್ಲರು ಓ ದೇವಾ! ನೀನು ಸಮಸ್ತಚೇತನಾಚೇತನಗ
ಳಲ್ಲಿಯೂ ಅಂತರಾತ್ಮನಾಗಿದ್ದರೂ ಅವುಗಳ ಗುಣದೋಷಗಳು ನಿನ್ನನ್ನು
ಮುಟ್ಟಲಾರವು ದೇವತೆಗಳಾದ ನಮಗೂ ಪರದೇವತೆಯೆನಿಸಿಕೊಂಡ ನಿನ್ನ
ನ್ನು ಮರೆಹುಗುವೆವು ಇದೋ! ದೇವತೆಗಳಾದ ನಾವೆಲ್ಲರೂ ನಿನಗೆ ಪ್ರಿ
ಯಶರೀರವಾದ ಸತ್ವಗುಣದಿಂದಲೇ ಸೃಷ್ಟಿಸಲ್ಪಟ್ಟು, ಸರ್ವತೋಮು
ಖವಾದ ಜ್ಞಾನಪ್ರಕಾಶವುಳ್ಳವರಾಗಿದ್ದರೂ,ನಿನ್ನ ಸೂಕ್ಷ್ಮಗತಿಯನ್ನು ತಿಳಿ
ಯಲಾರದೆ ಕಳವಳಿಸುವೆವು ಹೀಗಿರುವಾಗ ಕೇವಲರಜಸ್ತಮೋಗುಣಗ
ಳಿಂದ ತುಂಬಿ, ಮೂಢರಾದ ಈ ದೈತ್ಯಾದಿಗಳು ನಿನ್ನ ತತ್ವವನ್ನು ಹೇಗೆ
ತಾನೇ ತಿಳಿಯಬಲ್ಲರು? (ಗರ್ಭದ ಚೀಲದಿಂದ ಹುಟ್ಟತಕ್ಕ) ಜರಾಯುಜಗ
ಳೇ, (ಮೊಟ್ಟೆಯಿಂದ ಹುಟ್ಟತಕ್ಕ) ಅಂಡಜಗಳು,(ಸ್ವೇದದಿಂದ ಹುಟ್ಟತಕ್ಕ)
ಕ್ರಿಮಿಕೀಟಾದಿಗಳು, (ನೆಲದಲ್ಲಿ ಹೊರಡತಕ್ಕ) ಸಸ್ಯಾದಿಗಳು, (ಉದ್ಭಿಜ್ಜಗ

ಳು) ಎಂಬೀ ನಾಲ್ಕುಬಗೆಯ ಭೂತಗಳಿಗೂ ಆಶ್ರಯವಾದ ಈ ಭೂಮಿ ಯು, ಯಾವನಿಂದಲೇ ಸೃಷ್ಟಿಸಲ್ಪಟ್ಟು, ಯಾವನಿಗೆ ಪಾದವೆನಿಸಿರುವು ದೋ, ಸರ್ವಸ್ವತಂತ್ರನಾದ ಆ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನನಾ ಗಲಿ! ಲೋಕಪಾಲರೊಡಗೂಡಿದ ಮೂರುಲೋಕಗಳ ಉತ್ಪತ್ತಿಗೂ, ಸ್ಥಿತಿ ಗೂ, ಅಭಿವೃದ್ಧಿಗೂ ಕಾರಣವಾದ ಮಹಾವೀರ್ಯವುಳ್ಳ ಜಲವು ಯಾವ ನಿಗೆ ರೇತಸ್ಸೆನಿಸಿರುವುದೋ, ಆ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನನಾಗ ಲಿ! ದೇವತೆಗಳಿಗೆ ಬಲವನ್ನೂ, ಅನ್ನವನ್ನೂ, ಆಯುಸ್ಸನ್ನೂ, ಉಂಟುಮಾ ಡತಕ್ಕವನಾಗಿಯೂ, ಅಮೃತಕಿರಣಗಳಿಂದ ಸ್ಥಾವರಜಂಗಮ ಜೀವಿಗಳನ್ನು ಪೋಷಿಸತಕ್ಕವನಾಗಿಯೂ, ಅವೆಲ್ಲಕ್ಕೂ ಪ್ರಭುವಾಗಿಯೂ ಇರುವ ಚಂದ್ರ ನು ಯಾವನ ಮನಸ್ಸಾಗಿರುವನೋ, ಆ ಪರಮಪುರುಷನು ನಮ್ಮಲ್ಲಿ ಪ್ರ ಸನ್ನನಾಗಲಿ ದೇವತೆಗಳಿಗೆ ಹವಿರ್ಭಾಗಗಳನ್ನು ತಂದೊಪ್ಪಿಸತಕ್ಕವನಾಗಿ, ವೇದದಲ್ಲಿ ಹೇಳಲ್ಪಟ್ಟ ಯಜ್ಞಾದಿಕಾರ್ಯಗಳಿಗಾಗಿಯೇ ಅವತರಿಸಿ ದವನಾಗಿ, ಪ್ರಾಣಿಗಳ ದೇಹದಲ್ಲಿ ಜಾಠರಾಗ್ನಿರೂಪದಿಂದ ಸೇರಿ, ಅಲ್ಲಿನ ಶುಕ್ಲಶೋಣಿತಾಗಿ ಸಪ್ತಧಾತುಗಳನ್ನೂ ವೃದ್ಧಿಗೊಳಿಸುತ್ತಿರುವ ಅಗ್ನಿಯು ಯಾವನಿಗೆ ಮುಖವಾಗಿರುವನೋ, ಆ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನ ನಾಗಲಿ ! ಅರ್ಚಿರಾದಿಮಾರ್ಗರೂಪನಾಗಿ, ಋಗ್ಯಜುಸ್ಸಾಮಗಳೆಂಬ ಮೂರು ವೇದಗಳ ಸ್ವರೂಪನಾಗಿ, ಪರಬ್ರಹ್ಮನಿಗೆ ನಿವಾಸಭೂತನಾಗಿ, ಮುಕ್ತಿಗೆ ದ್ವಾರನಾಗಿ, ಮುಕ್ತಿಸಾಧನವಾದ ಕರ್ಮಾನುಷ್ಠಾನಕ್ಕೆ ತಕ್ಕ ಕಾಲನಿಯಮವನ್ನು ತೋರಿಸುವುದರಿಂದ ಮೋಕ್ಷಸಾಧನನಾಗಿ ಉದಯಾ ಸ್ತಮಯಗಳಮೂಲಕವಾಗಿ ಪ್ರಾಣಿಗಳ ಆಯುಸ್ಸನ್ನಳೆಯುವುದರಿಂದ ಮೃ ತ್ಯುರೂಪನಾಗಿಯೂ ಇರುವ ಸೂರ್ಯನು,ಯಾವನ ಕಣ್ಣಾಗಿರುವನೋ ಆ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನನಾಗಲಿ!ಸಮಸ್ತಚರಾಚರಗಳ ದೇಹೇಂ ದ್ರಿಯ ಮನೋಬಲಗಳಿಗೆ ಕಾರಣನಾಗಿಯೂ, ಐದುಬಗೆಯ ವ್ಯಾಪಾರಗ ಳಿಂದ ಪ್ರಾಣಿಗಳ ದೇಹದಲ್ಲಿ ನೆಲೆಗೊಂಡವನಾಗಿಯೂ ಇರುವ ಯಾವ ವಾ ಯುದೇವನನ್ನು,ಬುದ್ಧ್ಯಾದಿಗಳಿಗೆ ಅಧಿಷ್ಠಾನದೇವತೆಗಳೆನಿಸಿದ ನಾವೆಲ್ಲರೂ ರಾಜನನ್ನು ಭೃತ್ಯರು ಹೇಗೋ ಹಾಗೆ ಅನುವರ್ತಿಸುತ್ತಿರುವೆವೋ, ಅಂತಹ

ವಾಯುವನ್ನೇ ತನ್ನ ನಿಶ್ವಾಸದಿಂದ ಹುಟ್ಟಿಸಿದ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನನಾಗಲಿ ! ಯಾವನ ಕಿವಿಯಿಂದ ದಿಕ್ಕುಗಳೂ, ಹೃದಯದಿಂದ ದೇಹದ ನವರಂಧ್ರಗಳೂ, ನಾಭಿಯಿಂದ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಮನಸ್ಸು, ಪ್ರಾಣ, ಶರೀರ, ಇವೆಲ್ಲಕ್ಕೂ ಆಶ್ರಯವಾದ ಆಕಾಶವೂ ಹುಟ್ಟಿರುವುವೋ, ಆ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನನಾಗಲಿ! ಮತ್ತು ಯಾವನ ಬಲದಿಂದ ಮಹೇಂದ್ರನೂ, ಪ್ರಸಾದದಿಂದ ದೇವತೆಗಳೂ, ಕೋಪದಿಂದ ರುದ್ರನೂ, ಸಂತೋಷದಿಂದ ಬ್ರಹ್ಮನೂ, ದೇಹರಂಧ್ರಗಳಿಂದ ಗಾಯತ್ರ್ಯಾದಿ ಛಂದಸ್ಸುಗಳೂ ಋಷಿಗಳೂ, ಪುರುಷಲಿಂಗದಿಂದ ಪ್ರಜಾಧಿಪತಿಯೂ ಜನಿಸಿದರೋ, ಆ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನನಾಗಲಿ ! ಮತ್ತು ಯಾವನ ವಕ್ಷಸ್ಥಲದಿಂದ ಭಾಗ್ಯಲಕ್ಷ್ಮಿಯೂ, ಛಾಯೆಯಿಂದ ಪಿತೃದೇವತೆಗಳೂ, ಸ್ತನದಿಂದ ಧರ್ಮದೇವತೆಯೂ, ಬೆನ್ನಿನಿಂದ ಅಧರ್ಮವೂ, ತಿರಸ್ಸಿನಿಂದ ದ್ಯುಲೋಕವೂ, (ಆಕಾಶವೂ) ನಗೆಯಿಂದ ಅಪ್ಸರಸಿಯರೂ ಉದಿಸಿದರೋ, ಆ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನನಾಗಲಿ! ಬ್ರಾಹ್ಮಣಕುಲವೂ, ಅತೀಂದ್ರಿಯಾರ್ಥಗಳನ್ನು ತಿಳಿಸತಕ್ಕ ವೇದಗಳೂ, ಯಾವನ ಮುಖದಿಂದ ಉತ್ಪನ್ನವಾದುವೋ, ಕ್ಷತ್ರಿಯಕುಲವೂ, ಬಲವೂ ಯಾವನ ಭುಜಗಳಿಂದ ಹುಟ್ಟಿದುವೂ, ವೈಶ್ಯಕುಲವೂ, ಧನಾರ್ಜನನೈಪುಣ್ಯವೂ ಯಾವನ ತೊಡೆಗಳಿಂದ ಹುಟ್ಟಿದುವೋ, ಶೂದ್ರಕುಲವೂ, ವೇದವ್ಯತಿರಿಕ್ತವಾದ ಶುಶ್ರೂಷಾವೃತ್ತಿಯೂ ಯಾವನ ಪಾದಗಳಿಂದ ಹುಟ್ಟಿದುವೋ, ಆ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನ ನಾಗಲಿ ! ಯಾವನ ಕೆಳತುಟಿಯಿಂದ ಲೋಭವೂ, ಮೇಲಿನ ತುಟಿಯಿಂದ ಪ್ರೀತಿಯೂ, ಮೂಗಿನಿಂದ ಕಾಂತಿಯೂ, ಸ್ಪರ್ಶೇಂದ್ರಿಯದಿಂದ ಪಶುಗಳಿಗೆ ಹಿತಕರವಾದ ಕಾಮವೂ, ಹುಬ್ಬುಗಳಿಂದ ಯಮನೂ, ರೆಪ್ಪೆಗಳಿಂದ ಕಾಲನೂ ಹುಟ್ಟಿದರೋ, ಆ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನನಾಗಲಿ ! ಪಂಚಮಹಾಭೂತಗಳೂ, ಕಾಲವೂ, ಜೀವಾತ್ಮರ ಅದೃಷ್ಟರೂಪವಾದ ಕರ್ಮಗಳೂ, ಸತ್ವಾದಿಗುಣಗಳೂ, ಬ್ರಹ್ಮಾಂಡವೂ, ಅದರೊಳಗಿನ ಕಾರ್ಯವರ್ಗವೂ, ಯಾವ ಮಹಾತ್ಮನ ಸಂಕಲ್ಪದಿಂದಲೇ ಹುಟ್ಟಿದುವೋ, ಮಹಾಜ್ಞಾನಿಗಳಿಗೆಮಾತ್ರ ತಿಳಿಯತಕ್ಕ ಅಪ್ರಮೇ

ಯಸ್ವರೂಪವುಳ್ಳ ಅಂತಹ ವಿರಾಟ್ಪುರುಷನು ನಮ್ಮಲ್ಲಿ ಪ್ರಸನ್ನನಾಗಲಿ! ಯಾವನು, ಸೃಷ್ಟಿಗೆ ಮೊದಲು ಕಾರ್ಯಪ್ರವೃತ್ತಿಯಿಲ್ಲದೆ ಶಾಂತವಾದ ಚಿದಚಿತ್ಕಾಲಶಕ್ತಿಗಳನ್ನು ಶರೀರವಾಗಿ ಹೊಂದಿ, ತನ್ನ ಸ್ವರೂಪವನ್ನೇ ತಾನು ಅನುಭವಿಸತಕ್ಕ ಮಹಾನಂದದಿಂದ ಪೂರ್ಣಕಾಮನಾಗಿ ಬೆಳಗುತ್ತಿದ್ದನೋ, ಯಾವನು ಮಾಯಾಗುಣಗಳಿಗೆ ಈಡಾಗದೆ, ಸ್ವಭಾವಸಿದ್ಧವಾದ ಐಶ್ವರ್ಯದಿಂದ ಬೆಳಗುತ್ತಿರುವನೋ, ಅಂತಹ ವಿರಾಟ್ಪುರುಷನಿಗೆ ನಮಸ್ಕಾರವು! ಓ ದೇವಾ! ನಿನ್ನ ದಿವ್ಯಮಂಗಳವಿಗ್ರಹವನ್ನು ದರ್ಶನಮಾಡಬೇಕೆಂಬ ಕುತೂಹಲವುಳ್ಳ ನಮ್ಮ ಕಣ್ಣುಗಳಿಗೆ ಮಂದಹಾಸಸುಂದರವಾದ ನಿನ್ನ ಮುಖಪದ್ಮವನ್ನು ತೋರಿಸಿ ಆನಂದಗೊಳಿಸು! ಓ ಪರಮಪುರುಷಾ! ಲೋಕದಲ್ಲಿ ಧರ್ಮಗ್ಲಾನಿಯುಂಟಾದ ಕಾಲದಲ್ಲಿ, ನೀನು ಸ್ವೇಚ್ಛೆಯಿಂದ ಹಲವು ಅವತಾರಗಳನ್ನೆತ್ತಿ ನಮಗಾಗಿ ಎಷ್ಟೋ ಅಸಾಧ್ಯಕಾರ್ಯಗಳನ್ನು ನಡೆಸುತ್ತಿರುವೆ ಅಂತಹ ನಿನಗೆ ಈಗ ನಿನ್ನ ರೂಪವನ್ನು ತೋರಿಸತಕ್ಕ ಸ್ವಲ್ಪಕಾರ್ಯವು ಅಷ್ಟೇನೂ ದುರ್ಲಭವಲ್ಲ! ಆದರೆ "ಒಂದಾವರ್ತಿ ಸ್ತುತಿಸಿದ ಮಾತ್ರಕ್ಕೆ, ಮಹಾಯೋಗಿಗಳಿಗೂ ಅಗೋಚರವಾದ ನನ್ನ ರೂಪವನ್ನು ನಾನು ತೋರಿಸುವೆನೆ' ಎಂದು ನೀನು ಹೇಳುವುದಕ್ಕಿಲ್ಲ. ಏಕೆಂದರೆ, ಪ್ರಾಣಿಗಳು ವಿಷಯಾಪೇಕ್ಷೆಯಿಂದ ಸ್ವಲ್ಪಸುಖವನ್ನು ಪಡೆಯುವುದಕ್ಕಾಗಿ, ಎಷ್ಟೋ ಕಷ್ಟಪಟ್ಟು ಯಜ್ಞಾದಿಕರ್ಮಗಳನ್ನಾಚರಿಸುವರು ಅವೆಲ್ಲವೂ ಕೊನೆಗೆ ನಿಷ್ಫಲಗಳಾಗಿ ಅನರ್ಥಗಳನ್ನೇ ತಂದಿಡುವುವು ಆ ಕರ್ಮಗಳನ್ನೇ ನಿನಗೆ ಅರ್ಪಿತವಾಗಿ ಮಾಡಿದಪಕ್ಷದಲ್ಲಿ ಅವು ಸಫಲವಾಗುವುವು ಧರ್ಮಾಭಾಸವಾಗಿ, ಕೇವಲ ಲೌಕಿಕವಿಷಯವಾಗಿದ್ದ ಕರ್ಮಗಳೂ ಕೂಡ, ನಿನಗೆ ಅರ್ಪಿತವಾದ ಪಕ್ಷದಲ್ಲಿ ವ್ಯರ್ಥವಾಗಲಾರವು. ನೀನು ಸರ್ವಪ್ರಾಣಿಗಳಿಗೂ ಅಂತರಾತ್ಮನಾದುದರಿಂದ ಎಲ್ಲರ ಪ್ರೀತಿಗೂ ಪಾತ್ರನಾಗಿರುವೆ. ಅತ್ಯಲ್ಪವಾಗಿದ್ದರೂ ನಿನ್ನಲ್ಲಿ ಅರ್ಪಿತವಾದ ಕರ್ಮವು ಅನಂತಫಲವನ್ನು ಕೊಡುವುದು. ಹೀಗಿರುವಾಗ ನಾವು ನಿನ್ನನ್ನೇ ಉದ್ದೇಶಿಸಿ ಮಾಡಿದ ಈ ಸ್ತೋತ್ರವು, ಹೇಗೆ ತಾನೇ ನಿಷ್ಫಲವಾಗುವುದು? ಮರದ ಬುಡಕ್ಕೆ ನೀರೆರೆಯುವುದರಿಂದ, ಅದರ ಶಾಖೋಪಶಾಖೆಗಳೆಲ್ಲವೂ ವೃದ್ಧಿಹೊಂದುವಂ

ತೆ, ಸಮಸ್ತದೇವತೆಗಳಿಗೂ ಮೂಲಭೂತನಾದ ನಿನ್ನನ್ನಾರಾಧಿಸುವುದರಿಂ ದ, ಇತರದೇವತೆಗಳನ್ನೂ ತೃಪ್ತಿಪಡಿಸಿದಂತಾಗುವುದು ಅದರಿಂದ ಸಮ ಸ್ತ ಪುರುಷಾರ್ಥಗಳೂ ಸಿದ್ಧಿಸುವುವು ಓ ದೇವಾ ! ನೀನು ದ್ರವ್ಯದೇಶ ಕಾಲ ಪರಿಚ್ಛೇದವಿಲ್ಲದವನು ಹೀಗೆಂದು ನಿರೂಪಿಸಲಸಾಧ್ಯವಾದ ಅದ್ಭು ತಕಾರ್ಯಗಳುಳ್ಳವನು. ಹೇಯಗುಣವಿಲ್ಲದವನು. ಸತ್ವಾದಿಗುಣಗಳಿಗೆ ನಿ ಯಾಮಕನು ಕೇವಲ ಶುದ್ಧಸತ್ವ ಗುಣದಲ್ಲಿಯೇ ನೆಲೆಗೊಂಡವನು ಇಂ ತಹ ನಿನ್ನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳುವುದಕ್ಕೆ, ಇದೋ ಈ ನಮ ಸ್ಕಾರವೊಂದು ಹೊರತು, ಬೇರೆಯಾವ ಉಪಾಯವೂ ನಮಗೆ ತೋರದು ದರಿಂದ. ಈ ವಂದನವನ್ನರ್ಪಿಸುವೆವು" ಎಂದರು. ಇದು ಐದನೆಯ ಅಧ್ಯಾ ಯವು

---

(ಶ್ರೀಮಹಾವಿಷ್ಣುವಿನ ಆಜ್ಞೆಯಿಂದ ಸಮುದ್ರವನ್ನು ಕಡೆಯುವುದಕ್ಕಾಗಿ ದೇವತೆಗಳು ಮಂದರ ಪರ್ವತವನ್ನು ತಂದುದು)

ಓ ಪರೀಕ್ಷಿದ್ರಾಜಾ ! ಕೇಳು! ಭಗವಂತನು ಈ ದೇವತೆಗಳ ಸ್ತುತಿಗೆ ಮೆಚ್ಚಿ, ಸಹಸ್ರಸೂರ್ಯೋದಯವಾದಂತೆ ಅವರಮುಂದೆ ಗೋಚರಿಸಿದ ನು ಆದರೇನು? ಆ ಭಗವಂತನ ಅದ್ಭುತತೇಜಸ್ಸಿನಿಂದ ಅಲ್ಲಿದ್ದ ಸಮಸ್ತದೇ ವತೆಗಳಿಗೂ ಮಿಂಚುಹೊಡೆದಂತಾಗಿ, ಅವರಿಗೆ ಭೂಮ್ಯಾಕಾಶಗಳಾಗಲಿ, ದಿಕ್ಕುಗವಿದಿಕ್ಕುಗಳಾಗಲಿ ಯಾವುದೂ ಕಾಣದೆ ಹೋದುವು. ತಮ್ಮನ್ನೇ ತಾವು ಕಾಣಲಾರದಂತಿದ್ದರು. ಹೀಗಿರುವಾಗ ಆ ಅದ್ಭುತವಾದ ತೇಜೋ ರಾಶಿಯಲ್ಲಿ, ಭಗವಂತನ ದಿವ್ಯಮಂಗಳವಿಗ್ರಹವನ್ನು ನೋಡಬೇಕೆಂದರೆ ಸಾಧ್ಯವೆ? ಬ್ರಹ್ಮದೇವನೊಬ್ಬನು, ಪೂಜ್ಯನಾದ ರುದ್ರನೊಬ್ಬನು, ಇವರಿಬ್ಬರಿಗೆಮಾತ್ರ ಆ ಭಗವದಾಕೃತಿಯು ಕಣ್ಣಿಗೆ ಗೋಚರಿಸಿತು ರಾ ಜೇಂದ್ರಾ ! ಆ ಪುರುಷೋತ್ತಮನ ದಿವ್ಯಸೌಂದರ್ಯವನ್ನು ಕೇಳಬೇಕೆ ? ಶುದ್ಧವಾದ ಇಂದ್ರನೀಲದಂತೆ ಶ್ಯಾಮಲವರ್ಣದ ದೇಹಕಾಂತಿ! ಕಮಲದಳ ಗಳಂತೆ ಕೆಂಪಾದ ಕಣ್ಣುಗಳು! ಪುಟಹಾಕಿದ ಚಿನ್ನದಂತೆ ಹೊಳೆಯುತ್ತಿರುವ ಪೀತಾಂಬರವೆಂಬ ಪಟ್ಟೆಮಡಿ ! ಪ್ರಸನ್ನವಾಗಿಯೂ, ಸುಂದರವಾಗಿಯೂ

ಇರುವ ಅವಯವಸನ್ನಿವೇಶಗಳು ! ಅಂದವಾದ ಹುಬ್ಬುಗಳು ! ತಲೆಯಲ್ಲಿ ರತ್ನಖಚಿತವಾದ ಕಿರೀಟದ ಕಾಂತಿ!ಭುಜಗಳಲ್ಲಿ ಕಾಂತಿಯಿಂದ ಥಳಥಳಿಸುವ ತೋಳ್ಬಳೆಗಳು! ಮುಖಸೌಂದರ್ಯವನ್ನು ಹೆಚ್ಚಿಸುತ್ತಿರುವ ಕುಂಡಲಕಾಂತಿ ! ಆ ಕರ್ಣಾಭರಣಗಳ ಕಾಂತಿಯಿಂದ ಥಳಥಳಿಸುವ ಕಪೋಲಗಳು! ಸರ್ವಾವಯವಗಳಲ್ಲಿಯೂ, ಹಾರ, ನೂಪುರ, ಕಾಂಚೀಕಲಾಪ, ಮೊದಲಾದ ಆಭರಣಗಳು! ಎದೆಯಲ್ಲಿ ಕೌಸ್ತುಭಮಣಿ ! ಕಂಠದಲ್ಲಿ ವನಮಾಲಿಕೆ! ಇವುಗಳನಡುವೆ ವಕ್ಷಸ್ಥಳದಲ್ಲಿ ಶೋಭಾತಿಶಯದಿಂದ ಬೆಳಗುತ್ತಿರುವ ಮಹಾಲಕ್ಷ್ಮಿ ! ಸುತ್ತಲೂ ಪುರುಷಾಕೃತಿಯಿಂದ ಸೇವೆಮಾಡುತ್ತಿರುವ ಸುದರ್ಶನಾದಿದಿವ್ಯಾಯುಧಗಳು! ಇಂತಹ ದಿವ್ಯಸುಂದರಾಕೃತಿಯಿಂದ ಪ್ರತ್ಯಕ್ಷನಾದ ಪರಮಪುರುಷನನ್ನು ಕಂಡೊಡನೆ, ಬ್ರಹ್ಮರುದ್ರರಿಬ್ಬರೂ ಸಮಸ್ತದೇವಗಣದೊಡನೆ ಸಾಷ್ಟಾಂಗಪ್ರಣಾಮವನ್ನು ಮಾಡಿ ಹೀಗೆಂದು ಸ್ತುತಿಸುವರು 'ಓ ದೇವಾ ! ನೀನು ಕರ್ಮಾಧೀನವಾದ ಜನ್ಮಾದಿಗಳಿಲ್ಲದವನು ಏಕೆಂದರೆ ಸೃಷ್ಟಿಸ್ಥಿತಿಲಯರೂಪವಾದ ಕರ್ಮಗಳನ್ನು ನೀನೇ ನಡೆಸುತ್ತಿದ್ದರೂ, ಆ ಕರ್ಮಗಳಲ್ಲಿ ಕಟ್ಟುಹಾಕುವ ಸತ್ವಾದಿಗುಣಗಳನ್ನು ಶತ್ರುವಿನಂತೆ ನಿಗ್ರಹಿಸುತ್ತಿರುವೆ. ಮತ್ತು ದುಃಖರಹಿತವಾದ ಆನಂದರಸಕ್ಕೆ ಸಮುದ್ರದಂತಿರುವೆ ಅಣುಸ್ವರೂಪನಾದ ಜೀವನಿಗಿಂತಲೂ ಸೂಕ್ಷ್ಮನಾಗಿ ಅವನಲ್ಲಿ ಅಂತರಾತ್ಮನಾಗಿರುವೆ. ಹೀಗೆ ಮಹಾಮಹಿಮೆಯುಳ್ಳವನಾಗಿಯೂ ಅಪ್ರಮೇಯವಾದ ತೇಜಸ್ಸುಳ್ಳವನಾಗಿಯೂ ಇರುವ ನಿನಗೆ ಬಾರಿಬಾರಿಗೂ ನಮಸ್ಕಾರವು ಓ ಪುರುಷೋತ್ತಮಾ! ಶ್ರೇಯಃಕಾಂಕ್ಷಿಗಳಾದ ಯೋಗಿಗಳೂ ಕೂಡ,ಈನಿನ್ನ ರೂಪವನ್ನು ಪ್ರತ್ಯಕ್ಷೀಕರಿಸಲಾರದೆ,ವೇದೋಕ್ತವಾಗಿಯೂ, ಪಾಂಚರಾತ್ರಾದಿಗಳಿಂದ ಬೋಧಿತವಾಗಿಯೂ ಇರುವ ಯೋಗಬಲದಿಂದಲೇ ಆರಾಧಿಸುವರು. ಈ ನಿನ್ನ ರೂಪದಲ್ಲಿ ಈಗ ನಾವು ನಮ್ಮೊಡನೆ ತ್ರೈಲೋಕ್ಯವನ್ನೂ ಏಕಕಾಲದಲ್ಲಿ ನೋಡುತ್ತಿರುವೆವು ಇದರಿಂದಲೇ ಈ ಪ್ರಪಂಚವು ನಿನಗಿಂತಲೂ ಬೇರೆಯಾದುದಲ್ಲವೆಂದೂ, ನೀನೇ ವಿಶ್ವರೂಪನೆಂದೂ ವ್ಯಕ್ತವಾಗುವುದು ಈ ಪ್ರಪಂಚವು ಸೃಷ್ಟಿಗೆ ಮೊದಲೂ ನಿನ್ನಲ್ಲಿಯೇ ಅಡಗಿದ್ದಿತು. ಕೊನೆಗೂ ನಿನ್ನಲ್ಲಿಯೇ ಸೇರುವುದು. ಇವೆರಡರ ಮ

ಧ್ಯಕಾಲದಲ್ಲಿಯೂ ಸರ್ವಸ್ವತಂತ್ರನಾದ ನಿನ್ನ ಸ್ವರೂಪವಾಗಿಯೇ ಇರುವುದು ಮೊದಲು ಕಾರಣಾವಸ್ಥೆಯಲ್ಲಿದ್ದ ಮಣ್ಣು, ಕಾರ್ಯರೂಪದಲ್ಲಿ ಗಡಿಗೆಯಾಗಿ ಕಾಣಿಸುವಂತೆ, ಜಗತ್ಕಾರಣನಾದ ನಿನಗಿಂತಲೂ ಈ ಜಗತ್ತು ಭಿನ್ನವಾದುದಲ್ಲ ಆದುದರಿಂದ ಈ ಜಗತ್ತಿಗೆ ಆದಿಮಧ್ಯಾಂತಗಳಲ್ಲಿ ಸಂಭವಿಸತಕ್ಕ ರೂಪಾಂತರಗಳೆಲ್ಲವೂ ನಿನ್ನ ಸ್ವರೂಪವೇ ? ನೀನು ಪ್ರಕೃತಿಜೀವಗಳೆರಡಕ್ಕಿಂತಲೂ ವಿಲಕ್ಷಣನು ನೀನು ನಿನ್ನ ಮಾಯಾಶಕ್ತಿಯಿಂದಲೇ (ಸಂಕಲ್ಪದಿಂದಲೇ) ಈ ಪ್ರಪಂಚವನ್ನು ನಿರ್ಮಿಸಿ, ಅದರಲ್ಲಿ ಅಂತರ್ಯಾಮಿಯಾಗಿರುವೆ. ಹೀಗೆ ಚೇತನಾಚೇತನಗಳಲ್ಲಿ ಸೇರಿದ್ದರೂ, ಅವುಗಳಲ್ಲಿ ಸತ್ವಾದಿಗುಣಗಳ ತಾರತಮ್ಯದಿಂದುಂಟಾಗುವ ಗುಣದೋಷಗಳಿಗೆ ನೀನು ಗುರಿಯಾಗತಕ್ಕವನಲ್ಲ ಹೇಯಗುಣರಹಿತನಾದ ಈ ನಿನ್ನ ಆಶ್ಚರ್ಯಮಹಿಮೆಯನ್ನು, ಜ್ಞಾನಿಗಳಾದ ಪಂಡಿತರುಮಾತ್ರವೇ ಯೋಗಪರಿಶುದ್ಧವಾದ ತಮ್ಮ ಮನಸ್ಸಿನಿಂದ ತಿಳಿಯಬಲ್ಲರು. ಅರಣಿಕಾಷ್ಠವನ್ನುಜ್ಜಿ ಬೆಂಕಿಯನ್ನು ತೆಗೆಯುವಂತೆಯೂ, ಹಸುವನ್ನು ಕರೆದು ಹಾಲನ್ನು ತೆಗೆಯುವಂತೆಯೂ, ಭೂಮಿಯನ್ನುತ್ತು ಬೆಳೆಯನ್ನು ತೆಗೆಯುವಂತೆಯೂ, ನೆಲವನ್ನು (ಬಾವಿಯನ್ನು) ತೋಡಿ ನೀರನ್ನು ತೆಗೆಯುವಂತೆಯೂ, ವಿದ್ವಾಂಸರು ಚೇತನಾಚೇತನಗಳಲ್ಲಿ ಅಂತರ್ಗತನಾಗಿರುವ ನಿನ್ನನ್ನು ಯೋಗಪರಿಶುದ್ಧವಾದ ತಮ್ಮ ಮನಸ್ಸಿನಿಂದ ಆಲೋಚನೆಮಾಡಿ ತಿಳಿಯುವರು ಓ ಲೋಕನಾಥಾ! ನಾವು ಬಹುಕಾಲದಿಂದ ಈ ನಿನ್ನ ಸ್ವರೂಪವನ್ನು ನೋಡಬೇಕೆಂದೇ ಬಯಸುತ್ತಿದ್ದೆವು. ಭಾಗ್ಯವಶದಿಂದ ಈಗ ನಮ್ಮ ಕೋರಿಕೆಯು ಸಫಲವಾಯಿತು. ಕಾಡುಗಿಚ್ಚಿಗೆ ಸಿಕ್ಕಿ ಬೆಂದ ಕಾಡಾನೆಯು ಗಂಗಾಜಲದಲ್ಲಿ ಮುಳುಗಿದಂತೆ, ನಿನ್ನ ದರ್ಶನದಿಂದ ನಾವು ಆನಂದಸಾಗರದಲ್ಲಿ ಮುಳುಗಿದೆವು ನಾವು ಯಾವ ಉದ್ದೇಶದಿಂದ ಈಗ ನಿನ್ನ ಪಾದಮೂಲವನ್ನು ಸೇರಿರುವೆವೋ, ಅದನ್ನು ನೀನೇ ತಿಳಿದು ನಮ್ಮ ಕೋರಿಕೆಯನ್ನೀಡೇರಿಸಬೇಕು ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿ, ಸಮಸ್ತವನ್ನೂ ಸಾಕ್ಷಾತ್ಕರಿಸಬಲ್ಲ ನಿನಗೆ ತಿಳಿಯದ ವಿಷಯವಾವುದುಂಟು ? ನಾವು ನಿನ್ನಲ್ಲಿ ವಿಜ್ಞಾಪಿಸಬೇಕಾದುದೇನಿದೆ ? ದೇವಾ! ನಾನು. ಈ ರುದ್ರನು,

ಈ ಇಂದ್ರಾದಿಗಳೂ, ದಕ್ಷಾದಿಪ್ರಜಾಧಿಪತಿಗಳೂ, ಇವರೆಲ್ಲರೂ ಉರಿಯುವ ಅಗ್ನಿಜ್ವಾಲೆಯಿಂದ ಹಾರಿಬರುವ ಸಣ್ಣ ಕಿಡಿಗಳಂತೆ, ನಿನ್ನ ಕೋಟ್ಯಂಶಕಲಾ ಮಾತ್ರದಿಂದ ಹುಟ್ಟಿದವರು ನಮ್ಮ ಶ್ರೇಯಸ್ಸಿಗೆ ದಾರಿಯೇನೆಂಬು ದನ್ನೇ ನಾವು ಕಾಣೆವು ಆದುದರಿಂದ ನಮಗೂ, ಬ್ರಾಹ್ಮಣರಿಗೂ, ವೇದ ಗಳಿಗೂ, ಸುಖವನ್ನುಂಟುಮಾಡುವ ದಾರಿಯನ್ನು ನೀನೇ ಆಲೋಚಿಸಿ, ನಮಗೂ ಅದನ್ನುಪದೇಶಿಸಬೇಕು" ಎಂದರು ಓ ಪರೀಕ್ಷಿದ್ರಾಜಾ! ಹೀಗೆ ಬ್ರಹ್ಮಾದಿಗಳಿಂದ ಸ್ತುತಿಸಲ್ಪಟ್ಟ ಪರಮೇಶ್ವರನು, ಅವರ ಉದ್ದೇಶವನ್ನು ತಿಳಿದು, ಬದ್ಧಾಂಜಲಿಗಳಾಗಿ ನಿಂತಿದ್ದ ಆ ದೇವತೆಗಳನ್ನು ಕುರಿತು ಮೇಘ ಗಂಭೀರವಾದ ಧ್ವನಿಯಿಂದ ಹೀಗೆಂದು ಹೇಳುವನು ತನ್ನ ಸಂಕಲ್ಪಮಾ ತ್ರದಿಂದಲೇ ಆ ದೇವತೆಗಳ ಉದ್ದೇಶವನ್ನು ನೆರವೇರಿಸಬಲ್ಲವನಾಗಿದ್ದ ರೂ, ಸಮುದ್ರಮಥನಾದಿಗಳಿಂದ ತನ್ನ ಲೀಲೆಯನ್ನು ತೋರಿಸಬೇಕೆಂಬುದ ಕ್ಕಾಗಿ, ಅವರನ್ನು ಕುರಿತು "ಓ ಬ್ರಹ್ಮಾ! ಓ ಶಂಕರಾ! ಎಲೈ ದೇವತೆಗ ಳಿರಾ! ನನ್ನ ಮಾತನ್ನು ಸಾವಧಾನವಾಗಿ ಕೇಳಿರಿ! ಅದರಿಂದ ನಿಮಗೆ ಶ್ರೇ ಯಸ್ಸುಂಟು! ಈಗಲೇ ನೀವೆಲ್ಲರೂ ಹೋಗಿ, ನಿಮ್ಮ ಶತ್ರುಗಳಾದ ದೈತ್ಯ ರೊಡನೆ ಸಮಾಧಾನವಾಕ್ಯಗಳನ್ನಾಡಿ ಸಂಧಿಯನ್ನು ಮಾಡಿಕೊಳ್ಳಬೇಕು ತತ್ಕಾಲಕ್ಕೆ ಅವರೊಡನೆ ನೀವು ಸ್ನೇಹವನ್ನು ಮಾಡಿಕೊಂಡರೆ, ಅದರಿಂದ ಮುಂದೆ ನಿಮಗೆ ಕ್ಷೇಮವುಂಟು ಕಾರ್ಯಾರ್ಥಿಗಳು ತಮ್ಮ ಶತ್ರುಗಳನ್ನಾ ದರೂ ತಾವೇ ಅನುಸರಿಸಿ ಸಂಧಿಮಾಡಿಕೊಳ್ಳಬೇಕು ಸಂಧಿಯನ್ನು ಮಾಡಿ ಕೊಂಡಮಾತ್ರಕ್ಕೆ ಅವರಲ್ಲಿ ದ್ವೇಷವನ್ನು ಬಿಟ್ಟು ಪ್ರೀತಿಯನ್ನೇ ಬೆಳಸಬೇ ಕೆಂಬ ನಿಯಮವಿಲ್ಲ ನಮ್ಮ ಕಾರ್ಯಸಾಧನೆಯಾಗುವವರೆಗೂ, ಮೇಲೆಮಾ ತ್ರ ಪ್ರೀತಿಯನ್ನು ತೋರಿಸುತ್ತಾ,ಮನಸ್ಸಿನಲ್ಲಿಕೋಪವನ್ನು ಬಿಡದೆ,ಅವರನ್ನ ನುಸರಿಸುತ್ತಿರಬೇಕು. ಕಾರ್ಯವು ಕೊನೆಮುಟ್ಟಿದಮೇಲೆ ಸರ್ಪಮೂಷ ಕಗಳಂತೆ ಹಗೆತೀರಿಸಿಕೊಳ್ಳಬೇಕು ಆದುದರಿಂದ ನೀವು ಆ ದೈತ್ಯರೊ ಡನೆ ಏಕೀಭವಿಸಿ, ಅವರ ಸಹಾಯದಿಂದ ಅಮೃತವನ್ನು ಸಂಪಾದಿಸುವುದ ಕ್ಕೆ ಯತ್ನಿಸಬೇಕು ಮೃತ್ಯುವಿನ ಬಾಯಿಗೆ ಸಿಕ್ಕಿದವನೂಕೂಡ ಆ ಅಮೃ ತಪಾನದಿಂದ ಮರಣವಿಲ್ಲದಿರಬಹುದು. ಈ ಅಮೃತಸಂಪಾದನೆಗಾಗಿ ನೀ

ವು ನಡೆಸಬೇಕಾದ ಕಾರ್ಯಕ್ರಮವನ್ನು ಹೇಳುವೆನು ಕೇಳಿರಿ ! ನೀವು ಮೊ
ದಲು ಬಗೆಬಗೆಯ ಗಿಡುಬಳ್ಳಿಗಳನ್ನೂ, ಓಷಧಿಗಳನ್ನೂ, ಹುಲ್ಲುಗರಿಕೆಗಳನ್ನೂ,
ಕ್ಷೀರಸಮುದ್ರದಲ್ಲಿ ತಂದು ಸೇರಿಸಿ, ಮಂದರಪರ್ವತವನ್ನೇ ಕಡೆಗೋಲ
ನ್ನಾಗಿಯೂ, ವಾಸುಕಿಯನ್ನೇ ಕಡೆಯುವ ಹಗ್ಗವನ್ನಾಗಿಯೂ ಮಾಡಿ
ಕೊಂಡು ಬಹಳ ಜಾಗರೂಕತೆಯಿಂದ ಆ ಸಮುದ್ರವನ್ನು ಮಥನಮಾಡ
ಬೇಕು ಆದರೆ ದೈತ್ಯರ ಸಹಾಯವಿಲ್ಲದೆ ಈ ಕೆಲಸವು ನಿಮ್ಮಿಂದ ಮಾತ್ರ
ಸಾಧ್ಯವಲ್ಲ ನಾನೂ ಆಗಾಗ ನನ್ನಿಂದಾಗಬೇಕಾದ ಸಹಾಯವನ್ನು ಮಾಡು
ತ್ತಿರುವೆನು ನಿಮ್ಮ ಶತ್ರುಗಳಾದ ದೈತ್ಯರು ಇದಕ್ಕಾಗಿ ಶ್ರಮಪಡುವುದೊಂ
ದೇಹೊರತು, ಕೊನೆಗೆ ಅದರಿಂದುಂಟಾಗತಕ್ಕ ಫಲವನ್ನು ನೀವು ಮಾತ್ರವೇ
ಅನುಭವಿಸಬಹುದು ಆದರೆ ಈ ಕಾರ್ಯವು ಪೂರೈಸುವವರೆಗೆ ನೀವುಮಾ
ತ್ರ ಬಹಳ ಎಚ್ಚರದಿಂದ ಆ ದೈತ್ಯರನ್ನನುಸರಿಸುತ್ತಿರಬೇಕು ಒಂದೊಂ
ದುಭಾಗದಲ್ಲಿಯೂ ಅವರ ಇಷ್ಟವನ್ನೇ ಅನುಮೋದಿಸುತ್ತಿರಬೇಕು ನಿಮ್ಮ
ಕೋಪವನ್ನು ಸ್ವಲ್ಪಮಾತ್ರವೂ ಹೊರಕ್ಕೆ ಕಾಣಿಸಬಾರದು. ಒಳ್ಳೆಯ
ಮಾತುಗಳಿಂದಲೇ ಕಾರ್ಯಗಳನ್ನು ನಡೆಸಬೇಕು ಆದುದರಿಂದ ನೀವು ಕೆ
ಲವುಕಾಲದವರೆಗೆ ದೈತ್ಯರಲ್ಲಿರುವ ವೈರಬುದ್ಧಿಯನ್ನು ನಿಮ್ಮಲ್ಲಿಯೇ ಅಡಗಿ
ಸಿಕೊಂಡಿರಬೇಕು ಎಲೈ ದೇವತೆಗಳಿರಾ ! ನೀವು ಸಮುದ್ರವನ್ನು ಕಡೆ
ಯುವಾಗ, ಮೊದಲು ಕಾಲಕೂಟವೆಂಬ ಭಯಂಕರವಾದ ವಿಷವು ಹುಟ್ಟು
ವುದು ಆದಕ್ಕಾಗಿ ನೀವು ಭಯಪಡಬಾರದು ಅದನ್ನು ರುದ್ರನು ಭಕ್ಷಿಸಿ
ಬಿಡುವನು ಮತ್ತು ನೀವು ಸಮುದ್ರದಲ್ಲಿ ಹುಟ್ಟುವ ಯಾವ ಉತ್ತಮವ
ಸ್ತುಗಳಿಗೂ ಆಸೆಪಡಬಾರದು ಯಾವ ಅಪಾಯಕ್ಕೂ ಭಯಪಡಬಾರದು"
ಎಂದನು ಭಗವಂತನು ಹೀಗೆಂದು ಹೇಳಿ, ಎಲ್ಲರೂ ನೋಡುತ್ತಿರುವ ಹಾ
ಗೆ ಅಲ್ಲಿಯೇ ಕಣ್ಮರೆಯಾದನು ಇತ್ತಲಾಗಿ ಬ್ರಹ್ಮರುದ್ರರಿಬ್ಬರೂ ಆ ಭಗ
ವಂತನನ್ನು ನಮಸ್ಕರಿಸಿ, ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿದರು ಇಂ
ದ್ರಾದಿದೇವತೆಗಳು ದೈತ್ಯರಾಜನಾದ ಬಲಿಚಕ್ರವರ್ತಿಯ ಬಳಿಗೆ ಬಂದರು
ಸಂಧಿವಿಗ್ರಹಾದಿಗಳನ್ನು ಚೆನ್ನಾಗಿ ಬಲ್ಲ ಬಲಿಚಕ್ರವರ್ತಿಯು, ವಿಧೇಯರಾಗಿ
ಬಂದ ದೇವತೆಗಳನ್ನು ಗೌರವದಿಂದಲೇ ಬರಮಾಡಿಕೊಂಡನು. ಪೂರ್ವ

ದ್ವೇಷದಿಂದ ಆ ದೇವತೆಗಳನ್ನು ಕೊಲ್ಲಬೇಕೆಂದು ಯತ್ನಿಸುತಿದ್ದ ತನ್ನ ಕಡೆ ಯವರೆಲ್ಲರನ್ನೂ ನಿವಾರಿಸಿದನು ! ಹೀಗೆ ಬಲಿಯು ತ್ರೈಲೋಕ್ಯವನ್ನೂ ತನ್ನ ವಶಪಡಿಸಿಕೊಂಡು, ಸ್ವರ್ಗಸಾಮ್ರಾಜ್ಯವನ್ನನುಭವಿಸುತ್ತ, ಅನೇಕದಾನವ ರಿಂದ ರಕ್ಷಿತನಾಗಿ, ರಾಜಸಭೆಯಲ್ಲಿ ಕುಳಿತಿದ್ದ ಕಾಲದಲ್ಲಿ, ದೇವೇಂದ್ರನು ಅವನಲ್ಲಿಗೆ ಬಂದು, ಮೃದುಮಧುರವಾಕ್ಯಗಳಿಂದ ಭಗವಂತನು ತಮಗೆ ಹೇ ಳಿದ್ದ ವಿಷಯವನ್ನು ತಿಳಿಸಿದನು ಇಂದ್ರನ ವಾಕ್ಯವು ಬಲಿಗೂ, ಅವನ ಅನುಚರರಾದ ಶಂಬರ ತ್ರಿಪುರಾಸುರರೇ ಮೊದಲಾದ ದಾನವಪ್ರಮುಖರೆ ಲ್ಲರಿಗೂ ಯುಕ್ತವಾಗಿ ತೋರಿತು ಅದರಮೇಲೆ ದೇವದಾನವರಿಬ್ಬರೂ ತಮ ತಮಗೆ ಅನುಕೂಲವಾದ ಒಪ್ಪಂದದಿಂದ, ಸಂಧಿಯನ್ನು ಮಾಡಿಕೊಂಡು, ಮುಂದಿನ ಪ್ರಯತ್ನವನ್ನಾರಂಭಿಸಿದರು ದೇವಾಸುರರೆಲ್ಲರೂ ಒಂದಾಗಿ ಸೇರಿ ಮಂದರಪರ್ವತದಬಳಿಗೆ ಬಂದು, ತಮ್ಮ ಬಾಹುಬಲದಿಂದ ಅದನ್ನು ಕಿತ್ತು ಮೇಲಕ್ಕೆತ್ತಿದರು ಇಷ್ಟರಲ್ಲಿಯೇ,ಅವರು ಹೆಮ್ಮೆಗೊಂಡು,ಸಂತೋ ಷದಿಂದ ಸಿಂಹನಾದಗಳನ್ನು ಮಾಡುತ್ತ, ಅದನ್ನು ಕ್ಷೀರಸಮುದ್ರದ ಕಡೆಗೆ ಸಾಗಿಸುವುದಕ್ಕೆ ಯತ್ನಿಸಿದರು ಆದರೇನು ? ಸ್ವಲ್ಪದೂರದವರೆಗೆ ಸಾಗಿಸುವ ಷ್ಟರಲ್ಲಿಯೇ, ಬಲಿ, ಇಂದ್ರ ಮೊದಲಾದ ದೇವದಾನವರೆಲ್ಲರೂ ಆಯಾಸ ದಿಂದ ಮೈಮೇಲೆ ಪ್ರಜ್ಞೆಯಿಲ್ಲದೆ ನಡುದಾರಿಯಲ್ಲಿಯೇ ಅದನ್ನು ಎತ್ತಿ ಹಾಕಿಬಿಟ್ಟರು. ಆ ಪರ್ವತದ ಭಾರದಿಂದ ಅದರ ಕೆಳಗೆ ಸಿಕ್ಕಿ ಅನೇಕದೇ ವದಾನವರು ನುಗ್ಗಾದರು ಹೀಗೆ ಮೈಮುರಿದು ಆಶಾಭಂಗದಿಂದ ದುಃಖಿ ಸುತ್ತಿರುವ ದೇವಾಸುರರನ್ನು ನೋಡಿ, ಭಗವಂತನು, ಅವರಲ್ಲಿ ಕನಿಕರಗೊಂ ಡು,ಆ ಪರ್ವತದಕೆಳಗೆ ಸತ್ತುಬಿದ್ದವರೆಲ್ಲರನ್ನೂ ತನ್ನ ಕೃಪಾಕಟಾಕ್ಷದಿಂದ ಒಂದಾವರ್ತಿ ನೋಡಿದನು. ಭಗವಂತನ ಕಟಾಕ್ಷಾಮೃತಸೇಚನದಿಂದ ಸತ್ತ ವರೆಲ್ಲರೂ ಪುನರ್ಜೀವವನ್ನು ಹೊಂದಿ ಮೇಲೆದ್ದುನಿಂತರು ಅಂಗಹೀನರಾದ ವರೆಲ್ಲರೂ ತಿರುಗಿಆಯಾ ಅವಯವಗಳನ್ನು ಹೊಂದಿ ಬಾಧೆಯಿಲ್ಲದೆ ಉತ್ಸಾ ಹಗೊಂಡಿದ್ದರು ಆಮೇಲೆ ಭಗವಂತನು, ಆ ದೇವತೆಗಳೆಲ್ಲರೂ ನೋಡುತಿ ದ್ದಹಾಗೆಯೇ, ತನ್ನ ಒಂದೇಕೈಯಿಂದ ಆ ಪರ್ವತವನ್ನು ಸುಲಭವಾಗಿ ಮೇ ಲಕ್ಕೆತ್ತಿ, ತನ್ನ ವಾಹನವಾದ ಗರುಡನ ಬೆನ್ನಮೇಲಿರಿಸಿಕೊಂಡು ಸಮು

ಸ್ತ ದೇವಾಸುರರಿಂದ ಪರಿವೃತನಾಗಿ, ಕ್ಷೀರಸಮುದ್ರದ ಬಳಿಗೆ ಬಂದನು ಆಮೇಲೆ ಆ ಪರ್ವತವನ್ನು ಸಮುದ್ರಮಧ್ಯದಲ್ಲಿಳಿಸುವಂತೆ ಗರುಡನಿಗೆ ಆಜ್ಞೆಕೊಟ್ಟನು ಭಗವದಾಜ್ಞೆಯಂತೆ ಗರುಡನು ಆ ಪರ್ವತವನ್ನು ಜಲದಲ್ಲಿ ಬಿಸುಟು, ತನ್ನ ಸ್ಥಾನಕ್ಕೆ ಹಿಂತಿರುಗಿದನು ಇದು ಆರನೆಯ ಅಧ್ಯಾಯವು

---

## ಸಮುದ್ರದಲ್ಲಿ ಕಾಲಕೂಟವಿಷ ಮುಂತಾದುವು ಹುಟ್ಟಿದುದು

ಓ ಪರೀಕ್ಷಿದ್ರಾಜಾ ! ಕೇಳು ಆಮೇಲೆ ದೇವಾಸುರರೆಲ್ಲರೂ ಸರ್ಪರಾಜನಾದ ವಾಸುಕಿಯ ಬಳಿಗೆ ಬಂದು, ಅವನಿಗೂ ಅಮೃತದಲ್ಲಿ ಭಾಗವನ್ನು ಕೊಡುವುದಾಗಿ ಹೇಳಿ, ಅವನನ್ನೊಪ್ಪಿಸಿ ಕರೆತಂದು, ಮಂದರಪರ್ವತಕ್ಕೆ ಸುತ್ತಿದರು ದೇವದಾನವರೆಲ್ಲರಿಗೂ ಧೈರ್ಯವನ್ನೂ, ಉತ್ಸಾಹವನ್ನೂ ಹುಟ್ಟಿಸುವುದಕ್ಕಾಗಿ, ಭಗವಂತನು ತಾನೇ ಮುಂದಾಗಿ ಬಂದು, ವಾಸುಕಿಯ ಮುಖಭಾಗವನ್ನು ಹಿಡಿದು ಕಡೆಯುವುದಕ್ಕೆ ನಿಂತನು ದೇವತೆಗಳೆಲ್ಲರೂ ಅವನನ್ನು ಹಿಂಬಾಲಿಸಿ ಆ ಕಡೆಯನ್ನೇ ಹಿಡಿದರು ಭಗವಂತನು ಯಾವ ಕಾರಣಕ್ಕಾಗಿ ಆ ವಿಷಸರ್ಪದ ಬಾಯಿಯ ಕಡೆಯಲ್ಲಿ ನಿಂತನೆಂಬುದನ್ನು ತಿಳಿಯದೆ, ದೈತ್ಯರೆಲ್ಲರೂ ತಮಗೇನೋ ಅವಮಾನವುಂಟಾಯಿತೆಂಬ ಅಸೂಯೆಯಿಂದ, ಮೊದಲೇ ಕಲಹವನ್ನಾರಂಭಿಸಿ “ದೇವತೆಗಳ ಹೆಚ್ಚೇನು ! ನಮ್ಮ ಕಡಿಮೆಯೇನು ? ನಾವೇನು ಕುಲದಲ್ಲಿ ಕಡಿಮೆಯೆ ? ಪಾಂಡಿತ್ಯದಲ್ಲಿ ಕಡಿಮೆಯೆ? ಕರ್ಮದಲ್ಲಿ ಕಡಿಮೆಯೆ?ನಮ್ಮನ್ನು ಬಾಲದಕಡೆಗೆ ನಿಲ್ಲಿಸಿ, ವಿಷ್ಣುವು ದೇವತೆಗಳೊಡನೆ ಮುಖದ ಕಡೆಯಲ್ಲಿ ನಿಲ್ಲುವುದೇಕೆ ? ಅವರ ಹೆಚ್ಚೇನು ? ಹೇಗಾದರೂ ಆಗಲಿ ! ನಾವು ಎಂದಿಗೂ ಅಮಂಗಳಕರವಾದ ಈ ಬಾಲವನ್ನು ಹಿಡಿಯಲಾರೆವು”ಎಂದು ಹಟದಿಂದ ಕೈಯಿಕ್ಕದೆ ಸುಮ್ಮನೆ ನಿಂತುಬಿಟ್ಟರು ಆಗ ಭಗವಂತನು, ಅವರ ಮೌಢ್ಯಕ್ಕಾಗಿ ತನ್ನೊಳಗೆ ತಾನೇ ಮಂದಹಾಸದಿಂದ ನಗುತ್ತ, ಆ ರಾಕ್ಷಸರನ್ನೇ ಮುಖಭಾಗದಲ್ಲಿ ನಿಲ್ಲಿಸಿ, ತಾನು ದೇವತೆಗಳೊಡನೆ ಪುಚ್ಛಭಾಗವನ್ನು ಹಿಡಿದನು ಎಲ್ಲರೂ ಸಾಹಸದಿಂದ ಸಮುದ್ರವನ್ನು ಕಡೆಯಲಾರಂಭಿಸಿದರು. ಹೀಗೆಕಡೆಯುತ್ತಿರುವಾ

ಗ, ಮಹಾಭಾರವುಳ್ಳ. ಆ ಪರ್ವತಕ್ಕೆ ತಳದಲ್ಲಿ ಆಧಾರವೇನೂ ಇಲ್ಲದುದರಿಂ
ದ,ದೇವಾಸುರರು ಎಷ್ಟೆಷ್ಟೇ ಬಿಗಿಹಿಡಿದು ಹಗ್ಗವನ್ನೆಳೆಯುತಿದ್ದರೂ,ಆ ಪ
ರ್ವತವು ಕ್ರಮಕ್ರಮವಾಗಿ ನೀರಿನಲ್ಲಿ ಮುಳುಗುತ್ತಬಂದಿತು. ಆಗ ದೇವಾ
ಸುರರು, ತಮ್ಮ ಬಲಕ್ಕೆ ದೈವಬಲವು ವಿಪರೀತವಾಗಿರುವುದನ್ನು ನೋಡಿ,
ಮುಂದೆ ಯಾವ ಉಪಾಯವೂ ತೋರದೆ, ಚಿಂತಾಕುಲರಾಗಿ ಮುಖವನ್ನು
ತಗ್ಗಿಸಿ ಸುಮ್ಮನೆ ನಿಂತು ಬಿಟ್ಟರು ಹೀಗೆ ವಿಘ್ನದೇವತೆಯು ದೇವತೆಗಳ
ಪ್ರಯತ್ನಕ್ಕೆ ಅಡ್ಡವಾಗಿ ಬಂದುದನ್ನು ನೋಡಿ, ಸತ್ಯಸಂಕಲ್ಪನಾದ ಭಗ
ವಂತನು, ಒಡನೆಯೇ ಕೂರ್ಮಾವತಾರವನ್ನೆತ್ತಿ, ನೀರಿನಲ್ಲಿ ಮುಳುಗಿಹೋ
ಗುತಿದ್ದ ಆ ಪರ್ವತಕ್ಕೆ ಬೆನ್ನನ್ನು ಕೊಟ್ಟು ಮೇಲಕ್ಕೆತ್ತಿದನು. ದೇವಾಸು
ರರೆಲ್ಲರೂ ಸಂತೋಷಪಟ್ಟು ತಿರುಗಿ ಸಮುದ್ರವನ್ನು ಕಡೆಯಲಾರಂಭಿಸಿದ
ರು. ಓ ಪರಿಕ್ಷಿದ್ರಾಜಾ! ಆ ಕೂರ್ಮಮೂರ್ತಿಯು ಲಕ್ಷಯೋಜನವಿಸ್ತಾ
ರವುಳ್ಳ ತನ್ನ ಶರೀರದಿಂದ, ಎರಡನೆಯ ಜಂಬೂದ್ವೀಪವೋ ಎಂಬಂತೆ ಕಾ
ಣುತ್ತ, ಆ ಪರ್ವತವನ್ನು ಬೆನ್ನಮೇಲೆ ಧರಿಸಿದುದರಿಂದ, ಆ ಪರ್ವತವು ನಿ
ರಪಾಯವಾಗಿ ತಿರುಗಲಾರಂಭಿಸಿತು ದೇವಾಸುರರಿಬ್ಬರೂ ತಮ್ಮ ಬಾ
ಹುಬಲದಿಂದ ಅತಿವೇಗವಾಗಿ ಕಡೆಯುತ್ತಿದ್ದರು ಆ ಮಹಾಪರ್ವತವು ಗಿರ
ಗಿರನೆ ಸುತ್ತುತಿದ್ದರೂ,ಕೂರ್ಮಮೂರ್ತಿಯ ಮೈನವೆಯನ್ನಾರಿಸುವಂತಿದ್ದಿ
ತೇಹೊರತು, ಅದರಿಂದ ಅವನಿಗೆ ಸ್ವಲ್ಪವಾದರೂ ಬಾಧೆಯು ತೋರಲಿಲ್ಲ.
ಹೀಗೆ ಭಗವಂತನು, ನೀರಿನಲ್ಲಿ ಕೂರ್ಮರೂಪದಿಂದ ಪರ್ವತವನ್ನು ಧರಿಸಿದು
ದು ಮಾತ್ರವಲ್ಲದೆ, ಅದನ್ನು ಕಡೆಯುತ್ತಿರುವ ದೇವಾಸುರರಲ್ಲಿಯೂ, ಅಂತ
ರ್ಯಾಮಿಯಾಗಿದ್ದು, ಅವರಿಗೆ ಬಲವೀರ್ಯಾದಿಗಳನ್ನು ಹೆಚ್ಚಿಸುತಿದ್ದನು. ವಾ
ಸುಕಿಯಲ್ಲಿಯೂ ಅಂತರ್ಯಾಮಿಯಾಗಿ ಅವನ ಮೈಗೆ ಬಾಧೆಯೇನೂ ತೋ
ರದೆ ನಿದ್ರೆಯಿಂದ ಮೈಮರೆಯುವಂತೆ ಮಾಡಿದನು ಮತ್ತು ಆ ಮಂದ
ರಪರ್ವತದಮೇಲೆ ಶಿಖರದಂತೆ ನಿಂತು ಅದನ್ನು ತನ್ನ ಒಂದೇ ಕೈಯಿಂದ
ಒತ್ತಿಹಿಡಿದು ಅದನ್ನು ಅತ್ತಿತ್ತ ಕದಲದಂತೆಯೂ, ನಿಲ್ಲಿಸುತಿದ್ದನು.
ಹೀಗೆ ಸರ್ವತೋಮುಖವಾಗಿ ಸಹಾಯಮಾಡುತಿದ್ದ ಭಗವಂತನ ಮಹಾ
ಮಹಿಮೆಯನ್ನು ನೋಡಿ, ಬ್ರಹ್ಮಾದಿದೇವತೆಗಳೆಲ್ಲರೂ ಅವನನ್ನು ಸ್ತುತಿಸು

ತ್ತ, ಅವನಮೇಲೆ ಪುಷ್ಪವರ್ಷವನ್ನು ಕರೆದರು. ಹೀಗೆ ಭಗವಂತನು ಆ ಮಂ ದರಪರ್ವತಕ್ಕೆ ಕೆಳಗೂ, ಮೇಲೆಯೂ ಆಧಾರವಾಗಿದ್ದು, ತಮ್ಮಲ್ಲಿಯೂ ವಾಸುಕಿಯಲ್ಲಿಯೂ ಅಂತರ್ಯಾಮಿಯಾಗಿ ಬಲವೀರ್ಯಾದಿಗಳನ್ನು ಹೆಚ್ಚಿಸುತಿ ದ್ದುದರಿಂದ, ಕಾರ್ಯವು ಸುಲಭವಾಗಿ ನಡೆದುಹೋಗುತಿತ್ತು ಇಷ್ಟರಲ್ಲಿಯೇ ದೇವದಾನವರಿಬ್ಬರಿಗೂ ಮನಸ್ಸಿನಲ್ಲಿ ಹೆಮ್ಮೆಯುಂಟಾಯಿತು. ತಮ್ಮ ಪ್ರ ಯತ್ನದಿಂದಲೇ ಈ ಕಾರ್ಯವೆಲ್ಲವೂ ನಡೆಯುವುದೆಂದು ತಿಳಿದು ಗರ್ವಿಷ್ಠ ರಾಗಿ, ಮೇಲೆಮೇಲೆ ತಮ್ಮ ಬಲವನ್ನು ಪಯೋಗಿಸಿ ಸಮುದ್ರದಲ್ಲಿರುವ ಜಲ ಜಂತುಗಳೆಲ್ಲವೂ ಕ್ಷೋಭವೊಂದುವಂತೆ ವೇಗದಿಂದ ಕಡೆಯುತ್ತಬಂದರು ಇಷ್ಟರಲ್ಲಿಯೇ ಮಂದರಪರ್ವತಕ್ಕೆ ಸುತ್ತಿದ್ದ ವಾಸುಕಿಗೆ, ದೇಹದಲ್ಲಿ ಸ್ವಲ್ಪ ಸ್ವಲ್ಪವಾಗಿ ಬಳಲಿಕೆಯು ತೋರಿತು ಅವನ ಕಣ್ಣುಗಳಿಂದ ಕಿಡಿಗಳು ಹೊ ರಡಲಾರಂಭಿಸಿದುವು ಅವನ ಸಹಸ್ರಮುಖಗಳಿಂದಲೂ ಅಗ್ನಿಕಣಗಳನ್ನೆರ ಚುತ್ತಿರುವ ನಿಟ್ಟುಸಿರು ಹೊರಟುಬಂದಿತು ಅವನ ಕಣ್ಣುಗಳಿಂದಲೂ ಉಸಿರಿನ ಗಾಳಿಯಿಂದಲೂ, ಭುಗಭುಗನೆ ಹೊಗೆ ಹೊರಡಲಾರಂಭಿಸಿತು ಇ ದರಿಂದ ಅವನ ಮುಖಭಾಗವನ್ನು ಹಿಡಿದಿದ್ದ ರಾಕ್ಷಸರು ಆ ತಾಪವನ್ನು ತಡೆಯಲಾರದೆ ತತ್ತಳಿಸುತಿದ್ದರು ಪೌಲೋಮ, !ಕಾಲೇಯ, ಬಲಿ. ಇ ಲ್ವಲ, ಮುಂತಾದ ರಾಕ್ಷಸಪ್ರಧಾನರಲ್ಲರೂ. ಕಾಡುಗಿಚ್ಚಿನಿಂದ ಬೆಂದ ವೃ ಕ್ಷದಂತೆ, ತಾಪದಿಂದ ಬೆಂದು ಬೆಂಡಾಗಿ ಸುಮ್ಮನೆ ನಿಂತುಬಿಟ್ಟರು. ಆ ಬೆಂಕಿಯ ತಾಪವು ಇತ್ತಲಾಗಿ ಪುಚ್ಛಭಾಗವನ್ನು ಹಿಡಿದಿದ್ದ ದೇವಸಮೂ ಹದಲ್ಲಿಯೂ ವ್ಯಾಪಿಸಿ, ಅವರ ವಸ್ತ್ರಾಭರಣಗಳನ್ನೂ, ಕವಚಗಳನ್ನೂ, ಕಂಠಮಾಲೆಗಳನ್ನೂ ಬಣ್ಣಗೆಡಿಸಿದುದಲ್ಲದೆ, ಅವರ ದೇಹಕಾಂತಿಯನ್ನೂ ಕುಂದಿಸುತ್ತಬಂದಿತು ಆದರೇನು? ಇಷ್ಟರಲ್ಲಿ ಇಂದ್ರನಿಗೆ ವಾಹನವಾಗಿ ದ್ದ ಮೇಘಗಳೆಲ್ಲವೂ ದೇವತೆಗಳಮೇಲೆ ತಂಪಾದ ಮಳೆಯನ್ನು ಕರೆಯಲಾ ರಂಭಿಸಿದುವು ಸಮುದ್ರದಿಂದ ತಂಪಾದ ಗಾಳಿಯು ಅವರ ಮೈಮೇಲೆ ಬೀಸಿ ತು. ಇದರಿಂದ ದೇವತೆಗಳಿಗೆ ಅಷ್ಟಾಗಿ ಬಾಧೆಯೇನೂ ತೋರಲಿಲ್ಲ ದೇವದಾ ನವರಿಬ್ಬರೂ ಇಷ್ಟು ಶ್ರಮವನ್ನಾದರೂ ಸಹಿಸಿಕೊಂಡು, ತಮ್ಮ ಶಕ್ತಿ ಮೀರಿ ಬಹುಕಾಲದವರೆಗೆ ಸಮುದ್ರವನ್ನು ಮಥಿಸುತ್ತಿದ್ದರೂ, ಅದರಲ್ಲಿ ಅ

ಮೃತವು ಹುಟ್ಟದಿರುವುದನ್ನು ನೋಡಿ, ಅಜಿತರೂಪಿಯಾದ ಭಗವಂತನು, ತಾನೇ ಕೈಕೊಟ್ಟು ಆ ಪರ್ವತವನ್ನು ಇನ್ನೂ ವೇಗದಿಂದ ಕಡೆಯಲಾರಂ ಭಿಸಿದನು ಹೀಗೆ ಭಗವಂತನು, ಮೇಘದಂತೆ ಶ್ಯಾಮಲವಾದ ಮೈಬಣ್ಣ ದಿಂದಲೂ, ನಡುವಿಗೆ ಸುತ್ತಿದ ಪೀತಾಂಬರವೆಂಬ ಪಟ್ಟೆಮಡಿಯಿಂದಲೂ, ಮಿಂಚಿನಂತೆ ಹೊಳೆಯುವ ಕಂಠಾಭರಣದಿಂದಲೂ, ಆಕಾಶಮಂಡಲವನ್ನೆ ಲ್ಲಾ ಬೆಳಗುವಂತಿರುವ ಕಿರೀಟದಿಂದಲೂ, ಝುಗಝುಗಿಸುವ ವನಮಾಲಿಕೆ ಯಿಂದಲೂ,ರಕ್ತಾಂತನೇತ್ರಗಳಿಂದಲೂ, ಜಗನ್ಮೋಹನಾಕಾರವುಳ್ಳವನಾ ಗಿ,ಸಮಸ್ತಲೋಕಗಳಿಗೂ ಅಭಯವನ್ನು ಕೊಡತಕ್ಕ ತನ್ನ ಕೈಗಳಿಂದವಾಸು ಕಿಯ ದೇಹವನ್ನು ಹಿಡಿದು, ಮಂದರಪರ್ವತದಿಂದ ಸಮುದ್ರವನ್ನು ಕಡೆ ಯುತ್ತ ನಿಂತಿರುವಾಗ, ಬೆಟ್ಟವನ್ನು ಹೊತ್ತಿರುವ ಬೇರೊಂದು ಬೆಟ್ಟದಂತೆ ಕಾಣುತಿದ್ದನು ಆಗಿನ ಮಥನವೇಗದಿಂದ ಸಮುದ್ರದಲ್ಲಿದ್ದ, ಮೀನು, ಮೊ ಸಳೆ, ಹಾವು, ಆಮೆ, ತಿಮಿ, ತಿಮಿಂಗಿಲ, ವ್ಯಾಳಗಳು, (ಆನೆಯ ಸುಂಡಿಲು ಳ್ಳ ಮೊಸಳೆಗಳು) ಇವೇಮೊದಲಾದ ಜಲಜಂತುಗಳೆಲ್ಲವೂ ಕ್ಷೋಭಹೊಂ ದಿ ತತ್ತಳಿಸುತಿದ್ದುವು. ಇಷ್ಟರಲ್ಲಿಯೇ ಆ ಸಮುದ್ರಮಧ್ಯದಿಂದ ಹಾಲಾ ಹಲವೆಂಬ ಭಯಂಕರವಾದ ವಿಷವೊಂದು ಹುಟ್ಟಿತು ಉಗ್ರವೇಗವುಳ್ಳ ಆ ವಿಷಾಗ್ನಿಯ ಬೇಗೆಯು, ಹತ್ತುದಿಕ್ಕುಗಳನ್ನೂ ದಹಿಸುವಂತೆ ನಾನಾಕಡೆ ಗೂ ವ್ಯಾಪಿಸುತ್ತಬಂದಿತು ಇದನ್ನು ತಡೆಯಲಾರದೆ, ಅಲ್ಲಿದ್ದ ದೇವಾಸು ರರೂ, ಮೂರುಲೋಕದ ಪ್ರಜೆಗಳೂ ಭಯದಿಂದ ತತ್ತಳಿಸುತ್ತ ಕೈಲಾಸ ಪರ್ವತದ ಬಳಿಗೆ ಬಂದು, ಅಲ್ಲಿ ಲೋಕಕ್ಷೇಮಕ್ಕಾಗಿ ಪಾರ್ವತಿಯೊಡನೆ ನೆಲೆ ಗೊಂಡು ಮೋಕ್ಷಾರ್ಥಿಯಾಗಿ ತಪಸ್ಸುಮಾಡುತ್ತಿರುವ ಪರಮಶಿವನನ್ನು ಕಂಡು, ನಮಸ್ಕರಿಸಿ ಹೀಗೆಂದು ಸ್ತುತಿಸುವರು. “ಓ ದೇವದೇವಾ ! ಸಮ ಸ್ತದೇವತೆಗಳಿಗೂ ಮೇಲೆನಿಸಿಕೊಂಡು, ಸಮಸ್ತಭೂತಗಳಿಗೂ ಅಂತರಾ ತ್ಮನಾಗಿ, ಸಮಸ್ತಭೂತಗಳನ್ನೂ ಸೃಷ್ಟಿಸತಕ್ಕ ನೀನು ನಮ್ಮನ್ನು, ಈವಿಷ ದಿಂದ ರಕ್ಷಿಸಬೇಕು! ಸಮಸ್ತಲೋಕಗಳಿಗೂ ನೀನೇ ಈಶ್ವರನು ! ಪ್ರಾ ಣಿಗಳನ್ನು ಸಂಸಾರದಲ್ಲಿ ಕಟ್ಟಿಡುವುದಕ್ಕೂ,ಅದರಿಂದ ಬಿಡಿಸುವುದಕ್ಕೂ,ನೀ ನೇ ಸಮರ್ಥನು ಆದುದರಿಂದಲೇ ಪಂಡಿತರು, ಆಶ್ರಿತದುಃಖನಿವಾರಕನಾದ

ನಿನ್ನನ್ನು ಭಕ್ತಿಯಿಂದಾರಾಧಿಸುವರು. ಸ್ವಯಂಪ್ರಕಾಶನಾದ ನೀನೇ ಸ
ತ್ವಾದಿಗುಣತ್ರಯಾತ್ಮಕವಾದ ನಿನ್ನ ಮಾಯೆಯಿಂದ ಪ್ರಪಂಚದ ಸೃಷ್ಟಿ
ಸ್ಥಿತಿಸಂಹಾರಗಳನ್ನು ನಡೆಸುವುದಕ್ಕಾಗಿ ಬ್ರಹ್ಮನೆಂದೂ, ವಿಷ್ಣುವೆಂದೂ,
ಶಿವನೆಂದೂ ಬೇರೆಬೇರೆ ನಾಮರೂಪಗಳನ್ನು ಹೊಂದುವೆ ಚೇತನಾಚೇತ
ನರೂಪವಾದ ಈ ಪ್ರಪಂಚವನ್ನು ಸೃಷ್ಟಿಸತಕ್ಕ ಪರಬ್ರಹ್ಮನೂ ನೀನೇ !
ಆ ಪ್ರಪಂಚಸ್ವರೂಪದಿಂದ ಕಾಣಿಸತಕ್ಕವನೂ ನೀನೇ! ಆ ಪ್ರಪಂಚದಲ್ಲಿ
ಒಳಹೊಕ್ಕು ಧರಿಸಿರತಕ್ಕವನೂ ನೀನೇ! ಸಮಸ್ತಶಾಸ್ತ್ರಗಳಿಂದ ಸಾಧಿಸಲ್ಪ
ಡತಕ್ಕ ಪರಬ್ರಹ್ಮವೂ ನೀನೇ. ನೀನೇ ಸಕಲಜಗತ್ಕಾರಣನು! ನೀನೇ ಕಾಲ
ಶರೀರಕನು! ಯಾಗಗಳೆಲ್ಲವೂ ನಿನ್ನ ಸ್ವರೂಪವು! ಪ್ರಾಣಗಳು, ಇಂದ್ರಿ
ಯಗಳು, ಪಂಚಭೂತಗಳು, ಸತ್ವಾದಿಗುಣಗಳು, ಇವೆಲ್ಲವೂ ನಿನ್ನಿಂದಲೇ
ತಮ್ಮತಮ್ಮ ಕಾರ್ಯಗಳಲ್ಲಿ ಪ್ರೇರಿಸಲ್ಪಡುವುವು ಕಾಲವೂ, ಯಜ್ಞ
ಗಳೂ ನಿನ್ನ ಸ್ವರೂಪವು. ನೀನು ಎಂದೆಂದಿಗೂ ವಿಕಾರವಿಲ್ಲದವನು.
ಸಮಸ್ತವಸ್ತುಗಳಲ್ಲಿಯೂ ಒಳಹೊಕ್ಕು ನಿಯಮಿಸತಕ್ಕವನು. ನೀನೇ ಬ್ರ
ಹ್ಮವು! ಧರ್ಮಗಳೆಲ್ಲವೂ ನಿನ್ನ ಶರೀರಗಳು! ಆ ಧರ್ಮದಿಂದ ಆರಾಧಿಸಲ್ಪಡ
ತಕ್ಕವನೂ ನೀನೇ ! ಅಕಾರ, ಉಕಾರ, ಮಕಾರಗಳೆಂಬ ಮೂರಕ್ಷರಗಳ
ನ್ನೊಳಕೊಂಡ ಪ್ರಣವಮಂತ್ರವೂ ನಿನ್ನನ್ನೇ ನಿರೂಪಿಸುವುದು ! ನೀನು ಸ
ರ್ವದೇವಶರೀರಕನು! ಅಗ್ನಿಯೇ ನಿನ್ನ ಮುಖವು ಭೂಮಿಯೇ ನಿನ್ನ ಪಾದ
ವು ಕಾಲವೇ ನಿನ್ನ ಶರೀರವು.ದಿಕ್ಕುಗಳೇ ನಿನ್ನ ಕಿವಿಗಳು!ವರುಣನೇ ನಿನ್ನ ನಾ
ಲಗೆ. ಆಕಾಶವೇ ನಿನ್ನ ನಾಭಿ! ವಾಯುವೇ ನಿನ್ನ ನಿಶ್ವಾಸವು! ಸೂರ್ಯನೇ
ನಿನ್ನ ನೇತ್ರಗಳು. ಜಲವೇ ನಿನ್ನ ರೇತಸ್ಸು! ನಿನ್ನ ಸ್ವರೂಪವೇ ಪ್ರಪಂಚ
ದಲ್ಲಿ ಉತ್ತಮಾಧಮಗಳೆನಿಸಿಕೊಂಡ ಸಮಸ್ತ ಜೀವರಾಶಿಗಳಿಗೂ ಆಧಾ
ರವೆನಿಸಿರುವುದು. ಚಂದ್ರನೇ ನಿನ್ನ ಮನಸ್ಸು ! ದ್ಯುಲೋಕವೇ ನಿನ್ನ ಶಿರ
ಸ್ಸು!ಸಮುದ್ರಗಳೇ ನಿನ್ನ ಉದರವು ಪರ್ವತಗಳೆಲ್ಲವೂ ನಿನ್ನ ಅಸ್ಥಿಪಂಜರವು.
ಓಷಧಿಗಳೆಲ್ಲವೂ ನಿನ್ನ ರೋಮಗಳು! ಗಾಯತ್ರಿ ಮೊದಲಾದ ಛಂದಸ್ಸು
ಗಳೇ ನಿನ್ನ ಶರೀರದೊಳಗಣ ಸಪ್ತಧಾತುಗಳು ನೀನು ವೇದಸ್ವರೂಪನು.
ವೇದೋಕ್ತಗಳಾದ ಧರ್ಮಗಳೇ ನಿನ್ನ ಹೃದಯವು. ತತ್ಪುರುಷ, ಅಘೋರ,

ಸದ್ಯೋಜಾತ, ವಾಮದೇವ, ಈಶಾನಗಳೆಂಬ ಐದು ಅನುವಾಕಗಳೂ ನಿನ್ನ ಐದುಮುಖದಿಂದ ಹೊರಟ ವಚನಗಳು ನೂರಮೂವತ್ತೆಂಟು ಮಂತ್ರಗಳೂ ಆ ನಿನ್ನ ಮುಖವಾಕ್ಯಗಳಲ್ಲಿಯೇ ಅಡಗಿರುವುವು. ಓ ದೇವಾ! ಸ್ವಯಂಪ್ರಕಾಶವಾಗಿ ಶಿವವೆಂದು ಕರೆಯಲ್ಪಡುವ ಪರಮಾತ್ಮತತ್ವವೇ ನಿನ್ನ ವಾಸಸ್ಥಾನವು (ಎಂದರೆ ನೀನು ಪರಮಾತ್ಮನಿಗೆ ಶರೀರರೂಪದಿಂದ ಅವನನ್ನು ಬಿಟ್ಟಗಲದೆ ಇರತಕ್ಕವನು) ಅಧರ್ಮಶಾಖೆಗಳಾದ ಡಂಭ, ಲೋಭ ಮುಂತಾದುವುಗಳೆಲ್ಲವೂ ನಿನ್ನ ಛಾಯೆಯು! ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಗಳಿಗೆ ಕಾರಣಗಳಾದ ಸತ್ವರಜಸ್ತಮೋಗುಣಗಳು ನಿನ್ನ ಮೂರು ಕಣ್ಣುಗಳು ಛಂದಸ್ಸುಗಳಿಂದ ಕೂಡಿದ ಪುರಾತನವೇದವೇ ನಿನ್ನ ಸಂಕಲ್ಪವು ನೀನು ಸಮಸ್ತವಸ್ತುಗಳಲ್ಲಿಯೂ ಅಂತರಾತ್ಮನಾಗಿ ಎಲ್ಲವನ್ನೂ ಸಾಕ್ಷಾತ್ಕರಿಸಬಲ್ಲವನು ಸಮಸ್ತಶಾಸ್ತ್ರಗಳನ್ನೂ ಪ್ರಕಾಶಗೊಳಿಸತಕ್ಕವನು. ಓ ಲೋಕಪಾಲಕಾ ! ಓ ಕೈಲಾಸವಾಸೀ ! ಬ್ರಹ್ಮದೇವನಾಗಲಿ, ವಿಷ್ಣುವಾಗಲಿ, ಈ ಇಂದ್ರನಾಗಲಿ, ಸ್ವಯಂಪ್ರಕಾಶವಾದ ನಿನ್ನ ಸ್ವರೂಪವನ್ನು ತಿಳಿಯಲಾರರು. ನಿನ್ನ ಸ್ವರೂಪದಲ್ಲಿ, ರಜಸ್ಸು, ತಮಸ್ಸು, ಮಿಶ್ರಸತ್ವವೆಂಬ ಪ್ರಾಕೃತಗುಣಗಳ ಸಂಪರ್ಕವೇ ಇರುವುದಿಲ್ಲ. ಅಂತಹ ಶುದ್ಧಸತ್ವಮಯವಾದ ನಿನ್ನ ಸ್ವರೂಪವನ್ನೇ ಪರಬ್ರಹ್ಮವೆಂದು ಹೇಳುವರು. ನಿನ್ನ ಸ್ವರೂಪಕ್ಕೆ ದೇವಮನುಷ್ಯಾದಿಭೇದಗಳೊಂದೂ ಉಂಟಾಗಲಾರವು. ಭೂತದ್ರೋಹಿಗಳಾದ ಅಧರ್ವ, ದಕ್ಷ,ತ್ರಿಪುರರೇ ಮೊದಲಾದ ಮಹಾವೀರರನ್ನು ನೀನು ನಾಶಮಾಡಿದ್ದರೂ ಅವೊಂದೂ ನಿನಗೆ ಸ್ತೋತ್ರಾರ್ಹವಾದ ವಿಷಯವಲ್ಲ ನಿನ್ನ ಮಹಾಮಹಿಮೆಯೆಂಬ ಸಮುದ್ರದಲ್ಲಿ ಈ ಕಾರ್ಯಗಳೆಲ್ಲವೂ ಬಿಂದುಮಾತ್ರಗಳಾಗಿರುವುವು. ಈ ಪ್ರಪಂಚವೆಲ್ಲವೂ, ಮೊದಲು ನಿನ್ನಿಂದ ಸೃಷ್ಟಿಸಲ್ಪಟ್ಟು, ಕೊನೆಗೆ ಪ್ರಳಯಕಾಲದಲ್ಲಿ ನಿನ್ನ ಹಣೆಗಣ್ಣಿನ ಅಗ್ನಿ ಜ್ವಾಲೆಯಿಂದಲೇ ಭಸ್ಮವಾದರೂ, ನೀನು ಆ ವಿಕಾರಗಳೊಂದನ್ನೂ ತಿಳಿಯದಿರುವೆ ನೀನು ಪಾರ್ವತಿಯೊಡಗೂಡಿ ಸಂಚರಿಸುತ್ತಿರುವುದನ್ನು ಕಂಡು,ಕೆಲವು ಮೂಢರು,ನಿನ್ನನ್ನು ಕಾಮುಕನೆಂದು ಹೇಳುವರು. ನೀನು ಶ್ಮಶಾನದಲ್ಲಿ ತಿರುಗುವುದನ್ನು ನೋಡಿ ನಿನ್ನನ್ನು ಕ್ರೂರನೆಂದೂ,ಹಿಂ

ಸಕನೆಂದೂ ಭ್ರಮಿಸುವರು, ಅಂತವರು ನಿನ್ನ ತತ್ವವನ್ನು ತಿಳಿದವರಲ್ಲ. ಆ ತ್ಮಸ್ವರೂಪವನ್ನು ತಿಳಿದು, ಆ ಆತ್ಮಾನುಭವದಿಂದ ಸಂತೋಷಿಸತಕ್ಕವರಾ ಗಿಯೂ, ಪ್ರಪಂಚಕ್ಕೆಲ್ಲಾ ಹಿತವನ್ನುಪದೇಶಿಸತಕ್ಕವರಾಗಿಯೂ ಇರತಕ್ಕ ಜ್ಞಾನಿಗಳಾದರೋ, ಈ ನಿನ್ನ ವ್ಯಾಪಾರಗಳನ್ನು ನೋಡಿಯೇ, ನಿನ್ನ ಪಾದ ಗಳನ್ನು ತಮ್ಮ ಹೃದಯದಲ್ಲಿಟ್ಟು ಧ್ಯಾನಿಸುವರು. ಲೋಕಕ್ಷೇಮಕ್ಕಾಗಿಯೇ ನೀನು ಕ್ರೂರವಾದ ಈ ತಪಸ್ಸನ್ನು ಮಾಡುತ್ತಿರುವೆ ಈ ನಿನ್ನ ಉದ್ದೇಶವನ್ನು ತಿಳಿಯದ ಮೂಢರು, ಲಜ್ಜೆಯಿಲ್ಲದೆ ನಿನ್ನಲ್ಲಿದೋಷಾರೋಪಣಗಳನ್ನು ಮಾ ಡುವರು. ಚೇತನಾಚೇತನಗಳಿಗಿಂತಲೂ ವಿಲಕ್ಷಣವಾಗಿಯೂ, ಸರ್ವವ್ಯಾ ಪಿಯಾಗಿಯೂ ಇರುವ ನಿನ್ನ ಸ್ವರೂಪವನ್ನು ಬ್ರಹ್ಮಾದಿಗಳೂಕೂಡ ತಿಳಿ ಯಲಾರರು ಇನ್ನು ಅವರು ನಿನ್ನ ಮಹಿಮೆಯನ್ನು ಸ್ತುತಿಸಬಲ್ಲರೆ ? ಹೀಗೆ ಬ್ರಹ್ಮಾದಿಗಳೇ ನಿನ್ನನ್ನು ಸ್ತುತಿಸಲಾರದಿರುವಾಗ, ಆಬ್ರಹ್ಮನ ಮಕ್ಕಳ ಮಕ್ಕಳಾದ ನಾವು ನಿನ್ನ ಗುಣಗಳನ್ನು ಯಥಾವತ್ತಾಗಿ ವರ್ಣಿಸಿ ಸ್ತುತಿಸಬೇಕೆಂದರೆ ಸಾಧ್ಯವೆ? ಹಾಗಿದ್ದರೂ ನಾವು ನಮ್ಮ ಶಕ್ತ್ಯನುಸಾರ ವಾಗಿ ನಿನ್ನನ್ನು ಸ್ತುತಿಸಿದೆವು. ಓ ಪರಮೇಶ್ವರಾ! ಮುಖ್ಯವಾಗಿ ಲೋಕದಲ್ಲಿ ನಿನಗಿಂತಲೂ ಮೇಲಾದ ವಸ್ತುವಾಗಲಿ, ನಿನಗಿಂತಲೂ ಬೇರೆಯಾದ ವಸ್ತು ವಾಗಲಿ ನಮಗೆ ಯಾವುದೊಂದೂ ಕಾಣುವುದಿಲ್ಲ ನಿನ್ನ ವಿಚಿತ್ರವ್ಯಾಪಾ ರಗಳನ್ನು ನಾವು ಹೀಗೆಂದು ತಿಳಿಯಲಾರೆವು ನೀನು ಲೋಕಕ್ಷೇಮಕ್ಕಾಗಿ ಈರೂಪದಿಂದ ತೋರುವೆಯೆಂಬುದನ್ನುಮಾತ್ರವೇ ನಾವು ಬಲ್ಲೆವು" ಎಂದರು *

ಪರೀಕ್ಷಿದ್ರಾಜಾ ಕೇಳು ! ಹೀಗೆ ಇಂದ್ರಾದಿದೇವತೆಗಳು, ಸಾಕ್ಷಾತ್ಪ ರಮಪುರುಷನಾದ ಶ್ರೀಮನ್ನಾರಾಯಣನಿಗೊಬ್ಬನಿಗೇ ಸಲ್ಲತಕ್ಕ ಅಸಾಧಾರ ಣ!ಗುಣಗಳನ್ನು ತನ್ನಲ್ಲಿ ಆರೋಪಿಸಿ, ಬಹಳವಾಗಿ ವರ್ಣಿಸುತ್ತಿರುವುದನ್ನೂ

---

* ಇಲ್ಲಿ ದೇವತೆಗಳು ಭಯಾತುರದಿಂದ ಯಥಾರ್ಥಜ್ಞಾನವನ್ನು ಮರೆತು. ರುದ್ರನನ್ನೇ ಪರಬ್ರಹ್ಮರೂಪವಾಗಿ ಸ್ತುತಿಸುವರೇಹೊರತು, ವಾಸ್ತವದಲ್ಲಿ ಅವನು ಪರಬ್ರಹ್ಮವಲ್ಲ. ಇದಕ್ಕಾಗಿಯೇ ರುದ್ರನು ಮುಂದೆ ಆ ದೇವತೆಗಳನ್ನುಕುರಿತು ಭ ಗವದಾರಾಧನರೂಪವಾಗಿಯೇ ಆ ವಿಷವನ್ನು ತಾನು ಕುಡಿಯುವುದಾಗಿ ಹೇಳುವನು.

ಕಾಲಕೂಟವಿಷದಿಂದ ತ್ರೈಲೋಕ್ಯವೂ ಭಯಗ್ರಸ್ತವಾಗಿರುವುದನ್ನೂ ನೋಡಿ ರುದ್ರನು, ಸರ್ವಭೂತಸುಹೃತ್ತಾದುದರಿಂದ ಆ ದೇವತೆಗಳ ವ್ಯಸನಕ್ಕಾಗಿ ಕನಿಕರಗೊಂಡು, ಸಮೀಪದಲ್ಲಿದ್ದ ಪಾರ್ವತಿಯನ್ನು ಕುರಿತು ಹೀಗೆಂದು ಹೇಳುವನು. "ಎಲೆ ದೇವಿ ! ಭಯಂಕರವಾದ ಕಾಲಕೂಟವಿಷದಿಂದ ಲೋಕದ ಪ್ರಜೆಗಳೆಲ್ಲರೂ ಎಷ್ಟು ವಿಪತ್ತಿಗೆ ಗುರಿಯಾಗಿರುವರು ನೋಡು ! ಹೀಗೆ ಪ್ರಾಣಭಯದಿಂದ ತತ್ತಳಿಸುತ್ತಿರುವ ಪ್ರಜೆಗಳಿಗೆ ಈಗ ನಾವು ಅವಶ್ಯವಾಗಿ ಅಭಯವನ್ನು ಕೊಟ್ಟು ಕಾಪಾಡಬೇಕು ಶಕ್ತಿಯಿದ್ದಾಗ ಮರೆಹೊಕ್ಕುಬಂದವರನ್ನು ರಕ್ಷಿಸಬೇಕು ಆಗಲೇ ಶಕ್ತಿಯು ಸಫಲವು. ಪ್ರಾಣಗಳು ಅಸ್ಥಿರವೆಂಬುದನ್ನು ತಿಳಿದ ಸಾಧುಗಳು ತಮ್ಮ ಪ್ರಾಣವನ್ನಾದರೂ ಕೊಟ್ಟು ಇತರರನ್ನು ಕಾಪಾಡುವರು, ಎಲೆ ಭದ್ರೇ! ಪ್ರಾಣಿವರ್ಗಗಳು ಭಗವನ್ಮಾಯೆಯಿಂದ ಮೋಹಿತವಾಗಿ, ಒಂದನ್ನೊಂದು ದ್ವೇಷಿಸುವುದೇನೋ ಸಹಜವು ಅಂತಹ ಸಂದರ್ಭಗಳಲ್ಲಿ, ದುರ್ಬಲರಾದವರಲ್ಲಿ ದಯೆಯನ್ನು ತೋರಿಸಿ, ಅವರನ್ನು ಕಾಪಾಡುವುದರಿಂದ ಸರ್ವಾಂತರಾತ್ಮನಾದ ಶ್ರೀಹರಿಯು ಸಂತೋಷಪಡುವನು ಆಭಗವಂತನ ಸಂತೋಷವೇ ನನ್ನ ಸಂತೋಷವೆಂದು ತಿಳಿ! ಅ ಭಗವಂತನೊಬ್ಬನನ್ನು ಸಂತೋಷಗೊಳಿಸುವುದರಿಂದ, ಚರಾಚರಾತ್ಮಕವಾದ ಸಮಸ್ತಪ್ರಪಂಚವನ್ನೂ ಸಂತೋಷಗೊಳಿಸಿದಂತಾಗುವುದು ಆದುದರಿಂದ ಈಗಲೇ ನಾನು ಆ ವಿಷವನ್ನು ಕುಡಿದುಬಿಡುವೆನು. ನನ್ನಿಂದ ಸಮಸ್ತಪ್ರಜೆಗಳಿಗೂ ಕ್ಷೇಮವುಂಟಾಗಲಿ!" ಎಂದು, ತನ್ನ ಪ್ರಿಯೆಯಾದ ಪಾರ್ವತಿಯನ್ನೊಪ್ಪಿಸಿ, ಆ ಕಾಲಕೂಟವಿಷವನ್ನು ಕುಡಿಯುವುದಕ್ಕೆ ಯತ್ನಿಸಿದನು ಅವನ ಮಹಿಮೆಯನ್ನು ಚೆನ್ನಾಗಿ ತಿಳಿದ ಪಾರ್ವತಿಯೂಕೂಡ ಅದಕ್ಕೆ ಅಡ್ಡಮಾತಾಡದೆ ಅನುಮೋದಿಸಿದಳು ಆಮೇಲೆ ರುದ್ರನು, ಪ್ರಜೆಗಳನ್ನು ಕಾಪಾಡಬೇಕೆಂಬ ಕನಿಕರದಿಂದ ಶಂಕೆಯಿಲ್ಲದೆ ಆ ಹಾಲಾಹಲವೆಂಬ ಘೋರವಿಷವನ್ನು ಕೈಗೆ ತೆಗೆದುಕೊಂಡು ಅದನ್ನು ಭಕ್ಷಿಸಿ ಬಿಟ್ಟನು. ಸಮುದ್ರಜಲದ ಕಲ್ಮಷರೂಪವಾದ ಆ ವಿಷವು, ರುದ್ರನಲ್ಲಿಯೂ ತನ್ನ ವೀರ್ಯವನ್ನು ತೋರಿಸುವುದಕ್ಕಾರಂಭಿಸಿತು. ಆದರೇನು ? ಆವನಿಗೆ ಯಾವಬಾಧೆಯನ್ನೂ ಮಾಡಲಾರದೆ, ಕೊನೆಗೆ ಅವನ ಕಂಠದಲ್ಲಿ ಕ




1463. ಕ್ಷೀರಸಾಗರಮಥನವು. ಉಚ್ಚೈಶ್ರವಸ್ಸು ಮೊದಲಾದುವುಗಳು ಹುಟ್ಟಿದುದು.

ಪ್ಪುರೇಖೆಯಾಗಿ ನಿಂತು ಆತನ ಕಂಠಕ್ಕೆ ಒಂದು ಅಪೂರ್ವಾಭರಣದಂ ತಾಯಿತು ಓ ಪರೀಕ್ಷಿದ್ರಾಜಾ ! ಹೀಗೆಯೇ ಪರೋಪಕಾರಬುದ್ಧಿಯುಳ್ಳ ಸಾಧುಗಳು, ಇತರರಿಗೆ ದುಃಖವುಂಟಾಗುವಸಂದರ್ಭದಲ್ಲಿ ಅದಕ್ಕೆ ತಾವೇ ತಲೆಯೊಡ್ಡಿ ನಿಲ್ಲುವರು ಇಂತಹ ಕಾರ್ಯಗಳಿಂದಲೇ ಸರ್ವಾಂತರಾತ್ಮನಾದ ಭಗವಂತನು ವಿಶೇಷತೃಪ್ತನಾಗುವುದರಿಂದ, ಇವೆಲ್ಲವೂ ಭಗವದಾರಾಧನ ರೂಪವೆಂದೇ ತಿಳಿ ! ಆಶ್ರಿತರಕ್ಷಾಧುರೀಣನಾದ ರುದ್ರನ ಈ ಅದ್ಭುತಕಾ ರ್ಯವನ್ನು ಕೇಳಿ, ಲೋಕದ ಸಮಸ್ತಪ್ರಜೆಗಳೂ, ಪಾರ್ವತಿಯೂ, ಬ್ರಹ್ಮ ನೂ, ಭಗವಂತನಾದ ವಿಷ್ಣುವೂ ಅವನನ್ನು ಬಹಳವಾಗಿ ಕೊಂಡಾಡಿದರು. ರುದ್ರನು ಆ ವಿಷವನ್ನು ಕೈಯಿಂದೆತ್ತಿ ಕುಡಿಯುವಾಗ, ಅವನ ಕೈಯಿಂದ ಚೆಲ್ಲಿದ ವಿಷಬಿಂದುಗಳನ್ನು, ಚೇಳು, ಹಾವು ಮುಂತಾದ ಕೆಲವು ಜಂತುಗ ಳೂ, ಕರವೀರ, ಮುಂತಾದ ವಿಷಲತೆಗಳೂ, ತಮ್ಮ ಪ್ರಾಣಗಳಿಂದ ಅವುಗ ಳನ್ನು ಗ್ರಹಿಸಿದುವು ಇದು ಏಳನೆಯ ಅಧ್ಯಾಯವು

---

ಕ್ಷೀರಸಮುದ್ರದಿಂದ ಕಾಮಧೇನು ಮೊದಲಾದ ವಸ್ತುಗಳು ಹುಟ್ಟಿದುದು ಸಮುದ್ರಸಂಭವೆಯಾದ ಮಹಾಲಕ್ಷ್ಮಿಯು ಭಗವಂತನನ್ನು ವರಿಸಿದುದು.

ರುದ್ರನು ವಿಷವನ್ನು ಕುಡಿದುಬಿಟ್ಟೊಡನೆ, ದೇವದಾನವರೆಲ್ಲರೂ ನಿ ಶ್ಚಿಂತರಾಗಿ, ಸಂತೋಷದಿಂದ ತಿರುಗಿ ಸಮುದ್ರವನ್ನು ಕಡೆಯಲಾರಂಭಿಸಿ ದರು ಆಮೇಲೆ ಅದರಿಂದ ಕಾಮಧೇನುವು ಹುಟ್ಟಿತು ಬ್ರಹ್ಮವಾದಿಗಳಾ ದ ಋಷಿಗಳೆಲ್ಲರೂ, ಅಗ್ನಿಕಾರ್ಯಕ್ಕೆ ಅವಶ್ಯಕಗಳಾದ, ತುಪ್ಪ, ಹಾಲು, ಮೊಸರು ಮುಂತಾದ, ಹವಿಸ್ಸುಗಳನ್ನು ಕೊಡತಕ್ಕ ಆಧೇನುವನ್ನು ಕಂಡು ತಮ್ಮ ಯಜ್ಞಕಾರ್ಯಕ್ಕಾಗಿ ಅದನ್ನು ಸ್ವೀಕರಿಸಿದರು. ಅದರಿಂದಾಚೆಗೆ ಆ ಸಮುದ್ರದಲ್ಲಿ ಚಂದ್ರಬಿಂಬದಂತೆ ಬಿಳುಪಾದ ಉಚ್ಚೈಶ್ಶ್ರವಸ್ಸೆಂಬ ಕುದುರೆಯು ಹುಟ್ಟಿತು ಬಲಿಯು ಅದಕ್ಕಾಸೆಪಟ್ಟು ಅದನ್ನು ತನ್ನದಾಗಿ ಸ್ವೀಕರಿಸಿದನು. ಇಂದ್ರನಿಗೂ ಅದರಲ್ಲಿ ಅಪೇಕ್ಷೆಯುಂಟಾಗಿದ್ದರೂ, ಸಮು ದ್ರದಲ್ಲಿ ಹುಟ್ಟುವ ಯಾವ ವಸ್ತುವಿಗೂ ಆಸೆಪಡದೆ, ಕಾಮಕ್ರೋಧ ಲೋ

ಭಾದಿಗಳನ್ನು ನಿಗ್ರಹಿಸಿಡಬೇಕೆಂದು ಹಿಂದೆಯೇ ಭಗವಂತನು ಆಜ್ಞೆಮಾಡಿ ದ್ದುದರಿಂದ,ಇಂದ್ರನು ಅದರಲ್ಲಿ ಆಸೆಯನ್ನು ತೋರಿಸದೆ ಉದಾಸೀನನಾಗಿ ದ್ದನು ಅದರಿಂದಾಚೆಗೆ ಸಮುದ್ರದಿಂದ ಐರಾವತವೆಂಬ ಆನೆಯು ಹುಟ್ಟಿ ತು ನಾಲ್ಕು ಕೊಂಬುಗಳಿಂದಲೂ, ಶುಭ್ರವಾದ ಮೈಬಣ್ಣದಿಂದಲೂ ಶೋಭಿತವಾದ ಆ ಆನೆಯು, ತನ್ನ ಸೊಬಗಿನಿಂದ ಉನ್ನತಶಿಖರಗಳುಳ್ಳ ಕೈ ಲಾಸಪರ್ವತದ ಸೊಬಗನ್ನೂ ಹೀಗಳೆಯುವಂತೆ ತೋರುತಿತ್ತು ಆದರಿಂ ದಾಚೆಗೆ ಸಮುದ್ರದಿಂದ ಅಷ್ಟದಿಗ್ಗಜಗಳೂ, ಅಭ್ರಮು ಮೊದಲಾದ ಎಂ ಟುಹೆಣ್ಣಾನೆಗಳೂ ಹುಟ್ಟಿದುವು ಆಮೇಲೆ ಕೌಸ್ತುಭವೆಂಬ ಪದ್ಮರಾ ಗಮಣಿಯು ಹುಟ್ಟಿತು ಆ ಕೌಸ್ತುಭರತ್ನವನ್ನು ಶ್ರೀಮಹಾವಿಷ್ಣುವು ತನ್ನ ವಕ್ಷಸ್ಥಲಕ್ಕೆ ಭೂಷಣವಾಗಿ ಪರಿಗ್ರಹಿಸಿದನು. ಅದರಿಂದಾಚೆಗೆ ಸ್ವರ್ಗ ಲೋಕಕ್ಕೆ ಅಲಂಕಾರಭೂತವಾದ ಪಾರಿಜಾತವೃಕ್ಷವು ಹುಟ್ಟಿತು ಓ ಪರೀ ಕ್ಷಿದ್ರಾಜಾ! ನೀನು ನಿನ್ನ ಪ್ರಜೆಗಳ ಕೋರಿಕೆಗಳನ್ನೆಲ್ಲಾ ಕೈಗೂಡಿಸುವಂತೆ, ಆ ಪಾರಿಜಾತವೃಕ್ಷವೂಕೂಡ ಸಮಸ್ತಪ್ರಾಣಿಗಳ ಕೋರಿಕೆಯನ್ನೂ ಆಗಾ ಗ ಈಡೇರಿಸಿಕೊಡುವುದು ಅದರಿಂದಾಚೆಗೆ ಸಮುದ್ರದಲ್ಲಿ ಅಪ್ಸರಸ್ತ್ರೀಯ ರು ಹುಟ್ಟಿದರು ಅವರು ಹುಟ್ಟುವಾಗಲೇ ಸ್ವರ್ಣಮಯವಾದ ಕಂಠಾಭರ ಣಗಳಿಂದಲೂ, ಅಂದವಾದ ವಸ್ತ್ರಗಳಿಂದಲೂ ಶೋಭಿತರಾಗಿ, ತಮ್ಮ ನಡೆ ನುಡಿಗಳಿಂದಲೂ, ಕುಡಿನೋಟಗಳಿಂದಲೂ,ಅಲ್ಲಿದ್ದ ಸಮಸ್ತದೇವತೆಗಳ ಮ ನಸ್ಸನ್ನೂ ಮೋಹಗೊಳಿಸುತಿದ್ದರು ಅದರಿಂದಾಚೆಗೆ ಮಿಂಚುಹೊಡೆದಂತೆ ತನ್ನ ಕಾಂತಿಯಿಂದ ಸಮಸ್ತದಿಕ್ಕುಗಳನ್ನೂ ಬೆಳಗುತ್ತ, ಶ್ರೀಮಹಾವಿಷ್ಣು ವಿಗೆ ನಿತ್ಯಾನಪಾಯಿನಿಯಾದ ಲಕ್ಷ್ಮೀದೇವಿಯು, ಜಲಮಧ್ಯದಿಂದ ಮೇಲೆ ದ್ದು ಬಂದಳು ಅಲ್ಲಿದ್ದ ದೇವದಾನವರೆಲ್ಲರೂ ಆವಳ ರೂಪಕ್ಕೂ, ಅವಳ ಗಾಂಭೀರ್ಯಕ್ಕೂ, ವಯಸ್ಸಿಗೂ, ಕಾಂತಿಗೂ, ಮಹಿಮೆಗೂ, ಮರುಳಾಗಿ, ಎಲ್ಲರೂ ಅವಳನ್ನೇ ಕಣ್ಣಿಟ್ಟುನೋಡುತಿದ್ದರು ದೇವೇಂದ್ರನು ಅವಳಿಗಾ ಗಿ ರತ್ನಪೀಠವನ್ನು ತಂದೊಪ್ಪಿಸಿದನು ಮಹಾನದಿಗಳೆಲ್ಲವೂ ಮನುಷ್ಯಾ ಕೃತಿಯಲ್ಲಿ ಬಂದು ಸುವರ್ಣಕುಂಭಗಳಿಂದ ಶುದ್ಧಜಲವನ್ನು ತಂದೊಪ್ಪಿಸಿ ದುವು ಭೂದೇವಿಯು ಅವಳ ಅಭಿಷೇಕಕ್ಕೆ ಬೇಕಾದ ಸಮಸ್ತವಸ್ತುಗಳನ್ನೂ

ತಂದೊಪ್ಪಿಸಿದಳು ಗೋವುಗಳು ಪಂಚಗವ್ಯಗಳನ್ನು ತಂದೊಪ್ಪಿಸಿದುವು ವ
ಸಂತನು ಚೈತ್ರವೈಶಾಖಗಳಲ್ಲಿ ಹುಟ್ಟತಕ್ಕ ಫಲಪುಷ್ಪಗಳೆಲ್ಲವನ್ನೂ ತಂದೊ
ಪ್ಪಿಸಿದನು ಋಷಿಗಳೆಲ್ಲರೂ ಸೇರಿ ಅವಳಿಗೆ ಶಾಸ್ತ್ರೋಕ್ತವಾಗಿ ಅಭಿಷೇಕಗಳ
ನ್ನು ನಡೆಸಿದರು ಗಂಧರ್ವರು ಅವಳ ಮುಂದೆ ನಿಂತು ಮಂಗಳಗಾನವ
ನ್ನು ಮಾಡುತಿದ್ದರು ಅಪ್ಸರಸೆಯರು ನರ್ತಿಸುತಿದ್ದರು ಮೇಘಗಳು
ಮೃದಂಗ, ಪಣವ, ಮುರಜ, ಪಟಹ, ಗೋಮುಖ, ಶಂಖ, ವೇಣು, ವೀಣಾ
ಮೊದಲಾದ ವಾದ್ಯಗಳನ್ನು ನುಡಿಸುತಿದ್ದುವು ಆಮೇಲೆ ಅಷ್ಟದಿಗ್ಗಜಗಳೂ
ಕೂಡಿ, ಬ್ರಾಹ್ಮಣರ ಸ್ವಸ್ತಿವಾಚನಗಳೊಡನೆ ಪೂರ್ಣಕಲಶಗಳನ್ನು ತಂದು
ಅವಳಿಗೆ ಅಭಿಷೇಕವನ್ನು ಮಾಡಿದುವು ಸಮುದ್ರರಾಜನು ಸುವರ್ಣಮ
ಯವಾದ ಎರಡು ವಸ್ತ್ರಗಳನ್ನು ತಂದೊಪ್ಪಿಸಿದನು ವರುಣನು ಭ್ರಮರ
ಧ್ವನಿಯೊಡಗೂಡಿದ ವೈಜಯಂತೀಮಾಲೆಯನ್ನು ತಂದೊಪ್ಪಿಸಿದನು ವಿಶ್ವ
ಕರ್ಮಪ್ರಜಾಪತಿಯು ವಿಚಿತ್ರಗಳಾದ ಭೂಷಣಗಳನ್ನು ತಂದೊಪ್ಪಿಸಿದನು
ಸರಸ್ವತೀದೇವಿಯು ಹಾರವನ್ನೂ, ಬ್ರಹ್ಮನು ಆಕೆಯ ಕೈಗೆ ಲೀಲಾರ್ಥವಾ
ದ ಒಂದು ಕಮಲವನ್ನೂ, ನಾಗರು ಎರಡುಕುಂಡಲಗಳನ್ನೂ ತಂದೊಪ್ಪಿ
ಸಿದರು ಹೀಗೆ ಬಗೆಬಗೆಯ ಮಂಗಳಭೂಷಣಗಳಿಂದಲಂಕೃತಳಾದ ಲಕ್ಷ್ಮೀ
ದೇವಿಯು, ಭ್ರಮರಝಂಕಾರದಿಂದ ಕೂಡಿದ ನೈದಿಲೆಯ ಹಾರವನ್ನು
ಕೈಯಲ್ಲಿ ಹಿಡಿದು, ಕುಂಡಲಕಾಂತಿವಿಶಿಷ್ಟವಾದ ಕಪೋಲದೊಡನೆ
ಮುಖದಲ್ಲಿ ಲಜ್ಜಾಸೂಚಕವಾದ ಮಂದಹಾಸವನ್ನು ಬೀರುತ್ತ ಮುಂದಿದ್ದ
ದೇವಸಮೂಹವನ್ನು ಸುತ್ತಲೂ ತಿರುಗಿ ನೋಡಿದಳು ಕುಂಕುಮ
ಮಿಶ್ರವಾದ ಚಂದನಾನುಲೇಪನದಿಂದ ಘಮಘಮಿಸುವ ಎದೆಯುಳ್ಳವ
ಳಾಗಿ, ಕಾಲಂದುಗೆಗಳ ಘಲಘಲಧ್ವನಿಯೊಡನೆ ಅತ್ತಿತ್ತ ಶತಪಥವನ್ನು ಮಾ
ಡುತ್ತಿದ್ದಾಗ, ಸಂಚಾರಮಾಡುವ ಸುವರ್ಣಲತೆಯೋ ಎಂಬಂತೆ ಕಾಣುತಿದ್ದ
ಳು ಆಮೇಲೆ ಆ ಮಹಾಲಕ್ಷ್ಮಿಯು, ಮುಂದಿದ್ದ ದೇವಸಮೂಹದಲ್ಲಿ ಎಣೆ
ಯಿಲ್ಲದ ಸದ್ಗುಣಗಳುಳ್ಳವನಾಗಿಯೂ ಯಾವವಿಧವಾದ ದುರ್ಗುಣವೂ
ಇಲ್ಲದವನಾಗಿಯೂ, ನಾಶರಹಿತನಾಗಿಯೂ, ತನಗೆ ಅನುರೂಪನಾಗಿಯೂ
ಇರುವ ಪತಿಯಾರೆಂಬುದನ್ನು ತಿಳಿಯುವುದಕ್ಕಾಗಿ, ಅಲ್ಲಿದ್ದ ಸಿದ್ಧ, ಚಾರ

ಣ, ಯಕ್ಷ, ಗಂಧರ್ವರೇ ಮೊದಲಾದ ಸಮಸ್ತದೇವವರ್ಗಗಳನ್ನೂ ತಿರು ತಿರುಗಿ ನೋಡಿದಳು ಒಬ್ಬೊಬ್ಬರಲ್ಲಿಯೂ, ಒಂದೊಂದು ದೋಷ ವು ತೋರಿಬಂದುದರಿಂದ, ಅವಳ ಮನಸ್ಸಿಗೆ ಯಾರೂ ತನಗೆ ತಕ್ಕ ಪತಿ ಯೆಂದು ತೋರಲಿಲ್ಲ ಆಗ ಲಕ್ಷ್ಮೀದೇವಿಯು ಮನಸ್ಸಿನಲ್ಲಿ ಹೀಗೆಂದು ಯೋಚಿಸುವಳು "ಇಲ್ಲಿ ಕೆಲವರು (ರುದ್ರ ದೂರ್ವಾಸ ಮೊದಲಾದವರು) ತಪಸ್ಸಿನಿಂದ ಮೇಲೆನಿಸಿಕೊಂಡಿದ್ದರೂ ಅವರು, ಕೋಪವನ್ನು ಜಯಿಸ ಲಾರರು. ಗುರು, ಶುಕ್ರ ಮೊದಲಾದ ಬೇರೆ ಕೆಲವರು ಬುದ್ಧಿಯಲ್ಲಿ ಮೇಲೆ ನಿಸಿಕೊಂಡಿದ್ದರೂ,ಅವರು ಸ್ವಪ್ರಯೋಜನಾಪೇಕ್ಷೆಯನ್ನು ಬಿಟ್ಟವರಲ್ಲ ಪ್ರ ಯೋಜನಾಪೇಕ್ಷೆಯನ್ನು ತ್ಯಜಿಸಿದ ಜ್ಞಾನವೇ ಜ್ಞಾನವೆನಿಸುವುದೇಹೊರ ತು,ಅದಿಲ್ಲದ ಜ್ಞಾನವು ಉತ್ತಮಜ್ಞಾನವೆನಿಸುವುದಿಲ್ಲ ಬ್ರಹ್ಮನೇ ಮೊದಲಾ ದ ಕೆಲವರು ವಾಸ್ತವದಲ್ಲಿ ಮಹಾಮಹಿಮೆಯುಳ್ಳವರು ಅವರೂ ಕಾಮವ ನ್ನು ಜಯಿಸಿದವರಲ್ಲ ಏಕೆಂದರೆ ಬ್ರಹ್ಮದೇವನು ತನ್ನ ಹೊಟ್ಟೆಯಲ್ಲಿ ಹುಟ್ಟಿ ದ ಮಗಳನ್ನೇ ಕಾಮಿಸಿರುವನು. ಇಂದ್ರನೇ ಮೊದಲಾದ ಬೇರೆ ಕೆಲವರು ಐಶ್ವರ್ಯದಿಂದ ಪ್ರಸಿದ್ಧಿಗೊಂಡಿರುವರು ಆದರೇನು? ಅವರ ಐಶ್ವರ್ಯವೂ ಕೂಡ ಬೇರೊಬ್ಬ ಮಹಾಪುರುಷನ ಸಂಕಲ್ಪದಿಂದಾದುದೇಹೊರತುಸ್ವತಂ ತ್ರವಾಗಿಬಂದುದಲ್ಲ ಆ ಐಶ್ವರ್ಯವು ಸ್ಥಿರವಾದುದೂ ಅಲ್ಲ ಯಮನೇ ಮೊ ದಲಾದವರು, ಕೇವಲಧರ್ಮಸ್ವರೂಪವಾಗಿಯೇ ಇದ್ದರೂ, ಅವರಿಗೆ ಪ್ರಾ ಣಿಗಳಲ್ಲಿ ದಯೆಯೆಂಬುದೇ ಇಲ್ಲ ಕೆಲವರು ತ್ಯಾಗಶೀಲರಾಗಿದ್ದರೂ ಅವರ ತ್ಯಾಗವು ಉತ್ತಮಪುರುಷಾರ್ಥವನ್ನು ಕೈಗೂಡಿಸುವಹಾಗೆ ತೋ ರಲಿಲ್ಲ ಯಾವ ದಾನಧರ್ಮಗಳನ್ನಾದರೂ ಬೇರೆ ಪ್ರಯೋಜನಾ ಪೇಕ್ಷೆಯಿಲ್ಲದೆ ಭಗವದರ್ಪಣರೂಪವಾಗಿ ಮಾಡಿದಾಗಲೇ ಅವು ಮು ಕ್ತಿಕಾರಣವಾಗುವುವು ಕೆಲವರು ವೀರ್ಯದಿಂದ ಪ್ರಸಿದ್ಧರಾಗಿದ್ದರೂ ಅವರ ವೀರ್ಯವೂಕೂಡ ಭಗವಂತನ ವೀರ್ಯದಿಂದ ಆಗಾಗ ಅಡಗಿ ಸಲ್ಪಡುವುವು ಆದುದರಿಂದ ಆ ಪರಮಪುರುಷನೊಬ್ಬನುಹೊರತು ಉ ಳಿದವರೆಲ್ಲರೂ ಆತನ ಮಾಯಾಗುಣಗಳಾದ ಸತ್ವರಜಸ್ತಮಸ್ಸುಗಳಲ್ಲಿ ಕಟ್ಟುಬಿದ್ದವರೇಹೊರತು, ಈ ದೇವಸಮೂಹದಲ್ಲಿ ಆ ಪ್ರಕೃತಿಗುಣಗಳ

ಸಂಬಂಧವಿಲ್ಲದವರೊಬ್ಬರೂ ಇಲ್ಲವು ಕೆಲವು ಮಹರ್ಷಿಗಳು (ಮಾರ್ಕಂ
ಡೇಯಾದಿಗಳು) ಚಿರಂಜೀವಿಗಳೆನಿಸಿಕೊಂಡಿದ್ದರೂ ಅವರ ನಡತೆಯು
ಅಷ್ಟಾಗಿ ನಿರ್ದುಷ್ಟವಾದುದಲ್ಲ ಅವರೂ ಇಂದ್ರಿಯತೃಪ್ತಿಗಾಗಿ ಪ್ರ
ವೃತ್ತಿಧರ್ಮದಲ್ಲಿಯೇ ಬಿದ್ದು ಕಾಲವನ್ನು ಕಳೆದವರು. ಹಾಗಿಲ್ಲದೆ
ಸುಸ್ವಭಾವವುಳ್ಳವರಾಗಿದ್ದವರು ಚಿರಂಜೀವಿಗಳೆಲ್ಲ ಕೆಲವರಲ್ಲಿ ಆಯು
ಸ್ಸು, ನಡತೆ ಇವೆರಡೂ ತೃಪ್ತಿಕರವಾಗಿ ಕಾಣಬರುತಿದ್ದರೂ, ಅವರ
ಆಕಾರವೂ,ವೇಷವೂ ಬಹಳ ಅಮಂಗಳವಾಗಿ ತೋರುತ್ತಿರುವುದು ಮೇಲೆ
ಹೇಳಿದ ದೋಷಗಳೊಂದೂ ಇಲ್ಲದೆ, ಸಮಸ್ತ ಕಲ್ಯಾಣಗುಣಗಳಿಗೂ ನೆಲೆ
ಯಾಗಿ, ಮಂಗಳಮೂರ್ತಿಯೆನಿಸಿಕೊಂಡವನು ಆ ಶ್ರೀಹರಿಯೊಬ್ಬನೇ!
ಆದರೇನು? ಆ ಭಗವಂತನು ಸಹಜವಾಗಿಯೇ ಅವಾಪ್ತಸಮಸ್ತಕಾಮನು.
ಅವನಿಗೆ ಲೋಕದಲ್ಲಿ ಆಸೆಪಡಬೇಕಾದುದೊಂದೂ ಇರುವುದಿಲ್ಲ ಈ ಕಾರ
ಣದಿಂದಲೇ ಅವನು, ಸಮಸ್ತ ದೇವತೆಗಳೂ ನನ್ನನ್ನು ಮೋಹಿಸುತ್ತಿರುವಾ
ಗಲೂ, ತಾನುಮಾತ್ರ ಸ್ವಲ್ಪವೂ ನನ್ನಲ್ಲಿ ಆಸೆಯನ್ನು ತೋರಿಸದಿರುವನು.
ಇದಕ್ಕೆ ನಾನೇನು ಮಾಡಲಿ" ಎಂದು ತನ್ನಲ್ಲಿಯೇ ತಾನು ಸ್ವಲ್ಪಕಾಲದವ
ರೆಗೆ ಆಲೋಚಿಸುತಿದ್ದು, ಕೊನೆಗೆ ಪೂರ್ಣಕಾಮನಾದ ಭಗವಂತನು ತನ್ನ
ನ್ನು ಅಪೇಕ್ಷಿಸದಿದ್ದರೂ, ತಾನೆಯಾದರೂ ಹೋಗಿ, ಎಣೆಯಿಲ್ಲದ ಗುಣ
ಗಳಿಂದ ಎಲ್ಲರಿಗೂ ಆಸೆ ಹುಟ್ಟಿಸತಕ್ಕವನಾಗಿಯೂ, ಭೋಗಮೋಕ್ಷಪ್ರದ
ನಾಗಿಯೂ ಇರುವ ಆ ಶ್ರೀಹರಿಯನ್ನೇ ವರಿಸುವೆನು" ಎಂದು ಮನಸ್ಸಿನಲ್ಲಿ
ನಿರ್ಧರಿಸಿಕೊಂಡಳು

ಒಡನೆಯೇ ಆ ಲಕ್ಷ್ಮೀದೇವಿಯು,ಮಕರಂದಪಾನದಿಂದ ಮದಿಸಿದ
ಭ್ರಮರಗಳ ಗಾನಧ್ವನಿಯಿಂದ ಕೂಡಿದುದಾಗಿಯೂ, ಅತಿಮನೋಹರ
ವಾಗಿಯೂ ಇರುವ ಕಮಲಮಾಲಿಕೆಯನ್ನು ಕೈಯಲ್ಲಿ ಹಿಡಿದು ತಾನಾಗಿ
ಯೇಹೋಗಿ, ಅದನ್ನು ಭಗವಂತನ'ಕೊರಲಿಗೆ ಹಾಕಿ, ಲಜ್ಜಾಸೂಚಕವಾದ
ಮಂದಹಾಸದೊಡನೆ, ಆ ಭಗವಂತನ ಸಮೀಪದಲ್ಲಿ ನಿಂತು, ಆತನ ವಕ್ಷಸ್ಥ
ಲವನ್ನೇ ತನಗೆ ನಿತ್ಯನಿವಾಸವನ್ನಾಗಿ ಮಾಡಿಕೊಳ್ಳಬೇಕೆಂಬ ಕುತೂಹಲ
ದಿಂದ, ಅವನ ಅನುಗ್ರಹವನ್ನು ನಿರೀಕ್ಷಿಸುತಿದ್ದಳು ಆಗ ಸರ್ವಲೋಕಜ

ನಕನಾದ ಭಗವಂತನು, ಆಕೆಯ ಅಭಿಪ್ರಾಯವನ್ನು ತಿಳಿದು, ಲೋಕಮಾತೆಯಾಗಿಯೂ, ಸಮಸ್ತಭಾಗ್ಯಗಳಿಗೂ ಮುಖ್ಯಾಧಾರಭೂತೆಯಾಗಿಯೂ ಇರುವ ಆಕೆಯನ್ನು ತನ್ನ ವಕ್ಷಸ್ಥಲದಲ್ಲಿ ಸ್ವೀಕರಿಸಿದನು ಲಕ್ಷ್ಮೀದೇವಿಯೂ ಕೂಡ ಆ ಭಗವಂತನ ಎದೆಯಲ್ಲಿ ನೆಲೆಗೊಂಡು, ಲೋಕಪಾಲರೊಡಗೂಡಿದ ತನ್ನ ಸಮಸ್ತಪ್ರಜೆಗಳನ್ನೂ ಕೃಪಾಸೂಚಕವಾದ ತನ್ನ ಕಟಾಕ್ಷದಿಂದ ಒಂದಾವರ್ತಿ ನೋಡಿದಳು ಈ ಕಾಲದಲ್ಲಿ ದೇವಗಂಧರ್ವಸಿದ್ಧಚಾರಣಾದಿಗಳೆಲ್ಲರೂ ಸ್ತ್ರೀಸಮೇತರಾಗಿ ಬಂದು, ಶಂಖ, ತೂರ್ಯ, ಮೃದಂಗ, ಮೊದಲಾದ ಮಂಗಳವಾದ್ಯಗಳೊಡನೆ ಗಾನನರ್ತನಗಳನ್ನು ಮಾಡತೊಡಗಿದರು ಬ್ರಹ್ಮರುದ್ರಾದಿ ದೇವತೆಗಳೂ, ಅಂಗಿರಸ್ಸು ಮೊದಲಾದ ಪ್ರಜಾಧಿಪತಿಗಳೂ, ಲಕ್ಷ್ಮೀಸಮೇತನಾದ ಭಗವಂತನಮೇಲೆ ಪುಷ್ಪವರ್ಷಗಳನ್ನು ಕರೆಯುತ್ತ, ಆತನ ಅಸಾಧಾರಣಗುಣಗಳನ್ನು ಪ್ರತಿಪಾದಿಸತಕ್ಕ ವೇದಮಂತ್ರಗಳಿಂದ ಅವನನ್ನು ಕೀರ್ತಿಸಿ ಕೊಂಡಾಡುತಿದ್ದರು ಶ್ರೀಮಹಾಲಕ್ಷ್ಮಿಯ ಕೃಪಾಕಟಾಕ್ಷದಿಂದ ಅನುಗ್ರಹಿಸಲ್ಪಟ್ಟ ಅಲ್ಲಿದ್ದ ಪ್ರಜೆಗಳೂ, ಪ್ರಜಾಧಿಪತಿಗಳೂ ಸೌಶೀಲ್ಯಾದಿಗುಣಗಳಿಂದ ಮೇಲೆನಿಸಿಕೊಂಡು ಉತ್ಸಾಹಭರಿತರಾದರು. ಅಲ್ಲಿದ್ದ ದೈತ್ಯದಾನವರಿಗೆ ಈ ಭಾಗ್ಯವಿಲ್ಲದೆ, ಅವರು ಕ್ರಮಕ್ರಮವಾಗಿ ಬಲಹೀನರಾಗಿ, ಉತ್ಸಾಹಭಂಗದಿಂದ ಕಾಂತಿಗುಂದುತ್ತ ಬಂದರು ಅವರ ಬುದ್ಧಿಯೂ ಮಂಕಾಯಿತು ಹೀಗೆ ಸಮುದ್ರದಿಂದ ಮಹಾಲಕ್ಷ್ಮಿಯು ಹುಟ್ಟಿ, ಭಗವಂತನ ವಕ್ಷಸ್ಥಲವನ್ನು ಸೇರಿದಮೇಲೆ ಸುರೆಗೆ ಅಭಿಮಾನಿದೇವತೆಯಾದ ವಾರುಣಿಯೆಂಬ ಕನ್ನಿಕೆಯೊಬ್ಬಳು ಹುಟ್ಟಿದಳು. ಆಕೆಯನ್ನು ಭಗವಂತನ ಅನುಮತಿಯಿಂದ ಅಸುರರು ಸ್ವೀಕರಿಸಿದರು. ಓ ಪರೀಕ್ಷಿದ್ರಾಜಾ! ಅಮೃತವನ್ನು ಪಡೆಯಬೇಕೆಂಬ ಉದ್ದೇಶದಿಂದ ದೇವಾಸುರರಿಬ್ಬರೂ ಮೇಲೆಮೇಲೆ ಉತ್ಸಾಹದಿಂದ ಅದನ್ನು ಕಡೆಯುತ್ತಿರುವಾಗ, ಅದರಿಂದ ಅದ್ಭುತಾಕಾರವುಳ್ಳ ದಿವ್ಯಪುರುಷನೊಬ್ಬನು ಹುಟ್ಟಿದನು. ಆ ಪುರುಷನಿಗಾದರೋ ನೀಡಿದ ದುಂಡಾದ ತೋಳುಗಳು ಶಂಖದಂತೆ ಅಂದವಾದ ಕೊರಳು! ಕೆಂಪಾದನೇತ್ರಗಳು! ವಿಶಾಲವಾದ ಎದೆ! ಶ್ಯಾಮಲವಾದ ದೇಹಕಾಂತಿ! ಎಳೆ

ಯೌವನದಿಂದ ಕೂಡಿದ ವಯಸ್ಸು! ಕಂಠದಲ್ಲಿ ಪುಷ್ಪ ಮಾಲಿಕೆ! ಮೈ ಮೇಲೆ ಸರ್ವಾಭರಣಗಳು! ನಡುವಿಗೆ ಸುತ್ತಿದ ಹೊಂಬಣ್ಣದ ಪಟ್ಟೆಮಡಿ! ಕಿವಿಯಲ್ಲಿ ರತ್ನಕುಂಡಲಗಳು! ತಲೆಯಲ್ಲಿ ಸುರುಳಿಗಟ್ಟಿದ ನುಣುಪಾದ ಕೂದಲು! ಮುಖದಲ್ಲಿ ಮುಗುಳ್ನಗೆ! ಸಿಂಹದಂತೆ ಗಂಭೀರವಾದ ನಡೆ! ಇಂತಹ ದಿವ್ಯಾಕೃತಿಯಿಂದೊಪ್ಪುತಿದ್ದ ಆ ಪುರುಷನು, ಕೈಯಲ್ಲಿ ಅಮೃತಪೂರ್ಣವಾದ ಕಲಶವನ್ನು ಹಿಡಿದು, ಸಮುದ್ರಮಧ್ಯದಿಂದ ಮೇಲೆದ್ದುಬಂದನು. ಓ ರಾಜೇಂದ್ರಾ! ಅವನನ್ನು ಸಾಮಾನ್ಯಪುರುಷನೆಂದೆಣಿಸಬೇಡ ಸಾಕ್ಷಾದ್ಭಗವಂತನ ಅಂಶದಿಂದಲೇ ಹುಟ್ಟಿದವನು. ಅವನಿಗೆ ಧನ್ವಂತರಿಯೆಂದು ಹೆಸರು. ಅವನು ಆಯುರ್ವೇದವೆಂಬ ವೈದ್ಯಶಾಸ್ತ್ರದ ಮರ್ಮವನ್ನು ಚೆನ್ನಾಗಿ ತಿಳಿದವನು. ಅವನಿಗೂ ಯಜ್ಞಗಳಲ್ಲಿ ಹವಿರ್ಭಾಗವುಂಟು. ಆ ದಿವ್ಯಪುರುಷನು, ಅಮೃತಕಲಶವನ್ನು ಕೈಯಲ್ಲಿ ಹಿಡಿದು ಬರುತ್ತಿರುವುದನ್ನು ನೋಡಿದಕೂಡಲೆ, ಆ ಸಮುದ್ರದಲ್ಲಿ ಹುಟ್ಟುವ ಸಮಸ್ತವಸ್ತುಗಳೂ ತಮಗೇ ಸೇರಬೇಕೆಂಬ ಅತ್ಯಾಸೆಯುಳ್ಳ ದೈತ್ಯರೆಲ್ಲರೂ, ಆ ಧನ್ವಂತರಿಯ ಕೈಯಲ್ಲಿದ್ದ ಅಮೃತಕಲಶವನ್ನು ಬಲಾತ್ಕಾರದಿಂದ ಕಿತ್ತುಕೊಂಡು ಪಲಾಯನಮಾಡಿದರು. ಇದನ್ನು ನೋಡಿ ದೇವತೆಗಳಿಗೆ ಮಹಾವ್ಯಸನವುಂಟಾಯಿತು. ಅವರೆಲ್ಲರೂ ಭಗವಂತನಲ್ಲಿ ಬಂದು ಮೊರೆಯಿಟ್ಟರು. ಭಕ್ತವತ್ಸಲನಾದ ಭಗವಂತನು ಆ ದೇವತೆಗಳ ದೈನ್ಯವನ್ನು ನೋಡಿ ಕನಿಕರಗೊಂಡು "ಎಲೈ ದೇವತೆಗಳಿರಾ! ನೀವು ಚಿಂತಿಸಬೇಡಿರಿ ನಿಮ್ಮ ಉದ್ದೇಶವನ್ನು ನಾನು ನನ್ನ ಮಾಯೆಯಿಂದ ಶೀಘ್ರದಲ್ಲಿಯೇ ಕೈಗೂಡಿಸುವೆನು" ಎಂದು ಸಮಾಧಾನವನ್ನು ಹೇಳಿ, ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು ಒಡನೆಯೇ ಇತ್ತಲಾಗಿ ಭಗವನ್ಮಾಯೆಯಿಂದ ಮೋಹಿತರಾದ ದೈತ್ಯದಾನವರಲ್ಲಿಯೇ ಅಂತಃ ಕಲಹವುಂಟಾಯಿತು ನಾನುತಾನೆಂದು ಮೇಲೆಬಿದ್ದು,ಒಬ್ಬರಕೈಯಿಂದೊಬ್ಬರು ಅಮೃತಕಲಶವನ್ನು ಕಿತ್ತುಕೊಳ್ಳುವುದಕ್ಕೆ ಯತ್ನಿಸಿದರು ನಿನಗಿಲ್ಲವೆಂದೂ, ತನಗಿಲ್ಲವೆಂದೂ ಒಬ್ಬರನ್ನೊಬ್ಬರು ತಡೆದು ಹಿಂದಕ್ಕೆ ತಳ್ಳುತಿದ್ದರು ಬಲಾಢ್ಯರಾದ ಕೆಲವರು ಅದನ್ನು ಬಲಾತ್ಕಾರದಿಂದ ಕಿತ್ತುಕೊಂಡು ಓಡಲಾರಂಭಿಸಿದರು. ಅವರನ್ನು ತಡೆಯುವು

ದಕ್ಕೆ ಕೈಲಾಗದೆ ಕೆಲವರು, ಅವರಲ್ಲಿ ಅಸೂಯೆಯಿಂದ ದೇವತೆಗಳ ಪಕ್ಷ ವಾಗಿ ಮಾತಾಡತೊಡಗಿದರು. "ಆಹಾ! ಇದೇನನ್ಯಾಯವು! ಸಮುದ್ರ ವನ್ನು ಕಡೆಯುವುದರಲ್ಲಿ ನಮ್ಮಂತೆ ದೇವತೆಗಳೂ ಶ್ರಮಪಟ್ಟಿರುವರಲ್ಲವೆ? ಅವರಿಗೂ ಇದರಲ್ಲಿ ಸಮಭಾಗವನ್ನು ಕೊಟ್ಟೇತೀರಬೇಕಲ್ಲವೆ? ಸತ್ರಯಾಗ ದಲ್ಲಿ ಸೇರಿದವರೆಲ್ಲರೂ ಅದರ ಫಲಕ್ಕೆ ಸಮಭಾಗಿಗಳಾಗುವಂತೆ, ಇದರಲ್ಲಿ ನಮಗೂ, ದೇವತೆಗಳಿಗೂ ಭಾಗವು ಸರಿಯಾಗಿಯೇ ಸೇರಬೇಕು. ಇದು ಅನಾದಿಯಾಗಿ ಬಂಧ ಧರ್ಮವು!" ಎಂದು ಕೂಗಾಡುತಿದ್ದರು ಹೀಗೆ ದೈತ್ಯ ರು ತಮ್ಮಲ್ಲಿಯೇ ಒಬ್ಬರಿಗೊಬ್ಬರು ಜಗಳವಾಡುತ್ತಿರುವಕಾಲದಲ್ಲಿ, ಸರ್ವ ಜ್ಞನಾಗಿಯೂ,ಸರ್ವಸ್ವತಂತ್ರನಾಗಿಯೂ, ಕಾಲೋಚಿತವಾದ ಉಪಾಯ ಗಳಿಂದ ಆಶ್ರಿತರ ದುಃಖವನ್ನು ಬಿಡಿಸತಕ್ಕವನಾಗಿಯೂ ಇರುವ ಶ್ರೀಮಹಾ ವಿಷ್ಣುವು, ಅತ್ಯದ್ಭುತವಾದ ಮೋಹಿನೀರೂಪವನ್ನು ಧರಿಸಿ ಆ ದೈತ್ಯದಾನ ವರನಡುವೆ ಬಂದು ನಿಂತನು ಓ ರಾಜೇಂದ್ರಾ! ಆ ಮೋಹಿನಿಯ ದಿವ್ಯಸೌಂ ದರ್ಯವನ್ನು ಕೇಳಬೇಕೆ? ನೋಡುತಿದ್ದಷ್ಟೂ ಮೇಲೆಮೇಲೆ ಆಸೆಯನ್ನು ಹು ಟ್ಟಿಸುತ್ತಿರುವ ಶ್ಯಾಮಲವಾದ ದೇಹಕಾಂತಿ! ಅತ್ಯಂತಸುಂದರವಾದ ಸ ರ್ವಾವಯವಗಳು! ಕುಂಡಲಕಾಂತಿಯಿಂದ ಥಳಥಳಿಸುವ ಕಪೋಲಗಳು! ಎಸಳಾದ ಮೂಗು! ಸುಂದರವಾದ ಮುಖ! ನವಯೌವನವನ್ನು ಸೂಚಿ ಸತಕ್ಕ ಉಬ್ಬಿದಸ್ತನಗಳು! ಕೃಶವಾದ ನಡು! ಮುಖದ ವಾಸನೆಗಾಗಿ ಬಂ ದು ಮುತ್ತುವ ಭ್ರಮರಗಳ ಝೇಂಕಾರವನ್ನು ಕೇಳಿ, ಭಯಪಟ್ಟಂತೆ ಅತ್ತಿ ತ್ತ ಚಲಿಸುತ್ತಿರುವ ಕುಡಿನೋಟಗಳು! ತುರುಬಿನಲ್ಲಿ ಮುಡಿಸಿದ ಮಲ್ಲಿಗೆ ಹೂವಿನ ದಂಡೆ! ಕಂಠದಲ್ಲಿ ರತ್ನಹಾರಗಳು! ಭುಜದಲ್ಲಿ ತೋಳ್ಬಳೆಗಳು! ಉ ಬ್ಬಿದ ನಿತಂಬದಮೇಲೆ ಬಿಳೀದುಕೂಲದ ಬಟ್ಟೆ! ಆ ದುಕೂಲದಮೇಲೆ ರತ್ನದ ಡಾಬು! ಘಲ್ಘಲನೆ ಧ್ವನಿಮಾಡುತ್ತಿರುವ ಕಾಲಂದುಗೆಗಳು! ಲಜ್ಜಾವಿಶಿಷ್ಟ ವಾದ ಮಂದಹಾಸವನ್ನೂ, ಹುಬ್ಬಿನಾಟಗಳನ್ನೂ, ಕುಡಿನೋಟಗಳನ್ನೂ ಸೂಚಿಸುವ ಮುಖದ ಸೊಬಗು! ಇಂತಹ ದಿವ್ಯಸೌಂದರ್ಯಶೋಭಿತೆಯಾ ದ ಆ ತರುಣೀಮಣಿಯು, ತನ್ನ ನಡೆನೋಟಗಳಿಂದಲೇ ಅಲ್ಲಿದ್ದ ಸಮಸ್ತ ದೈತ್ಯದಾನವರ ಮನಸ್ಸಿನಲ್ಲಿ ಕಾಮವಿಕಾರವನ್ನು ಹುಟ್ಟಿಸುತ್ತ ಮುಂದೆ ಬಂದು ನಿಂತಳು ಇದು ಎಂಟನೆಯ ಅಧ್ಯಾಯವು.

ಶ್ರೀಮಹಾವಿಷ್ಣುವು ತನ್ನ ಮೋಹಿನೀರೂಪದಿಂದ ದೈತ್ಯರನ್ನು ಮೋಹಗೊಳಿಸಿ, ಅವರಲ್ಲಿದ್ದ ಅಮೃತವನ್ನು ತೆಗೆದು ದೇವತೆಗಳಿಗೆ ಹಂಚಿದುದು.

ಓ ಪರೀಕ್ಷಿದ್ರಾಜಾ ಕೇಳು! ಹೀಗೆ ದೈತ್ಯರೆಲ್ಲರೂ ದುರಾಶೆಯಿಂದ, ಸ್ವಜನಾಭಿಮಾನವನ್ನೂ,ತೊರೆದು, ಒಬ್ಬರಿಗೊಬ್ಬರು ಹೊಡೆದಾಡುತ್ತ ಆ ಅಮೃತಕಲಶವನ್ನು ಒಬ್ಬರಿಂದೊಬ್ಬರು ಮೋಸದಿಂದಪಹರಿಸುತ್ತಿರುವ ಸಮಯದಲ್ಲಿ, ಸರ್ವಾಂಗಸುಂದರಿಯಾದ ಮೋಹಿಸಿಯು ಅವರಮುಂದೆ ಕಾಣಿಸಿಕೊಂಡಳು ಅವಳನ್ನು ಕಂಡೊಡನೆ ಅವರಿಗೆ ಅಮೃತದಮೇಲಿನ ಆಸೆಯೂ ತಪ್ಪಿಹೋಯಿತು ಎಲ್ಲರೂ ಕಾಮವಿಕಾರಕ್ಕೊಳಗಾಗಿ ಅವಳ ಸಮೀಪಕ್ಕೆ ಬಂದು ಸೇರಿ, “ಆಹಾ! ಇವಳ ಸೊಬಗೇನು? ಇವಳ ರೀಪಿಯೇನು? ಇವಳ ನವಯೌವನವೇನು? ಭಲೆಭಲೆ! ಈಕೆಯ ರೂಪವು ಲೋಕಾದ್ಭುತವಾಗಿರುವುದು” ಎಂದು ಹೇಳುತ್ತ ಅವಳನ್ನು ಪ್ರಶ್ನೆಮಾಡುವರು “ಎಲೆ ಕಮಲಾಕ್ಷಿ! ನೀನು ಯಾರು? ಎಲ್ಲಿಂದ ಬಂದವಳು? ನೀನು ಇಲ್ಲಿಗೆ ಬಂದ ಉದ್ದೇಶವೇನು? ನೀನು ಯಾರ ಕಡೆಯವಳು? ಆಹಾ! ಈ ನಿನ್ನ ತೊಡೆಗಳ ಸೌಂದರ್ಯವೊಂದೇ ನಮ್ಮ ಮನಸ್ಸನ್ನು ಕಲಗಿಸುತ್ತಿರುವುದು! ಓ ರಮಣೀಮಣಿ! ನಿನ್ನ ನಿಜಸ್ಥಿತಿಯನ್ನು ತಿಳಿಸು! ಯೋಚಿಸಿ ನೋಡಿದರೆ, ಇದುವರೆಗೆ ದೇವಾಸುರಸಿದ್ಧಗಂಧರ್ವಚಾರಣರಲ್ಲಿ ಯಾರೂ ನಿನ್ನನ್ನು ಮುಟ್ಟಿರಲಾರರೆಂದೇ ನಮಗೆ ತೋರುವುದು ಯೋಗಸಿದ್ಧರಾದ ಯೋಗೀಶ್ವರರಿಗೂ ನೀನು ಇದುವರೆಗೆ ಸಿಕ್ಕಿರಲಾರೆ! ಇನ್ನು ಇಲ್ಲಿಗೆ ಬಂದ ಕಾರಣವೇನು? ಎಲೆ ಸುಭ್ರು! ದೈವಾನುಗ್ರಹದಿಂದ ನಿನ್ನನ್ನು ನಾವು ನೋಡುವಂತಾಯಿತು! ಆ ಪರಮೇಶ್ವರನು ಈ ಲೋಕದ ಜನಗಳ ಇಂದ್ರಿಯಗಳಿಗೂ, ಮನಸ್ಸಿಗೂ ತೃಪ್ತಿಯನ್ನುಂಟುಮಾಡುವುದಕ್ಕಾಗಿಯೇ ಇಲ್ಲಿಗೆ ನಿನ್ನನ್ನು ಅನುಗ್ರಹಿಸಿ ಕಳುಹಿಸಿರಬಹುದು. ಅದಕ್ಕೆ ಸಂದೇಹವೇ ಇಲ್ಲ! ಎಲೆ ಮಹಾಭಾಗೆ! ಇದೋ ನಾವೆಲ್ಲರೂ ಒಂದೇ ಕುಲದಲ್ಲಿ ಹುಟ್ಟಿದವರಾದರೂ ಜ್ಞಾತಿಗಳಾದ ನಮ್ಮಲ್ಲಿಯೇ ಅಮೃತ

ಕಲಶಕ್ಕಾಗಿ ಜಗಳವು ಹುಟ್ಟಿರುವುದು.ಅಸೂಯೆಯಿಂದ ನಮ್ಮಲ್ಲಿಯೇ ಒಬ್ಬರಿಗೊಬ್ಬರಿಗೆ ದ್ವೇಷವೂ ಹೆಚ್ಚುತ್ತಿರುವುದು ಆದುದರಿಂದ ಈಗ ನೀನು ನಮಗೆ ಮಧ್ಯಸ್ಥಳಾಗಿ ನಿಂತು,ಆ ಅಮೃತವನ್ನು ಸರಿಯಾಗಿ ಹಂಚಿಕೊಟ್ಟು, ನಮನಮಗೆ ಸಂಧಿಯನ್ನು ಮಾಡಬೇಕು ನಾವೆಲ್ಲರೂ ಕಶ್ಯಪಪ್ರಜಾಪತಿಯ ಮಕ್ಕಳು ! ನಾವೆಲ್ಲರೂ ಸಹೋದರಪ್ರೇಮವನ್ನು ತೋರಿಸಬೇಕಾದ ಸಂದರ್ಭದಲ್ಲಿಯೂ, ಹೀಗೆ ಜಗಳಕ್ಕೆ ನಿಂತು, ಒಬ್ಬರಮೇಲೊಬ್ಬರು ಪೌರುಷವನ್ನು ತೋರಿಸಬೇಕಾಗಿ ಬಂದೊದಗಿತು ಹೇಗಾದರೂ ನೀನು ನಮನಮಗೆ ಜಗಳವಿಲ್ಲದಂತೆ ನ್ಯಾಯರೀತಿಯಿಂದ ಈ ಅಮೃತವನ್ನು ಹಂಚಿಕೊಡಬೇಕು." ಎಂದರು ಮೋಹಿನೀರೂಪಿಯಾದ ಭಗವಂತನು, ಹೀಗೆ ದೈನ್ಯದಿಂದ ಪ್ರಾರ್ಥಿಸುತ್ತಿರುವ ದಾನವರನ್ನು ನೋಡಿ, ಅವರ ಮಾತಿಗಾಗಿ ತನ್ನೊಳಗೆ ತಾನೇ ನಗುತ್ತ, ಅವರೆಲ್ಲರನ್ನೂ ತನ್ನ ಸುಂದರವಾದ ಕಡೆಗಣ್ಣಿನಿಂದ ನೋಡಿ ಹೀಗೆಂದು ಹೇಳುವನು "ಎಲೈ ಕಶ್ಯಪಕುಮಾರರೆ! ಇದೇನು ? ಯಾವಾಗಲೂ ಪರಪುರುಷನಲ್ಲಿಯೇ (ಪರಮಪುರುಷನಲ್ಲಿಯೇ) ನಿರತರಾದ ನಮ್ಮಂತಹ ಗಂಡುಬೀರಿಗಳಲ್ಲಿಯೂ ನೀವು ಹೀಗೆ ನಂಬಿಕೆಯನ್ನಿಡಬಹುದೆ?ನಿಮ್ಮಂತಹ ಪಂಡಿತರು,ಇಂತಹ ಸ್ತ್ರೀಯರೊಡನೆ ಸಹವಾಸವನ್ನೇ ಮಾಡಬಾರದು. ಲೋಕದಲ್ಲಿ ಕೆನ್ನಾಯಿಗಳೂ, ನನ್ನಂತಹ ಸ್ವೇಚ್ಛಾಪ್ರವೃತ್ತಿಯುಳ್ಳ ಸ್ತ್ರೀಯರೂ ಸಮಾನವೆಂದು ತಿಳಿಯಿರಿ ! ಕ್ಷಣಕ್ಷಣಕ್ಕೂ ಹೊಸಬರನ್ನೇ ಹುಡುಕುತ್ತಿರುವ ಸ್ವಭಾವವುಳ್ಳ ನಮ್ಮ ಸ್ನೇಹವು ಸ್ಥಿರವಾದುದಲ್ಲ. ನಮ್ಮನ್ನು ನೀವು ನಂಬಬಾರದು" ಎಂದನು ಈ ಮೋಹಿನಿಯ ಪರಿಹಾಸವಾಕ್ಯವನ್ನು ಕೇಳಿ, ದಾನವರು ಅದರ ಅಭಿಪ್ರಾಯವನ್ನು ತಿಳಿಯದೆ, ಸಂತೋಷದಿಂದ ನಗುತ್ತ,ತಮ್ಮ ಕೈಯಲ್ಲಿದ್ದ ಅಮೃತಪಾತ್ರವನ್ನು,ಆ ಮೋಹಿನಿಯ ಕೈಗೆ ನಿರ್ಬಂಧಿಸಿ ಕೊಟ್ಟರು ಮೋಹಿನಿಯು ಆ ಅಮೃತಕಲಶವನ್ನು ಕೈಗೆ ತೆಗೆದುಕೊಂಡು, ಅವರನ್ನು ನೋಡಿ ಮಂದಹಾಸದಿಂದ, "ಎಲೈ ದೈತ್ಯರೆ! ನಿಮ್ಮ ಪ್ರಾರ್ಥನೆಯಂತೆ ನಾನು ಈ ಅಮೃತವನ್ನು ನಿಮಗೆ ಹಂಚಿಕೊಡುವುದರಲ್ಲಿ ಅಭ್ಯಂತರವಿಲ್ಲ! ಆದರೆ ನಾನು ಮಾಡತಕ್ಕ ಹಂಚಿಕೆಯು,ನಿಮಗೆ ನ್ಯಾಯವಾಗಿ ತೋರಿದರೂ, ಅನ್ಯಾಯವಾಗಿ ತೋರಿದರೂ,ಅದರಲ್ಲಿ



1473. ಭಗವಂತನು ಮೋಹಿನೀರೂಪದಿಂದ ದೈತ್ಯರನ್ನು ವಂಚಿಸಿ, ದೇವತೆಗಳಿಗೆ ಅಮೃತವನ್ನು ಹಂಚಿದುದು.

ತಪ್ಪುನೆಪ್ಪುಗಳನ್ನೆಣಿಸದೆ ನೀವೆಲ್ಲರೂ ಒಪ್ಪಿಕೊಳ್ಳಬೇಕು. ಹಾಗಿದ್ದರೆಮಾತ್ರವೇ ನಾನು ಈ ಕಾರ್ಯಕ್ಕೆ ಕೈಯಿಕ್ಕುವೆನು" ಎಂದಳು. ಭಗವನ್ಮಾಯೆಯಿಂದ ಮೋಹಿತರಾದ ದೈತ್ಯರೆಲ್ಲರೂ ಆ ಮಾತಿನ ನಿಜವಾದ ಉದ್ದೇಶವನ್ನು ತಿಳಿಯಲಾರದೆ,ಹಾಗೆಯೇ ಆಗಲೆಂದು ಸಮ್ಮತಿಸಿದರು. ಮೇಲೆ ಅಲ್ಲಿದ್ದ ದೇವತೆಗಳೂ, ಅಸುರರೂ ಆ ಮೋಹಿನಿಯ ಆಜ್ಞೆಯಿಂದ, ಆ ರಾತ್ರಿಯೆಲ್ಲವೂ ಉಪವಾಸವಿದ್ದು, ಬೆಳಿಗ್ಗೆ ಎದ್ದು ಸ್ನಾನಮಾಡಿ, ಅಗ್ನಿಕಾರ್ಯಗಳನ್ನು ಮುಗಿಸಿ, ಬ್ರಾಹ್ಮಣರನ್ನೂ, ಇತರ ಭೂತಗಳನ್ನೂ ಗೋದಾನಾದಿಗಳಿಂದ ತೃಪ್ತಿಪಡಿಸಿ ಆ ಬ್ರಾಹ್ಮಣರ ಆಶೀರ್ವಾದವನ್ನು ಪಡೆದು, ಹೊಸವಸ್ತ್ರಗಳಿಂದಲೂ, ಆಭರಣಗಳಿಂದಲೂ ಮೈಯ್ಯನ್ನಲಂಕರಿಸಿಕೊಂಡರು. ಅಮೃತವಿಭಾಗಮಾಡತಕ್ಕ ಸ್ಥಳಕ್ಕೆ ಬಂದು, ಅದನ್ನು ಅಗರು ಧೂಪಗಳಿಂದಲೂ,ತುಪ್ಪದ ದೀಪಗಳಿಂದಲೂ ಅಲಂಕರಿಸಿ,ಪೂರ್ವಾಗ್ರವಾಗಿ ದರ್ಭೆಗಳನ್ನು ಹಾಸಿ, ಅದರಮೇಲೆ ಮೌನದಿಂದ ಕುಳಿತಿದ್ದರು ಆಮೇಲೆ ಮೋಹಿನಿಯು ಕೈಯಲ್ಲಿ ಅಮೃತಕಲಶವನ್ನೆತ್ತಿಕೊಂಡು, ಆಶಾಲೆಗೆ ಪ್ರವೇಶಿಸಿದಳು ಓ ಪರೀಕ್ಷಿದ್ರಾಜಾ! ಆಕೆಗಾದರೋ ಉಬ್ಬಿದ ನಿತಂಬಗಳು ಅದರ ಮೇಲೆ ಬಿಳೀದುಕೂಲದ ಪಟ್ಟೆಮಡಿ!ಮದದಿಂದ ಚಂಚಲವಾದ ನೇತ್ರಗಳು! ಘುಲ್ಘುಲನೆ ಧ್ವನಿಮಾಡುವ ಕಾಲಂದುಗೆಗಳು ! ಮದದಾನೆಯಂತೆ ಗಂಭೀರವಾದ ನಡೆ ! ಸಾಕ್ಷಾಲ್ಲಕ್ಷ್ಮೀದೇವಿಗೆ ಸಮಾನವಾದ ಸೌಂದರ್ಯಸಮೃದ್ಧಿ ! ಸುವರ್ಣಕುಂಡಲಗಳಿಂದ ಶೋಭಿತವಾದ ಕಪೋಲಗಳು! ಎಸಳಾದ ಕಿವಿ ಮೂಗುಗಳು ! ನುಣುಪಾದ ಕೆನ್ನೆ ! ಅಂದವಾದ ಮುಖ ! ಹೀಗೆ ಸರ್ವಾವಯವಗಳಲ್ಲಿಯೂ ಎಣೆಯಿಲ್ಲದ ಸೌಂದರ್ಯವುಳ್ಳ ಆ ಮೋಹಿನಿಯು, ಸಭಾದ್ವಾರಕ್ಕೆ ಬರುವಾಗ,ತನ್ನ ಸ್ತನದಮೇಲಿನ ಬಟ್ಟೆಯುಸ್ವಲ್ಪಸ್ವಲ್ಪವಾಗಿ ಕೆಳಗೆ ಜಾರಿಬಿಳುವಂತೆಕುಲುಕುನಡೆಯಿಂದಹಜ್ಜೆಯನ್ನಿಡುತ್ತ,ಮಂದಹಾಸಸೂಚಕವಾದ ತನ್ನ ಕಟಾಕ್ಷದಿಂದಲೇ ಅಲ್ಲಿದ್ದ ದೇವಾಸುರರನ್ನು ಮೋಹಗೊಳಿಸುವಂತೆ ಮುಂದೆ ಬಂದಳು ಅವಳನ್ನು ನೋಡಿದೊಡನೆ ಅಲ್ಲಿದ್ದ ದೇವಾಸುರರೆಲ್ಲರೂ ಮೈಮರೆತಿದ್ದರು. ಹೀಗೆ ಜಗನ್ಮೋಹನಾಕಾರವನ್ನು ತಾಳಿಬಂದ ಭಗವಂತನು, ಆ ಸಭೆಯನ್ನು ಸುತ್ತಲೂ ತಿರುಗಿ ನೋಡಿ,

ಸಹಜವಾಗಿಯೇ ಕ್ರೂರರಾದ ದಾನವರಿಗೆ ಅಮೃತವನ್ನು ಹಂಚಿಕೊ
ಡುವುದರಿಂದ ಹಾವಿಗೆ ಹಾಲೆರೆದಂತಾಗುವುದೆಂದೂ, ದೇವತೆಗಳಿಗೆಮಾತ್ರ
ಉಪಾಯದಿಂದ ಅದನ್ನು ಸಲ್ಲಿಸಬೇಕೆಂದೂ ನಿಶ್ಚಯಿಸಿ. ಮೊದಲು ಆ ದೇ
ವಾಸುರರಿಬ್ಬರನ್ನೂ ಬೇರೆಬೇರೆ ಪಙ್ಕ್ತಿಯಾಗಿ ಕುಳ್ಳಿರಿಸಿ, ಮೊದಲು ಆ ದಾ
ನವರಿದ್ದ ಕಡೆಗೆ ಬಂದು, ಆ ದಾನವರಲ್ಲಿ. ಒಬ್ಬೊಬ್ಬರನ್ನೂ ಆದರದಿಂ
ದಲೂ, ಪ್ರಿಯವಾಕ್ಯಗಳಿಂದಲೂ ಉಬ್ಬಿಸುತಿದ್ದಳು ಒಮ್ಮೊಮ್ಮೆ ಅವರ
ಮೈಗೆ ತನ್ನ ಸೆರಗನ್ನು ಸೋಕಿಸುವಂತ, ಅವರ ಸಮೀಪಕ್ಕೆ ಬಂದು ನಿಲ್ಲುವ
ಳು ಒಮ್ಮೊಮ್ಮೆ ಪ್ರೇಮಸೂಚಕವಾದ ತನ್ನ ಕುಡಿನೋಟದಿಂದ ಅವರನ್ನು
ನೋಡುವಳು ಹೀಂಗೆ ಅವರೆಲ್ಲರನ್ನೂ ತನ್ನ ಮೋಹಪಾಶದಲ್ಲಿ ಮರಳುಮಾ
ಡಿ, ತಾನು ಅಲ್ಲಿದ್ದಂತೆಯೇ ತನ್ನಲ್ಲಿದ್ದ ಅಮೃತವನ್ನೆಲ್ಲಾ ದೇವತೆಗಳ ಸಾಲಿ
ಗೆ ಹಂಚಿಬಿಟ್ಟಳು ಜರಾಮರಣಗಳನ್ನು ತಪ್ಪಿಸತಕ್ಕ ಆ ಅಮೃತವನ್ನು ದೇವ
ತೆಗಳೆಲ್ಲರೂ ಸಂತೋಷದಿಂದ ಪಾನಮಾಡಿದರು ಓ ರಾಜೇಂದ್ರಾ ! ಇತ್ತ
ಲಾಗಿ ಮೋಹಿನಿಯ ಸೌಂದರ್ಯದಿಂದ ಮೋಹಿತರಾದ ದೈತ್ಯರಿಗೆ ಆ ಅ
ಮೃತದ ಸ್ಮರಣೆಯೇ ತಪ್ಪಿಹೋಯಿತು ಇದಲ್ಲದೆ ಅವರು ಆ ಮೋಹಿ
ನಿಗೆ ಮೊದಲೇ ಮಾತುಕೊಟ್ಟಿದ್ದುದರಿಂದಲೂ,ಸ್ತ್ರೀಯರೊಡನೆ ವಿವಾದ
ಮಾಡುವುದರಲ್ಲಿ ಜುಗುಪ್ಸೆಯಿಂದಲೂ,ಅವರೆಲ್ಲರೂ ಬಾಯೆತ್ತದೆ ಸುಮ್ಮನಿ
ದ್ದರು. ಮತ್ತು ಅವರಿಗೆ ಆ ಮೋಹಿನಿಯಲ್ಲಿ ಮೇಲೆಮೇಲೆ ಸ್ನೇಹವು ಹೆಚ್ಚು
ತ್ತಬಂದುದರಿಂದ ಅದಕ್ಕೆ ಅಪಾಯವುಂಟಾಗಬಾರದೆಂಬ ಭಯದಿಂದಲೂ,
ಅವಳಲ್ಲಿ ಗೌರವಜ್ಞಾನದಿಂದಲೂ, ಅವಳ ಮನಸ್ಸಿಗೆ ಅಸಮಾಧಾನಕರ
ವಾದ ಯಾವಮಾತನ್ನೂ ಆಡದೆ ಸುಮ್ಮನಿದ್ದರು ಓ ಪರೀಕ್ಷಿದ್ರಾಜಾ !
ಇಷ್ಟರಲ್ಲಿ ಸ್ವರ್ಭಾನುವೆಂಬ ರಾಕ್ಷಸನೊಬ್ಬನು, ದೇವತೆಗಳಂತೆ ವೇಷಧಾರಿ
ಯಾಗಿ ಬಂದು, ಆ ದೇವತೆಗಳ ಪಙ್ಕ್ತಿಯಲ್ಲಿ ಸೇರಿ, ಅಮೃತವನ್ನು ಕುಡಿದುಬಿ
ಟ್ಟನು, ಸೂರ್ಯಚಂದ್ರರು ಇದನ್ನು ತಿಳಿದು ಕಣ್ಣುಸನ್ನೆಯಿಂದ ಮೋಹಿ
ನಿಗೆ ಸೂಚಿಸಿದರು ಒಡನೆಯೇ ಮೋಹಿನಿಯು, ತೀಕ್ಷ್ಣವಾದ ಅಲಗುಳ್ಳ
ತನ್ನ ಚಕ್ರಾಯುಧವನ್ನು ಯಾರಿಗೂ ತಿಳಿಯದಂತೆ ಆ ರಾಕ್ಷಸನಮೇಲೆ ಪ್ರ
ಯೋಗಿಸಿ, ಆ ರಾಕ್ಷಸನು ಅಮೃತವನ್ನು ನುಂಗುವಷ್ಟರಲ್ಲಿಯೇ ಅವನ ಕಂ

ಠವನ್ನು ಕತ್ತರಿಸಿಬಿಟ್ಟಳು. ಆ ರಾಕ್ಷಸನ ಕಂಠದಿಂದ ಅಮೃತವು ಕೆಳಕ್ಕಿಳಿಯು ವಷ್ಟರಲ್ಲಿಯೇ ಅವನ ತಲೆಯು ಕತ್ತರಿಸಿಬಿದ್ದುದರಿಂದ,ಆ ಕೆಳಭಾಗವು ಮಾತ್ರ ಪ್ರಾಣಹೀನವಾಗಿ ಬಿದ್ದುಹೋಯಿತು ಅವನ ತಲೆಯು ಅಮೃತಸಂಬಂಧದಿಂದ ಜೀವಸಹಿತವಾಗಿ ಅಮರತ್ವವನ್ನು ಹೊಂದಿತು ಬ್ರಹ್ಮನು ಅದನ್ನು ನವಗ್ರಹಗಳಲ್ಲಿ ಒಂದಾಗಿ ಸೇರಿಸಿದನು. ಗ್ರಹತ್ವವನ್ನು ಹೊಂದಿಯೂಕೂಡ, ರಾಹುವು ಪೂರ್ವವೈರವನ್ನು ಬಿಡದೆ ಆಗಾಗ ಪರ್ವದಿನಗಳಲ್ಲಿ ಸೂರ್ಯಚಂದ್ರರನ್ನು ನುಂಗುತ್ತಿರುವನು. ಇದನ್ನೇ ಗ್ರಹಣವೆಂದು ಹೇಳುವರು. ಹೀಗೆ ದೇವತೆಗಳೆಲ್ಲರಿಗೂ ಅಮೃತವನ್ನು ಕುಡಿಸಿದ ಮೇಲೆ, ಆ ಮೋಹಿನಿಯು. ಅಲ್ಲಿದ್ದ ದೈತ್ಯದಾನವರೆಲ್ಲರೂ ನೋಡುತಿದ್ದಹಾಗೆಯೇ ಪುರುಷರೂಪವನ್ನು ಹೊಂದಿದಳು ಓ ರಾಜೇಂದ್ರಾ ! ಹೀಗೆ ದೇವದಾನವರೆಲ್ಲರೂ ಸೇರಿ ಮಂದರಪರ್ವತವನ್ನು ತಂದು, ಬಹಳಶ್ರಮದಿಂದ ಕ್ಷೀರಸಮುದ್ರವನ್ನು ಕಡೆದು, ಅಮೃತವನ್ನು ಸಂಪಾದಿಸಿದರೂಕೂಡ, ದೇವತೆಗಳಿಗೆ ಭಗವಂತನು ಅನುಕೂಲನಾಗಿದ್ದುದರಿಂದ, ಅವರು ಮಾತ್ರ ಆ ಅಮೃತವನ್ನು ಕುಡಿಯುವಂತಾಯಿತು. ದೈತ್ಯರು ಆ ಮಹಾವಿಷ್ಣುವಿಗೆ ಪ್ರತಿಕೂಲರಾದುದರಿಂದ, ಅವರಿಗೆ ಅಮೃತವು ಲಭಿಸದೆ ಹೋಯಿತು ಓ ಪರೀಕ್ಷಿದ್ರಾಜಾ ! ಇದರಿಂದ ತಿಳಿಯಬೇಕಾದ ಒಂದು ತತ್ವವನ್ನು ಹೇಳುವೆನು ಕೇಳು ! ಪ್ರಾಣಿಗಳು ಅಹಂಕಾರಮಮಕಾರಗಳಿಂದ ತಮ್ಮ ದೇಹನಿಮಿತ್ತವಾಗಿಯೂ, ಹೆಂಡಿರುಮಕ್ಕಳು ಮೊದಲಾದ ದೇಹಾನುಬಂಧಿಗಳಿಗಾಗಿಯೂ, ತಮ್ಮ ಪ್ರಾಣಗಳಿಂದಲೂ,ಧನದಿಂದಲೂ, ತಮ್ಮ ಮನೋವಾಕ್ಕಾಯಗಳಿಂದಲೂ, ನಡೆಸತಕ್ಕ ಕಾರ್ಯಗಳೆಲ್ಲವನ್ನೂ, ಪರಮಾತ್ಮನೊಬ್ಬನಿಗೇ ಅರ್ಪಿತವೆಂಬ ಒಂದೇಭಾವನೆಯಿಂದನಡೆಸಬೇಕು.ಹಾಗಿಲ್ಲದೆ ಬೇರೆಬೇರೆ ಅಭಿಮಾನದಿಂದ ನಡೆಸಲ್ಪಟ್ಟಪಕ್ಷದಲ್ಲಿ ಅವೆಲ್ಲವೂ ನಿಷ್ಫಲವಾಗುವುವು ವೃಕ್ಷಗಳಲ್ಲಿ ಪ್ರಧಾನವಾದ ಬೇರಿಗೆ ನೀರನ್ನು ಸುರಿದರೆ ಸಫಲವಾಗುವುದೇ ಹೊರತು, ಕೊಂಬೆಗಳಮೇಲೆ ನೀರನ್ನು ಸುರಿಯುವುದರಿಂದ ಆ ಜಲಸೇಚನವು ವ್ಯರ್ಥವಾಗುವುದಲ್ಲವೆ ? ಅದರಂತೆಯೇ ನಾವು ಯಾವ ಕಾರ್ಯಗಳನ್ನು ನಡೆಸಿದರೂ, ಸರ್ವಾಂತರಾತ್ಮನಾಗಿಯೂ, ಎಲ್ಲಕ್ಕೂ

ಮೂಲಕಾರಣನಾಗಿಯೂ ಇರುವ ಆ ಭಗವಂತನಿಗೆ ಅರ್ಪಿತವಾಗಿ ಮಾಡಿದಾಗಲೇ ಆ ಕರ್ಮಗಳೆಲ್ಲವೂ ಸಫಲವಾಗುವುವು ಆದುದರಿಂದ ಸಮಸ್ತವನ್ನೂ ಬ್ರಹ್ಮಾತ್ಮಕವೆಂದೇ ಭಾವಿಸಿ, ಅವನ ಆರಾಧನರೂಪವಾಗಿಯೇ ಸಮಸ್ತಕಾರ್ಯಗಳನ್ನೂ ನಡೆಸಬೇಕು. ದಾನವರಲ್ಲಿ ಈ ಬುದ್ಧಿಯಿಲ್ಲದುದರಿಂದಲೂ, ಅವರು ವಿಷ್ಣುಭಕ್ತಿವಿಮುಖರಾಗಿದ್ದುದರಿಂದಲೂ ಅವರು ಭಗವದನುಗ್ರಹಕ್ಕೆ ಪಾತ್ರರಾಗದೆಹೋದರು ಇದರಿಂದಲೇ ಅವರಿಗೆ ಅಮೃತವೂ ಸಿಕ್ಕದೆ ಹೋಯಿತು ಇದು ಒಂಬತ್ತನೆಯ ಅಧ್ಯಾಯವು.

---

## ದೇವದಾನವಯುದ್ಧವು

ಓ ರಾಜೇಂದ್ರಾ ! ಹೀಗೆ ಭಗವಂತನು ದೇವತೆಗಳಿಂದ ಅಮೃತಪಾನವನ್ನು ಮಾಡಿಸಿದಮೇಲೆ, ಅಲ್ಲಿದ್ದ ಸಮಸ್ತಭೂತಗಳೂ ನೋಡುತಿದ್ದ ಹಾಗೆಯೇ ಗರುಡಾರೂಢನಾಗಿ ನಿಜಲೋಕಕ್ಕೆ ಹೋದನು. ಆಮೇಲೆ ಇತ್ತಲಾಗಿ ದೈತ್ಯರೆಲ್ಲರಿಗೂ ದೇವತೆಗಳಲ್ಲಿ ಅಸೂಯೆ ಹುಟ್ಟಿತು ಒಡನೆಯೇ ಅವರೆಲ್ಲರೂ ಆಯುಧಪಾಣಿಗಳಾಗಿ ದೇವತೆಗಳನ್ನು ಕೊಲ್ಲಬೇಕೆಂದು ಬೆನ್ನಟ್ಟಿಬಂದರು.ಈಗ ಅಮೃತಪಾನದಿಂದಲೂ,ಭಗವದನುಗ್ರಹದಿಂದಲೂ,ಬಲಾಢ್ಯರಾಗಿದ್ದ ದೇವತೆಗಳು, ತಮ್ಮನ್ನು ಬೆನ್ನಟ್ಟಿಬರುವ ದೈತ್ಯರನ್ನು ಧೈರ್ಯದಿಂದಿದಿರಿಸಿ ನಿಂತರು ಆ ಸಮುದ್ರತೀರದಲ್ಲಿಯೇ ದೇವಾಸುರರಿಗೆ ಘೋರಯುದ್ಧವು ನಡೆಯಿತು ಓ ರಾಜೇಂದ್ರಾ! ಆಗಿನ ಭಯಂಕರವಾದ ಯುದ್ಧವನ್ನು ನೆನೆಸಿಕೊಂಡರೆ, ಈಗಲೂ ಮೈಯಲ್ಲಿ ರೋಮಾಂಚವೇಳುತ್ತಿರುವುದು! ಅನ್ಯೋನ್ಯಜ್ಘಾಂಸಿಗಳಾದ ಆ ದೇವದಾನವರಿಬ್ಬರೂ, ಸಹಿಸಲಾರದ ಕೋಪದಿಂದ ಒಬ್ಬರನ್ನೊಬ್ಬರು ಕತ್ತಿಗಳಿಂದಲೂ, ಬಾಣಗಳಿಂದಲೂ, ಮುಷ್ಟಿಗಳಿಂದಲೂ, ಇತರ ಶಸ್ತ್ರಾಸ್ತ್ರಗಳಿಂದಲೂ ಹೊಡೆದಾಡುತಿದ್ದರು. ಆ ರಣರಂಗದಲ್ಲಿ ಎಲ್ಲಿನೋಡಿದರೂ, ಶಂಖ, ತೂರ್ಯ, ಮೃದಂಗ, ಭೇರಿ, ಮುಂತಾದ ವಾದ್ಯಧ್ವನಿಗಳೂ, ಆನೆಗಳ ಗರ್ಜನವೂ, ಕುದುರೆಗಳ ಹೇಷಾಧ್ವನಿಯೂ, ರಥದ ಚೀತ್ಕಾರಗಳೂ, ಪದಾತಿಗಳ ಸಿಂಹನಾದವೂ ಒಂದಾಗಿ ಕಲೆತು, ಭೂಮ್ಯಾಕಾಶಗಳೆಲ್ಲವನ್ನೂ ವ್ಯಾಪಿಸಿತು ರಥಿಕರು

ರಥಿಕರೊಡನೆಯೂ, ಪದಾತಿಗಳು ಪದಾತಿಗಳೊಡನೆಯೂ, ಕುದುರೆಗೆ
ಳು ಕುದುರೆಗಳೊಡನೆಯೂ, ಆನೆಗಳು ಆನೆಗಳೊಡನೆಯೂ ಯುದ್ಧವನ್ನಾ
ರಂಭಿಸಿದುವು ಆ ದೇವಾಸುರಸೈನ್ಯದಲ್ಲಿ, ಕೆಲವರು ಒಂಟೆಗಳನ್ನೂ, ಕೆಲ
ವರು ಆನೆಗಳನ್ನೂ, ಕೆಲವರು ಕತ್ತೆಗಳನ್ನೂ, ಕೆಲವರು ಬಿಳೀಮುಖದ ಕರ
ಡಿಗಳನ್ನೂ, ಕೆಲವರು ಹುಲಿಗಳನ್ನೂ, ಬೇರೆ ಕೆಲವರು ಸಿಂಹಗಳನ್ನೂ, ಮತ್ತು
ಕೆಲವರು ಹದ್ದುಗಳನ್ನೂ, ಬೇರೆ ಕೆಲವರು ರಣಹದ್ದುಗಳನ್ನೂ, ಕೆಲವರು
ತೋಳಗಳನ್ನೂ ತಮತಮಗೆ ವಾಹನವಾಗಿ ಮಾಡಿಕೊಂಡು ಯುದ್ಧಕ್ಕೆ ನಿಂ
ತರು. ಹಾಗೆಯೇ ಕೆಲಕೆಲವರು ತಮತಮಗೆ ಅನುಕೂಲಿಸಿದಂತೆ, ಗಿಡುಗ,
ಭಾಸಪಕ್ಷಿ, ತಿಮಿಂಗಿಲ, ಶಲಭ, ಕಾಡೆಮ್ಮೆ, ಖಡ್ಗಮೃಗ, ಎತ್ತು ಕಡವೆ,
ಹಸು, ನರಿ, ಕುರಿ, ಇಲಿ, ಕೋಳಿ, ನಾಯಿ, ಮನುಷ್ಯರು, ಮೇಕೆ,
ಜಿಂಕೆ, ಹಂಸ, ಹಂದಿ, ಮುಂತಾದ ನಾನಾಜಂತುಗಳನ್ನು ತಮಗೆ ವಾಹನ
ವಾಗಿ ಮಾಡಿಕೊಂಡು ಶಸ್ತ್ರಧಾರಿಗಳಾಗಿ ಬಂದರು ಕೆಲಕೆಲವರು ಜಲದಲ್ಲಿ
ಯೂ, ನೆಲದಲ್ಲಿಯೂ, ಆಕಾಶದಲ್ಲಿಯೂ ಸಂಚರಿಸತಕ್ಕ ಮತ್ತು ವಿಚಿತ್ರ
ಶರೀರಗಳುಳ್ಳ ಪ್ರಾಣಿಗಳನ್ನು ತಮಗೆ ವಾಹನವಾಗಿ ಮಾಡಿಕೊಂಡು ವೇಗ
ದಿಂದ ಬಂದರು ಹೀಗೆ ದೇವಾಸುರಸೈನ್ಯಗಳೆರಡೂ ಸಮಸ್ತಸನ್ನಾಹಗ
ಳೊಡನೆ ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಹಟದಿಂದ ಮುಂದೆ ಬಂದು, ತ
ಮ್ಮತಮ್ಮ ಪ್ರತಿಸೈನ್ಯದ ಮುಂಭಾಗವನ್ನು ಸಾಹಸದಿಂದ ಪ್ರವೇಶಿಸಿದರು.
ಆ ಎರಡು ಸೈನ್ಯಗಳಲ್ಲಿಯೂ ಎಲ್ಲಿ ನೋಡಿದರೂ ಚಿತ್ರವರ್ಣವುಳ್ಳ ಧ್ವಜಪ
ಟಗಳು ! ಚಂದ್ರಬಿಂಬದಂತೆ ಶುಭ್ರವಾದ ಶ್ವೇತಚ್ಛತ್ರಗಳು ! ವಜ್ರದ
ಹಿಡಿಗಳುಳ್ಳ ಬೀಸಣಿಗೆಗಳು! ನವಿಲುಗರಿಯ ಚಾಮರಗಳು ! ಗಾಳಿಯಿಂದಾ
ಡುತ್ತಿರುವ ತಲೆಪಾಗುಗಳು! ಘಲ್ಘಲನೆ ಧ್ವನಿಮಾಡುವ ವೀರಭೂಷಣಗಳು!
ಯುದ್ಧಯೋಗ್ಯವಾದ ಕವಚಗಳು! ಸೂರ್ಯಕಾಂತಿಯ ಸಂಬಂಧದಿಂದ ಮ
ತ್ತಷ್ಟು ಕಾಂತಿವಿಶೇಷವನ್ನು ಹೊಂದಿ ಝಗಜಗಿಸುವ ಶಸ್ತ್ರಾಸ್ತ್ರಗಳು !
ಇವೆಲ್ಲವೂ ತುಂಬಿದ್ದುವು. ಹೀಗೆ ದೇವದಾನವಸೈನ್ಯಗಳೆರಡೂ ಅನೇಕಜಲ
ಜಂತುಗಳಿಂದ ತುಂಬಿದ ಎರಡು ಮಹಾಸಮುದ್ರಗಳಂತೆ ಒಂದನ್ನೊಂದು
ಇದಿರಿಸಿದುವು. ವಿರೋಚನಪುತ್ರನಾದ ಬಲಿಚಕ್ರವರ್ತಿಯೇ ದಾನವಸೆ

ನ್ಯಕ್ಕೆ ಸೇನಾಪತಿಯಾಗಿ, ಕಾಮುಗಮನವುಳ್ಳ ಮಯನಿರ್ಮಿತವಾದ ವೈಹಾಯಸವೆಂಬ ವಿಮಾನವನ್ನೇರಿ ಬಂದನು ಆ ವಿಮಾನವು ಸಮಸ್ತಯುದ್ಧೋಪಕರಣಗಳಿಂದಲೂ ತುಂಬಿ ಅತ್ಯಾಶ್ಚರ್ಯವನ್ನುಂಟು ಮಾಡುತಿತ್ತು. ಅದರ ಪ್ರಭಾವವವನ್ನು ಹೀಗೆಂದೂಹಿಸುವುದಕ್ಕೂ ಸಾಧ್ಯವಿಲ್ಲ! ಈಸ್ಥಳದಲ್ಲಿಯೇ ಇರುವುದೆಂದು ನಿರ್ಣಯಿಸುವುದಕ್ಕಾಗದೆ,ಮಾಯೆಯಿಂದ ಒಮ್ಮೊಮ್ಮೆ ಕಣ್ಣಿಗೆ ಕಾಣುತ್ತಲೂ, ಪತ್ತೊಮ್ಮೆ ಇದ್ದಕ್ಕಿದ್ದಹಾಗೆ ಅದೃಶ್ಯವಾಗುತ್ತಲೂ, ಆಕಾಶದಲ್ಲಿ ಸಂಚರಿಸುತಿತ್ತು. ಬಲಿಚಕ್ರವರ್ತಿಯು, ಛತ್ರಚಾಮರಗಳೇ ಮೊದಲಾದ ಸಮಸ್ತರಾಜಚಿಹ್ನಗಳೊಡನೆ, ಆ ವಿಮಾನವನ್ನೇರಿ, ಅನೇಕದೈತ್ಯಸೇನಾಪತಿಗಳಿಂದ ಪರಿವೃತನಾಗಿ ಬರುತ್ತಿರುವಾಗ, ಆಗಲೇ ಉದಿಸಿಬರುವ ಪೂರ್ಣಚಂದ್ರನಂತೆ ಕಾಣುತಿದ್ದನು. ಆ ವಿಮಾನದ ಸುತ್ತಲೂ, ನಮುಚಿ, ಶಂಬರ, ಬಾಣ, ವಿಪ್ರಚಿತ್ತಿ, ಅಯೋಮುಖ, ದ್ವಿಮೂರ್ಧ, ಕಾಲನಾಭ, ಪ್ರಹೇತಿ, ಹೇತಿ, ಇಲ್ವಲ, ಶಕುನಿ, ಭೂತಸಂತ್ರಾಸ, ವಜ್ರದಂಷ್ಟ್ರ, ವಿರೋಚನ, ಹಯಗ್ರೀವ, ಶಂಕುಶಿರಸ್ಸು, ಕಪಿಲ, ಮೇಘದುಂದುಭಿ, ತಾರಕ, ಉಗ್ರದೃಕ್ಕು, ಶುಂಭ, ನಿಶುಂಭ, ಜಂಭ, ಉತ್ಕಲ, ಅರಿಷ್ಟ, ಅರಿಷ್ಟನೇಮಿ, ಮಯ, ತ್ರಿಪುರ, ಮೊದಲಾದ ರಾಕ್ಷಸಸೇನಾಧಿಪತಿಗಳೂ, ಪೌಲೋಮ, ಕಾಲಕೇಯ, ನಿವಾತಕವಚರೆಂಬ ಇನ್ನೂ ಅನೇಕ ದಾನವಕುಲದವರೂ, ತಮ್ಮತಮ್ಮ ವಾಹನಗಳನ್ನೇರಿ ಬರುತಿದ್ದರು ದೇವತೆಗಳಂತೆ ತಾವೂ ಅಮೃತಕ್ಕಾಗಿ ವಿಶೇಷಶ್ರಮಪಟ್ಟಿದ್ದರೂಕೂಡ, ಅದರಲ್ಲಿ ತಮಗೆ ಭಾಗವು ಸಿಕ್ಕದೆ ಹೋದುದರಿಂದ, ಈ ರಾಕ್ಷಸರೆಲ್ಲರೂ, ಅತ್ಯಂತಕೋಪಾವೇಶವುಳ್ಳವರಾಗಿ, ಯುದ್ಧೋತ್ಸಾಹದಿಂದ ಬರುತಿದ್ದರು ಇವರೆಲ್ಲರೂ ಇದಕ್ಕೆ ಮೊದಲೇ ಅನೇಕಾವರ್ತಿ ದೇವತೆಗಳನ್ನು ಯುದ್ಧದಲ್ಲಿ ಜಯಿಸಿದವರಾದುದರಿಂದ, ಈಗ ಆ ದೇವತೆಗಳನ್ನು ನಿರ್ಮೂಲವಾಗಿಯೇ ನಾಶಮಾಡಬೇಕೆಂಬ ಹಟದಿಂದಲೂ,ಉತ್ಸಾಹದಿಂದಲೂ, ಸಿಂಹನಾದಗಳನ್ನು ಮಾಡುತ್ತ, ಮಹಾಧ್ವನಿಯುಳ್ಳ ಶಂಖಗಳನ್ನೂದುತ್ತ ಬಂದರು. ಇಷ್ಟರಲ್ಲಿಯೇ ಮಹಾಗರ್ವದಿಂದ ಮುಂದೆಬಿದ್ದು ಬರುತ್ತಿರುವ ದೇವತೆಗಳನ್ನು ನೋಡಿ ಬಲಿಚಕ್ರವರ್ತಿಗೆ ಅತ್ಯಾಕ್ರೋಶವುಂಟಾಯಿತು. ಇತ್ತ

ಲಾಗಿ ದೇವೇಂದ್ರನು ಮದಜಲವನ್ನು ಸುರಿಸುತ್ತಿರುವ ಐರಾವತದಮೇಲೆ ಕುಳಿತು, ಅನೇಕಗಿರಿನದಿಗಳನ್ನೊಳಕೊಂಡ ಉದಯಪರ್ವತವನ್ನೇರಿದ ಸೂರ್ಯನಂತೆ ಪ್ರಕಾಶಿಸುತಿದ್ದನು ಅವನ ಸುತ್ತಲೂ ;ಅಗ್ನಿ, ವರುಣ, ವಾಯು, ಮೊದಲಾದ ಅಷ್ಟದಿಕ್ಪಾಲಕರೂ, ಇತರದೇವಶ್ರೇಷ್ಠರೂ ತಮ್ಮತಮ್ಮ ವಾಹನಗಳನ್ನೇರಿ, ತಮ್ಮತಮ್ಮ ಧ್ವಜಗಳನ್ನು ಮೇಲೇರಿಸಿ, ವಿವಿಧಾಯುಧಗಳನ್ನು ಹಿಡಿದು ಬರುತಿದ್ದರು ಹೀಗೆ ಉಭಯಪಕ್ಷದ ವೀರರೂ ಒಬ್ಬರನ್ನೊಬ್ಬರು ಧಿಕ್ಕರಿಸುತ್ತ, ಒಬ್ಬರನ್ನೊಬ್ಬರು ಹೆಸರುಹಿಡಿದು ಕರೆಯುತ್ತ, ಒಬ್ಬರನ್ನೊಬ್ಬರು ಮುಂದೆಬಿದ್ದು ಹಿಡಿಯುತ್ತ ದ್ವಂದ್ವಯುದ್ಧವನ್ನು ಮಾಡತೊಡಗಿದರು. ಬಲಿಯು ಇಂದ್ರನೊಡನೆ ಯುದ್ಧಕ್ಕೆ ನಿಂತನು. ತಾರಕನೆಂಬ ರಾಕ್ಷಸನು ಗುಹನನ್ನಿದಿರಿಸಿದನು. ಹಾಗೆಯೇ, ಹೇತಿಯು ವರುಣನನ್ನೂ, ಪ್ರಹೇತಿಯು ಮಿತ್ರನನ್ನೂ, ಕಾಲನಾಭನು ಯಮನನ್ನೂ, ಮಯನು ವಿಶ್ವಕರ್ಮನನ್ನೂ, ಶಂಬರನು ತ್ವಷ್ಟನನ್ನೂ, ವಿರೋಚನನು ಸವಿತೃವನ್ನೂ, ನಮುಚಿಯು ಪರಾಜಿತನನ್ನೂ: ವೃಷಪರ್ವನು ಅಶ್ವಿನೀದೇವತೆಗಳನ್ನೂ, ಬಾಣಾಸುರನೇ ಮೊದಲಾದ ನೂರುಮಂದಿ ಬಲಿಪುತ್ರರು ಸೂರ್ಯನನ್ನೂ, ರಾಹುವು ಚಂದ್ರನನ್ನೂ, ಪುಲೋಮನೆಂಬ ರಾಕ್ಷಸನು ವಾಯುವನ್ನೂ ಇದಿರಿಸಿ ನಿಂತರು ಶುಂಭನಿಶುಂಭರಿಬ್ಬರೂ ಮಹಾವೇಗವುಳ್ಳ ಭದ್ರಕಾಳಿಯೊಡನೆ ಯುದ್ಧಕ್ಕೆ ನಿಂತರು ಜಂಭನು ವೃಷಾಕಪಿಯನ್ನೂ, ಮಹಿಷನು ವಿಭಾವಸುವನ್ನೂ, ಇಲ್ವಲವಾತಾಪಿಗಳು ಬ್ರಹ್ಮಪುತ್ರರನ್ನೂ, ದುರ್ಮರ್ಷನು ಕಾಮದೇವನನ್ನೂ, ಉತ್ಕಲನು ಬ್ರಾಹ್ಮಿ ಮೊದಲಾದ ಸಪ್ತಮಾತೃಗಳನ್ನೂ ಇದಿರಿಸಿ ನಿಂತನು. ಮತ್ತೊಂದು ಕಡೆಯಲ್ಲಿ ಶುಕ್ರಬೃಹಸ್ಪತಿಗಳಿಬ್ಬರೂ ಕೈಕಲೆತರು ನರಕಾಸುರನು ಶನೈಶ್ಚರನನ್ನಿದಿರಿಸಿದನು ನಿವಾತಕವಚರು ಸಪ್ತಮರುತ್ತುಗಳೊಡನೆಯೂ, ಕಾಲಕೇಯರು ಅಷ್ಟವಸುಗಳೊಡನೆಯೂ, ಪೌಲೋಮರೆಂಬ ರಾಕ್ಷಸರು ವಿಶ್ವೇದೇವತೆಗಳೊಡನೆಯೂ ಯುದ್ಧವನ್ನಾರಂಭಿಸಿದರು ಕ್ರೋಧವಶರೆಂಬ ರಾಕ್ಷಸರು ಏಕಾದಶರುದ್ರರೊಡನೆ ಕೈಕಲೆತು ನಿಂತರು ಹೀಗೆ ದೇವಾಸುರರಿಬ್ಬರೂ ಒಬ್ಬರಿಗೊಬ್ಬರು ದ್ವಂದ್ವಯುದ್ಧವನ್ನಾರಂಭಿಸಿ,ತೀಕ್ಷ್ಣ

ಬಾಣಗಳಿಂದಲೂ ಕತ್ತಿಗಳಿಂದಲೂ, ತೋಮರಗಳಿಂದಲೂ, ಭಿಂಡಿವಾಳಗ ಳಿಂದಲೂ, ಚಕ್ರಗಳಿಂದಲೂ, ಗದೆಗಳಿಂದಲೂ, ಪಟ್ಟಿಸಗಳಿಂದಲೂ, ಶ ಕ್ತ್ಯಾಯುಧಗಳಿಂದಲೂ, ಸುರಗಿ, ಮುಸುಂಥಿ, ಗಂಡುಗೊಡಲಿ, ಈಟಿ, ಪರಿಘ, ಮುದ್ಗರ, ಮುಂತಾದ ನಾನಾಯುಧಗಳಿಂದಲೂ ಹೊಡೆದಾಡು ತ್ತ, ಕಂಡಕಂಡ ತಲೆಯನ್ನು ಕತ್ತರಿಸುತ್ತ ಬಂದರು. ಉಭಯಪಕ್ಷ ದಲ್ಲಿಯೂ ರಥ ಗಜ ತುರಗ ಪದಾತಿಗಳೆಂಬ ಚತುರಂಗಗಳೂ ಸಾರಥಿ ಗಳೊಡನೆ ತುಂಡುತುಂಡಾಗಿ ಬಿದ್ದುವು ಅಲ್ಲಲ್ಲಿ ಛಿನ್ನಭಿನ್ನವಾದ ತೋಳು, ತೊಡೆ, ಕೈ, ಕಾಲು, ತಲೆ ಮುಂತಾದ ಶರೀರಾವಯವಗಳಿಂದ ಲೂ, ತುಂಡುಬಿದ್ದ ಬಿಲ್ಲುಬಾಣಗಳಿಂದಲೂ, ಮುರಿದ ಧ್ವಜದಂಡಗಳಿಂದ ಲೂ, ಹರಿದ ಕವಚಗಳಿಂದಲೂ, ಪುಡಿಪುಡಿಯಾಗಿ ಬಿದ್ದ ವೀರಭೂಷಣಗ ಳಿಂದಲೂ, ಆ ರಣಭೂಮಿಯೆಲ್ಲವೂ ಅತಿಭಯಂಕರವಾಗಿ ಕಾಣುತಿತ್ತು. ಆ ರಣರಂಗದಲ್ಲಿ ಸೈನಿಕರ ಪದಘಾತದಿಂದಲೂ, ರಥಸಂಚಾರದಿಂದಲೂ ಮೇಲೆದ್ದ ಧೂಳಿಯು, ಸೂರ್ಯಬಿಂಬವನ್ನೇ ಮರೆಸುವಂತೆ ಸಮಸ್ತ ದಿಕ್ಕು ಗಳನ್ನೂ, ಆಕಾಶವನ್ನೂ ಎಡೆಬಿಡದೆ ವ್ಯಾಪಿಸಿ, ರಕ್ತಧಾರೆಗಳಿಂದ ತನ ಗೆತಾನೇ ಶಾಂತವಾಗುತಿತ್ತು. ಆ ಯುದ್ಧರಂಗದಲ್ಲಿ, ತಲೆಯಿಲ್ಲದ ಮುಂಡ ಗಳೂಕೂಡ ಕೈಯಲ್ಲಿ ಆಯುಧಗಳನ್ನು ಹಿಡಿದು, ವೀರಭಟರಂತೆ ಅಲ್ಲಲ್ಲಿ ಸಂಚರಿಸುತ್ತ, ನೋಡುವವರಿಗೆ ಆಶ್ಚರ್ಯವನ್ನುಂಟುಮಾಡುತಿದ್ದುವು ಇ ಷ್ಟರಲ್ಲಿ ದಾನವೇಂದ್ರನಾದ ಬಲಿಯು,ವೇಗದಿಂದ ಮುಂದೆ ಬಂದು, ಹತ್ತು ಬಾಣಗಳನ್ನು ಇಂದ್ರನಿಗೂ, ಮೂರು ಬಾಣಗಳನ್ನು ಐರಾವತಕ್ಕೂ,ನಾಲ್ಕು ಬಾಣಗಳನ್ನು, ಆ ಐರಾವತದ ಪಾದರಕ್ಷಕರಾಗಿ ಬರುತಿದ್ದ ನಾಲ್ಕುಮಂ ದಿಭಟರಿಗೂ, ಮತ್ತೊಂದು ಬಾಣವನ್ನು ಆ ಆನೆಯನ್ನು ನಡೆಸುತಿದ್ದ ಮಾ ವಟಿಗನಿಗೂ ಗುರಿಯಿಟ್ಟು ಹೊಡೆದನು. ಈ ಬಾಣಗಳು ತನಗಿದಿರಾಗಿ ಬ ರುತ್ತಿರುವುದನ್ನು ನೋಡಿದೊಡನೆ, ಧನುರ್ವಿದ್ಯೆಯಲ್ಲಿ ನಿಪುಣನಾದ ದೇವೇಂ ದ್ರನು, ತನ್ನ ಹಸ್ತಚಮತ್ಕಾರದಿಂದ ನಡುದಾರಿಯಲ್ಲಿಯೇ ಅವೆಲ್ಲವನ್ನೂ ಕ ತ್ತರಿಸಿ ಕೆಡಹಿದನು. ಇಂದ್ರನ ಈ ಹಸ್ತಚಮತ್ಕಾರವನ್ನು ನೋಡಿ ಬಲಿಚಕ್ರವರ್ತಿಗೆ ಸಹಿಸಲಾರದ ಕೋಪವುಂಟಾಯಿತು. ಈ ಕೋಪದಿಂದ

ಭಯಂಕರವಾದ ಬೇರೊಂದು ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡನು,ಮ
ಹೋಲ್ಕೆಯಂತೆ ಜ್ವಲಿಸುತ್ತಿರುವ ಆ ಶಕ್ತಿಯು, ಬಲಿಯ ಕೈಯಲ್ಲಿದ್ದಾಗಲೇ
ದೇವೇಂದ್ರನು ತನ್ನ ಬಾಣಗಳಿಂದ ಅದನ್ನು ಕತ್ತರಿಸಿಕೆಡಹಿದನು ಇದರಿಂದ
ಬಲಿಯು ಮತ್ತಷ್ಟು ಕೋಪೋದ್ರಿಕ್ತನಾಗಿ, ಶೂಲವನ್ನೂ,ಪ್ರಾಸವನ್ನೂ
ಕೈಗೆತ್ತಿಕೊಂಡನು ಅವುಗಳನ್ನೂ ದೇವೇಂದ್ರನು ತನ್ನ ಹಸ್ತಚಮತ್ಕಾರ
ದಿಂದ ಆಕ್ಷಣವೇ ತುಂಡುಮಾಡಿ ಕೆಡಹಿದನು ಆಗ ಬಲಿಯು ದೇವೇಂ
ದ್ರನಮೇಲೆ ತನ್ನ ಕೈಸಾಗದಿರುವುದನ್ನು ನೋಡಿ, ಹಾಗೆಯೇ ಕಣ್ಮರೆಯಾಗಿ
ಮಾಯೆಗಳನ್ನು ಸೃಷ್ಟಿಸಲಾರಂಭಿಸಿದನು. ಒಡನೆಯೇ ದೇವಸೈನ್ಯದಮೇಲೆ
ಆಕಾಶದಿಂದ ಪರ್ವತಗಳು ತಂಡತಂಡವಾಗಿ ಉದಿರಿದುವು ಅದರಿಂದಾ
ಚೆಗೆ ಕಾಡುಗಿಚ್ಚಿನ ಜ್ವಾಲೆಯಿಂದುರಿಯುತ್ತಿರುವ ದೊಡ್ಡದೊಡ್ಡ ಮರ
ಗಳು ಉದಿರುತಿದ್ದುವು ಆಮೇಲೆ ದೇವಸೈನ್ಯವೆಲ್ಲವನ್ನೂ ಪುಡಿಪುಡಿಮಾಡು
ವಂತೆ ತೀಕ್ಷ್ಣವಾದ ಮೊನೆಯುಳ್ಳ ಕಲ್ಲುಗಳು ಬಿದ್ದುವು ಅಲ್ಲಿಂದಾಚೆಗೆ ಆ
ಕಾಶದಿಂದ ಹೆಬ್ಬಾವುಗಳೂ, ವಿಷಸರ್ಪಗಳೂ, ಚೇಳುಗಳೂ, ಸಿಂಹ, ಹುಲಿ,
ಹಂದಿ, ಆನೆ ಮುಂತಾದ ಕ್ರೂರಮೃಗಗಳೂ ತಂಡತಂಡವಾಗಿ ಬಿದ್ದು
ದೇವಸೈನ್ಯವನ್ನು ನೆಗ್ಗುತಿದ್ದುವು. ನಾನಾದಿಕ್ಕುಗಳಿಂದ ಸಾವಿರಾರುಮಂದಿ
ರಾಕ್ಷಸಭಟರು ಆಯುಧಪಾಣಿಗಳಾಗಿ ದೇವಸೈನ್ಯದಮೇಲೆ ಬೀಳುತಿದ್ದರು.
ಭಯಂಕರರೂಪವುಳ್ಳ ಕೆಲವು ರಾಕ್ಷಸರಸ್ತ್ರೀಯರು, ಕೈಯಲ್ಲಿ ಶೂಲವನ್ನು
ಹಿಡಿದು, ಮೈಮೇಲೆ ಬಟ್ಟೆಯಿಲ್ಲದೆ ನಿರ್ವಾಣದಿಂದ ದೇವಸೈನ್ಯವನ್ನು
ಪ್ರವೇಶಿಸಿ, "ಕಡಿ! ಕೊಲ್ಲು! ತಿವಿ" ಎಂದು ಕೂಗಿಡುತಿದ್ದರು ಅದರಿಂ
ದಾಚೆಗೆ ಆಕಾಶದಲ್ಲಿ ಕಠೋರಧ್ವನಿಯಿಂದ ಮೇಘಪರಂಪರೆಗಳು ಗುಂಪು
ಗೂಡಿ ಅಗ್ನಿವರ್ಷವನ್ನು ಕರೆಯಲಾರಂಭಿಸಿದುವು. ಬಲಿಯ ಮಾಯೆಯಿಂದ
ಸೃಷ್ಟಿಸಲ್ಪಟ್ಟ ಆ ಅಗ್ನಿಯು, ವಾಯುಸಹಾಯದಿಂದ ಮೇಲೆಮೇಲೆ ಹೆಚ್ಚಿ
ಪ್ರಳಯಾಗ್ನಿಯಂತೆ ದೇವಸೈನ್ಯವನ್ನು ದಹಿಸಲಾರಂಭಿಸಿತು. ಅದರಿಂದಾ
ಚೆಗೆ ದೇವಸೈನ್ಯದ ಸುತ್ತಲೂ ಪ್ರಚಂಡವಾಯುವಿನಿಂದ ಉಲ್ಲೋಲ
ಕಲ್ಲೋಲವಾದ ಸಮುದ್ರವು ಕಾಣಿಸಿಕೊಂಡಿತು. ಆ ಸಮುದ್ರವು ಅಲೆಗ
ಳಿಂದಲೂ, ಸುಳಿಗಳಿಂದಲೂ ಅತಿಭಯಂಕರವಾಗಿ, ಸಮಸ್ತ ಲೋಕವನ್ನೂ

ಏಕಾರ್ಣವವಾಗಿ ಮಾಡುವಂತೆ ತೋರುತಿತ್ತು. ಹೀಗೆ ಬಲಿಚಕ್ರವರ್ತಿಯು ಕಣ್ಮರೆಯಾಗಿ ಭಯಂಕರವಾದ ಮಾಯೆಗಳನ್ನು ಸೃಷ್ಟಿಸುತ್ತಿರಲು,ದೇವತೆಗಳಿಗೆ ಸ್ವಲ್ಪಸ್ವಲ್ಪವಾಗಿ ಭಯವು ಹುಟ್ಟಿತು ಇಂದ್ರಾದಿದೇವತೆಗಳು ಆ ಮಾಯೆಯನ್ನಡಗಿಸಲಾರದೆ ಭಗವಂತನನ್ನು ಧ್ಯಾನಿಸುತಿದ್ದರು ಒಡನೆಯೇ ಜಗತ್ಕರ್ತನಾದ ಶ್ರೀಮನ್ನಾರಾಯಣನು, ಗರುಡಾರೂಢನಾಗಿ ಬಂದು ಆ ದೇವಸೈನ್ಯದ ನಡುವೆ ಕಾಣಿಸಿಕೊಂಡನು. ಆ ಭಗವಂತನ ದಿವ್ಯಾಕೃತಿಯನ್ನು ಕೇಳಬೇಕೆ! ನಡುವಿನಲ್ಲಿ ಪೀತಾಂಬರವೆಂಬ ಹೊಂಬಣ್ಣದ ಪಟ್ಟೆಮಡಿ! ಕಮಲದಳದಂತೆ ಕೆಂಪಾದ ಕಣ್ಣುಗಳು! ಅಷ್ಟಭುಜಗಳಲ್ಲಿಯೂ ಎಂಟು ದಿವ್ಯಾಯುಧಗಳು! ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆ! ಸರ್ವಾವಯವಗಳಲ್ಲಿಯೂ ಝಗಝಗಿಸುತ್ತಿರುವ ಕಿರೀಟಕುಂಡಲಾದ್ಯಾಭರಣಗಳು! ಇಂತಹ ದಿವ್ಯರೂಪದೊಡನೆ ಭಗವಂತನು ಯುದ್ಧಭೂಮಿಯಲ್ಲಿ ಬಂದು ನಿಂತಕೂಡಲೆ, ಎಚ್ಚರಗೊಂಡಮೇಲೆ ಸ್ವಪ್ನಪದಾರ್ಥಗಳಂತೆಯೂ, ಹರಿಸ್ಮರಣೆಯುಂಟಾದಮೇಲೆ ಸಮಸ್ತವಿಪತ್ತುಗಳಂತೆಯೂ, ಭಗವಂತನ ತೇಜೋಮಹಿಮೆಯಿಂದ ಆ ರಾಕ್ಷಸರ ಮಾಯೆಗಳೆಲ್ಲವೂ ಅಡಗಿಹೋದುವು ಇಷ್ಟರಲ್ಲಿ ಕಾಲನೇಮಿಯೆಂಬ ರಾಕ್ಷಸನೊಬ್ಬನು, ಯುದ್ಧಭೂಮಿಯಲ್ಲಿದ್ದ ಈ ಮಹಾವಿಷ್ಣುವನ್ನು ನೋಡಿ ಕೋಪಗೊಂಡು, ತನ್ನ ವಾಹನವಾದ ಸಿಂಹವನ್ನೇರಿ ಮುಂದೆ ಬಂದು, ತನ್ನ ಕೈಯಲ್ಲಿದ್ದ ಭಯಂಕರವಾದ ಶೂಲವನ್ನು ಗಿರಗಿರನೆ ತಿರುಗಿಸಿ ವಿಷ್ಣುವಿನಮೇಲೆ ಪ್ರಯೋಗಿಸಿದನು ಆ ಶೂಲವು ವೇಗದಿಂದ ಬಂದು ಗರುತ್ಮಂತನ ಭುಜಕ್ಕೆ ತಾಗುವಷ್ಟರಲ್ಲಿ, ಭಗವಂತನು ಅದನ್ನು ತನ್ನ ಕೈಯಿಂದ ಹಿಡಿದು ಮುರಿದು ಕೆಡಹಿದನು ಈ ಕಾಲನೇಮಿಯ ಮರಣವನ್ನು ನೋಡಿ ಮಾಲ್ಯವಂತನೆಂಬ ಬೇರೊಬ್ಬ ರಾಕ್ಷಸನು ಭಯಂಕರವಾದ ಗದೆಯನ್ನು ಹಿಡಿದು ಬಂದು, ಅದನ್ನು ಗರುಡನಿಗೆ ಗುರಿಯಿಟ್ಟು ಪ್ರಯೋಗಿಸಿ, ಉತ್ಸಾಹದಿಂದ ಸಿಂಹನಾದವನ್ನು ಮಾಡಿದನು ಒಡನೆಯೇ ಭಗವಂತನು ತನ್ನ ಚಕ್ರಾಯುಧವನ್ನು ಪ್ರಯೋಗಿಸಿ, ಆ ಮಾಲ್ಯವಂತನ ಕಂಠವನ್ನೂ ಕತ್ತರಿಸಿದನು. ಇದು ಹತ್ತನೆಯ ಅಧ್ಯಾಯವು.

---

### { ತಿರುಗಿ ದೇವತೆಗಳು ದಾನವರೊಡನೆ ಯುದ್ಧವ ನ್ನಾರಂಭಿಸಿದುದು. }

ಓ ರಾಜೇಂದ್ರಾ ಕೇಳು. ಹೀಗೆ ಭಗವದನುಗ್ರಹದಿಂದ ರಾಕ್ಷಸರ ಮಾಯೆಗಳೆಲ್ಲವೂ ಅಡಗಿದಮೇಲೆ, ಇಂದ್ರಾದಿದೇವತೆಗಳು ಸ್ವಲ್ಪಸ್ವಲ್ಪವಾಗಿ ಚೇತರಿಸಿಕೊಂಡು,ಮೊದಲಿನಂತೆ ಯುದ್ಧೋತ್ಸಾಹವುಳ್ಳವರಾಗಿ,ಹಿಂದೆ ತಮ್ಮತಮ್ಮೊಡನೆ ದ್ವಂದ್ವಯುದ್ಧಕ್ಕೆ ನಿಂತಿದ್ದ ದೈತ್ಯರೊಡನೆಯೇ ತಿರುಗಿ ಕೈಕಲೆತು, ಅವರನ್ನು ನಾನಾವಿಧದಿಂದ ಪ್ರಹರಿಸುವುದಕ್ಕೆ ತೊಡಗಿದರು. ಅವರಲ್ಲಿ ದೇವೇಂದ್ರನು ತನಗಿದಿರಾಗಿ ನಿಂತಿದ್ದ ಬಲಿಯನ್ನು ಒಂದೇ ಪ್ರಹಾರದಿಂದ ಕೊಲ್ಲಬೇಕೆಂದು ನಿಶ್ಚಯಿಸಿ, ವಜ್ರಾಯುಧವನ್ನು ಕೈಗೆತ್ತಿಕೊಂಡನು. ಆ ಇಂದ್ರನ ಕೋಪಾವೇಶವನ್ನು ನೋಡಿ ಅಲ್ಲಿದ್ದ ಪ್ರಜೆಗಳೆಲ್ಲರೂ "ಹಾಹಾ" ಎಂದು ಕೂಗಿಡುತಿದ್ದರು. ಆಗ ದೇವೇಂದ್ರನು ರಣರಂಗದಲ್ಲಿ ಮಹಾಗರ್ವದಿಂದ ಮುಂದೆ ಬರುತಿದ್ದ ಬಲಿಯನ್ನು ನೋಡಿ, ತಿರಸ್ಕಾರವಾಕ್ಯದಿಂದ ಹೀಗೆಂದು ಹೇಳುವನು. "ಎಲೆ ಮೂಢಾ! ನಾಟಕದಲ್ಲಿ ವೇಷಧಾರಿಗಳು, ಬೇರೆಬೇರೆ ವೇಷಭಾಷೆಗಳಿಂದ ಅಜ್ಞರಾದ ಜನರನ್ನು ಮರುಳುಮಾಡಿ, ಅವರ ಧನವನ್ನಪಹರಿಸುವಂತೆ, ನೀನು ನಿನ್ನ ಕಪಟವಿದ್ಯೆಗಳಿಂದ ನಮ್ಮನ್ನು ಜಯಿಸಬೇಕೆಂದು ಯತ್ನಿಸಿದೆಯಲ್ಲವೆ? ಆ ನಿನ್ನ ಮಾಯೆಗೆ ನಾವು ಹೆದರುವವರಲ್ಲ ಬುದ್ಧಿಯಿಲ್ಲದ ನೀನು ಇದಕ್ಕೆ ಮೊದಲು ಎಂದಿಗೂ ಅನುಭವಿಸಿ ಕಾಣದ ಉನ್ನತಪದವಿಯನ್ನೂ, ನಿನಗೆ ಯೋಗ್ಯವಲ್ಲದ ಉತ್ತಮಲೋಕವನ್ನೂ ಪಡೆಯಬೇಕೆಂದು ಯತ್ನಿಸುತ್ತಿರುವೆಯಲ್ಲವೆ? ಇದರಿಂದ ನೀನು ಪರರೊಡವೆಗಾಗಿ ಆಸೆಪಡತಕ್ಕ ಕಳ್ಳನೆನಿಸಿಕೊಳ್ಳುವುದೊಂದೇ ಹೊರತು, ಅದನ್ನು ನೀನು ದಕ್ಕಿಸಿಕೊಳ್ಳಲಾರೆ! ನೀನು ನಮ್ಮಂತೆ ಉನ್ನತಪದವಿಯನ್ನು ಪಡೆಯುವ ಮಾತು ಹಾಗಿರಲಿ! ಮೋಸಗಾರನಾದ ನಿನ್ನನ್ನು ಈಗಿನ ಸ್ಥಿತಿಗಿಂತಲೂ ಅಧೋಗತಿಗೆ ತಳ್ಳುವೆನು ನೋಡು. ಇದೋ! ನೂರೇಣುಗಳುಳ್ಳ ಈ ನನ್ನ ವಜ್ರಾಯುಧದಿಂದ, ಮಾಯಾವಿಯಾದ ನಿನ್ನ ತಲೆಯನ್ನು ಈಗಲೇ ಕತ್ತರಿಸಿ ಕೆಡಹುವೆನು ನೋಡು! ಆದರೆ ನೀನುಮಾತ್ರ ನಿನ್ನ ಜ್ಞಾತಿಗಳೊಡನೆ ಈ ಯುದ್ಧರಂಗವನ್ನು ಬಿಟ್ಟು ಭಯದಿಂದ ಪ

ಲಾಯನಮಾಡದೆ ಸ್ವಲ್ಪಕಾಲದವರೆಗೆ ನಿನ್ನ ಪೌರುಷವನ್ನು ತೋರಿಸಬೇಕು” ಎಂದನು ಅದಕ್ಕಾ ಬಲಿಯು, “ಎಲೆ ಮದಾಂಧಾ! ಇಷ್ಟರಲ್ಲಿಯೇ ನಿನಗೆ ಈ ಗರ್ವವೆ? ನೀನಾದರೇನು? ನಾನಾದರೇನು? ಕಾಲಚೋದಿತರಾಗಿ ಈ ಯುದ್ಧರಂಗಕ್ಕೆ ಬಂದು ನಿಂತಿರುವೆವು ನಾವು ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳಿಗನುಸಾರವಾಗಿ ನಮಗೆ ಈ ಜನ್ಮದಲ್ಲಿ ಜಯಾಪಜಯಗಳೂ, ಸುಖದುಃಖಗಳೂ ಬಂದು ಸೇರುವುವು. ಈ ಜಯಾಪಜಯಗಳು ಯಾರಿಗೂ ಸ್ಥಿರವಲ್ಲ ಮನುಷ್ಯರಿಗೆ ಜಯವಾಗಲಿ, ಅಪಜಯವಾಗಲಿ, ಕಾಲಕ್ರಮದಿಂದ ಮಾರಿಮಾರಿ ಬರುತ್ತಿರುವುದು ತತ್ಕಾಲಕ್ಕೆ ಒಂದುವೇಳೆ ನೀನು ಕೀರ್ತಿಗೂ, ಜಯಕ್ಕೂ ಪಾತ್ರನಾಗಿದ್ದರೂ, ಇದು ನಿನಗೆ ಸ್ಥಿರವಲ್ಲ ನನ್ನ ಸುಕೃತವು ಫಲಿಸುವಕಾಲಕ್ಕೆ ಈಗ ನಿನಗುಂಟಾದ ಜಯವೇ ನನಗೂ ಉಂಟಾಗಬಹುದು ಹೀಗಿರುವಾಗ ಈ ಸ್ವಲ್ಪಕಾಲದ ಜಯಕ್ಕಾಗಿ ನೀನು ಸಂತೋಷಿಸಬಹುದೆ? ಇದನ್ನು ತಿಳಿದೇ ಲೋಕದಲ್ಲಿ ಪಂಡಿತರಾದವರು, ಪ್ರಾಣಿಗಳಿಗೆ ಕರ್ಮಾಧೀನವಾಗಿ ಬಂದೊದಗುವ ಸುಖದುಃಖಗಳನ್ನು ನೋಡಿ,ಸಂತೋಷವನ್ನಾಗಲಿ, ದುಃಖವನ್ನಾಗಲಿ ತೋರಿಸಲಾರರು.ಮೂಢನಾದ ನೀನು ಇದನ್ನು ತಿಳಿಯದೆ ಈ ಸ್ವಲ್ಪಜಯಕ್ಕಾಗಿ ಸಂತೋಷಪಡುವೆಯಲ್ಲಾ! ನೀನು ವಿವೇಕವಿಲ್ಲದವನು ಕೀರ್ತಿಗೂ, ಜಯಕ್ಕೂ ತಮ್ಮನ್ನೇ ಕಾರಣವೆಂದು ತಿಳಿದುಕೊಂಡಿರುವ ನಿನ್ನಂತಹ ಮೂಢರನ್ನು ನೋಡಿ,ವಿವೇಕಿಗಳಾದವರು ಪಶ್ಚಾತ್ತಾಪಪಡದಿರಲಾರರು ಹೀಗೆ ಅವಿವೇಕಿಯಾದ ನೀನು ಮರ್ಮೋದ್ಘಾಟನವಾದ ಮಾತುಗಳನ್ನಾಡಿದಮಾತ್ರಕ್ಕೆ ಅದರಿಂದ ನಮಗೇನೂ ಕುಂದಕವಿಲ್ಲ. ನಿನ್ನಂತೆ ನಾವು ಹೆಮ್ಮೆಯಿಂದ ಬೊಗುಳುವವರೂ ಅಲ್ಲ” ಎಂದನು. ಹೀಗೆ ತತ್ವಜ್ಞನಾಗಿಯೂ, ವೀರಾಗ್ರೇಸರನಾಗಿಯೂ ಇರುವ ಬಲಿಯು, ಮರ್ಮಭೇದಕಗಳಾದ ಮಾತುಗಳಿಂದ ಆ ಇಂದ್ರನನ್ನು ಧಿಕ್ಕರಿಸಿದುದಲ್ಲದೆ, ಆ ಇಂದ್ರನಮೇಲೆ ತೀಕ್ಷ್ಣಬಾಣಗಳನ್ನೂ ಪ್ರಯೋಗಿಸಿದನು ಹೀಗೆ ಬಲಿಯಿಂದ ತಿರಸ್ಕೃತನಾದ ಇಂದ್ರನು, ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ, ಆ ಬಲಿಯ ತಿರಸ್ಕಾರವಾಕ್ಯಗಳನ್ನು ಸಹಿಸಲಾರದೆ, ಆತನಮೇಲೆ ಅಮೋಘವಾದ ತನ್ನ ವಜ್ರಾಯುಧವನ್ನು ಪ್ರ

ಯೋಗಿಸಿದನು ಆ ವಜ್ರಘಾತದಿಂದ ಬಲಿಯು ರೆಕ್ಕೆಮುರಿದ ಪರ್ವತದಂ
ತೆ ವಾಹನಸಹಿತವಾಗ್ಯಿಕೆಳಗೆ ಬಿದ್ದನು. ಹೀಗೆ ಬಲಿಯು ಕೆಳಗೆ ಬಿದ್ದುದನ್ನು
ದೂರದಲ್ಲಿ ನಿಂತು ನೋಡುತಿದ್ದ ಜಂಭಾಸುರನು, ಮಿತ್ರಸ್ನೇಹದಿಂದ,
ಸಿಂಹವನ್ನೇರಿ ವೇಗದಿಂದ ಬಂದು, ಇಂದ್ರನನ್ನು ಸಮೀಪಿಸಿ, ತನ್ನ ಕೈಯ
ಲ್ಲಿದ್ದ ಮಹಾಗದೆಯನ್ನು ಗಿರಗಿರನೆ ತಿರುಗಿಸಿ, ಆ ಇಂದ್ರನ ಕಂಠಕ್ಕೆ ಗುರಿಯಿ
ಟ್ಟು ಹೊಡೆದನು ಅದರಿಂದಲೇ ಐರಾವತವನ್ನೂ ಅಪ್ಪಳಿಸಿದನು. ಈ ಗ
ದಾಪ್ರಹಾರವನ್ನು ಸಹಿಸಲಾರದೆ, ಐರಾವತವು ಮೊಳಕಾಲೂರಿ ಕೆಳಗೆ ಬಿ
ದ್ದು ಮೂರ್ಛೆಹೊಂದಿತು ಇಷ್ಟರಲ್ಲಿಯೇ ಇಂದ್ರಸಾರಥಿಯಾದ ಮಾತ
ಲಿಯು ಸಾವಿರಕುದುರೆಗಳನ್ನು ಕಟ್ಟಿದ ಮಹಾರಥವನ್ನು ತಂದು, ಇಂದ್ರನ
ಸಮೀಪದಲ್ಲಿ ನಿಲ್ಲಿಸಲು, ದೇವೇಂದ್ರನು ಐರಾವತದಿಂದಿಳಿದು, ಆ ರಥವನ್ನೇ
ರಿ ಕುಳಿತನು ಹೀಗೆ ಮಾತಲಿಯು ತನ್ನ ಪ್ರಭುವಾದ ಇಂದ್ರನಲ್ಲಿ
ತೋರಿಸಿದ ಸ್ವಾಮಿಭಕ್ತಿಗಾಗಿ, ಜಂಭಾಸುರನು, ಸಂತೋಷಪಟ್ಟು ಬೆಂ
ಕಿಯಂತೆ ಜ್ವಲಿಸುತ್ತಿರುವ ಶೂಲವನ್ನು ಕೈಗೆ ತೆಗೆದುಕೊಂಡು, ಮಂದ
ಹಾಸದಿಂದ ನಗುತ್ತ, ಮುಂದೆ ಬಂದು, ಅದನ್ನು ಮಾತಲಿಯಮೇಲೆ ಪ್ರ
ಯೋಗಿಸಿದನು ಮಾತಲಿಯು ಆ ಪ್ರಹಾರವನ್ನೂ ಲಕ್ಷ್ಯಮಾಡದೆ, ಧೈ
ರ್ಯದಿಂದಲೇ ತಡೆದುಕೊಂಡನು.! ಜಂಭಾಸುರನು ತಿರುಗಿ ಆಮಾತಲಿಯ
ಮೇಲೆ ಪ್ರಯೋಗಿಸುವುದಕ್ಕಾಗಿ ಬೇರೆ ಆಯುಧವನ್ನು ಕೈಗೆ ತೆಗೆದುಕೊ
ಳ್ಳುವಷ್ಟರಲ್ಲಿ, ಇಂದ್ರನು ತನ್ನ ವಜ್ರಾಯುಧದಿಂದ ಅವನ ತಲೆಯ
ನ್ನು ಕತ್ತರಿಸಿ ಕೆಡಹಿದನು. ಹೀಗೆ ಜಂಭಾಸುರನು ಸತ್ತುಬಿದ್ದೊಡನೆ, ಅವನ
ಜ್ಞಾತಿಗಳಾದ ನಮುಚಿ, ಬಲಿ, ಪಾಕಾಸುರರೆಂಬ ಮೂವರು ರಾಕ್ಷಸರು,
ನಾರದಮಹರ್ಷಿಯಿಂದ ಆವೃತ್ತಾಂತವನ್ನು ಕೇಳಿ, ಮಹಾವೇಗದಿಂದ ಬಂ
ದು ಇಂದ್ರನನ್ನಿದಿರಿಸಿ ನಿಂತರು ಈ ಮೂವರೂ ಮರ್ಮಭೇದಕವಾಕ್ಯಗ
ಳಿಂದ ಇಂದ್ರನನ್ನು ಧಿಕ್ಕರಿಸಿದುದಲ್ಲದೆ, ಪರ್ವತದಮೇಲೆ ಮಳೆಯನ್ನು ಕ
ರೆಯುವ ಮೇಘಗಳಂತೆ,ಆ ಇಂದ್ರನಮೇಲೆ ಬಾಣಗಳನ್ನೂ ವರ್ಷಿಸಿದರು
ಅವರಲ್ಲಿ ಬಲಾಸುರನು ತನ್ನ ಹಸ್ತಚಾತುರ್ಯದಿಂದ ಏಕಕಾಲದಲ್ಲಿ ಸಹಸ್ರ
ಬಾಣಗಳನ್ನು ಪ್ರಯೋಗಿಸಿ, ದೇವೇಂದ್ರನ ರಥಕ್ಕೆ ಕಟ್ಟಿದ ಸಾವಿರಕುದು

ರೆಗಳನ್ನೂ ಪ್ರಹರಿಸಿದನು ಪಾಕಾಸುರನು ನೂರುಬಾಣಗಳನ್ನು ಮಾತ ಲಿಯಮೇಲೆ ಪ್ರಯೋಗಿಸಿದನು. ಬೇರೆ ನೂರು ಬಾಣಗಳಿಂದ ಇಂದ್ರರಥವ ನ್ನು ಚೂರ್ಣಮಾಡಿದನು. ಆಗ ಪಾಕಾಸುರನು ಬಾಣಸಂಧಾನ ಮೋ ಕ್ಷಗಳಲ್ಲಿ ತೋರಿಸಿದ ಹಸ್ತಚಮತ್ಕಾರವು ನೋಡುವವರಿಗೆ ಅತ್ಯಾಶ್ಚ ರ್ಯವನ್ನುಂಟುಮಾಡುತಿತ್ತು. ಇದೇ ಸಮಯದಲ್ಲಿ ನಮುಚಿಯು ಚಿ ನ್ನದ ಹಿಡಿಗಳುಳ್ಳ ಹದಿನೈದು ಬಾಣಗಳನ್ನು ಇಂದ್ರನಮೇಲೆ ಪ್ರಯೋಗಿಸಿ, ಮಳೆಗಾಲದ ಮೇಘದಂತೆ ಸಂತೋಷದಿಂದ ಸಿಂಹನಾದಮಾಡಿದನು. ಇದೇಸಮಯದಲ್ಲಿ ಅನೇಕದೈತ್ಯಭಟರು, ಸೂರ್ಯನನ್ನು ಮರೆಸುವ ಕಾ ಲಮೇಘಗಳಂತೆ ನಾನಾದಿಕ್ಕುಗಳಿಂದ ಕವಿದುಬಂದು, ಇಂದ್ರನನ್ನೂ, ಅವನ ರಥವನ್ನೂ, ಅವನ ಸಾರಥಿಯನ್ನೂ ಬಾಣಗಳಿಂದಲೇ ಮುಚ್ಚಿಬಿಟ್ಟ ರು ಆ ಬಾಣದ ಮರೆಯಲ್ಲಿ ಕ್ಷಣಕಾಲದವರೆಗೆ ಇಂದ್ರನನ್ನು ಕಾಣದೆ, ದೇವತೆಗಳೆಲ್ಲರೂ ದುಃಖದಿಂದ ಹಾಹಾಕಾರವನ್ನು ಮಾಡುತಿದ್ದರು ಸಮು ದ್ರಮಧ್ಯದಲ್ಲಿ ತಮ್ಮ ನಾವೆಯು ಒಡೆದು ಹೋಗುವುದರಿಂದ ದುಃಖಿಸುವ ವರ್ತಕರಂತೆ, ದೇವಸೈನ್ಯವೆಲ್ಲವೂ ದಿಕ್ಕಿಲ್ಲದೆ ಭಯಪಟ್ಟು ವ್ಯಸನದಿಂದ ತ ತ್ತಳಿಸುತಿದ್ದುವು. ಇಷ್ಟರಲ್ಲಿಯೇ ಇಂದ್ರನು, ತನ್ನ ರಥ, ರಥಾಶ್ವ, ಸಾರ ಥಿಗಳೊಡನೆ ಆ ಶರಪಂಜರವನ್ನು ಭೇದಿಸಿಕೊಂಡು ಪ್ರಾತಃಕಾಲದಲ್ಲಿ ಉ ದಿಸಿಬಂದ ಸೂರ್ಯನಂತೆ ಹೊರಕ್ಕೆ ಬಂದು, ತನ್ನ ತೇಜಸ್ಸಿನಿಂದ ಬೆಳ ಗುತ್ತ, ಅಲ್ಲಿದ್ದ ಸಮಸ್ತದೇವತೆಗಳಿಗೂ ಸಂತೋಷವನ್ನುಂಟುಮಾಡಿದ ನು ಆಗ ದೇವೇಂದ್ರನು ತಾನು ಹೊರಗೆ ಬರುವಷ್ಟರಲ್ಲಿ ತನ್ನ ಸಮಸ್ತ ಸೈನ್ಯವೂ ರಾಕ್ಷಸರಿಂದ ಪೀಡಿತವಾಗಿ ದುಃಖಿಸುತ್ತಿರುವುದನ್ನು ನೋಡಿ ಕೋಪಗೊಂಡು, ತನ್ನ ವಜ್ರಾಯುಧವನ್ನು ಪ್ರಯೋಗಿಸಿ, ಒಂದೇಪ್ರ ಹಾರದಿಂದ! ಆ ಬಲಾಸುರನ ಮತ್ತು ಪಾಕಾಸುರನ ತಲೆಗಳೆರಡನ್ನೂ ಕತ್ತರಿಸಿ ಕೆಡಹಿದನು ಇದನ್ನು ನೋಡಿ ಸಮಸ್ತರಾಕ್ಷಸರಿಗೂ ಭಯವುಂ ಟಾಯಿತು, ಇಷ್ಟಾದರೂ ಮಹಾಬಲಾಢ್ಯನಾದ ನಮುಚಿಯುಮಾತ್ರ, ಸ್ವಲ್ಪಮಾತ್ರವೂ ಧೈರ್ಯಗುಂದದೆ, ದುಃಖದಿಂದಲೂ, ಕೋಪದಿಂದಲೂ ಮೈಮರೆತು, ಹೇಗಾದರೂ ಆ ಇಂದ್ರನನ್ನು ಕೊಂದೇಬಿಡಬೇಕೆಂದು

ನಿಶ್ಚಯಿಸಿ, ನೂರಾರು ಘಂಟೆಗಳಿಂದಲೂ, ಚಿನ್ನದ ಕಟ್ಟುಗಳಿಂದಲೂ ಅಲಂಕೃತವಾದ ಶೂಲವನ್ನು ಕೈಗೆತ್ತಿಕೊಂಡು ಇಂದ್ರನನ್ನು ಸಮೀಪಿಸಿ “ಎಲೆ ದುರಾತ್ಮಾ! ಇದೋ! ಇದರಿಂದ ನೀನು ಸತ್ತೆ” ಎಂದು ಹೇಳಿ ಸಿಂಹನಾದಮಾಡುತ್ತ, ಅದನ್ನು ಇಂದ್ರನಮೇಲೆ ಪ್ರಯೋಗಿಸಿದನು. ಭಯಂಕರವಾದ ಆ ಶೂಲವು ಆಕಾಶದ ಕೊಳ್ಳಿಯಂತೆ ತನಗಿದಿರಾಗಿ ಬರುತ್ತಿರುವುದನ್ನು ನೋಡಿ ದೇವೇಂದ್ರನು, ಎಡೆಬಿಡದೆ ಬಾಣಗಳನ್ನು ಪ್ರಯೋಗಿಸಿ, ಅದನ್ನು ಸಹಸ್ರಭಾಗವಾಗಿ ಭೇದಿಸಿಬಿಟ್ಟನು. ಮತ್ತು ನಮುಚಿಯ ತಲೆಯನ್ನು ಭೇದಿಸುವುದಕ್ಕಾಗಿ ಅವನಮೇಲೆ ವಜ್ರಾಯುಧ ವನ್ನು ಪ್ರಯೋಗಿಸಿದನು ದೇವೇಂದ್ರನು ಆ ವಜ್ರಾಯುಧವನ್ನು ತನ್ನ ಸರ್ವಶಕ್ತಿಯಿಂದ ಪ್ರಯೋಗಿಸಿದರೂ, ಅದು ಇದಕ್ಕೆ ಮೊದಲು ಮಹಾ ಬಲಾಢ್ಯನಾದ ವೃತ್ರಾಸುರನನ್ನೇ ಕೊಂದುದಾಗಿದ್ದರೂ, ಆ ನಮುಚಿಯ ಮೈಮೇಲಿನ ಚರ್ಮವನ್ನೂ ಹರಿಯಲಾರದೆ ಹೋಯಿತು. ಇದನ್ನು ನೋಡಿ ಅಲ್ಲಿದ್ದವರೆಲ್ಲರೂ ಆಶ್ಚರ್ಯಪಟ್ಟರು ತನ್ನ ವಜ್ರಾಯುಧವೂ ಆ ನಮುಚಿಯಲ್ಲಿ ವ್ಯರ್ಥವಾದುದನ್ನು ನೋಡಿ ದೇವೇಂದ್ರನು ಮನಸ್ಸಿನಲ್ಲಿ ಭಯಪಡುತ್ತ. “ಆಹಾ! ಏನಾಶ್ಚರ್ಯವಿದು! ಈ ನನ್ನ ವಜ್ರಾಯುಧವೂ ಇವನಲ್ಲಿ ವ್ಯರ್ಥವಾಯಿತಲ್ಲವೆ? ಇದು ದೈವಯೋಗವಲ್ಲದೆ ಬೇರೇನು? ತಮ್ಮ ಭಾರದಿಂದಲೇ ಪ್ರಜಾಕ್ಷೋಭವನ್ನು ಮಾಡತಕ್ಕ ಕುಲಪರ್ವತ ಗಳನ್ನೂ ನಾನು ಯಾವ ಆಯುಧದಿಂದಲೇ ಭೇದಿಸಿದನೋ, ತ್ವಷ್ಟ ಪ್ರಜಾಪತಿಗೆ ತಪೋಬಲದಿಂದ ಲಭಿಸಿದ ವೃತ್ರಾಸುರನನ್ನೂ ಕೂಡ ಯಾ ವುದರಿಂದ ನಾನು ಸುಲಭವಾಗಿ ಜಯಿಸಿದೆನೋ, ಮಹಾಬಲಾಢ್ಯರಾಗಿಯೂ, ಯಾವ ಶಸ್ತ್ರಾಸ್ತ್ರಗಳಿಗೂ ಅಭೇದ್ಯರಾಗಿಯೂ ಇರುವ ಬಲಿ, ಜಂಭ ಮೊದಲಾದ ಇನ್ನೂ ಅನೇಕರಾಕ್ಷಸರನ್ನೂ ಯಾವ ಆಯುಧದಿಂದ ಕೊಂದು ಕೆಡಹಿದೆನೋ, ಅಂತಹ ವಜ್ರಾಯುಧವನ್ನು, ಈಗ ನಾನು, ಈ ಅಲ್ಪ ರಾಕ್ಷಸನಲ್ಲಿ ನನ್ನ ಶಕ್ತಿಮೀರಿ ಪ್ರಯೋಗಿದರೂ ಇದು ವ್ಯರ್ಥವಾಯಿ ತಲ್ಲವೆ? ಇದಕ್ಕೆ ಕಾರಣವೇನಿರಬಹುದು? ಆಹಾ! ಬ್ರಹ್ಮತೇಜಸ್ಸಿಗೆ ನಿಧಿ ಯೆನಿಸಿಕೊಂಡ ಆ ದಧೀಚಿಮಹಾಮುನಿಯ ತಪಶ್ಶಕ್ತಿಯೇ ಮೂರ್ತೀ

ಭವಿಸಿದಂತಿರುವ ಈ ವಜ್ರಾಯುಧವೂಕೂಡ ಇವನಲ್ಲಿ ಸಾಧಾರಣವಾದ ಸಣ್ಣ ಕಟ್ಟಿಗೆಯಂತಾಯಿತಲ್ಲಾ ! ಇನ್ನುಮೇಲೆ ತಿರುಗಿ ನಾನು ಇದನ್ನು ನನ್ನ ಕೈಯಿಂದ ಹಿಡಿಯಬಾರದು" ಎಂದು ತನ್ನಲ್ಲಿ ತಾನು ಚಿಂತಾಕುಲನಾಗಿ, ಶಪಥಮಾಡುವಷ್ಟರಲ್ಲಿ, ಆಕಾಶದಿಂದ ಒಂದಾನೊಂದು ಅಶರೀರವಾಣಿಯು ಕೇಳಿಸಿತು "ಓ ಇಂದ್ರಾ! ಈ ರಾಕ್ಷಸನು ಹಸಿಯಪದಾರ್ಥದಿಂದಾಗಲಿ,ಒಣಗಿದ ಪದಾರ್ಥದಿಂದಾಗಲಿ ತನಗೆ ಸಾವಿಲ್ಲದಂತೆ ವರವನ್ನು ಪಡೆದಿರುವನು ನಿನ್ನ ವಜ್ರಾಯುಧವು ಶುಷ್ಕಪದಾರ್ಥವಾದುದರಿಂದ ಅವನನ್ನು ಕೊಲ್ಲಲಾರದೆ ಹೋಯಿತು. ಆದುದರಿಂದ ನೀನು ಇವನನ್ನು ಕೊಲ್ಲುವುದಕ್ಕೆ ತಕ್ಕಂತೆ ಬೇರೆ ಯಾವುದಾದರೂ ಉಪಾಯವನ್ನಾಲೋಚಿಸು" ಎಂಬೀ ವಾಕ್ಯವು ಕೇಳಿಸಿತು ಇದನ್ನು ಕೇಳಿ ದೇವೇಂದ್ರನು, ಆಶ್ಚರ್ಯಭರಿತನಾಗಿ,ಲೋಕದಲ್ಲಿ ಶುಷ್ಕವೂ, ಆರ್ದ್ರವೂ ಅಲ್ಲದ ಪದಾರ್ಥವಾವುದೆಂದು ಬಹಳ ಹೊತ್ತಿನವರೆಗೆ ಆಲೋಚಿಸಿದನು ಕೊನೆಗೆ ಅಂತಹ ವಸ್ತುವು ನೊರೆಯೊಂದು ಹೊರತು ಬೇರೊಂದಿಲ್ಲವೆಂಬ ನಿಶ್ಚಯವು ಹುಟ್ಟಿತು ಒಡನೆಯೇ ಆ ನೊರೆಯನ್ನು ತಂದು, ತನ್ನ ವಜ್ರಾಯುಧಕ್ಕೆ ಲೇಪಿಸಿ, ಅದರಿಂದ ನಮುಚಿಯನ್ನು ಸಂಹರಿಸಿದನು ಹೀಗೆ ದೇವೇಂದ್ರನು ಆ ದುಷ್ಟರಾಕ್ಷಸನನ್ನು ಉಪಾಯದಿಂದ ಸಂಹರಿಸಿದುದಕ್ಕಾಗಿ, ಮಹರ್ಷಿಗಳೆಲ್ಲರೂ ಅವನಮೇಲೆ ಪುಷ್ಪವರ್ಷವನ್ನು ಕರೆದು,ಅವನನ್ನು ಸ್ತುತಿಸುತಿದ್ದರು, ವಿಶ್ವಾವಸು, ಪರಾವಸುಗಳೆಂಬ ಗಂಧರ್ವರಿಬ್ಬರೂ ಅವನ ಗುಣಗಳನ್ನು ಗಾನಮಾಡುತಿದ್ದರು. ದೇವದುಂದುಭಿಗಳು ಮೊಳಗಿದುವು. ದೇವತಾಸ್ತ್ರೀಯರು ಸಂತೋಷದಿಂದ ನರ್ತಿಸಿದರು.ಇತ್ತಲಾಗಿ ದೇವೇಂದ್ರನು ಬಲಿ,ನಮುಚಿ ಮೊದಲಾದವರನ್ನು ಜಯಿಸುವಷ್ಟರಲ್ಲಿ, ಅತ್ತಲಾಗಿ ಬೇರೊಂದುಕಡೆಯಲ್ಲಿ, ಅಗ್ನಿ ವಾಯು ವರುಣಾದಿ ಲೋಕಪಾಲಕರೂ ಆಯುಧಪಾಣಿಗಳಾಗಿ, ತಮಗಿದಿರಾದ ದಾನವರನ್ನು ಕಂಡಕಂಡ ಕಡೆಯಲ್ಲಿ ಬೆನ್ನಟ್ಟಿ ಹೊಡೆಯುತಿದ್ದರು ಸಿಂಹವನ್ನು ಕಂಡ ಮೃಗಗಳಂತೆ ದಾನವಸೈನ್ಯಗಳೆಲ್ಲವೂ ನಾನಾಕಡೆಗೆ ಚದರಿಹೋದುವು ಅನೇಕ ದಾನವರು ಹತರಾದರು. ಹೀಗೆ ದಾನವಕುಲವು ನಿರ್ಮೂಲವಾಗುತ್ತಿರುವುದನ್ನು ನೋಡಿ ಬ್ರಹ್ಮದೇವನು, ಆಯುದ್ಧವನ್ನು ನಿಲ್ಲಿಸುವುದಕ್ಕಾಗಿ ನಾರದನನ್ನು

ಕಳುಹಿಸಿದನು. ಒಡನೆಯೇ ನಾರದನು ದೇವತೆಗಳಬಳಿಗೆ ಬಂದು "ಎಲೈ ದೇವತೆಗಳಿರಾ! ಶ್ರೀಹರಿಯ ಕೃಪೆಯಿಂದ ನೀವು ಅಮೃತಪಾನವನ್ನು ಮಾಡಿದುದಾಯಿತು! ಇದರಿಂದ ನಿಮಗೆ ಮೇಲೆಮೇಲೆ ಶ್ರೇಯಸ್ಸು ಕೈಗೂಡಿ ಬರುತ್ತಿರುವುದು ಮೂರುಲೋಕಗಳೂ ಭಾಗ್ಯವಿಶಿಷ್ಟವಾಗಿ ಬೆಳಗುತ್ತಿರುವುವು. ಇನ್ನುಮೇಲೆಯೂ ನೀವು ಈ ದಾನವರಲ್ಲಿ ದ್ವೇಷವನ್ನು ಬೆಳೆಸಿ ಅವರನ್ನು ಕೊಲ್ಲುವುದರಿಂದ ನಿಮಗಾಗಬೇಕಾದುದೇನು? ಯುದ್ಧವನ್ನು ನಿಲ್ಲಿಸಿ ನಿಮ್ಮನಿಮ್ಮಸ್ಥಾನಕ್ಕೆ ಹೋಗಿರಿ!" ಎಂದನು. ಇಂದ್ರಾದಿದೇವತೆಗಳೆಲ್ಲರೂ ಆಮಹರ್ಷಿಯ ಮಾತನ್ನು ಗೌರವಿಸಿ, ಕೋಪವನ್ನು ನಿಗ್ರಹಿಸಿಕೊಂಡು, ತಮ್ಮತಮ್ಮ ಪರಿವಾರಗಳೊಡನೆ ಸ್ವರ್ಗವನ್ನು ಸೇರಿದರು. ಇತ್ತಲಾಗಿ ಯುದ್ಧರಂಗದಲ್ಲಿ ಆ ನಾರದನ ಅನುಗ್ರಹದಿಂದ ಬದುಕಿದ ಕೆಲವು ದಾನವರು, ವಜ್ರಪ್ರಹಾರದಿಂದ ಮೂರ್ಛಿತನಾಗಿ ಬಿದ್ದಿದ್ದ ಬಲಿಯನ್ನು ಸಾಗಿಸಿಕೊಂಡು ಅಸ್ತಾಚಲಕ್ಕೆ ಹೋಗಿ ಸೇರಿದರು.ಆಮೇಲೆ ದೈತ್ಯಪುರೋಹಿತನಾದ ಶುಕ್ರಾಚಾರ್ಯನು, ತನ್ನಲ್ಲಿದ್ದ ಮೃತಸಂಜೀವಿನೀವಿದ್ಯೆಯಿಂದ ಯುದ್ಧದಲ್ಲಿ ಮೃತರಾದ ಅನೇಕದೈತ್ಯಶ್ರೇಷ್ಠರನ್ನೂ, ಬದುಕಿಸಿ, ಮೂರ್ಛಿತನಾಗಿದ್ದ ಬಲಿಯಬಳಿಗೆ ಬಂದು, ಅವನನ್ನೂ ತನ್ನ ಹಸ್ತಸ್ಪರ್ಶದಿಂದ ಮೂರ್ಛೆತಿಳಿದು ಮೇಲೆದ್ದು ಕುಳ್ಳಿರುವಂತೆ ಮಾಡಿದನು. ಓ ಪರೀಕ್ಷಿದ್ರಾಜಾ! ಬಲಿಚಕ್ರವರ್ತಿಯು ಈ ಯುದ್ಧದಲ್ಲಿ ದುಸ್ಸಹವಾದ ಪರಾಜಯವನ್ನು ಹೊಂದಿದ್ದರೂಕೂಡ, ತತ್ವಜ್ಞನಾದುದರಿಂದ, ಈ ಜಯಪರಾಜಯಗಳೂ,ಸುಖದುಃಖಗಳೂ ಕರ್ಮಾಧೀನವೆಂಬುದನ್ನು ತಿಳಿದು,ಅದಕ್ಕಾಗಿ ಸ್ವಲ್ಪವೂ ವಿಚಾರವಿಲ್ಲದೆ ನಿಶ್ಚಿಂತನಾಗಿದ್ದನು. ಇದು ಹನ್ನೊಂದನೆಯ ಅಧ್ಯಾಯವು.

---

### { ರುದ್ರನು ಮೋಹಿನೀರೂಪದಿಂದಿದ್ದ ವಿಷ್ಣುವನ್ನು ನೋಡಿ ಮೋಹಿಸಿ ಅವಳನ್ನು ಹಿಂಬಾಲಿಸಿದುದು. }

ಪರೀಕ್ಷಿದ್ರಾಜಾ! ಕೇಳು! ಹೀಗೆ ವಿಷ್ಣುವು ಮೋಹಿನೀರೂಪದಿಂದ ದೈತ್ಯರನ್ನು ವಂಚಿಸಿ, ದೇವತೆಗಳಿಗೆ ಅಮೃತವನ್ನು ಕುಡಿಸಿದನೆಂಬ ವೃ

ತ್ತಾಂತವು ರುದ್ರನ ಕಿವಿಗೆ ಬಿದ್ದಿತು ಇದನ್ನು ಕೇಳಿದೊಡನೆ ರುದ್ರನು ಆ ಶ್ಚರ್ಯಭರಿತನಾಗಿ, ಆ ವಿಷ್ಣುವಿನ ಮೋಹಿನೀರೂಪವನ್ನು ನೋಡಬೇಕೆಂಬ ಕುತೂಹಲದಿಂದ,ಪಾರ್ವತಿಯನ್ನೂ ಸಂಗಡಕರೆದುಕೊಂಡು,ತನ್ನ ವೃಷಭ ವಾಹನವನ್ನೇರಿ, ಸಮಸ್ತಭೂತಗಣಗಳೊಡನೆ ವಿಷ್ಣುಲೋಕಕ್ಕೆ ಬಂದ ನು ಪಾರ್ವತೀಸಮೇತನಾಗಿ ಬಂದ ರುದ್ರನನ್ನು ಭಗವಂತನು, ಗೌರವ ಪೂರ್ವಕವಾಗಿ ಬರಮಾಡಿಕೊಂಡು, ಅವನಿಗೆ ಆಸನವನ್ನು ಕೊಟ್ಟುಕುಳ್ಳಿರಿ ಸಿದನು. ರುದ್ರನು ಸುಖಾಸೀನನಾಗಿ ಕುಳಿತಮೇಲೆ, ವಿಷ್ಣುವನ್ನು ನೋಡಿ ಮಂದಹಾಸದಿಂದ ನಗುತ್ತ ಹೀಗೆಂದು ಹೇಳುವನು “ಓ ಸರ್ವೇಶ್ವರಾ! ನೀನು ಬ್ರಹ್ಮಾದಿದೇವತೆಗಳಿಗೂ ಪರದೈವವೆನಿಸಿಕೊಂಡಿರುವೆ! ಸಮಸ್ತ ಜಗತ್ತನ್ನೂ ವ್ಯಾಪಿಸಿರುವೆ! ಜಗತ್ತೆಲ್ಲವೂ ನಿನ್ನ ಸ್ವರೂಪವೇ! ಚೇತನಾ ಚೇತನಾತ್ಮಕವಾದ ಸಮಸ್ತಪದಾರ್ಥಗಳಿಗೂ ನೀನೇ ಆತ್ಮವಾಗಿಯೂ, ಅವೆಲ್ಲಕ್ಕೂ ನೀನೇ ಮೂಲಕಾರಣನಾಗಿಯೂ, ಅವುಗಳನ್ನು ನಿಯಮಿಸತಕ್ಕ ಪ್ರಭುವಾಗಿಯೂ ಇರುವೆ! ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳೆಂಬ ಆದಿಮಧ್ಯಾಂತದ ಅವಸ್ಥೆಗಳೆಲ್ಲವೂ ನಿನ್ನಿಂದಲೇ ನಡೆಯುವುವು. ಈ ಪ್ರಪಂ ಚಕ್ಕಿಂತಲೂ ವಿಲಕ್ಷಣನಾದ ಪ್ರತ್ಯಗಾತ್ಮವೂ, ಪ್ರಕೃತಿಯೂ ನಿನ್ನ ಶರೀರ ಗಳು! ಹೀಗೆ ಪ್ರಕೃತಿಪುರುಷಗಳೆರಡೂ ನಿನಗೆ ಶರೀರವಾಗಿದ್ದರೂ, ಅದರ ವಿ ಕಾರಗಳಿಗೆ ನೀನು ಈಡಾಗತಕ್ಕವನಲ್ಲ ನಿನಗೆ ಉತ್ಪತ್ತಿವಿನಾಶಾದಿಗಳಿಲ್ಲ ಸ್ವ ರೂಪಸ್ವಭಾವಗಳಲ್ಲಿ ನಿನಗೆ ಎಂದೆಂದಿಗೂ ವ್ಯತ್ಯಾಸವಿಲ್ಲ ಯಾವಾಗಲೂ ಸಂಕೋಚಹೊಂದದ ಜ್ಞಾನಕ್ಕೆ ನೀನೊಬ್ಬನೇ ಆಧಾರನಾಗಿರುವುದರಿಂದ ಸ್ವರೂಪದಲ್ಲಿಯೂ, ಗುಣದಲ್ಲಿಯೂ ನೀನು ಎಲ್ಲರಿಗಿಂತಲೂಮೇಲೆನಿಸಿಕೊಂ ಡಿರುವೆ ನೀನು ಇಂತಹ ಮಹಾಮಹಿಮೆಯುಳ್ಳವನಾದುದರಿಂದಲೇ ಮೋಕ್ಷಾರ್ಥಿಗಳಾದ ಯೋಗಿಗಳು, ಇಹಲೋಕಸುಖವನ್ನಾಗಲಿ, ಪರಲೋ ಕಸುಖವನ್ನಾಗಲಿ ಕೋರದೆ, ಬೇರ ಯಾವ ಪ್ರಯೋಜನದಲ್ಲಿಯೂ ದೃ ಷ್ಟಿಯಿಡದೆ, ನಿನ್ನ ಪಾದಾರವಿಂದಗಳನ್ನು ಸೇವಿಸುವರು. ಓ ದೇವಾ! ನೀನು ಎಲ್ಲಕ್ಕಿಂತಲೂ ಮೇಲೆನಿಸಿಕೊಂಡಿರುವುದರಿಂದಲೇ ಬ್ರಹ್ಮನೆಂದು ಹೇಳಿಸಿಕೊಳ್ಳುವೆ. ನೀನು ಸರ್ವವ್ಯಾಪಿಯು ಸ್ಥೌಲ್ಯಾದಿಗುಣಗಳಿಲ್ಲದ

ವನು. ದುಃಖಸಂಬಂಧವಿಲ್ಲದ ಆನಂದವೇ ನಿನ್ನ ಸ್ವರೂಪವು. ನಿನಗೆ ಎಂ
ದಿಗೂ ಯಾವವಿಧವಾದ ವಿಕಾರವೂ ಇಲ್ಲವು. ಹೀಗೆ ನೀನು ಸರ್ವಶರೀರಕ
ನಾಗಿ, ಸಮಸ್ತಕ್ಕೂ ಕಾರಣನಾದುದರಿಂದ, ಪ್ರಕೃತಿ ಪುರುಷಾತ್ಮಕವಾದ
ಈ ಜಗತ್ತಿಗಿಂತಲೂ ನೀನು ಬೇರೆಯಾದವನಲ್ಲ. ಆದರೆ ಈ ಪ್ರಪಂಚದ
ಗುಣದೋಷಗಳೊಂದೂ ನಿನ್ನನ್ನು ಮುಟ್ಟದುದರಿಂದ, ನಿನ್ನನ್ನೇ ಪ್ರಪಂಚ
ವೆಂದೂ ಹೇಳುವುದಕ್ಕಿಲ್ಲ.ಈ ಪ್ರಪಂಚದ ಸೃಷ್ಟಿಸ್ಥಿತಿ ಲಯಗಳು ನಿನ್ನಿಂದ
ಲೇ ನಡೆಯುವುವು.ನಿನಗೆ ನೀನೇ ಪ್ರಭುವಲ್ಲದೆ ನಿನ್ನನ್ನು ನಿಯಮಿಸತಕ್ಕವರು
ಬೇರೊಬ್ಬರಿಲ್ಲ ಓ ಮಹಾತ್ಮಾ! ನಾಮರೂಪಗಳಿಂದ ಬೇರ್ಪಡಿಸುವುದಕ್ಕಾ
ಗದಷ್ಟು ಸೂಕ್ಷ್ಮರೂಪದಿಂದಿರುವ ಚಿದಚಿತ್ತುಗಳೆರಡನ್ನೂ ಶರೀರವಾಗಿ
ಹೊಂದಿ, ಆದಿಯಲ್ಲಿದ್ದವನು ನೀನೊಬ್ಬನೇ! ಆ ಚಿದಚಿತ್ತುಗಳನ್ನು ಈಗ ಕಾ
ರ್ಯರೂಪವಾಗಿ ಕಾಣಿಸುವುದಕ್ಕೂ ನೀನು ನಿಮಿತ್ತಕಾರಣನಾದುದರಿಂದ,
ನಿನಗೂ, ಕಾರ್ಯರೂಪವಾದ ಪ್ರಪಂಚಕ್ಕೂ ನಾವು ಚೆನ್ನಾಗಿ ಭೇದವ
ನ್ನು ಹೇಳಬಹುದಾದರೂ, ಕಾರಣಾವಸ್ಥೆಯಲ್ಲಿರುವ ಬಂಗಾರವೇ ಕಾ
ರ್ಯಾವಸ್ಥೆಯಲ್ಲಿ ರೂಪಾಂತರದಿಂದ ಕಾಣುವಂತೆ, ಕಾರ್ಯರೂಪವಾದ
ಜಗತ್ತಿಗೂ, ಕಾರಣರೂಪವಾದ ನಿನಗೂ ಯಾವ ಭೇದವನ್ನೂ ಎಣಿಸುವು
ದಕ್ಕವಕಾಶವಿಲ್ಲ. ಹೀಗೆ ಕಾರ್ಯಕಾರಣರೂಪಗಳೆರಡರಲ್ಲಿಯೂ ತೋರ
ತಕ್ಕ ನಿನಗೆ, ಈ ಪ್ರಪಂಚದೊಡನೆ ಭೇದವನ್ನು ಹೇಳುವುದು ಅಜ್ಞಾನದ
ಕಾರ್ಯವಲ್ಲದೆ ಬೇರೆಯಲ್ಲ! ಹಾಗಿದ್ದರೂ ಗುಣಪರಿಣಾಮರೂಪವಾದ ಈ
ಪ್ರಪಂಚವು,ಪ್ರಕೃತಿಪುರುಷವಿಲಕ್ಷಣನಾದ ನಿನಗೆ ಶರೀರಮಾತ್ರವಾಗಿರುವು
ದರಿಂದ, ನಿನ್ನ ಸ್ವರೂಪವು ಅದಕ್ಕಿಂತಲೂ ಬೇರೆಯಾಗಿಯೇ ಇರುವುದು.
ಓ ದೇವಾ ! ವೇದಾಂತಿಗಳು ನಿನ್ನನ್ನು ಬ್ರಹ್ಮನೆಂದು ಹೇಳುವರು. ಮೀ
ಮಾಂಸಕರು ನಿನ್ನನ್ನು ಧರ್ಮವೆಂದು ಹೇಳುವರು ಸಾಂಖ್ಯರು ನಿನ್ನ
ನ್ನು ಪ್ರಕೃತಿಪುರುಷರಿಗಿಂತಲೂ ಬೇರೆಯಾದವನೆಂದು ಭಾವಿಸುವರು.
ಪಾಂಚರಾತ್ರರು ನಿನ್ನನ್ನು, ವಿಮಲೆ, ಉತ್ಕರ್ಷಿಣಿ, ಜ್ಞಾನ, ಕ್ರಿಯೆ,
ಯೋಗ, ಪ್ರಹ್ವ, ಸತ್ಯ, ಈಶ್ವರ, ಅನುಗ್ರಹಗಳೆಂಬ ನವಶಕ್ತಿಗಳಿಂದ
ಕೂಡಿದವನನ್ನಾಗಿಯೂ, ವಿಕಾರರಹಿತನನ್ನಾಗಿಯೂ, ಸ್ವತಂತ್ರನನ್ನಾಗಿ

ಯೂ, ಮಹಾಪುರುಷನನ್ನಾಗಿಯೂ ಹೇಳುವರು. ಏನಾದರೇನು ? ಯಾರೂ ನಿನ್ನ ಸ್ವರೂಪವನ್ನು ಯಥಾವತ್ತಾಗಿ ತಿಳಿಯಲಾರರು. ನಾನಾಗಲಿ,ನನಗಿಂತಲೂ ಹೆಚ್ಚಾದ ಆಯುಃಪರಿಮತಿಯುಳ್ಳ ಬ್ರಹ್ಮದೇವನಾಗಲಿ, ಮರೀಚಿ ಮೊದಲಾದ ಮಹರ್ಷಿಗಳಾಗಲಿ, ನಿನ್ನ ಮಾಯೆಯಿಂದ ಜ್ಞಾನಸಂಕೋಚವನ್ನು ಹೊಂದತಕ್ಕವರು ನಿನ್ನಿಂದ ಸೃಷ್ಟಿಸಲ್ಪಟ್ಟ ಪ್ರಪಂಚದ ಸ್ಥಿತಿಯನ್ನೇ ನಾವು ಯಥಾವತ್ತಾಗಿ ತಿಳಿಯಲಾರದಿರುವಾಗ, ನಿನ್ನ ಅನಂತ ಗುಣಗಳನ್ನೂ, ನಿನ್ನ ಅಪ್ರಮೇಯಸ್ವರೂಪವನ್ನೂ ಹೇಗೆತಾನೇ ತಿಳಿಯಬಲ್ಲೆವು ? ನಾವೇ ಈ ವಿಷಯದಲ್ಲಿ ಅಸಮರ್ಥರಾಗಿರುವಾಗ, ನಮಗಿಂತಲೂ ಜ್ಞಾನಸಂಕೋಚವನ್ನು ಹೊಂದಿ, ಪಾಪದಲ್ಲಿಯೇಪ್ರವರ್ತಿಸುವಸ್ವಭಾವವುಳ್ಳ ದೈತ್ಯರೂ, ಇತರ ಸಾಮಾನ್ಯಜನರೂ ನಿನ್ನ ಗುಣಗಳಲ್ಲಿ ಕಲಾಮಾತ್ರವನ್ನಾದರೂ ತಿಳಿಯಬಲ್ಲರೆ? ಇಂತಹ ಮಹಾಮಹಿಮೆಯುಳ್ಳ ನೀನು, ಚರಾಚರಾತ್ಮಕವಾದ ಸಮಸ್ತಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳನ್ನೂ, ಸಮಸ್ತ ಭೂತಗಳಿಗೂ ಹಿತವನ್ನೂ, ಆ ಪ್ರಾಣಿಗಳಿಗೆ ಬಂಧಮೋಕ್ಷಗಳನ್ನೂ ಕಲ್ಪಿಸುತ್ತ ಲೀಲಾರಸವನ್ನನುಭವಿಸುತ್ತಿರುವೆ ಆಕಾಶದಂತೆಯೂ, ವಾಯುವಿನಂತೆಯೂ ಈ ಪ್ರಪಂಚದ ಒಳಗೂ, ಹೊರಗೂ ವ್ಯಾಪಿಸಿರುವೆ! ನೀನು ಲೀಲಾರ್ಥವಾಗಿ ಇದುವರೆಗೆ ಕೈಕೊಂಡ ವರಾಹಾದ್ಯವತಾರಗಳೆಲ್ಲವನ್ನೂ ನಾನು ನೋಡಿದೆನು ಆದರೆ ಈಗ ನೀನು ದೈತ್ಯರನ್ನು ಮೋಹಗೊಳಿಸುವುದಕ್ಕಾಗಿ ಕೈಕೊಂಡ ಮೋಹಿನೀರೂಪವನ್ನು ಮಾತ್ರ ನೋಡುವುದಕ್ಕೆ ನನಗೆ ಅವಕಾಶವಿಲ್ಲದೆಹೋಯಿತು. ಅದನ್ನು ನೋಡಬೇಕೆಂಬ ಉದ್ದೇಶದಿಂದಲೇ ನಾನು ಇಲ್ಲಿಗೆ ಬಂದೆನು ಅದನ್ನು ನೋಡುವುದಕ್ಕಾಗಿ ನನ್ನ ಮನಸ್ಸು ಬಹಳ ಕುತೂಹಲಗೊಂಡಿರುವುದು” ಎಂದನು ಹೀಗೆ ಪ್ರಾರ್ಥಿಸುತ್ತಿರುವ ರುದ್ರನ ಮಾತನ್ನು ಕೇಳಿ ಭಗವಂತನು, ಭಾವಗರ್ಭವಾಗಿ ನಗುತ್ತ “ಓ ಶಂಕರಾ ! ದಾನವರು ಅಮೃತಕಲಶವನ್ನು ಕದ್ದುಯ್ಯುತ್ತಿರುವಾಗ, ಅವರನ್ನು ಮೋಹಗೊಳಿಸಿ ದೇವಕಾರ್ಯವನ್ನು ನೆರವೇರಿಸುವುದಕ್ಕೆ ಸ್ತ್ರೀರೂಪವುಹೊರತು ಬೇರೆ ಉಪಾಯವಿಲ್ಲವೆಂದು ನಿಶ್ಚಯಿಸಿ, ವಿನೋದಾರ್ಥವಾಗಿ ಆ ರೂಪವನ್ನು ಕೈತೊಂಡಿದ್ದೆನು. ಅದೇ ರೂಪವನ್ನು

ನೋಡಬೇಕೆಂದು ನೀನು ಆಸೆಪಟ್ಟು ಬಂದಿರುವುದರಿಂದ, ಕಾಮುಕರಿಗೆಗೌ
ರವಿಸತಕ್ಕುದಾಗಿಯೂ,ಎಂತಹಜಿತೇಂದ್ರಿಯರಿಗೂಮನ್ಮಥೋದ್ರೇಕವನ್ನು
ಹುಟ್ಟಿಸತಕ್ಕುದಾಗಿಯೂ ಇರುವ ಆ ರೂಪವನ್ನೇ ಮತ್ತೊಮ್ಮೆನಿನಗೆತೋ
ರಿಸುವೆನು ನೋಡು"ಎಂದು ಹೇಳಿ ಹಾಗೆಯೇ ಅಂತರ್ಧಾನವನ್ನುಹೊಂದಿದ
ನು.ರುದ್ರನು ಪಾರ್ವತೀಸಮೇತನಾಗಿ ಅಲ್ಲಿಯೇ ಅತಿಕುತೂಹಲದಿಂದ ನಿರೀ
ಕ್ಷಿಸುತ್ತ ನಾಲ್ಕು ದಿಕ್ಕುಗಳನ್ನೂ ತಿರುಗಿ ನೋಡುತ್ತಿದ್ದನು ಇಷ್ಟರಲ್ಲಿಯೇ
ವಿಚಿತ್ರಪುಷ್ಪಪಲ್ಲವಗಳಿಂದ ತುಂಬಿದ ಅನೇಕಜಾತಿಯ ವೃಕ್ಷಗಳುಳ್ಳ ಆ
ಉದ್ಯಾನವನದಲ್ಲಿ, ಅತ್ತಿತ್ತ ವಿನೋದದಿಂದ ಸಂಚರಿಸುತ್ತಿರುವ ಅದ್ಭುತಾ
ಕಾರವುಳ್ಳ ಒಂದಾನೊಂದು ಸ್ತ್ರೀವ್ಯಕ್ತಿಯು ರುದ್ರನಕಣ್ಣಿಗೆ ಗೋಚ
ರಿಸಿತು ಆ ಸುಂದರೀಮಣಿಯು, ಲೀಲೆಯಿಂದ ಚಂಡನ್ನು ಪುಟಹಾರಿಸುತ್ತಿ
ದ್ದಳು ಆಕೆಯ ಅದ್ಭುತಸೌಂದರ್ಯವನ್ನು ಕೇಳಬೇಕೆ? ಉಬ್ಬಿದ ನಿತಂ
ಬದಮೇಲೆ ಸುತ್ತಿ ಕಟ್ಟಿದ ಬಿಳೀದುಕೂಲದ ಪಟ್ಟೆಮಡಿ ! ಅದರಮೇಲೆ ಝು
ಗಝುಗಿಸುವ ಚಿನ್ನದಡಾಬು! ಸುತ್ತಿಸುತ್ತಿ ಚಂಡನ್ನುಹೊಡೆಯುವಾಗ,ದೇಹ
ಶ್ರಮದಿಂದ ಬೇಗಬೇಗನೆ ಹೊರಡುತ್ತಿರುವ ನಿಟ್ಟುಸಿರು ! ಆ ಉಸಿರಾಟ
ದಿಂದ ಕುಣಿಯುತ್ತಿರುವ ಸ್ತನಗಳು! ಆ ಸ್ತನಗಳಮೇಲೆ ಅಲುಗಾಡುತ್ತಿರು
ವ ಮುತ್ತಿನ ಹಾರಗಳು ! ಆ ಸ್ತನಗಳ ಭಾರದಿಂದ ಮುರಿದುಬೀಳುವಂತೆ
ಕಾಣುತ್ತಿರುವ ಬಗ್ಗಿದ ಸಣ್ಣನಡು ! ದಾರಿಯುದ್ದಕ್ಕೂ ನೆಲದಮೇಲೆ ಚಿ
ಗುರುಗಳನ್ನು ಹಾಸುತ್ತಬರುವಂತೆ ತೋರುವ ಅಂಗಾಲುಗಳು ! ಅತ್ತಿತ್ತ
ಪುಟಹಾರುವ ಚಂಡನ್ನೇ ಹಿಂಬಾಲಿಸುತ್ತಿರುವ ಚಂಚಲದೃಷ್ಟಿ! ವಿಶಾ
ಲನೇತ್ರಗಳು! ಕುಂಡಲಕಾಂತಿಯಿಂದ ಶೋಭಿಸುತ್ತಿರುವ ಕಪೋಲಗಳು !
ಆ ಕಪೋಲಕ್ಕೆ ಜೀವರೇಖೆಯನ್ನು ಕಟ್ಟಿದಂತಿರುವ ಮುಂಗುರುಳು! ಆ
ಕುರುಳುಗಳಿಂದ ಅಂದವೇರಿದ ಮುಖದ ಸೊಬಗು ! ಸಂಚಾರವೇಗದಿಂದ
ಸಡಿಲುತ್ತಿರವ ದುಕೂಲವನ್ನೂ, ತಲೆಕೂದಲನ್ನೂ, ತನ್ನ ಕೋಮಲವಾದ
ಎಡಗೈಯಿಂದ ಆಗಾಗ ಸೆಳೆದುಕಟ್ಟುವ ಸೊಬಗು! ಬಲಗೈಯಿಂದವಿಚ್ಛಿತ್ತಿ
ಯಿಲ್ಲದೆ ಚಂಡನ್ನು ನೆಲಕ್ಕೆ ಬಡಿಯುತ್ತಿರುವ ಸೊಗಸು!ಹೀಗೆಮಾಯೆಯಿಂ
ದ ಲೋಕವನ್ನೇ ಮೋಹಿಸುವಂತಿರುವ ಆಸ್ತ್ರೀರೂಪವನ್ನು ನೋಡಿದೊಡನೆ

ರುದ್ರನಿಗೆ ಮೈಮರೆಯುವಂತಾಯಿತು ಆಕೆಯು ಚಂಡಾಡುವ ರೀತಿ ಯನ್ನೂ, ಅವಳು ಲಜ್ಜೆಯಿಂದ ಅಸ್ಪಷ್ಟವಾಗಿ ತೋರಿಸುತ್ತಿರುವ ಮಂದ ಹಾಸವನ್ನೂ,ಅವಳ ಕಡೆಗಣ್ಣಿನ ನೋಟವನ್ನೂ ನೋಡಿ ರುದ್ರನ ಮನಸ್ಸು ಮರುಳಾಯಿತು ಶಿವನು ಅವಳ ಅದ್ಭುತಸೌಂದರ್ಯಕ್ಕೆ ಮೋಹಿತನಾಗಿ,ಅ ವಳನ್ನೇ ಎಡೆಬಿಡದೆ ನಟ್ಟ ಕಣ್ಣಿನಿಂದ ನೋಡುತ್ತಿದ್ದನು.ಅವಳೂ ಆಗಾಗತ ಲೆಯೆತ್ತಿ ಓರೆಗಣ್ಣಿನಿಂದ, ಇವನನ್ನು ನೋಡಿ ಲಜ್ಜೆಯನ್ನು ನಟಿಸುತ್ತಿದ್ದ ಳು ಹೀಗೆ ಪರಸ್ಪರಾಲೋಕನದಿಂದ ಮತ್ತಷ್ಟು ಮೋಹಪರವಶನಾದ ರುದ್ರ ನು, ತನ್ನ ಸಮೀಪದಲ್ಲಿರುವ ಪಾರ್ವತಿಯನ್ನೂ, ತನ್ನ ಸುತ್ತಿಮುತ್ತಿರುವ ಭೂತಗಣಗಳನ್ನೂ ಮರೆತುಬಿಟ್ಟನು ಕೊನೆಗೆ ತನ್ನ ದೇಹವನ್ನೇ ತಾನು ಮರೆತನು ಭಗವಂತನ ಮಾಯೆಯನ್ನು ಯಾರು ತಾನೇ ಮೀರಬಲ್ಲರು ? ಆ ಮೋಹಿನಿಯು ಚಂಡನ್ನು ಪುಟಹಾರಿಸುವ ನೆವದಿಂದ, ಅದನ್ನು ತಾನೇ ಸ್ವ ಲ್ಪದೂರಕ್ಕೆ ಹಾರುವಂತೆ ಮಾಡಿ, ಅದನ್ನು ಹಿಡಿಯುವುದಕ್ಕಾಗಿ ಆತುರದಿಂ ದೋಡಿದಳು ಈ ಸಂದರ್ಭದಲ್ಲಿ ಅವಳ ನಡುವಿಗೆ ಸುತ್ತಿದ್ದ ದುಕೂಲವು ಗಾಳಿಯಿಂದ ಮೇಲಕ್ಕೆ ಹಾರಿತು ಅವಳ ಒಡ್ಯಾಣವು ಸಡಿಲಿತು ಅವ ಳನ್ನೇ ದೃಷ್ಟಿಯಿಟ್ಟು ನೋಡುತಿದ್ದ ರುದ್ರನಿಗೆ, ಆಗ ತನ್ನ ಮನಸ್ಸನ್ನುತಡೆ ಯುವುದಕ್ಕೆ ಸಾಧ್ಯವಿಲ್ಲದಂತಾಯಿತು ಲೋಕಮೋಹಕವಾದ ರೂಪಾತಿ ಶಯವುಳ್ಳ ಆ ಸುಂದರೀಮಣಿಯು ಲಜ್ಜೆಯನ್ನು ನಟಿಸುತ್ತ, ಹಿಂದೆ ಸರಿದ ಷ್ಟೂ, ಅವಳಮೇಲೆ ರುದ್ರನಿಗೆ ಮೋಹವು ಹೆಚ್ಚುತ್ತಬಂದಿತು ಅವನ ವಿ ವೇಕಜ್ಞಾನವೆಲ್ಲವೂ ನಷ್ಟವಾಗಿ, ಮೋಹಿನಿಯ ಮೋಹಪಾಶದಲ್ಲಿ ಸಿ ಕ್ಕಿಬಿಟ್ಟನು. ಪಾರ್ವತಿಯು ನೋಡುತಿದ್ದಾಗಲೇ ಅವಳನ್ನೂ ಅನಾದ ರಿಸಿ,ಆ ಮೋಹಿನಿಯನ್ನೇ ಹಿಂಬಾಲಿಸಿ ಹೊರಟನು. ಹೀಗೆ ರುದ್ರನು ಹಿಂಬಾ ಲಿಸಿ ಬರುವುದನ್ನು ನೋಡಿ ಮೋಹಿನಿಯೂಕೂಡ, ಕದಲಿದ ದುಕೂಲವ ನ್ನು ಕೈಯಿಂದ ಹಿಡಿದುಕೊಂಡು,ಬಹಳಲಜ್ಜಿತಳಾದಂತೆ ಆಗಾಗ ವೃಕ್ಷಗಳ ಮರೆಯಲ್ಲಿ ಮರೆಸಿಕೊಳ್ಳುತ್ತ, ಒಮ್ಮೊಮ್ಮೆ ಹಿಂತಿರುಗಿ ರುದ್ರನನ್ನು ನೋಡಿ ಮಂದಹಾಸದಿಂದ ನಗುತ್ತ, ತಪ್ಪಿಸಿಕೊಂಡು ಹೋಗುವು ದಕ್ಕೆ ಯತ್ನಿಸಿದಳು ರುದ್ರನೂಕೂಡ ಮನ್ಮಥಬಾಣದಿಂದ ಕದಲಿದ ಇಂ

ದ್ರಿಯಗಳುಳ್ಳವನಾಗಿ, ಹೆಣ್ಣಾನೆಯನ್ನು ಹಿಂಬಾಲಿಸುವ ಮತ್ತಗಜದಂತೆ ಆಕೆಯನ್ನೇ ಹಿಂಬಾಲಿಸಿ ಹೋದನು, ಮರಗಳ ಮರೆಯಲ್ಲಿ ಕಂಡೂಕಾಣ ದಂತೆ ತಪ್ಪಿಸಿಕೊಂಡು ಹೋಗುತ್ತಿದ್ದ ಆ ಮೋಹಿನಿಯನ್ನೇ ವೇಗದಿಂದ ಹಿಂಬಾಲಿಸಿಹೋದನು ಕೊನೆಗೆ ಅವಳು ಇಷ್ಟಪಡದಿದ್ದರೂ, ಬಲಾತ್ಕಾ ರದಿಂದ ಆಕೆಯ ತುರುಬನ್ನು ಹಿಡಿದು, ಅವಳನ್ನು ತನ್ನ ತೋಳುಗಳಿಂದ ಬಿ ಗಿಯಾಗಿ ಅಪ್ಪಿ ಹಿಡಿದುಕೊಂಡನು, ಗಂಡಾನೆಯ ಕೈಗೆ ಸಿಕ್ಕಿದ ಹೆಣ್ಣಾನೆ ಯಂತೆ ಆ ಮೋಹಿನಿಯು, ರುದ್ರನ ಕೈಗೆ ಸಿಕ್ಕಿಬಿದ್ದಮೇಲೆಯೂ,ಉಪಾಯ ದಿಂದ ಅದನ್ನು ಬಿಡಿಸಿಕೊಂಡು, ಬಿಚ್ಚಿದ ತಲೆಯೊಡನೆ,ನಾನಾಕಡೆಗೆಓಡ ಲಾರಂಭಿಸಿದಳು ಆಗಲೂ ಬಿಡದೆ ರುದ್ರನು ಭಗವನ್ಮಾಯಾರೂಪವಾ ದ ಆ ಸ್ತ್ರೀರತ್ನವನ್ನು ಬಹುದೂರದವರೆಗೆ ಹಿಂಬಾಲಿಸುತ್ತಹೋದನು ಹೀಗೆ ರುದ್ರನು ತನಗೆ ಶತ್ರುವಾದ ಮನ್ಮಥನಿಂದ ಜಯಿಸಲ್ಪಟ್ಟವನಂತೆ ಅದ್ಭುತಚ ರಿತ್ರೆಯುಳ್ಳ ಆ ಭಗವಂತನ ಮಾಯೆಗೆ ಮೋಹಿತನಾಗಿ ಅವಳದಾರಿಯನ್ನು ಹಿಡಿದು ಹೋಗುತ್ತಿರುವಾಗಲೇ, ಅವನಿಗೆ ಕಾಮಾತುರದಿಂದ ವೀರ್ಯಸ್ಖಲ ನವಾಯಿತು. ಪುಷ್ಪವತಿಯಾದ ಹೆಣ್ಣಾನೆಯನ್ನು ಹಿಂಬಾಲಿಸುವ ಮದದಾನೆಯಂತೆ, ಈತನು ಅವಳನ್ನು ಹಿಂಬಾಲಿಸಿ ಹೋಗುತಿದ್ದಹಾಗೆಲ್ಲಾ ಅಮೋಘವೀರ್ಯವುಳ್ಳ ಅವನ ರೇತಸ್ಸು ದಾರಿಯುದ್ದಕ್ಕೂ ಅಲ್ಲಲ್ಲಿ ಸ್ರವಿಸಿ ಬಿದ್ದಿತು ಹೀಗೆ ರುದ್ರನ ವೀರ್ಯವು ಯಾವಯಾವ ಕಡೆಯಲ್ಲಿ ಸ್ರವಿಸಿ ತೋ ಅವೆಲ್ಲವೂ ಚಿನ್ನದ ಗಣಿಗಳಾಗಿಯೂ, ಬೆಳ್ಳಿಯ ಗಣಿಗಳಾಗಿಯೂ ಏ ರ್ಪಟ್ಟುವು. ಓ ರಾಜೇಂದ್ರಾ! ಇದಲ್ಲದೆ ಆ ರುದ್ರನ ವೀರ್ಯಬಿಂದುಗ ಳು ಯಾವಯಾವ ನದಿಗಳಲ್ಲಿ, ಯಾವ ಸರೋವರಗಳಲ್ಲಿ, ಯಾವ ಬೆಟ್ಟಗ ಳಲ್ಲಿ, ಯಾವ ಕಾಡುಗಳಲ್ಲಿ, ಯಾವಯಾವ ಉಪವನಗಳಲ್ಲಿ ಬಿದ್ದುವೋ, ಅವೆಲ್ಲವೂ ರುದ್ರಸಾನ್ನಿಧ್ಯವುಳ್ಳ ಪುಣ್ಯಸ್ಥಳಗಳೆನಿಸಿಕೊಂಡುವು. ಈಗಲೂ ಅನೇಕಮಹರ್ಷಿಗಳು ಅಲ್ಲಿ ವಾಸಮಾಡುತ್ತ, ಅವನನ್ನು ಉಪಾಸಿಸುತ್ತಿರು ವರು. ಹೀಗೆ ತನಗೆ ಇಂದ್ರಿಯಸ್ಖಲನವಾದೊಡನೆ ರುದ್ರನು, ತಾನು ಭಗ ವಂತನ ಮಾಯೆಯಿಂದ ಮೋಹಿತನಾದುದನ್ನು ತಿಳಿದು, ತನ್ನಲ್ಲಿ ತಾನೇ ನಾಚಿಕೆಪಡುತ್ತ, ಆಮೋಹವನ್ನಡಗಿಸಿ ಶಾಂತಮನಸ್ಕನಾದನು. ಜಗ

ತ್ಸ್ವರೂಪಿಯಾದ ಪರಮಾತ್ಮನ ಮಹಿಮೆಯು ಎಂತಹದೆಂಬುದು ರುದ್ರ ನಿಗೆ ಆಗ ಚೆನ್ನಾಗಿ ತಿಳಿಯಿತು. ಹಿಂದೆ ಎಂದಿಗೂ ಕಂಡುಕೇಳಿಲ್ಲದ ಆ ಸ್ತ್ರೀರೂಪವು, ಅಪ್ರಮೇಯಪ್ರಭಾವವುಳ್ಳ ಭಗವಂತನ ಮಾಯೆಯೆಂದೇತಿ ಳಿದು,ಲಜ್ಜೆಯನ್ನು ಬಿಟ್ಟು ಸುಮ್ಮನೆ ನಿಂತಿದ್ದನು ಆಗ ಭಗವಂತನು, ತಾನು ಧರಿಸಿದ ಸ್ತ್ರೀರೂಪವನ್ನು ಬಿಟ್ಟು,ಪುರುಷರೂಪದಿಂದ ಬಂದು ಆರುದ್ರನನ್ನು ಕುರಿತು ಹೀಗೆಂದು ಹೇಳುವನು "ಓ ಸುರಶ್ರೇಷ್ಠಾ! ನೀನು ಸಹಜವಾ ಗಿಯೇ ಕಾಮಾದಿಗಳನ್ನು ಜಯಿಸಿದವನು. ಯಾವ ವಿಕಾರಕ್ಕೂ ಒಳಗಾ ಗದವನು ಹಾಗಿದ್ದರೂ ನನ್ನ ಮಾಯೆಯು ಎಂತವರಿಗೂ ದುಸ್ತರವಾದು ದರಿಂದ, ನೀನು ಸ್ವಲ್ಪಕಾಲದವರೆಗೆ ಆ ಸ್ತ್ರೀರೂಪವನ್ನು ನೋಡಿ ಮೋಹಿ ತನಾದೆ! ಆದರೇನು? ದೈವವಶದಿಂದ ನೀನು ಅದನ್ನು ದಾಟಿ ವಿವೇಕಬುದ್ಧಿ ಯನ್ನು ಹೊಂದಿದೆ. ಬೇರೊಬ್ಬರೂ ನಿನ್ನಂತೆ ಹೀಗೆ ಸುಲಭವಾಗಿ ಕಾಮಾ ದಿಗಳನ್ನು ಅತಿಕ್ರಮಿಸಲಾರರು ಇಂದ್ರಿಯಚಾಂಚಲ್ಯವುಳ್ಳವರಿಗೆ ನನ್ನ ಮಾಯೆಯು ನಾನಾವಿಧವಿಕಾರಗಳನ್ನು ಹುಟ್ಟಿಸಿ, ಅವರನ್ನು ಕಟ್ಟಿಹಾಕು ವುದು ನಿನ್ನ ದೃಢಬುದ್ಧಿಗಾಗಿ ನಾನು ಮೆಚ್ಚಿದೆನು ಇನ್ನುಮೇಲೆ ತ್ರಿ ಗುಣಾತ್ಮಕವಾದ ನನ್ನ ಮಾಯೆಯು ನಿನ್ನನ್ನು ಎಂದೆಂದಿಗೂ ಕಟ್ಟಿಹಾಕ ದಿರಲಿ! ಕಾಲಶರೀರಕನಾದ ನನಗೆ, ಕಾಲೋಚಿತವಾಗಿ ಸೃಷ್ಟ್ಯಾದಿಕಾ ರ್ಯಗಳನ್ನು ನಡೆಸುವುದಕ್ಕೆ ಅನುಕೂಲವಾಗಿರುವ ಆ ಮಾಯೆಯು, ನಿನ್ನ ನ್ನುಮಾತ್ರ ಎಂದಿಗೂ ಮೋಹಗೊಳಿಸದಿರಲಿ" ಎಂದನು. ಹೀಗೆ ಭಗವಂ ತನು ಅನುಗ್ರಹಿಸಿದಮೇಲೆ, ರುದ್ರನು ಅವನನ್ನು ನಮಸ್ಕರಿಸಿ, ಅವನ ಅನು ಮತಿಯನ್ನು ಪಡೆದು, ಪಾರ್ವತೀಸಮೇತನಾಗಿ ತನ್ನಪ್ರಮಥಗಣಗಳನ್ನೂ ಕರೆದುಕೊಂಡು ಕೈಲಾಸಕ್ಕೆ ಹೋಗಿ ಸೇರಿದನು ಅಲ್ಲಿ ರುದ್ರನು ಅನೇಕ ಮಹರ್ಷಿಗಳನಡುವೆ ಪಾರ್ವತೀಸಮೇತನಾಗಿ ಕುಳಿತಿದ್ದಾಗ,ಎಲ್ಲರೂ ಕೇಳು ತ್ತಿರುವಹಾಗೆಯೇ ಆಕೆಯನ್ನುಕುರಿತು ಹೀಗೆಂದು ಹೇಳುವನು, "ಎಲೆ ದೇವಿ! ಆ ಪರಮಪುರುಷನ ಮಾಯಾಮಹಿಮೆಯನ್ನು ನೋಡಿದೆಯಲ್ಲವೆ? ಸಮಸ್ತವಿದ್ಯೆಗಳಿಗೂ ಅಧಿಪತಿಯಾದ ನಾನೇ ಆ ಮಾಯೆಗೆ ಮರುಳಾದೆ ನು. ಇನ್ನು ಸಾಮಾನ್ಯಜನರ ಮಾತೇನು? ತಮೋಗುಣಪ್ರಧಾನರಾದ,

ದಾನವರಾಗಲಿ, ಇತರ ಮನುಷ್ಯರಾಗಲಿ, ಆ ಮಾಯೆಯನ್ನು ಹೇಗೆತಾನೇ ಅತಿಕ್ರಮಿಸಬಲ್ಲರು?'ಎಲೆ ಸುಂದರಿ! ಹಿಂದೊಮ್ಮೆ ನಾನು ಸಾವಿರಾರುವರು ಷಗಳವರೆಗೆ ತಪಸ್ಸಿನಲ್ಲಿದ್ದು, ಹಿಂತಿರುಗಿ ಬಂದಾಗ, ನೀನುನನ್ನನ್ನು ಕುರಿತು "ಇದುವರೆಗೆ ನೀನು ಉಪಾಸನೆಮಾಡಿದ ಪರವಸ್ತುವಾವುದು" ಎಂದು ಪ್ರಶ್ನೆಮಾಡಿದೆಯಲ್ಲವೆ? ಆಗ ನಾನು ಉಪಾಸನೆಮಾಡುತಿದ್ದ ಪರ ಮಪುರುಷನ ಮಾಯೆಯೇ ಇದೆಂದು ತಿಳಿ! ಯಾವನನ್ನು ಕಾಲವೂಕೂಡ ವಶಪಡಿಸಿಕೊಳ್ಳಲಾರದೋ, ಯಾವನು ಸಮಸ್ತವನ್ನೂ ಏಕಕಾಲದಲ್ಲಿ ಸಾಕ್ಷಾತ್ಕರಿಸಬಲ್ಲನೋ ಆ ಪರಮಪುರುಷನನ್ನೇ, ನಾನು ಈಗಲೂ, ನಾಳೆ ಯೂ ಉಪಾಸಿಸುತ್ತಿರುವೆನು" ಎಂದನು ಓ ಪರೀಕ್ಷಿದ್ರಾಜಾ! ಸಾಕ್ಷಾ ದ್ರುದ್ರನೇ ಆ ಬಗವಂತನ ಮಹಿಮೆಯನ್ನು ಹೀಗೆಂದು ಹೇಳಿರುವನು ಸಮು ದ್ರಮಥನಕಾಲದಲ್ಲಿ ಕೂರ್ಮರೂಪವನ್ನು ಧರಿಸಿ, ಮಂದರಪರ್ವತವನ್ನು ಬೆನ್ನಮೇಲೆ ಹೊತ್ತು,ದೇವತೆಗಳಿಗೆ ಅಮೃತವನ್ನು ಕೊಡಿಸಿದ ಆಭಗವಂತನ ಚರಿತ್ರವನ್ನು ನಿನಗೆ ಪೂರ್ಣವಾಗಿ ತಿಳಿಸಿದೆನು ಈ ಚರಿತ್ರವನ್ನು ಬಾಯಿಂ ದ ಹೇಳಿದರೂ,ಕಿವಿಯಿಂದ ಕೇಳಿದರೂ,ಅವರವರ ಕೋರಿಕೆ ಗಳೆಲ್ಲವೂತಪ್ಪ ದೆ ಕೈಗೂಡಿಬರುವುವು. ಈ ಪುಣ್ಯಕಥೆಯನ್ನು ಕೇಳುವುದರಿಂದ ಆಧ್ಯಾತ್ಮಿ ಕಾದಿತಾಪಗಳೆಲ್ಲವೂ ನೀಗುವುವು ಹೀಗೆ ದೈತ್ಯರನ್ನು ವಂಚಿಸಿ, ನಂಬಿಬಂದ ದೇವತೆಗಳಿಗೆ ಅಮೃತಪಾನವನ್ನು ಮಾಡಿಸಿದವನಾಗಿಯೂ,ಆಶ್ರಿತರಕೋರಿ ಕೆಯನ್ನು ಈಡೇರಿಸತಕ್ಕವನಾಗಿಯೂ ಇರುವ ಆ ಭಗವಂತನನ್ನುವಂದಿಸು ವೆವು. ಇಲ್ಲಿಗೆ ಹನ್ನೆರಡನೆಯ ಅಧ್ಯಾಯವು.

---

## ಆರನೆಯ ಮನ್ವಂತರದಿಂದಾಚೆಗೆ ನಡೆದ ಇತರ ಮನ್ವಂತರಗಳ ಚರಿತ್ರವು

ಓ ಪರೀಕ್ಷಿದ್ರಾಜಾ ! ಈಗ ನಡೆಯುತ್ತಿರುವುದು ಏಳನೆಯ ಮನ್ವಂ ತರವು. ಇದಕ್ಕೆ ವೈವಸ್ವತಮನ್ವಂತರವೆಂದು ಹೆಸರು. ವಿವಸ್ವಂತನ ಮಗ ನಾದ ಶ್ರಾದ್ಧದೇವನೆಂಬವನೇ ಈಗಿನ ಮನುವು ಅವನಿಗೆ ಇಕ್ಷ್ವಾಕು, ನಭಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ದಿಷ್ಟ, ಕರೂಷಕ,

ಪೃಷಧ್ರ, ವಸುಮಂತರೆಂದು ಹತ್ತುಮಂದಿ ಕುಮಾರರು ! ಈ ಏಳನೆಯ ಮನ್ವಂತರದಲ್ಲಿ, ಆದಿತ್ಯ, ವಸು, ವಿಶ್ವೇದೇವರೆಂಬವರು ದೇವಗಣಗಳು.ಪುರಂದರನೇ ಈಗಿನ ಇಂದ್ರನು. ಕಶ್ಯಪ, ಅತ್ರಿ, ವಸಿಷ್ಠ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ಭರದ್ವಾಜರೆಂಬವರು ಈಗಿನ ಸಪ್ತರ್ಷಿಗಳು ಈ ಮನ್ವಂತರದಲ್ಲಿಯೇ ಭಗವಂತನು, ವಾಮನನೆಂಬ ಹೆಸರಿಂದ ಅದಿತಿಕಶ್ಯಪರಿಗೆ ಕುಮಾರನಾಗಿ ಹುಟ್ಟಿದನು

ಓ ಪರೀಕ್ಷಿದ್ರಾಜಾ ! ಇದುವರೆಗೆ ಏಳುಮನ್ವಂತರಗಳ ಚರಿತ್ರವನ್ನೂ ನಿನಗೆ ಸಂಕ್ಷೇಪವಾಗಿ ತಿಳಿಸಿದೆನು, ಮುಂದೆ ನಡೆಯಬೇಕಾದ ಮನ್ವಂತರಗಳನ್ನೂ,ಅದರಲ್ಲಿನ ಭಗವದವತಾರಗಳನ್ನೂ ತಿಳಿಸುವೆನುಕೇಳು!ವಿವಸ್ವಂತನಿಗೆ ಛಾಯೆ ಮತ್ತು ಸಂಜ್ಞೆಯೆಂಬ ಇಬ್ಬರು ಪತ್ನಿಯರುಂಟೆಂದೂ ಅವರಿಬ್ಬರೂ ವಿಶ್ವಕರ್ಮನ ಕುಮಾರಿಯರೆಂದೂ ಹಿಂದೆಯೇ ತಿಳಿಸಿರುವೆನಷ್ಟೆ ? ಆ ವಿವಸ್ವಂತನಿಗೆ ಬಡಬೆಯೆಂಬ ಬೇರೊಬ್ಬ ಪತ್ನಿಯಿದ್ದುದಾಗಿಕೆಲವರು ಹೇಳುವರು ಬೇರೆ ಕೆಲವರು ಸಂಜ್ಞೆಯೇ ಬಡಬಾರೂಪವನ್ನು ಧರಿಸಿದುದಾಗಿ ಹೇಳುವರು ಆ ಸಂಜ್ಞಾದೇವಿಗೆ,ಯಮನೆಂದೂ.ಯಮುನೆಯೆಂದೂ ಶ್ರಾದ್ಧದೇವನೆಂದೂ ಮೂವರು ಮಕ್ಕಳಾದರು ಛಾಯಾದೇವಿಗೆ ತಪತಿಯೆಂಬ ಕನ್ನೆಯು ಹುಟ್ಟಿ, ಸಂವರಣನೆಂಬವನನ್ನು ವರಿಸಿದಳು ಈ ಛಾಯಾದೇವಿಯಲ್ಲಿಯೇ, ಸಾವರ್ಣಿಯೆಂದೂ, ಶನೈಶ್ಚರನೆಂದೂ ಬೇರೆ ಇಬ್ಬರು ಗಂಡುಮಕ್ಕಳಾದರು.ಬಡಬಾದೇವಿಯಲ್ಲಿ ಅಶ್ವಿನೀದೇವತೆಗಳೆಂಬ ಇಬ್ಬರುಕುಮಾರರು ಹುಟ್ಟಿದರು. ಮುಂದಿನ ಎಂಟನೆಯ ಮನ್ವಂತರದಲ್ಲಿ ಸೂರ್ಯಪುತ್ರನಾದ ಈ ಸಾವರ್ಣಿಯೆಂಬವನೇ ಮನುವಾಗುವನು. ನಿರ್ಮೋಹ, ವಿರಜಸ್ಕ ಮೊದಲಾದವರು ಇವನ ಪುತ್ರರು ಸುತಪಸ್ಸಾದಿಗಳು ಆಗಿನ ದೇವಗಣಗಳು. ವಿರೋಚನಪುತ್ರನಾದ ಬಲಿಯು ಇಂದ್ರಪದವಿಯನ್ನು ಹೊಂದುವನು ಈ ಬಲಿಚಕ್ರವರ್ತಿಯು, ಮಹಾಯಶಸ್ವಿಯಾಗಿ, ದೇವರಾಜ್ಯವನ್ನಾಳುತ್ತ ತನ್ನಲ್ಲಿ ಯಾಚಕನಾಗಿ ಬಂದ ವಿಷ್ಣುವಿಗೆ ಮೂರಡಿಯ ಭೂಮಿಯನ್ನು ಕೊಟ್ಟು ಅದರಿಂದ ಮುಕ್ತಿಯನ್ನು ಹೊಂದುವನು. ಮೊದಲು ವಿಷ್ಣುವು ಅವನನ್ನು ತನ್ನ ಪಾದದಿಂದ ಮೆಟ್ಟಿ ನಿರ್ಬಂಧದಲ್ಲಿಟ್ಟರೂ, ಕೊನೆಗೆ ಅವ

ನಲ್ಲಿ ಅನುಗ್ರಹವನ್ನು ತೋರಿಸಿ, ಅವನಿಗೆ ಸ್ವರ್ಗಾಧಿಪತ್ಯಕ್ಕಿಂತಲೂ ಮೇಲಾದ ಸುತಲಾಧಿಪತ್ಯವನ್ನು ಕೊಡುವನು. ಅವನು ಇಂದ್ರನಂತೆ ಅಲ್ಲಿ ಸುಖವನ್ನನುಭವಿಸುವನು ಆ ಎಂಟನೆಯಮನ್ವಂತರದಲ್ಲಿ ಗಾಲವ, ದೀಪ್ತಿಮಂತ, ಪರಶುರಾಮ, ಅಶ್ವತ್ಥಾಮ, ಕೃಪಾಚಾರ್ಯ, ಋಶ್ಯಶೃಂಗರೆಂಬವರೂ, ನನ್ನ ತಂದೆಯಾದ ವ್ಯಾಸಮಹರ್ಷಿಯೂ,ತಮ್ಮ ಯೋಗಬಲದಿಂದ ಸಪ್ತರ್ಷಿಗಳಾಗುವರು. ಅವರಲ್ಲರೂ ಈಗ ತಮ್ಮತಮ್ಮ ಆಶ್ರಮಗಳಲ್ಲಿಯೇ ಇರುತ್ತಿರುವರು. ಆ ಮನ್ವಂತರದಲ್ಲಿ ಭಗವಂತನು ದೇವಗುಹ್ಯನೆಂಬವನಿಗೆ ಸರಸ್ವತಿಯೆಂಬ ಭಾರ್ಯೆಯಲ್ಲಿ ಸಾರ್ವಭೌಮನೆಂಬಕುಮಾರನಾಗಿ ಹುಟ್ಟಿ, ತನ್ನ ಶಕ್ತಿಯಿಂದ ಪುರಂದರನ ವಶವಾಗಿದ್ದ ಇಂದ್ರಪದವಿಯನ್ನು ಬಲಿಗೆ ಕೊಡಿಸುವನು.

ದಕ್ಷಸಾವರ್ಣಿಯೆಂಬವನು ಒಂಭತ್ತನೆಯ ಮನುವು ಅವನು ವರುಣಪುತ್ರನು. ಧೃತಕೇತು. ದೀಪ್ತಕೇತು, ಮೊದಲಾದವರು ಮನುಪುತ್ರರು ಧಾತೃ, ಮರೀಚಿ, ಗರ್ಗ, ಮೊದಲಾದವರು ದೇವಗಣಗಳು. ಶ್ರುತನೆಂಬವನು ಇಂದ್ರನಾಗುವನು ದೀಪ್ತಿಮಂತ ಮೊದಲಾದವರು ಸಪ್ತರ್ಷಿಗಳಾಗುವರು ಆ ಮನ್ವಂತರದಲ್ಲಿ ಭಗವಂತನು, ಆಯುಷ್ಮಂತನೆಂಬವನಿಗೆ, ಅಂಬುಧಾರೆಯೆಂಬ ಭಾರ್ಯೆಯಲ್ಲಿ ಋಷಭನೆಂಬ ಕುಮಾರನಾಗಿ ಅವತರಿಸಿ, ತ್ರೈಲೋಕ್ಯವನ್ನೂ ನಿರಪಾಯವಾಗಿ ಮಾಡಿ,ಇಂದ್ರನವಶದಲ್ಲಿರಿಸುವನು

ಹತ್ತನೆಯ ಮನ್ವಂತರದಲ್ಲಿ. ಉಪಶ್ಲೋಕನ ಮಗನಾದ ಬ್ರಹ್ಮಸಾವರ್ಣಿಯೆಂಬವನು ಮನುವಾಗುವನು. ಭೂರಿಷೇಣ ಮೊದಲಾದವರು ಮನುಪುತ್ರರು ಹವಿಷ್ಮಂತ, ಸುಕೃತಿ, ಸತ್ಯ, ಜಟಾಮೂರ್ತಿ ಮೊದಲಾದವರು ಸಪ್ತರ್ಷಿಗಳು ಸುವಾಸನ, ವಿಬುದ್ಧ ಮೊದಲಾದವರು ದೇವಗಣಗಳು ಶಂಭುವೆಂಬವನು ಇಂದ್ರನಾಗುವನು. ಆಗ ವಿಷ್ಣುವು ವಿಶ್ವಜಿತ್ತೆಂಬವನಿಗೆ ವಿಷೂಚಿಯೆಂಬ ಭಾರ್ಯೆಯಲ್ಲಿ ನಿಜಾಂಶದಿಂದವತರಿಸಿ, ಇಂದ್ರನಿಗೆ ಸಹಾಯಕನಾಗುವನು.

ಹನ್ನೊಂದನೆಯ ಮನ್ವಂತರದಲ್ಲಿ ಧರ್ಮಸಾವರ್ಣಿಯೆಂಬವನು ಮನುವಾಗುವನು. ಸತ್ಯಧರ್ಮ, ಮೊದಲಾದ ಹತ್ತುಮಂದಿ ಮನುಪುತ್ರರಾಗು

ವರು. ವಿಹಂಗಮ, ಕಾಮಗಮ, ನಿರ್ವಾಣ, ರುಚಿ ಮೊದಲಾದವರು ದೇವಗಣಗಳು ಧ್ರುವನೆಂಬವನು ಇಂದ್ರನಾಗಿ, ಆ ದೇವಗಣಗಳನ್ನು ಪಾಲಿಸುವನು ಅರುಣ ಮೊದಲಾದವರು ಸಪ್ತರ್ಷಿಗಳು ಆ ಮನ್ವಂತರದಲ್ಲಿ ಭಗವಂತನು ಆರ್ಯಕನೆಂಬವನಿಗೆ ವೈಧೃತಿಯೆಂಬ ಭಾರ್ಯೆಯಲ್ಲಿಧರ್ಮಸೇನನೆಂಬ ಕುಮಾರನಾಗಿ ಅವತರಿಸಿ, ತ್ರೈಲೋಕ್ಯವನ್ನೂ ಸುಖದಿಂದ ರಕ್ಷಿಸುವನು

ರುದ್ರಸಾವರ್ಣಿಯೆಂಬವನು ಹನ್ನೆರಡನೆಯ ಮನುವು. ದೇವವಂತ, ಉಪವಂತ, ದೇವಜ್ಯೇಷ್ಠ ಮೊದಲಾದವರು ಆಗಿನ ಮನುಪುತ್ರರು ಋತುಧಾಮನೆಂಬವನು ಇಂದ್ರನಾಗುವನು ಹರಿತಾದಿಗಳು ದೇವಗಣಗಳು. ತಪೋಮೂರ್ತಿ, ಆಗ್ನೀಧ್ರ ಮೊದಲಾದವರು ಸಪ್ತರ್ಷಿಗಳು ಆಗ ಭಗವಂತನು. ಸತ್ಯಸಹನೆಂಬವನಿಗೆ ಸೂನೃತೆಯೆಂಬ ಭಾರ್ಯೆಯಲ್ಲಿ ಸ್ವಧಾಮನೆಂಬ ಕುಮಾರನಾಗಿ ಅವತರಿಸಿ, ಲೋಕವನ್ನು ರಕ್ಷಿಸುವನು

ದೇವಸಾವರ್ಣಿಯೆಂಬವನು ಹದಿಮೂರನೆಯ ಮನುವು ಚಿತ್ರಸೇನ ವಿಚಿತ್ರ, ಮೊದಲಾದವರು ಮನುಪುತ್ರರು ಸುಕರ್ಮ, ಸುತ್ರಾಮ, ಮೊದಲಾದವರು ಆಗಿನ ದೇವತೆಗಳು ದಿವಸ್ಪತಿಯೆಂಬವನು ಆಗಿನ ಇಂದ್ರನಾಗುವನು. ನಿರ್ಮೋಕ, ತತ್ವದರ್ಶ, ಮೊದಲಾದವರು ಸಪ್ತರ್ಷಿಗಳು ಆಗ ಭಗವಂತನು, ದೇವಹೋತ್ರನೆಂಬವನಿಗೆ ಬೃಹತಿಯೆಂಬ ಭಾರ್ಯೆಯಲ್ಲಿ ಯೋಗೀಶ್ವರನೆಂಬ ಕುಮಾರನಾಗಿ ಅವತರಿಸಿ, ಇಂದ್ರನಿಗೆ ಸಹಾಯಕನಾಗುವನು.

ಇಂದ್ರಸಾವರ್ಣಿಯೆಂಬವನು ಹದಿನಾಲ್ಕನೆಯ ಮನುವು. ಉರು, ಗಂಭೀರ, ವಸು, ಮೊದಲಾದವರು ಮನುಪುತ್ರರು ಪವಿತ್ರರೂ, ಚಾಕ್ಷುಷರೂ ಆಗಿನ ದೇವಗಣಗಳು ಶುಚಿಯೆಂಬವನು ಇಂದ್ರಪದವಿಯನ್ನು ವಹಿಸುವನು ಅಗ್ನಿ, ಬಾಹು,ಶುಚಿ, ಶುಕ್ರ, ಮಾಗಧ ಮೊದಲಾದವರು ಸಪ್ತರ್ಷಿಗಳು ಆಗ ಭಗವಂತನು ಸತ್ರಾಯಣನ ಪತ್ನಿಯಾದ ವಿತಾನೆಯಲ್ಲಿ, ಬೃಹದ್ಭಾನುವೆಂಬ ಕುಮಾರನಾಗಿ ಹುಟ್ಟಿ, ಲೋಕದಲ್ಲಿ ಯಜ್ಞಾದಿಕಾರ್ಯಗಳನ್ನು ಪ್ರಬಲಪಡಿಸುವನು ಓ ಪರೀಕ್ಷಿದ್ರಾಜಾ ! ನಿನಗೆ ಭೂತಭವಿಷ್ಯ

ದ್ವರ್ತಮಾನಕಾಲಗಳಲ್ಲಿ ನಡೆಯುವ ಹದಿನಾಲ್ಕುಮನ್ವಂತರಗಳನ್ನೂ, ಅದ
ರ ಚರಿತ್ರೆಗಳನ್ನೂ ಸಂಗ್ರಹವಾಗಿ ವಿವರಿಸಿದೆನು. ಕೃತ, ತ್ರೇತಾ, ದ್ವಾಪರ
ಕಲಿಗಳೆಂಬ ನಾಲ್ಕು ಯುಗಗಳೂ, ಸಹಸ್ರಾವರ್ತಿ ತಿರುಗಿ ಬರುವಷ್ಟರಲ್ಲಿ,
ಈ ಹದಿನಾಲ್ಕುಮನ್ವಂತರಗಳೂ ಕಳೆಯುವುವು ಈ ಹದಿನಾಲ್ಕು ಮನ್ವಂ
ತರಗಳೂ ಒಂದಾವರ್ತಿ ಪೂರ್ಣವಾದಾಗ, ದೈನಂದಿನಪ್ರಳಯವಾಗುವು
ದು. ಇದು ಹದಿಮೂರನೆಯ ಅಧ್ಯಾಯವು

---

ಆಯಾ ಮನ್ವಂತರಗಳಲ್ಲಿ ಮನು ಮೊದಲಾದವವರು
ನಡೆಸತಕ್ಕ ಕಾರ್ಯಗಳು.

ಪರೀಕ್ಷಿದ್ರಾಜನು ತಿರುಗಿ ಶುಕನನ್ನು ಕುರಿತು, “ಮುನೀಂದ್ರಾ!
ನೀನು ಹೇಳಿದ ಮನ್ವಂತರಗಳಲ್ಲಿ, ಆಯಾ ಮನುಗಳೂ, ಮನುಪುತ್ರರೂ, ಸ
ಪ್ತರ್ಷಿಗಳೂ ನಡೆಸತಕ್ಕ ಕಾರ್ಯಗಳೇನು? ಅವರನ್ನು ಆಯಾ ಕಾರ್ಯಗ
ಳಲ್ಲಿ ನಿಯಮಿಸತಕ್ಕವರಾರು? ಆ ವಿಚಾರವನ್ನು ವಿವರಿಸಿ ತಿಳಿಸಬೇಕು”
ಎಂದನು. ಅದಕ್ಕಾ ಶುಕಮಹರ್ಷಿಯು “ರಾಜಾ! ಕೇಳು! ಆಯಾಮ
ನ್ವಂತರದ ಮನುಗಳೂ, ಮನುಪುತ್ರರೂ, ಮಹರ್ಷಿಗಳೂ, ಇಂದ್ರನೂ,
ದೇವಗಣಗಳೂ, ಆಯಾ ಕಾಲದಲ್ಲಿ ಅವತಾರಗಳನ್ನೆತ್ತಿದ ಭಗವಂತನಿಂದ
ಲೇ ನಿಯುಕ್ತರಾಗಿ,ಲೋಕರಕ್ಷಣಕಾರ್ಯವನ್ನು ನಡೆಸುವರು ಅವರ ಕಾರ್ಯ
ಕ್ರಮವನ್ನು ತಿಳಿಸುವೆನು ಕೇಳು! ಒಂದೊಂದು ಮನ್ವಂತರದಲ್ಲಿಯೂ,ಕೊ
ನೆಕೊನೆಗೆ ಅಧ್ಯಯನಮಾಡತಕ್ಕವರಿಲ್ಲದೆ, ವೇದಗಳೂ ವೇದೋಕ್ತಧ
ರ್ಮಗಳೂ ನಷ್ಟವಾಗುತ್ತ ಬರುವುವು. ಆಗ ಕೆಲವು ಮಹರ್ಷಿಗಳು ತ
ಮ್ಮ ತಪಃಪ್ರಭಾವದಿಂದ ಆ ವೇದಗಳನ್ನು ತಿಳಿದುಕೊಂಡು, ಲೋಕಕ್ಕೆ
ಪ್ರಚಾರಗೊಳಿಸುವರು. ಇವರೇ ಸಪ್ತರ್ಷಿಗಳೆನಿಸುವರು. ಹಾಗೆಯೇ ಆ
ಯಾಕಾಲದ ಮನುಗಳೂಕೂಡ, ಭಗವಂತನಿಂದ ಪ್ರೇರಿತರಾಗಿ, ಆ ಮಹ
ರ್ಷಿಗಳಿಂದ ವಿಸ್ತರಿಸಲ್ಪಟ್ಟ ವೇದಗಳಿಗೂ, ವೇದೋಕ್ತ ಧರ್ಮಗಳಿಗೂ
ಲೋಪವು ಬಾರದಂತೆ ಪ್ರಜೆಗಳನ್ನು ಆಯಾ ವರ್ಣಾಶ್ರಮಧರ್ಮಗಳಲ್ಲಿ
ನಿಯಮಿಸುತ್ತ, ಧರ್ಮವನ್ನು ನಾಲ್ಕು ಪಾದಗಳಿಂದಲೂ ನಡೆಸುತ್ತ ಬರು

ವರು. ಹೀಗೆ ಮನುಗಳಿಂದ ಸ್ಥಾಪಿತವಾದ ಧರ್ಮವನ್ನು ಆಯಾಕಾಲದ ಮನುಪುತ್ರರು, ಆ ಮನ್ವಂತರವು ಮುಗಿಯುವವರೆಗೆ ತಮ್ಮ ಪುತ್ರಪೌತ್ರ ಪರಂಪರೆಯಾಗಿ ಲೋಪವಿಲ್ಲದೆ ನಡೆಸಿಕೊಂಡು ಬರುವಂತೆ ಮಾಡುವರು ಆಯಾಕಾಲದ ದೇವಗಣಗಳು, ಪಂಚಮಹಾಯಜ್ಞಗಳಲ್ಲಿ ಕೊಡಲ್ಪಡುವ ಯಜ್ಞಭಾಗಗಳನ್ನು, ಪಿತೃದೇವತೆಗಳೊಡನೆಯೂ, ಯಜ್ಞಭೋಕ್ತೃಗಳಾದ ಋಷಿಗಳೊಡನೆಯೂ ಸೇರಿ ಭುಜಿಸುವರು ಆಯಾ ಮನ್ವಂತರದ ಇಂದ್ರ ಪದವಿಯಲ್ಲಿರತಕ್ಕವರು, ಭಗವಂತನಿಂದ ತಮಗೆ ಅನುಗ್ರಹಿಸಿಕೊಡಲ್ಪಟ್ಟ ತ್ರೈಲೋಕ್ಯ ರಾಜ್ಯಲಕ್ಷ್ಮಿಯನ್ನೂ ಅನುಭವಿಸುತ್ತ, ಕಾಲಕಾಲಕ್ಕೆ ಯಥೇಷ್ಟವಾಗಿ ಮಳೆಯನ್ನು ಸುರಿಸಿ ಲೋಕವನ್ನು ಪಾಲಿಸುವರು ಸರ್ವೇಶ್ವರನಾದ ಶ್ರೀಮಹಾವಿಷ್ಣುವೂಕೂಡ, ಆಯಾಕಾಲಕ್ಕೆ ತಕ್ಕಂತೆ ನಿಜಾಂಶದಿಂದವತರಿಸಿ, ಆಯಾ ಮನುಗಳಿಗೂ, ಇಂದ್ರಾದಿಗಳಿಗೂ ನಿಯಾಮಕನಾಗಿ ಲೋಕಕ್ಷೇಮವನ್ನುಂಟುಮಾಡುವನು. ಮತ್ತು ಆ ಭಗವಂತನೇ ಋಷಿರೂಪದಿಂದ ಯುಗಧರ್ಮಕ್ಕೆ ತಕ್ಕಂತೆ ಜ್ಞಾನವನ್ನುಪದೇಶಿಸುವನು. ಮರೀಚ್ಯಾದಿರೂಪದಿಂದ ಸೃಷ್ಟಿಕಾರ್ಯವನ್ನು ನಡೆಸುವನು ರಾಜರೂಪದಿಂದಿದ್ದು, ದುಷ್ಟರನ್ನಡಗಿಸುವನು ಕೊನೆಗೆ ಕಾಲರೂಪದಿಂದ ಸಮಸ್ತಜಗತ್ತನ್ನೂ ಲಯಹೊಂದಿಸುವನು ಈ ಸೃಷ್ಟ್ಯಾದಿಕಾರ್ಯಗಳಿಗೆ ತಕ್ಕಂತೆ ತಾನಾಗಿಯೇ ಗುಣಭೇದವನ್ನೂ ಸ್ವೀಕರಿಸುವನು ನಾಮರೂಪವಿಭಾಗವುಳ್ಳ ಮಾಯೆಯಿಂದ ಮೋಹಿತರಾಗಿ, ಆ ಅಜ್ಞಾನದಿಂದ. ನಿರ್ವಿಕಾರನಾದ ಜೀವಾತ್ಮನಿಗೂ ; ದೇವಮನುಷ್ಯಾದಿಭೇದಗಳನ್ನಾರೋಪಿಸತಕ್ಕ ಪ್ರಾಕೃತಜನರಿಗೆ, ತಾನು ಕೇವಲಶಾಸ್ತ್ರಗಮ್ಯನಾಗಿರುವನೇಹೊರತು, ಸಾಕ್ಷಾತ್ತಾಗಿ ಗೋಚರಿಸತಕ್ಕವನಲ್ಲ ಓ ರಾಜೇಂದ್ರಾ! ಇದೇ ಆಯಾ ಮನ್ವಂತರಗಳಲ್ಲಿ ಅವರವರು ನಡೆಸತಕ್ಕ ಕಾರ್ಯಗಳು! ಕಲ್ಪಸ್ವರೂಪವನ್ನು ತಿಳಿದ ಪಂಡಿತರು, ಮೇಲೆ ಹೇಳಿದ ಹದಿನಾಲ್ಕು ಮನ್ವಂತರಕಾಲವನ್ನೇ ದೈನಂದಿನಕಲ್ಪವೆಂದು ಹೇಳುವರು. ಇಲ್ಲಿಗೆ ಹದಿನಾಲ್ಕನೆಯ ಅಧ್ಯಾಯವು.

---

## ವಾಮನಾವತಾರ ವೃತ್ತಾಂತವು.

{ ಬಲಿಯು ದೇವತೆಗಳನ್ನೋಡಿಸಿ, ಸ್ವರ್ಗರಾಜ್ಯವನ್ನಾ ಕ್ರಮಿಸಿದುದು }

ಪರೀಕ್ಷಿದ್ರಾಜನು ತಿರುಗಿ ಶುಕಮುನಿಯನ್ನು ಕುರಿತು, "ಮುನೀಂದ್ರಾ! ಶ್ರೀಮಹಾವಿಷ್ಣುವಾದರೋ ಅವಾಪ್ತಸಮಸ್ತಕಾಮನು ಆದುದರಿಂದ, ಅವನು ಅಪೇಕ್ಷಿಸತಕ್ಕ ವಸ್ತುವೊಂದೂ ಇಲ್ಲ. ಸಮಸ್ತಲೋಕಕ್ಕೂ ತಾನೇ ಪ್ರಭುವಾಗಿರುವನು ಹೀಗಿರುವಾಗಲೂ ಅವನು ತಿರುಕನಂತೆ ವೇಷಧಾರಿಯಾಗಿ ಬಂದು, ಬಲಿಚಕ್ರವರ್ತಿಯಲ್ಲಿ ಮೂರಡಿಯ ನೆಲವನ್ನು ಯಾಚಿಸಿದುದೇಕೆ? ಅದನ್ನು ಪಡೆದಮೇಲೆಯೂ ಧಾರ್ಮಿಕಶಿರೋಮಣಿಯಾದ ಮತ್ತು ನಿರಪರಾಧಿಯಾದ ಆ ಬಲಿಯನ್ನು ಬಂಧಿಸಿಡುವುದಕ್ಕೆ ಕಾರಣವೇನು? ಈ ವಿಚಾರವು ನನಗೆ ಆಶ್ಚರ್ಯಕರವಾಗಿರುವುದು ಇದರ ತತ್ವವನ್ನು ತಿಳಿಯಬೇಕೆಂದು ನನ್ನ ಮನಸ್ಸು ಕುತೂಹಲಪಡುತ್ತಿರುವುದು ಅದನ್ನು ವಿವರಿಸಿ ತಿಳಿಸಬೇಕು" ಎಂದನು. ಅದಕ್ಕಾ ಶುಕಮುನಿಯು "ರಾಜೇಂದ್ರಾ ಕೇಳು! ಪೂರ್ವದಲ್ಲಿ ದೇವಾಸುರರಿಗೆ ದೊಡ್ಡಯುದ್ಧವು ನಡೆಯಿತು. ಅದರಲ್ಲಿ ಬಲಿಯು, ಇಂದ್ರನಿಂದ ಜಯಿಸಲ್ಪಟ್ಟು, ತನ್ನ ರಾಜ್ಯಸಂಪತ್ತನ್ನೂ ತನ್ನ ಪ್ರಾಣವನ್ನೂ ನೀಗಿದನು. ಕೊನೆಗೆ ಶುಕ್ರಾದಿಗಳ ದಯೆಯಿಂದ ಪುನಃ ಬದುಕಿ ಬಂದನು. ಉದಾರಮನಸ್ಸುಳ್ಳ ಆ ಬಲಿಯು, ತನ್ನನ್ನು ಬದುಕಿಸಿದ ಬ್ರಾಹ್ಮಣಕುಲಕ್ಕೆ ಕೃತಜ್ಞನಾಗಿ, ತ್ರಿಕರಣಶುದ್ಧಿಯಿಂದ ಅವರನ್ನು ಸೇವಿಸುತ್ತ, ಅವರಿಗೆ ಬೇಕುಬೇಕಾದಷ್ಟು ಧನವನ್ನು ಕೊಟ್ಟು ಸಂತೋಷಪಡಿಸುತಿದ್ದನು ಶುಕ್ರಾಚಾರ್ಯನೇ ಮೊದಲಾದ ಆ ಬ್ರಾಹ್ಮಣರೆಲ್ಲರೂ ಇವನ ಭಕ್ತಿಗೆ ಮೆಚ್ಚಿ, ಅವನಿಗೆ ತಿರುಗಿ ಸ್ವರ್ಗಾಧಿಪತ್ಯವನ್ನು ಪಡೆಯಬೇಕೆಂಬ ಕೋರಿಕೆಯಿರುವುದನ್ನು ತಿಳಿದು, ಅವನಿಗೆ ವೇದೋಕ್ತವಿಧಿಯಿಂದ ಮಹಾಭಿಷೇಕವನ್ನು ನಡೆಸಿ, ಅವನ ಕೈಯಿಂದ ವಿಶ್ವಜಿತ್ತೆಂಬ ಒಂದಾನೊಂದು ಯಾಗವನ್ನು ಮಾಡಿಸಿದರು ಆ ಯಜ್ಞದಲ್ಲಿ ಹವಿರ್ಭಾಗದಿಂದ ತೃಪ್ತನಾದ ಅಗ್ನಿಯು, ಆ ಬಲಿಚಕ್ರವರ್ತಿಗೆ ಸುವರ್ಣಮಯವಾದ ಒಂದು ದಿವ್ಯರಥವನ್ನೂ, ಇಂದ್ರನ ಕುದುರೆಗೆ ಸಮಾನಗಳಾದ ಕೆಲವು ಕುದುರೆಗಳನ್ನೂ,

ಸಿಂಹಧ್ವಜವನ್ನೂ ಚಿನ್ನದ ಕಟ್ಟುಗಳುಳ್ಳ ಒಂದು ಮಹಾಧನುಸ್ಸನ್ನೂ, ಅಕ್ಷಯಬಾಣವುಳ್ಳ ಬತ್ತಳಿಕೆಯನ್ನೂ, ದಿವ್ಯಕವಚವನ್ನೂ, ಅನುಗ್ರಹಿಸಿ ಕೊಟ್ಟನು ಮತ್ತು ಆ ಯಾಗಕಾಲದಲ್ಲಿ ಬಲಿಚಕ್ರವರ್ತಿಗೆ ಅವನ ಅಜ್ಜನಾದ ಪ್ರಹ್ಲಾದನು, ಎಂದೆಂದಿಗೂ ಬಾಡದಿರುವ ಒಂದು ಪದ್ಮಮಾಲಿಕೆಯನ್ನು ತಂದುಕೊಟ್ಟನು ಶುಕ್ರಾಚಾರ್ಯನು ಅತ್ಯುತ್ತಮವಾದ ಒಂದು ಶಂಖವನ್ನು ತಂದೊಪ್ಪಿಸಿದನು ಬಲಿಯು ಹೀಗೆ ಶುಕ್ರಾದಿಗಳ ದಯೆಯಿಂದ ತನಗೆ ಲಭಿಸಿದ ಯುದ್ಧಪರಿಕರಗಳೆಲ್ಲವನ್ನೂ ಸ್ವೀಕರಿಸಿ, ಬ್ರಾಹ್ಮಣರಿಗೂ, ಗುರುಗಳಿಗೂ ನಮಸ್ಕರಿಸಿ, ಅವರ ಆಶೀರ್ವಾದವನ್ನು ಹೊಂದಿ,ಪ್ರಹ್ಲಾದನ ಅನುಜ್ಞೆಯನ್ನು ಪಡೆದು ಯುದ್ಧೋದ್ಯುಕ್ತನಾಗಿ ರಥವನ್ನೇರಿ,ಪ್ರಹ್ಲಾದನು ಕೊಟ್ಟ ಪದ್ಮಮಾಲಿಕೆಯನ್ನೂ,ಅಗ್ನಿದೇವನು ಕೊಟ್ಟ ಯುದ್ಧಕವಚನ್ನೂ ಧರಿಸಿದನು ಬತ್ತಳಿಕೆಯನ್ನು ಬೆನ್ನಿಗೆ ಕಟ್ಟಿ ಧನುರ್ಬಾಣಗಳನ್ನೂ, ಖಡ್ಗಗಳನ್ನೂ ಸಿದ್ಧವಾಗಿಟ್ಟುಕೊಂಡನು ಕೇಯೂರ ಕುಂಡಲಾದ್ಯಾಭರಣಗಳಿಂದ ತನ್ನ ದೇಹವನ್ನಲಂಕರಿಸಿಕೊಂಡನು ಹೀಗೆ ಸ್ವರ್ಣಾಭರಣಭೂಷಿತನಾದ ಬಲಿಯು ದಾವಾಗ್ನಿಯಂತೆ ತೇಜಸ್ಸಿನಿಂದ ಜ್ವಲಿಸುತ್ತ, ಯುದ್ಧಸನ್ನದ್ಧನಾಗಿ ಹೊರಟನು ಒಡನೆಯೇ ಐಶ್ವರ್ಯದಲ್ಲಿಯೂ, ಬಲದಲ್ಲಿಯೂ ಆ ಬಲಿಗೆ ಸಮಾನರಾಗಿಯೂ, ತಮ್ಮ ದೃಷ್ಟಿಯಿಂದಲೇ ಆಕಾಶವನ್ನೂ, ದಿಕ್ಕುಗಳನ್ನೂ ಕುಡಿದುಬಿಡುವಂತೆ ರೌದ್ರಾವೇಶವುಳ್ಳವರಾಗಿಯೂ ಇರುವ ಅನೇಕ ದೈತ್ಯಸೇನಾಪತಿಗಳು, ತಮ್ಮತಮ್ಮ ಸೈನ್ಯಗಳನ್ನು ಸೇರಿಸಿಕೊಂಡು, ಅವನನ್ನು ಹಿಂಬಾಲಿಸಿಹೊರಟರು ಹೀಗೆ ದಾನವಶ್ರೇಷ್ಠರೆಲ್ಲರೂ, ಭೂಮ್ಯಾಕಾಶಗಳನ್ನೇ ಕದಲಿಸುವಂತೆ, ಸೇನಾಸಮೇತರಾಗಿ ಹೊರಟು,ಸಮಸ್ತ ಸೌಭಾಗ್ಯಗಳಿಂದ ತುಂಬಿದ ಅಮರಾವತಿಯನ್ನು ಸಮೀಪಿಸಿ, ಅಲ್ಲಿನ ಪುರೋದ್ಯಾನವನ್ನು ನೋಡಿದರು ಅದರ ಸೊಬಗನ್ನು ಕೇಳಬೇಕೆ? ಎಲ್ಲಿ ನೋಡಿದರೂ ಕಿವಿಗಿಂಪಾಗಿ ಕೂಗುತ್ತಿರುವ ಪಕ್ಷಿಮಿಥುನಗಳು! ಎಲ್ಲಿ ನೋಡಿದರೂ ಭ್ರಮರಝೇಂಕಾರಗಳು ! ಎಲ್ಲಿ ನೋಡಿದರೂ ಫಲಪುಷ್ಪಗಳಿಂದಲೂ, ಚಿಗುರುಗಳಿಂದಲೂ ತುಂಬಿದ ವಿಚಿತ್ರವೃಕ್ಷಗಳು! ಹೀಗೆ ಸರ್ವವಿಧದಿಂದಲೂ ಮನೋಹರವಾದ ನಂದನವನವೆಂಬ ಆ ಪುರೋದ್ಯಾನವನ್ನು ಪ್ರವೇ

ತಿಸಿದರು. ಆ ಉದ್ಯಾನದಲ್ಲಿಯೋ ಎಲ್ಲಿ ನೋಡಿದರೂ ನಿರ್ಮಲಜಲದಿಂದ ತುಂಬಿದ ಪದ್ಮಸರೋವರಗಳು ಶೋಭಿಸುತ್ತಿರುವುವು. ಆ ಒಂದೊಂದು ಕೊಳದಲ್ಲಿಯೂ ಹಂಸ ಸಾರಸ ಚಕ್ರವಾಕಗಳೇ ಮೊದಲಾದ ಜಲಪಕ್ಷಿಗಳು ಮಧುರಧ್ವನಿಯಿಂದ ಕೂಗುತ್ತಿರುವುವು ದೇವತೆಗಳೂ, ದೇವಸ್ತ್ರೀಯರೂ ಅಲ್ಲಿ ಎಡೆಬಿಡದೆ ಜಲಕ್ರೀಡೆಗಳನ್ನಾಡುತ್ತಿರುವರು ತ್ರಿವಿಕ್ರಮರೂಪಿಯಾದ ಭಗವಂತನ ಅಂಗುಷ್ಠದಿಂದ ಹೊರಟ ಗಂಗಾನದಿಯೇ, ಆ ಪಟ್ಟಣದ ಕಂದಕದಂತೆ ಆ ಉದ್ಯಾನದ ಸುತ್ತಲೂ ಪ್ರವಹಿಸುತ್ತಿರುವುದು. ಆಕಂದಕದಿಂದಾಚೆಗೆ, ಅಗ್ನಿಯಂತೆ ಜ್ವಲಿಸುತ್ತಿರುವ ಸುವರ್ಣಮಯವಾದ ಕೋಟೆಯು ಸುತ್ತಲೂ ಬಳಸಿರುವುದು. ಆ ಕೋಟೆಯಮೇಲೆ ಭಯಂಕರವಾದ ಶತಘ್ನಿ, (ಫರಂಗಿ) ಗಳಿಂದ ಕೂಡಿದ ಅಟ್ಟಲೆಗಳು ನೋಡಿದಮಾತ್ರಕ್ಕೇ ಶತ್ರುಗಳ ಮನಸ್ಸನ್ನು ನಡುಗಿಸುತ್ತಿರುವುವು ಆ ಪಟ್ಟಣದ ಸನ್ನಿವೇಶವನ್ನು ನೋಡಿದರೆ, ವಿಶ್ವಕರ್ಮನ ಶಿಲ್ಪಚಾತುರ್ಯವೆಲ್ಲವೂ ಚೆನ್ನಾಗಿ ಕಾಣುವುದು ಆ ಪಟ್ಟಣದ ಪುರದ್ವಾರಗಳೆಲ್ಲವೂ ಸುವರ್ಣಕವಾಟಗಳಿಂದಲೂ, ಸ್ಫಟಿಕದ ಗೋಪುರಗಳಿಂದಲೂ ಕಾಂತಿವಿಶಿಷ್ಟವಾಗಿ ಝುಗಝುಗಿಸುತ್ತಿರುವುವು. ಅಲ್ಲಿನ ಬೀದಿಗಳೆಲ್ಲವೂ ಅತಿವಿಶಾಲಗಳಾಗಿ, ಜನಗಳ ಮನಸ್ಸನ್ನು ಆಕರ್ಷಿಸುತ್ತಿರುವುವು. ಸಭಾಭವನಗಳೂ, ಅಂಗಳಗಳೂ, ಉಪಮಾರ್ಗಗಳೂ ಅಲ್ಲಿ ಹೇರಳವಾಗಿರುವವು. ಅ ಪಟ್ಟಣದ ಚತುಷ್ಪಥಗಳೆಲ್ಲವೂ, ವಜ್ರ, ಹವಳ, ಮುಂತಾದ ಬಗೆಬಗೆಯ ರತ್ನಗಳಿಂದ ಕೆತ್ತಲ್ಪಟ್ಟು, ಅನೇಕ ವೇದಿಕೆಗಳಿಂದ ಶೋಭಿಸುತ್ತಿರುವುವು ಆ ಪಟ್ಟಣದಲ್ಲಿ ಎಲ್ಲಿ ನೋಡಿದರೂ ದೇವವಿಮಾನಗಳು ಸಂಚರಿಸುತ್ತಿರುವುವು ಅಲ್ಲಿನ ಸ್ತ್ರೀಯರು ನಿತ್ಯಯೌವನವುಳ್ಳವರಾಗಿ,ಎಣೆಯಿಲ್ಲದ ರೂಪಸಂಪತ್ತಿನಿಂದ ಶೋಭಿಸುವರು. ಅವರು ಶುಭ್ರವಾದ ದುಕೂಲವನ್ನುಟ್ಟು, ಶ್ಯಾಮಲವಾದ ದೇಹಕಾಂತಿಯುಳ್ಳವರಾಗಿ,ಅಲ್ಲಲ್ಲಿಸಂಚರಿಸುವಾಗ,ಜ್ವಾಲೆಯೊಡಗೂಡಿದಅಗ್ನಿಗಳಂತೆ ಪ್ರಕಾಶಿಸುತ್ತಿರುವರು ಆ ಪಟ್ಟಣದ ಒಂದೊಂದು ಮನೆಯಿಂದಲೂ, ದೇವತಾಸ್ತ್ರೀಯರು ತಲೆಯಲ್ಲಿ ಮುಡಿದ ಪುಷ್ಪಮಾಲಿಕೆಯ ಪರಿಮಳವೂ, ಅವರು ತಲೆಗೆ ಹಾಕಿದ ಅಗರುಧೂಪದ ವಾಸನೆಯೂ ಗವಾಕ್ಷದ್ವಾರದಿಂದ ಹೊರಟು ಅ

ಲ್ಲಿನ ಬೀದಿಗಳೆಲ್ಲವನ್ನೂ ಸುಗಂಧವಿಶಿಷ್ಟವಾಗಿ ಮಾಡುತ್ತಿರುವುದು ಅಲ್ಲಿನ ಸ್ತ್ರೀಯರೆಲ್ಲರೂ, ಶುದ್ಧವಾದ ದುಕೂಲದಿಂದ ನಡೆಮಡಿಯನ್ನು ಹಾಸಿದ ಬೀದಿಯಲ್ಲಿಯೇ ಸಂಚರಿಸುತ್ತಿರುವರು, ಆ ಪಟ್ಟಣದ ಯಾವಭಾಗವನ್ನು ನೋಡಿದರೂ, ಮುತ್ತಿನ ಮೇಲುಕಟ್ಟುಗಳೂ, ರತ್ನಖಚಿತಗಳಾದ ವಿಚಿತ್ರ ಧ್ವಜಗಳೂ ಕಂಗೊಳಿಸುತ್ತಿರುವುವು ಎಲ್ಲಿನೋಡಿದರೂ ನವಿಲುಗಳು ಕೇಕಾ ಧ್ವನಿಯನ್ನು ಮಾಡುವುವು ಪಾರಿವಾಳಗಳು ಮಧುರಸ್ವರದಿಂದ ಕೂಗುವು ವು ಭ್ರಮರಗಳು ಝುಂಕರಿಸುವುವು ದೇವಸ್ತ್ರೀಯರು ಮಂಗಳಗಾನವನ್ನು ಮಾಡುತ್ತಿರುವರು! ಆ ಪಟ್ಟಣದಲ್ಲಿ ಯಾವಾಗಲೂ ಮೃದಂಗ,ಶಂಖ,ದುಂ ದುಭಿ, ವೀಣೆ, ಕೊಳಲು,ಮುಂತಾದ ಮಂಗಳವಾದ್ಯಧ್ವನಿಗಳು ಕಿವಿಗೆ ಬೀಳು ತ್ತಿರುವುವು ಎಲ್ಲಿ ನೋಡಿದರೂ ಅಪ್ಸರಸ್ತ್ರೀಯರು ನಾಟ್ಯವಾಡುತ್ತಿರುವ ರು ಗಂಧರ್ವರು ತಾಳಲಯಗಳೊಡನೆ ಮಧುರಧ್ವನಿಯಿಂದ ಹಾಡುತ್ತಿರುವ ರು ಇವೆಲ್ಲವನ್ನೂ ನೋಡಿದರೆ, ಆ ಪಟ್ಟಣವು ಗಾನದೇವತೆಗೆ ನಿತ್ಯನಿವಾಸ ವೋ ಎಂಬಂತೆ ತೋರುವುದು ಓ ರಾಜೇಂದ್ರಾ! ದುರಾತ್ಮರಾಗಲಿ, ಮೂ ರ್ಖರಾಗಲಿ, ಅಹಂಕಾರಿಗಳಾಗಲಿ, ವಂಚಕರಾಗಲಿ, ಅಧರ್ಮಪರರಾಗಲಿ, ಭೂತದ್ರೋಹಿಗಳಾಗಲಿ,ಕಾಮುಕರಾಗಲಿ, ಆ ಪಟ್ಟಣವನ್ನು ಕಣ್ಣೆತ್ತಿಯೂ ನೋಡಲಾರರು.ಅರಿಷಡ್ವರ್ಗಗಳನ್ನು ನಿಶ್ಶೇಷವಾಗಿ ತೊರೆದವರು ಮಾತ್ರ ವೇ ಅದನ್ನು ಪ್ರವೇಶಿಸಬಲ್ಲರು ಇಂತಹ ಪುರದ ಬಾಗಿಲಿಗೆ ಬಂದು ನಿಂತೊಡ ನೆ ಬಲಿಯು,ತನ್ನ ಸೈನ್ಯಗಳನ್ನು ಯುದ್ಧಸನ್ನದ್ಧವಾಗಿ ನಿಲ್ಲಿಸಿ, ತನಗೆ ಶುಕ್ರಾ ಚಾರ್ಯನು ಕೊಟ್ಟ ಶಂಖವನ್ನು ಧ್ವನಿಮಾಡಿದನು. ಈ ಧ್ವನಿಯನ್ನು ಕೇಳಿ ದೊಡನೆ ಇಂದ್ರನಿಗೆ ಮನಸ್ಸಿನಲ್ಲಿ ಭಯವು ಹುಟ್ಟಿತು ಇದು ಬಲಿಯ ಪ್ರಯ ತ್ನವಾಗಿರಬೇಕೆಂದು ನಿಶ್ಚಯಿಸಿ,ತನ್ನ ಸಮಸ್ತದೇವಗಣಗಳೊಡನೆ ಬೃಹಸ್ಪತಿ ಯಬಳಿಗೆ ಬಂದು ವಿಜ್ಞಾಪಿಸುವನು ಓ ಗುರುವರ್ಯಾ! ಹಿಂದೆ ನಮ್ಮಿಂ ದ ಪರಾಜಿತನಾದ ಬಲಿಯು, ತಿರುಗಿ ಯುದ್ಧಸನ್ನದ್ಧನಾಗಿ ಬಂದಿರುವನು. ಅವನ ಪರಾಕ್ರಮವು ಎಂತವರಿಗೂ ದುಸ್ಸಹವೆಂದು ತೋರುವುದು. ಈಗ ಆ ಬಲಿಯನ್ನು ಎಂತವರೂ, ಯಾವ ಉಪಾಯದಿಂದಲೂ ಜಯಿಸ ಲಾರರೆಂದೇ ನಿಶ್ಚಯಿಸಬಹುದು. ಈಗ ಬಲಿಯು ಸಮಸ್ತ ಲೋಕಗಳನ್ನೂ

ಒಂದೇ ತುತ್ತಾಗಿ ನುಂಗಿಬಿಡುವವನಂತೆಯೂ, ಕಾಲಾಗ್ನಿಸಮಾನವಾದ ತನ್ನ ದೃಷ್ಟಿಯಿಂದಲೇ ಭೂಮ್ಯಾಕಾಶಗಳನ್ನು ದಹಿಸಿಬಿಡುವವನಂತೆಯೂ ಕಾಣುತ್ತಿರುವನು ಆಹಾ ! ಈವಿಧವಾದ ಉತ್ಸಾಹವೂ, ದೇಹಬಲವೂ, ಇಂದ್ರಿಯಬಲವೂ, ಪರಾಕ್ರಮವೂ ಅವನಿಗೆ ಹೇಗೆ ಲಭಿಸಿತೋ ಕಾಣೆನು! ಇದರ ಕಾರಣವನ್ನು ನೀನು ಬಲ್ಲೆಯಾ?" ಎಂದನು ಅದಕ್ಕಾ ಬೃಹಸ್ಪತಿಯು "ದೇವೇಂದ್ರಾ ! ಅದರ ಕಾರಣವನ್ನು ನಾನು ಬಲ್ಲೆನು! ನಿನಗೂ ಹೇಳುವೆನು ಕೇಳು ! ಬ್ರಹ್ಮವಾದಿಗಳಾದ ಶುಕ್ರಾದಿಗಳು, ತಮ್ಮ ಶಿಷ್ಯನಾದ ಆ ಬಲಿಗೆ ಈಅಭ್ಯುದಯವನ್ನುಂಟುಮಾಡಿರುವರು.ಸರ್ವೇಶ್ವರನಾದ ಶ್ರೀಹರಿಯೊಬ್ಬನುಹೊರತು, ನೀನಾಗಲಿ, ನಿನ್ನಂತಿರುವ ಬೇರೆಯವರಾಗಲಿ, ಈಗ ಆ ಬಲಿಯನ್ನಿದಿರಿಸಿ ನಿಲ್ಲುವುದಕ್ಕೆ ಶಕ್ತರಲ್ಲ. ಆದುದರಿಂದ ಈ ಕ್ಷಣವೇ ನೀನು, ನಿನ್ನ ಸಮಸ್ತ ದೇವಗಣಗಳೊಡನೆ ಈ ಸ್ಥಳವನ್ನು ಬಿಟ್ಟು ಸ್ವಲ್ಪಕಾಲದವರೆಗೆ ತಲೆತಪ್ಪಿಸಿಕೊಂಡು ಕಾಲವನ್ನು ನಿರೀಕ್ಷಿಸುತ್ತಿರಬೇಕು ನಿಮ್ಮ ಶತ್ರುವಾದ ಬಲಿಯು,ಬ್ರಾಹ್ಮಣರ ಪ್ರಭಾವದಿಂದಲೇ ಈವಿಧವಾದ ಪರಾಕ್ರಮವನ್ನು ಪಡೆದುಬಂದಿರುವನು. ಈ ಪರಾಕ್ರಮದ ಹೆಮ್ಮೆಯಿಂದ ಅವನು, ಮುಂದೆ ಯಾವಾಗಲಾದರೂ ಬ್ರಾಹ್ಮಣರನ್ನು ಅವಮಾನಪಡಿಸದಿರಲಾರನು ಅದರಿಂದ ಅವನ ವೀರ್ಯವು ನಷ್ಟವಾಗುವುದು ಆಕಾಲವು ಬರುವವರೆಗೆ ನೀವು ತಾಳ್ಮೆಯಿಂದ ನಿರೀಕ್ಷಿಸುತ್ತಿರಬೇಕು" ಎಂದನು,ಕಾರ್ಯಜ್ಞನಾದ ಬೃಹಸ್ಪತಿಯು,ತನ್ನ ಸೂಕ್ಷ್ಮಬುದ್ಧಿಯಿಂದ ಚೆನ್ನಾಗಿ ಯೋಚಿಸಿ ಹೇಳಿದ ಈ ಹಿತವಾಕ್ಯವನ್ನು ಕೇಳಿ,ದೇವತೆಗಳೆಲ್ಲರೂ, ಆಕ್ಷಣವೇ ಸ್ವರ್ಗವನ್ನು ಬಿಟ್ಟು, ಯಾರಿಗೂ ಕಾಣದಂತೆ ಕಾಮರೂಪಿಗಳಾಗಿ, ಸ್ಥಳಾಂತರಕ್ಕೆ ಹೊರಟುಹೋದರು ಇದರಿಂದ ಬಲಿಯು ನಿರಾಯಾಸವಾಗಿಸ್ವರ್ಗಸಿಂಹಾಸನವನ್ನೇರಿ, ಲೋಕತ್ರಯವನ್ನೂ ತನ್ನ ವಶಮಾಡಿಕೊಂಡನು ಈ ರಾಜ್ಯವನ್ನು ಬಲಿಗೆ ಸ್ಥಿರಪಡಿಸಬೇಕೆಂಬ ಉದ್ದೇಶದಿಂದ, ಶಿಷ್ಯವತ್ಸಲರಾದ ಶುಕ್ರಾದಿಗಳು,ಅವನಿಂದ ನೂರಾವರ್ತಿ ಅಶ್ವಮೇಧಯಾಗಗಳನ್ನೂ ಮಾಡಿಸಿದರು. ಈ ಶತಾಶ್ವಮೇಧಗಳಿಂದುಂಟಾದ ಎಣೆಯಿಲ್ಲದ ಪ್ರಭಾವದಿಂದ ಬಲಿಯು, ತನ್ನ ಶುದ್ಧ ಕೀರ್ತಿಯನ್ನು ಮೂರುಲೋ

ಕಕ್ಕೂ ಹರಡಿ, ಪೂರ್ಣಚಂದ್ರನಂತೆ ಪ್ರಕಾಶಿಸುತಿದ್ದನು ದೃಢಸಂಕಲ್ಪನಾದ ಆ ಬಲಿಯು, ಬ್ರಾಹ್ಮಣರ ಕೃಪೆಯಿಂದ ತನಗೆ ಲಭಿಸಿದ ಸರ್ವೈಶ್ವರ್ಯವನ್ನೂ ಅನುಭವಿಸುತ್ತ, ಲೋಕದಲ್ಲಿ ತಾನೇ ಧನ್ಯನೆಂದು ಸಂತೋಷದಿಂದಿದ್ದನು ಇದು ಹದಿನೈದನೆಯ ಅಧ್ಯಾಯವು

---

ಇಂದ್ರಾದಿದೇವತೆಗಳಿಗೆ ಬಂದ ದುರ್ಗತಿಯನ್ನು ನೋಡಿ ಅದಿತಿಯು ದುಃಖಿತಳಾಗಿ ಭಗವಂತನನ್ನು ಪ್ರಾರ್ಥಿಸಿದುದು. ಭಗವಂತನು ಅವಳಗರ್ಭದಲ್ಲಿ ವಾಮನರೂಪದಿಂದ ಬೆಳೆದುದು

ರಾಜೇಂದ್ರಾ ಕೇಳು ! ಹೀಗೆ ದೇವತೆಗಳೆಲ್ಲರೂ ರಾಜ್ಯಭ್ರಷ್ಟರಾಗಿ ಓಡಿಹೋದುದನ್ನೂ, ದೈತ್ಯರು ಸ್ವರ್ಗರಾಜ್ಯವನ್ನು ಕೈವಶಮಾಡಿಕೊಂಡುದನ್ನೂ ನೋಡಿ, ದೇವಮಾತೆಯಾದ ಅದಿತಿಯು, ದಿಕ್ಕಿಲ್ಲದವಳಂತೆ ದುಃಖಿಸುತಿದ್ದಳು ಹೀಗಿರುವಾಗ ಒಮ್ಮೆ ಪೂಜ್ಯನಾದ ಕಶ್ಯಪನು, ತಾನು ಬಹುಕಾಲದಿಂದ ನಡೆಸುತಿದ್ದ ಸಮಾಧಿಯನ್ನು ಮುಗಿಸಿಕೊಂಡು, ತನ್ನ ಪತ್ನಿಯಾದ ಅದಿತಿಯನ್ನು ನೋಡುವುದಕ್ಕಾಗಿ, ಅವಳ ಆಶ್ರಮಕ್ಕೆ ಬಂದನು ಆ ಆಶ್ರಮವು ಮೊದಲಿನಂತೆ ಉತ್ಸಾಹವಿಶಿಷ್ಟವಾಗಿಲ್ಲದೆ,ಕಾಂತಿಗುಂದಿರುವುದನ್ನು ನೋಡಿದನು ಅದಿತಿಯೂ ಮನಸ್ಸಿನಲ್ಲಿ ಸ್ವಲ್ಪವಾದರೂ ಉತ್ಸಾಹವಿಲ್ಲದೆ ದೀನಮುಖಿಯಾಗಿ ಕುಳಿತಿದ್ದಳು ಹಾಗಿದ್ದರೂ ಪತಿಯು ಬಂದೊಡನೆ ಅವಳು ಯಥಾವಿಧಿಯಾಗಿ ಅವನನ್ನು ಸತ್ಕರಿಸಿ,ಉಚಿತಾಸನವನ್ನು ಕೊಟ್ಟು ಕುಳ್ಳಿರಿಸಿದಳು ಅಲ್ಲಿ ಸುಖಾಸೀನನಾದ ಕಶ್ಯಪನು ಅದಿತಿಯನ್ನು ಕುರಿತು “ಪ್ರಿಯೆ? ಇದೇನು? ನಿನ್ನ ಮುಖವು ಕಂದಿರುವುದಕ್ಕೆ ಕಾರಣವೇನು? ಲೋಕದಲ್ಲಿ ಈಗ ಗೋಬ್ರಾಹ್ಮಣರಿಗಾಗಲಿ, ಧರ್ಮಕ್ಕಾಗಲಿ, ಮೃತ್ಯುವಶರಾದ ಇತರಪ್ರಜೆಗಳಿಗಾಗಲಿ, ಅಮಂಗಳವೇನೂ ಸಂಭವಿಸಲಿಲ್ಲವಷ್ಟೆ? ಎಲೆ ಗೃಹಸ್ಥೆ ! ಗೃಹಧರ್ಮದಲ್ಲಿರತಕ್ಕವರು ಯೋಗಾಭ್ಯಾಸವಿಮುಖರಾಗಿದ್ದರೂ, ಅವರು ಸ್ವಧರ್ಮದಿಂದಲೇ ಆ ಯೋಗಫಲವನ್ನು ಹೊಂದುತ್ತಿರುವರು ಧರ್ಮಾರ್ಥಕಾಮಗಳನ್ನು ಸಾಧಿಸತಕ್ಕ ಅಂತಹ ಗೃಹಸ್ಥರಗೃಹಧರ್ಮಗಳಿಗೇನೂ ಲೋಪವಿಲ್ಲವಷ್ಟೆ ? ನಿನ್ನ ಮನೆಗೆ ಬಂದ ಅತಿಥಿಗಳಲ್ಲಿ ಯಾ

ರಾದರೂ, ಕುಟುಂಬಾಸಕ್ತೆಯಾದ ನಿನ್ನಿಂದ, ಕ್ರಮವಾಗಿ ಸತ್ಕರಿಸಲ್ಪಡದೆ ಹಿಂತಿರುಗಿ ಹೋದರೇನು ? ಯಾವ ಮನೆಯಲ್ಲಿ ಅತಿಥಿಗಳು ಅರ್ಘ್ಯಪಾ ದ್ಯಾದಿಗಳಿಂದ ಸತ್ಕರಿಸಲ್ಪಡದೆ, ಸ್ವಲ್ಪನೀರನ್ನಾದರೂ ಕುಡಿಯದೆ ಹಿಂ ತಿರುಗಿ ಹೋಗುವರೋ ಆ ಮನೆಯು, ಕಾಡುನರಿಗಳಿಗೆ ನಿವಾಸಭೂತ ವಾದ ಗುಹೆಗೆ ಸಮಾನವೇಹೊರತು ಬೇರೆಯಲ್ಲ ಎಲೆ ದೇವಿ ! ನಾನು ನಮ್ಮ ಗೃಹಾಗ್ನಿಗಳನ್ನು ನಿನ್ನ ವಶದಲ್ಲಿರಿಸಿ ತಪಸ್ಸಿಗೆ ಹೋ ದಮೇಲೆ, ನನ್ನ ವಿಯೋಗದುಃಖದಿಂದ ನೀನು ಕಾಲಕಾಲಕ್ಕೆ ಸರಿಯಾ ಗಿ ಆ ಅಗ್ನಿಗಳನ್ನು ಹವಿರ್ಭಾಗದಿಂದ ಆರಾಧಿಸುವುದಕ್ಕೆ ಮರೆತೆಯೇನು ? ಹಾಗೆ ತಪ್ಪಿ ನಡೆದಿದ್ದಪಕ್ಷದಲ್ಲಿ ಅದೇನೋ ಬಹಳ ಶೋಚನೀಯವಾದ ಸಂ ಗತಿಯೇ! ಆ ಅಗ್ನಿಗಳೇ ನಮಗೆ ಸರ್ವಾಭೀಷ್ಟವನ್ನೂ ಕೊಡತಕ್ಕವುಗಳು! ಆ ಅಗ್ನಿಪೂಜೆಯಿಂದಲೇ ಗೃಹಸ್ಥರು ಸದ್ಗತಿಗಳನ್ನು ಹೊಂದಬೇಕು. ಬ್ರಾ ಹ್ಮಣಕುಲವೂ, ಅಗ್ನಿಯೂ, ಸಕಲದೇವತಾಸ್ವರೂಪನಾದ ವಿಷ್ಣುವಿಗೆ ಮುಖವೆನಿಸಿರುವುವು. ಅಂತಹ ಅಗ್ನಿಯನ್ನು ಆರಾಧಿಸದೆ ಬಿಡುವುದರಿಂದ ಬಹಳ ದೋಷವುಂಟು. ಆವಿಧವಾದ ಲೋಪವೇನೂ ನಡೆದಿಲ್ಲವಷ್ಟೆ! ನಿನ್ನ ಮಕ್ಕಳಾದ ದೇವತೆಗಳೆಲ್ಲರಿಗೂ ಕ್ಷೇಮವಷ್ಟೆ? ನಿನ್ನ ಮುಖಲಕ್ಷಣಗಳನ್ನು ನೋಡಿದರೆ, ನಿನ್ನ ಮನಸ್ಸು ಬಹಳ ವ್ಯಾಕುಲವಾಗಿರುವಂತೆ ತೋರು ವುದು ಇದರ ಕಾರಣವೇನು. ಹೇಳು!" ಎಂದನು. ಅದಕ್ಕಾ ಅದಿತಿಯು ನಾಥಾ ! ಇದುವರೆಗೆ ಗೋಬ್ರಾಹ್ಮಣರಿಗೇನೂ ಹಾನಿಯಿಲ್ಲ ! ಧರ್ಮಕ್ಕೂ ಭಂಗವಿಲ್ಲ! ಇತರಜನರ ಕ್ಷೇಮಕ್ಕೂ ಯಾವವಿಧದಲ್ಲಿಯೂ ಲೋಪವಿಲ್ಲ! ನಮ್ಮ ಗೃಹಸ್ಥಾಶ್ರಮವೂ ಯಾವವಿಧದಲ್ಲಿಯೂ ಲೋಪವಿಲ್ಲದೆ ಧರ್ಮಾ ರ್ಥಕಾಮಗಳಿಗೆ ಉತ್ತಮಸ್ಥಾನವೆನಿಸಿ ಕ್ರಮವಾಗಿ ನಡೆದುಬರುತ್ತಿರುವುದು. ನಾನು ನಿನ್ನ ವಿಯೋಗದುಃಖದಿಂದ ಕೊರಗುವುದೇನೋ ವಾಸ್ತವವು! ಆ ದರೇನು? ಅನವರತವೂ ನಿನ್ನ ಪಾದಪದ್ಮಗಳನ್ನು ಧ್ಯಾನಿಸುತ್ತಲೇ, ನಾ ನು ಅಗ್ನಿಪೂಜೆಯನ್ನೂ ತಪ್ಪದೆ ನಡೆಸುತ್ತಿರುವೆನು ಅತಿಥಿಗಳನ್ನೂ ಸ ತ್ಕರಿಸುತ್ತಿರುವೆನು ಇದುವರೆಗೆ ನಾನು ಭೃತ್ಯರನ್ನಾಗಲಿ, ಮನೆಗೆ ಬಂದ ಭಿಕ್ಷುಗಳನ್ನಾಗಲಿ ಅನಾದರಿಸಿದವಳಲ್ಲ ಇವೆಲ್ಲವನ್ನೂ ತಪ್ಪದೆ ನಡೆಸುತ

ಬರುವ ಸಾಮರ್ಥ್ಯವೂ ನನಗೆ ನಿನ್ನ ಪಾದಾನುಗ್ರಹದಿಂದುಂಟಾದುದೇ ಹೊರತು ಬೇರೆಯಲ್ಲ. ಓನಾಥಾ ! ಪ್ರಜಾಧಿಪತಿಗಳಲ್ಲಿ ಶ್ರೇಷ್ಠನಾದ ನಿನಗೆ ಧರ್ಮಪತ್ನಿಯಾಗಿ, ನಿನ್ನಿಂದಲೇ ಸಮಸ್ತಧರ್ಮಗಳನ್ನೂ ತಿಳಿಯುತ್ತಿರುವ ನನ್ನಲ್ಲಿ ಹೇಗೆ ತಾನೇ ಧರ್ಮಲೋಪಕ್ಕೆ ಅವಕಾಶವುಂಟು? ಸಮಸ್ತಧರ್ಮಗಳೂ ಕ್ರಮವಾಗಿ ನಡೆಯುತ್ತಿರುವುವು ಓ ಮರೀಚಿನಂದನಾ ! ಸತ್ವಪ್ರಧಾನರಾದ ದೇವತೆಗಳಾಗಲಿ, ರಜಸ್ತಮೋಗುಣಪ್ರಧಾನರಾದ ದೈತ್ಯರಾಗಲಿ, ಇವರಿಬ್ಬರೂ ನಿನ್ನ ಮನಸ್ಸಿನಿಂದಲೂ ಶರೀರದಿಂದಲೂ ಹುಟ್ಟಿ ನಿನ್ನ ಮಕ್ಕಳೇ ಆಗಿರುವುದರಿಂದ ಈ ಮಕ್ಕಳಲ್ಲಿಯೂ ನಿನಗೆ ಸಮವಾಗಿ ಪುತ್ರಪ್ರೇಮವಿರಬೇಕಾದುದೇನೋ ಸಹಜವು ! ಹಾಗಿದ್ದರೂ ಮರೆಹೊಕ್ಕು ಬಂದವರನ್ನು ಕಾಪಾಡಬೇಕಾದುದು ಪ್ರಭುವಿನ ಕೃತ್ಯವು. ನೀನು ಭಕ್ತವತ್ಸಲನಲ್ಲವೆ ? ಆದುದರಿಂದ ನಿನ್ನ ಭಕ್ತೆಯಾದ ನನಗೆ ನೀನು ಶ್ರೇಯಸ್ಸನ್ನು ಚಿಂತಿಸಬೇಕು ನಿನ್ನ ಸವತಿಯ ಮಕ್ಕಳಾದ ದೈತ್ಯರು, ಸ್ವರ್ಗವನ್ನಾಕ್ರಮಿಸಿಕೊಂಡುದರಿಂದ, ನನ್ನ ಮಕ್ಕಳೆಲ್ಲರೂ ರಾಜ್ಯವನ್ನು ಕಳೆದುಕೊಂಡು, ನಿಲ್ಲುವುದಕ್ಕೆ ನೆಳಲಿಲ್ಲದೆ ದೇಶಭ್ರಷ್ಟರಾಗಿ ಓಡಿ ಹೋಗಿರುವರು. ಆದೈತ್ಯರು ನನ್ನನ್ನೂ ಮನೆಯಿಂದ ಹೊರಡಿಸಿ ದುಃಖಸಾಗರದಲ್ಲಿಮುಳುಗಿಸಿರುವರು. ನಿನ್ನನ್ನು ಕೈಹಿಡಿದುದುಮೊದಲು ಇದುವರೆಗೆ ನಾನು ಯಾವ ದುಃಖವನ್ನೂ ಕಂಡವಳಲ್ಲ ಈಗ ದುಃಖಿತೆಯಾದ ನನ್ನನ್ನೂ, ನನ್ನ ಮಕ್ಕಳನ್ನೂ ರಕ್ಷಿಸಬೇಕು ಓ ನಾಥಾ ! ನಮ್ಮ ಐಶ್ವರ್ಯವೂ, ನಮ್ಮ ಯಶಸ್ಸೂ, ನಮ್ಮಸಂಪತ್ತೂ, ನಮ್ಮ ನಿವಾಸಸ್ಥಾನವೂ ಬಲಾಢ್ಯರಾದ ದೈತ್ಯರ ವಶಕ್ಕೆ ಸಿಕ್ಕಿಹೋದುವು ನನ್ನ ಮಕ್ಕಳು ಅವೆಲ್ಲವನ್ನೂ ತಿರುಗಿ ಸಂಪಾದಿಸುವುದಕ್ಕೆ ತಕ್ಕ ಉಪಾಯವನ್ನು ನಿನ್ನ ಬುದ್ಧಿಯಿಂದಾಲೋಚಿಸಿ ನಮ್ಮನ್ನು ರಕ್ಷಿಸಬೇಕು" ಎಂದಳು ಇದನ್ನು ಕೇಳಿ ಕಶ್ಯಪನು ಮಂದಹಾಸಪೂರ್ವಕವಾಗಿ ಅವಳನ್ನು ಕುರಿತು "ಎಲೆ ಸಾಧ್ವಿ? ನೀನು ಪುತ್ರಮೋಹದಿಂದ ಹೀಗೆ ಕೊರಗಬಹುದೆ? ಇವೆಲ್ಲವೂ ಭಗವಂತನ ಮಾಯೆಯು. ಆ ಮಾಯೆಯನ್ನತಿಕ್ರಮಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಆಹಾ ! ಏನಾಶ್ಚರ್ಯವಿದು? ಪಂಚಭೂತ ಪರಿಣಾಮರೂಪವಾದ ಈ ದೇಹವೆಲ್ಲಿ?

ಅವೆಲ್ಲಕ್ಕಿಂತಲೂ ವಿಲಕ್ಷಣವಾದ ಆತ್ಮವೆಲ್ಲಿ? ಅವೆರಡಕ್ಕೂ ಸಂಬಂಧವೇ ನು ? ತಾಯಿ ಮಕ್ಕಳು ಮುಂತಾದ ಸಂಬಂಧಗಳೆಲ್ಲವೂ ಎಲ್ಲಿಂದ ಬಂ ದುವು ? ಯಾರಿಗೆ ಯಾರು ಮಕ್ಕಳು ಒಬ್ಬರಿಗೊಬ್ಬರಿಗೆಏರ್ಪಟ್ಟಿರುವ ಸಂ ಬಂಧವಾವುದು? “ತಾವು ಬಂಧುಗಳೆಂದು ಹೇಳಿಕೊಳ್ಳುವ ಈ ಸಂಬಂಧ ವೆಲ್ಲವೂ ದೇಹಮೂಲಕವಾದುದೆ ! ಆತ್ಮಮೂಲಕವಾದುದೆ?”ಎಂಬುದನ್ನು ಆಲೋಚಿಸಿನೋಡು! ಈತಾಯಿಮಕ್ಕಳೆಂಬ ಸಂಬಂಧವೆಲ್ಲವೂ ಶರೀರಮೂ ಲಕವಾದುದೇ ಹೊರತುಆತ್ಮಗಳಿಗೆ ಸಾಕ್ಷಾತ್ತಾಗಿ ಯಾವಅನ್ಯೋನ್ಯಸಂಬಂ ಧವೂ ಇಲ್ಲ ದೇಹವೆಂಬುದು ಪಂಚಭೂತಗಳಿಂದೇರ್ಪಟ್ಟಿರುವುದು ಅದಕ್ಕೆ ವೃದ್ಧಿ ಕ್ಷಯಗಳೆಂಬ ವಿಕಾರಗಳೆಲ್ಲವೂ ಉಂಟು.ಅದುನಿತ್ಯವಾದುದಲ್ಲ ಹೀಗೆ ದೇಹವೇ ಅನಿತ್ಯವಾಗಿರುವಾಗ, ಅದರಿಂದುಂಟಾದ ಸಂಬಂಧವು ಅನಿತ್ಯ ವೆಂಬುದನ್ನು ಹೇಳಬೇಕಾದುದೇನು? ಹೀಗೆ ದೇಹದಮೂಲಕವಾಗಿಸ್ವಲ್ಪಕಾ ಲದ ಸಂಬಂಧವುಳ್ಳ ಪುತ್ರಮಿತ್ರಾದಿಗಳಲ್ಲಿ ಮೋಹವನ್ನಿಟ್ಟು, ನೀನು ಅವರಿ ಗಾಗಿ ಚಿಂತಿಸಬಹುದೆ?ಇದು ದೇಹಾತ್ಮಭ್ರಮದಿಂದುಂಟಾದ ಅಜ್ಞಾನಕಾ ರ್ಯವಲ್ಲದೆ ಬೇರೆಯಲ್ಲ.ಆದುದರಿಂದ ಎಲ ದೇವಿ ! ನೀನು ಮಕ್ಕಳೆಂಬಮೋಹ ದಿಂದ ಹೀಗೆ ದುಃಖಿಸಬಾರದು.” ಎಂದನು ಹೀಗ ಕಶ್ಯಪನ್ನು ತತ್ವವನ್ನು ಬೋಧಿಸಿಯೂ, ಅವಳ ಮನಸ್ಸಿಗೆ ತೃಪ್ತಿಯಿಲ್ಲದಿರುವುದನ್ನು ನೋಡಿ,ತಿರುಗಿ ಅವಳನ್ನು ಕುರಿತು ‘ ಎಲೆ ದೇವಿ ! ನೀನು ಹೇಗಾದರೂ ನಿನ್ನ ಮಕ್ಕಳಲ್ಲಿ ರುವ ಮೋಹವನ್ನುಬಿಡದೆ, ಅವರಿಗೆ ಶ್ರೇಯಸ್ಸನ್ನುಂಟುಮಾಡಬೇಕಂಬ ಹಟವಾದವುಳ್ಳವಳಾದರೆ ಆ ಭಗವಂತನನ್ನಾರಾಧಿಸು ಅವನೊಬ್ಬನೇ ಆಶ್ರಿತರಿಗೆ ಸುಖವನ್ನುಂಟುಮಾಡತಕ್ಕವನು ಸಮಸ್ತಪ್ರಾಣಿಗಳ ಹೃದಯ ಗುಹೆಯಲ್ಲಿಯೂ ವಾಸಮಾಡುತ್ತಿರುವನು ಅವನೇ ಲೋಕಕ್ಕೆ ಹಿತೋಪ ದೇಶಕನು ಸಮಸ್ತಲೋಕಕ್ಕೂ ಆತನೇ ಪ್ರಭುವು ದೀನದಯಾಳುವಾ ದ ಆಶ್ರೀಹರಿಯನ್ನು ನೀನು ಭಕ್ತಿಯಿಂದಾರಾಧಿಸಿದರ, ಅವನು ನಿನ್ನ ಇ ಷ್ಟಾರ್ಥಗಳನ್ನು ನಿಸ್ಸಂದೇಹವಾಗಿ ಕೈಗೂಡಿಸುವನು ಇತರ ದೇವತೆಗಳ ಆರಾಧನದಂತೆ ಅವನ ಸೇವೆಯು ಎಂದಿಗೂ ವಿಫಲವಾಗತಕ್ಕುದಲ್ಲ” ಎಂ ದನು ಅದಕ್ಕಾ ಅದಿತಿಯು “ **ನಾಥಾ** ! ಯಾವ ಕ್ರಮದಿಂದ ಆ ಭಗ

ವಂತನನ್ನು ಉಪಾಸನೆಮಾಡಬೇಕು ? ಯಾವ ನಿಯಮದಿಂದ ಪೂಜಿಸಿದರೆ ಸತ್ಯಸಂಕಲ್ಪನಾದ ಆ ಭಗವಂತನು ಶೀಘ್ರದಲ್ಲಿ ಪ್ರಸನ್ನನಾಗಿ ನಮ್ಮ ಕೋರಿಕೆಯನ್ನೀಡೇರಿಸುವನು ! ಈಗ ನಾನೂ, ನನ್ನ ಮಕ್ಕಳೂ ಕಷ್ಟದಲ್ಲಿ ಸಿಕ್ಕಿ ಸಂಕಟಪಡುತ್ತಿರುವೆವು ಭಗವಂತನು ಶೀಘ್ರದಲ್ಲಿ ನಮಗೆ ಪ್ರಸನ್ನ ನಾಗುವುದಕ್ಕೆ ತಕ್ಕ ಉಪಾಸನಾಕ್ರಮವನ್ನು ನೀನೇ ಉಪದೇಶಿಸಬೇಕು" ಎಂದಳು. ಅದಕ್ಕಾ ಕಶ್ಯಪನು "ಎಲೆ ದೇವಿ! ಹಿಂದೆ ನಾನು ಸಂತಾನಾರ್ಥಿ ಯಾಗಿ, ನನ್ನ ಜನಕನಾದ ಬ್ರಹ್ಮನಬಳಿಗೆ ಹೋಗಿ, ಆ ಭಗವಂತನನ್ನು ಸಂ ತೋಷಪಡಿಸತಕ್ಕ ವ್ರತವಾವುದೆಂದು ಪ್ರಶ್ನೆಮಾಡಿದೆನು ಬ್ರಹ್ಮನು ನನಗೆ ಆ ಕ್ರಮವನ್ನುಪದೇಶಿಸಿದನು ಅದರಿಂದ ತಪ್ಪದೆ ಆ ಭಗವಂತನು ಪ್ರಸನ್ನ ನಾಗುವನು ಆ ವ್ರತವನ್ನೇ ಈಗ ನಿನಗೂ ತಿಳಿಸುವೆನು ಕೇಳು'ಫಾಲ್ಗುಣ ಮಾಸದ ಶುಕ್ಲಪಕ್ಷದ ಪ್ರಥಮಾತಿಥಿಯಲ್ಲಿ ಆವ್ರತವನ್ನಾರಂಭಿಸಿ, ಹನ್ನೆರ ಡುದಿನಗಳವರೆಗೆ ನಿಯಮದಿಂದ ನಡೆಸಬೇಕು. ನೀನು ನಿಶ್ಚಲವಾದ ಭಕ್ತಿ ಯಿಂದ ಈ ವ್ರತವನ್ನು ನಡೆಸಿದಪಕ್ಷದಲ್ಲಿ, ಆ ಭಗವಂತನನ್ನೊಲಿಸ ಬಹುದು ಈ ವ್ರತವನ್ನು ಆರಂಭಿಸುವುದಕ್ಕೆ ಮೊದಲು, ಚಂದ್ರಕಳೆಯೊಡ ಗೂಡಿದ ಅಮಾವಾಸ್ಯೆಯು ಲಭಿಸಿದಪಕ್ಷದಲ್ಲಿ, ಆ ರಾತ್ರಿ ಕಾಡಿನಲ್ಲಿ ಕಾಡುಹಂದಿಗಳು ತೋಡಿ ತೆಗೆದಿರುವ ಮಣ್ಣನ್ನು ಸಂಪಾದಿಸಿತಂದು, ಪುಣ್ಯ ನದಿಗೆಹೋಗಿ "ಎಲೆ ಭೂದೇವಿ! ಮಹಾಪ್ರಭಾವವುಳ್ಳ ನಿನಗೆ ನಮಸ್ಕಾರವು ಆದಿವರಾಹಮೂರ್ತಿಯಿಂದ ಪಾತಾಳದಿಂದುದ್ಧರಿಸಲ್ಪಟ್ಟ ನಿನಗೆ ನಮ ಸ್ಕಾರವು! ನನ್ನ ಸಮಸ್ತಪಾಪಗಳನ್ನೂ ನೀಗಿಸು. "ಎಂಬೀಮಂತ್ರವನ್ನು ಹೇಳುತ್ತ ಆ ಮೃತ್ತಿಕೆಯನ್ನು ಮೈಗೆ ಲೇಪಿಸಿ ಸ್ನಾನವನ್ನು ಮಾಡಬೇಕು. ಆಮೇಲೆ ಸಂಧ್ಯಾವಂದನಾದಿಕೃತ್ಯಗಳನ್ನು ತೀರಿಸಿಕೊಂಡು, ಶುದ್ಧವಾದ ಒಂದಾನೊಂದುಸ್ಥಳವನ್ನು ರಂಗವಲ್ಲಿಯಿಂದಲಂಕರಿಸಿಟ್ಟು, ಭೂಮಿ, ಸೂರ್ಯ, ಜಲ, ಅಗ್ನಿ, ಗುರು, ಇವೈದರಲ್ಲಿಯೂ ಆಶ್ರೀಹರಿಯನ್ನು ಧೃಢಮ ನಸ್ಸಿನಿಂದ ಭಾವಿಸಿ ಪೂಜಿಸಬೇಕು ಆ ಪೂಜಾಕಾಲದಲ್ಲಿ, "ಓನ್ನಮೋಭಗ ವತೇ ವಾಸುದೇವಾಯ" ಎಂಬೀ ದ್ವಾದಶಾಕ್ಷರಮಂತ್ರವನ್ನು ಪಠಿಸುತ್ತ ಆ ಭಗವಂತನನ್ನು ಹೀಗೆಂದು ಸ್ತುತಿಸಬೇಕು. "ಓ ವಾಸುದೇವಾ ! ಷಾ

ಡ್ಗುಣ್ಯಪೂರ್ಣನಾಗಿ, ಮಹಾಪುರುಷನೆನಿಸಿಕೊಂಡ ನಿನಗೆ ನಮಸ್ಕಾರವು ಸಮಸ್ತಭೂತಗಳಿಗೂ ನಿವಾಸಭೂತನಾಗಿ, ಸರ್ವಸಾಕ್ಷಿಯೆನಿಸಿಕೊಂಡ ನಿನಗೆ ನಮಸ್ಕಾರವು. ದೇವಾ ! ನೀನು ಕಣ್ಣು ಮೊದಲಾದ ಇಂದ್ರಿಯಗಳಿಗೆ ಗೋಚರಿಸತಕ್ಕವನಲ್ಲ ಅಣುಸ್ವರೂಪನಾದ ಜೀವನಲ್ಲಿಯೂ ಒಳಹೊಕ್ಕಿರುವುದರಿಂದ, ಆ ಸೂಕ್ಷ್ಮಜೀವಕ್ಕಿಂತಲೂ ಸೂಕ್ಷ್ಮನು ಅದರಂತೆಯೇ ಪ್ರಕೃತಿಪರಿಣಾಮರೂಪವಾದ ಎಲ್ಲಾ ಸ್ಥಾವರಪ್ರಪಂಚದಲ್ಲಿಯೂ ಅಂತರ್ಯಾಮಿಯಾಗಿರುವೆ ! ಅದರಿಂದಲೇ ನಿನ್ನನ್ನು ಅಪ್ರಮೇಯಸ್ವರೂಪನೆಂದು ಹೇಳುವರು. ನೀನು ಇಪ್ಪತ್ತುನಾಲ್ಕುತತ್ವಗಳನ್ನೂ ಶರೀರವಾಗಿ ಹೊಂದಿ, ಅವುಗಳ ಸ್ವರೂಪಗುಣಾದಿಗಳನ್ನು ಚೆನ್ನಾಗಿ ಸಾಕ್ಷಾತ್ಕರಿಸತಕ್ಕವನು ಸತ್ವಾದಿಗುಣಗಳ ಪರಿಣಾಮರೂಪವಾದ ಆ ತತ್ವಗಳೆಲ್ಲಕ್ಕೂ ನೀನೇ ಕಾರಣನು. ಅಂತಹ ನಿನಗೆ ನಮಸ್ಕಾರವು ಯಜ್ಞಾದಿಕರ್ಮಗಳನ್ನು ವಿವರಿಸತಕ್ಕುದಾಗಿಯೂ, ಯಜ್ಞಪುರುಷನಾದ ನಿನ್ನ ಸ್ವರೂಪವನ್ನು ನಿರೂಪಿಸತಕ್ಕುದಾಗಿಯೂ ಇರುವ ಶಬ್ದಪ್ರಪಂಚವು, ನಿನ್ನ ಶರೀರವೆನಿಸಿರುವುದು. ಅದು ಎರಡುತಲೆಗಳಿಂದಲೂ, ಮೂರುಪಾದಗಳಿಂದಲೂ, ನಾಲ್ಕು ಕೊಂಬುಗಳಿಂದಲೂ, ಏಳು ಹಸ್ತಗಳಿಂದಲೂ ಕೂಡಿದ ಒಂದು ಅದ್ಭುತವೃಷಭವನ್ನು ಹೋಲುತ್ತಿರುವುದು. ಪ್ರವೃತ್ತಿನಿಮಿತ್ತವೂ,ಮತ್ತು ಅದಕ್ಕಾಶ್ರಯವಾದ ವಸ್ತುವೂ ಇವೆರಡೂ ಆ ವೃಷಭಕ್ಕೆ ಎರಡುತಲೆಗಳು ನಾಮ, ಕ್ರಿಯೆ, ನಿಪಾತ, ಉಪಸರ್ಗಗಳೆಂಬಿವು ನಾಲ್ಕೂ ನಾಲ್ಕುಕೊಂಬುಗಳು. ಭೂತ, ಭವಿಷ್ಯತ್ತು, ವರ್ತಮಾನವೆಂಬ ತ್ರಿಕಾಲಗಳೂ ಮೂರುಪಾದಗಳು ! ಸಪ್ತವಿಭಕ್ತಿಗಳೇ ಏಳುಹಸ್ತಗಳು ಹೀಗೆ ಅಪೂರ್ವವೃಷಭರೂಪವಾದ ಶಬ್ದಬ್ರಹ್ಮವನ್ನೇ ಸ್ವರೂಪವಾಗಿ ಉಳ್ಳ ನಿನಗೆ ನಮಸ್ಕಾರವು. ದೇವಾ! ನೀನೇ ರುದ್ರಶರೀರಕನಾಗಿ ಭವನೆಂದೂ, ಅಂಬಿಕಾಪತಿಯೆಂದೂ, ವಿದ್ಯಾಧಿಪತಿಯೆಂದೂ, ಭೂತಪತಿಯೆಂದೂ ಕರೆಯಲ್ಪಡುವೆ ! ಹೀಗೆ ರುದ್ರಾಂಶದಿಂದ ಜಗತ್ತನ್ನು ಲಯಹೊಂದಿಸತಕ್ಕ ನಿನಗೆ ನಮಸ್ಕಾರವು. ನೀನೇ ಚತುರ್ಮುಖಶರೀರಕನಾಗಿ ಜಗತ್ತನ್ನು ಸೃಷ್ಟಿಸುವೆ ! ಸಮಸ್ತಭೂತಗಳೂ ನಿನ್ನಿಂದಲೇ ಬದುಕಿರುವುವು. ಆ ಭೂತಗಳಿಗೆ ಪ್ರಾಣ

ಭೂತನಾದ ವಾಯುವೂ ನೀನೇ! ಬ್ರಹ್ಮನು ಮೊದಲು ಕ್ರಿಮಿಕೀಟಗಳವರೆ
ಗಿರುವ ಸಕಲಜಗತ್ತಿಗೂ ನೀನು ಅಂತರ್ಯಾಮಿಯು. ಯೋಗಸ್ಮೃತಿಗಳ
ನ್ನು ಪ್ರಕಾಶಗೊಳಿಸಿ ಅದನ್ನು ನಿರ್ವಹಿಸತಕ್ಕವನೂ ನೀನೇ ! ಇಂತಹ ನಿನ
ಗೆ ನಮಸ್ಕಾರವು ನೀನೇ ಆದಿದೇವನು ನೀನೇ ದೇವತೆಗಳಿಗೂ ಪರದೈವ
ವು. ಸಮಸ್ತ ಚೇತನರಿಗೂ ನೀನೇ ಪ್ರಾಪ್ಯವಸ್ತುವು ನೀನು ಸರ್ವಜ್ಞ
ನು ನರನಾರಾಯಣಋಷಿಗಳಾಗಿ ತಪಸ್ಸುಮಾಡತಕ್ಕವನೂ ನೀನೇ
ಆಶ್ರಿತರ ದುಃಖವನ್ನು ನೀಗಿಸತಕ್ಕ ನಿನಗೆ ನಮಸ್ಕಾರವು ಇಂದ್ರನೀಲದಂ
ತೆ ಶ್ಯಾಮಲವಾದ ದೇಹಕಾಂತಿಯುಳ್ಳವನಾಗಿಯೂ, ಪೀತಾಂಬರಧಾರಿ
ಯಾಗಿಯೂ, ಲಕ್ಷ್ಮೀವಿಶಿಷ್ಟನಾಗಿಯೂ ಇರುವ ನಿನಗೆ ನಮಸ್ಕಾರವು ಓ
ಪರಮಪುರುಷಾ! ನೀನೇ ಸಮಸ್ತಲೋಕಕ್ಕೂ ಇಷ್ಟಾರ್ಥಗಳನ್ನು ಕೊಡತ
ಕ್ಕವನು. ಪುರುಷರಲ್ಲಿ ಶ್ರೇಷ್ಠನು ವರಪ್ರದರಾದ ದೇವತೆಗಳಲ್ಲಿ ನೀನೇ
ಉತ್ತಮನೆನಿಸಿಕೊಂಡಿರುವುದರಿಂದ,ಶ್ರೇಯಃಕಾಂಕ್ಷಿಗಳಾದ ಪಂಡಿತರೆಲ್ಲರೂ
ನಿನ್ನ ಪಾದರೇಣುವನ್ನು ತಲೆಯಲ್ಲಿ ಧರಿಸುವರು ಬ್ರಹ್ಮಾದಿದೇವತೆಗಳೂ,
ಲಕ್ಷ್ಮೀದೇವಿಯೂ ಯಾವನ ಪಾದಪದ್ಮಗಳನ್ನು ಭಕ್ತಿಯಿಂದ ಸೇವಿಸುತ್ತಿ
ರುವರೋ ಆ ವಾಸುದೇವನು ನಮ್ಮಲ್ಲಿ ಪ್ರಸನ್ನನಾಗಲಿ" ಎಂಬೀ ಸ್ತುತಿ
ವಾಕ್ಯಗಳಿಂದ ಭಗವಂತನನ್ನು ಆವಾಹನೆಮಾಡಿ,ಯಥಾವಿಧಿಯಾಗಿ ಅರ್ಘ್ಯ
ಪಾದ್ಯ, ಆಸನ, ಮೊದಲಾದುವುಗಳನ್ನು ಕೊಟ್ಟು ಪೂಜಿಸಬೇಕು ಗಂಧಪು
ಷ್ಪಗಳನ್ನೂ ಮಧುಪರ್ಕಾದಿಗಳನ್ನೂ ಸಮರ್ಪಿಸಬೇಕು ಹಾಲಿನಿಂದ
ಸ್ನಾನಮಾಡಿಸಬೇಕು ವಸ್ತ್ರವನ್ನೂ, ಯಜ್ಞೋಪವೀತವನ್ನೂ, ಆಭರಣ
ವನ್ನೂ ಸಮರ್ಪಿಸಬೇಕು. ದ್ವಾದಶಾಕ್ಷರಮಂತ್ರದೊಡನೆ ಹೀಗೆ ಸರ್ವೋ
ಪಚಾರಗಳನ್ನೂ ಸಮರ್ಪಿಸಿ, ತನಗೆ ಶಕ್ತಿಯಿದ್ದಪಕ್ಷದಲ್ಲಿ, ತುಪ್ಪವನ್ನೂ, ಬೆ
ಲ್ಲವನ್ನೂ ಸೇರಿಸಿದ ಪಾಯಸಾನ್ನವನ್ನು ಶ್ರೀಹರಿಗೆ ನಿವೇದನಮಾಡಬೇಕು.
ಅದೇ ಮೂಲಮಂತ್ರವನ್ನು ಪಠಿಸುತ್ತ ಹೋಮದಿಂದ ಅಗ್ನಿಪೂಜೆಯನ್ನೂ
ಮಾಡಬೇಕು ಭಗವಂತನಿಗೆ ನಿವೇದಿಸಿದ ಪಾಯಸವನ್ನು ಅಲಕ್ಷ್ಯ
ವಾಗಿ ಬಿಸುಡಬಾರದು ! ತಾನಾದರೂ ಭುಜಿಸಬೇಕು ಇಲ್ಲವೇ ಒಬ್ಬ
ಬ್ರಾಹ್ಮಣನಿಗಾದರೂ ಅರ್ಪಿಸಬೇಕು. ಭಗವಂತನಿಗೆ ನಿವೇದನಮಾಡಿದ

ಮೇಲೆ, ಉತ್ತರಾಚಮನವನ್ನು ಸಮರ್ಪಿಸಿ, ತಾಂಬೂಲವನ್ನು ನಿವೇದನ ಮಾಡಿ, ನೂರೆಂಟಾವರ್ತಿ ದ್ವಾದಶಾಕ್ಷರಮಂತ್ರವನ್ನು ಜಪಿಸಿ, ಇನ್ನೂ ಅನೇಕಸ್ತುತಿವಾಕ್ಯಗಳಿಂದ ಆತನನ್ನು ಸ್ತುತಿಸಬೇಕು ಆಮೇಲೆ ಪ್ರ ದಕ್ಷಿಣನಮಸ್ಕಾರಗಳನ್ನು ಮಾಡಿ, ಆ ಭಗವಂತನಿಗೆ ಧರಿಸಿದ ಪುಷ್ಪ ವನ್ನು ತೆಗೆದು ಶಿರಸ್ಸಿನಲ್ಲಿ ಧರಿಸಿ, ಆಮೇಲೆ ಉದ್ವಾಸನಮಾಡಬೇಕು ಭಗ ವನ್ನಿವೇದಿತವಾದ ಪಾಯಸಾನ್ನವನ್ನು ಇಬ್ಬರು ಬ್ರಾಹ್ಮಣರಿಗೆ ಭೋಜ ನಮಾಡಿಸಿ, ಅವರನ್ನು ಯಥೋಚಿತವಾಗಿ ಪೂಜಿಸಿ,ಅವರ ಅನುಮತಿಯನ್ನು ಪಡೆದು,ಶೇಷಾನ್ನವನ್ನು ತನ್ನ ಬಂಧುಗಳೊಡನೆ ತಾನು ಭುಜಿಸಬೇಕು ಸ್ತ್ರೀ ಸಂಗವಿಲ್ಲದೆ ರಾತ್ರಿಯನ್ನು ಕಳೆದು, ಬೆಳಗಿನ ಜಾವದಲ್ಲಿಯೇ ಎದ್ದು ಸ್ನಾ ನಮಾಡಿ ಶುಚಿಯಾಗಿ ಬಂದು, ಶುದ್ಧಮನಸ್ಸಿನಿಂದ ಮರುದಿನವೂ ಹೀಗೆಯೇ ನಡೆಸಬೇಕು. ಈ ವ್ರತವು ಮುಗಿಯುವವರೆಗೆ ಹಾಲನ್ನು ಮಾತ್ರವೇ ಆಹಾ ರವಾಗಿ ತೆಗೆದುಕೊಳ್ಳಬೇಕು ಪ್ರತಿದಿನವೂ ತ್ರಿಸಂಧ್ಯಾಕಾಲಗಳಲ್ಲಿಯೂ ಸ್ನಾನವನ್ನು ಮಾಡಬೇಕು. ದೃಢವಾದ ಬ್ರಹ್ಮಚರ್ಯದಲ್ಲಿರಬೇ ಕು ನೆಲದಮೇಲೆಯೇ ಮಲಗಬೇಕು. ಹೀಗೆ ಫಾಲ್ಗುನಶುದ್ಧಪಾಡ್ಯ ದಿಂದ ಹಿಡಿದು, ಹನ್ನೆರಡುದಿನದವರೆಗೆ ಪ್ರತಿದಿನವೂ ವಿಷ್ಣುಪೂಜೆಯನ್ನೂ ಬ್ರಾಹ್ಮಣಭೋಜನವನ್ನೂ,ಹೋಮವನ್ನೂ ತಪ್ಪದೆ ನಡೆಸುತ್ತ ಬರುವುದೇ ಪಯೋವ್ರತವೆನಿಸುವುದು. ಈ ವ್ರತವನ್ನು ಹಿಡಿದವನು, ಅನವರತವೂ ಭಗ ವಂತನನ್ನೇ ಧ್ಯಾನಿಸುತ್ತಿರಬೇಕಲ್ಲದೆ, ಬಾಯಿಂದ ಕೆಟ್ಟಮಾತುಗಳನ್ನಾಡ ಬಾರದು ಭೋಗಗಳನ್ನು ಬಯಸಬಾರದು । ಯಾವ ಭೂತಗಳನ್ನೂ ಹಿಂ ಸಿಸಬಾರದು. ಈ ವ್ರತವು ಮುಗಿದಮೇಲೆ ಹದಿಮೂರನೆಯದಿನದಲ್ಲಿ, ಮಂ ತ್ರಜ್ಞರಾದ ಬ್ರಾಹ್ಮಣರನ್ನು ಕರೆಸಿ, ಅವರಿಂದ ಮಂತ್ರವನ್ನು ಹೇಳಿಸುತ್ತ ಭಗವಂತನಿಗೆ ವಿಧ್ಯುಕ್ತವಾಗಿ ಪಂಚಾಮೃತಸ್ನಾನವನ್ನು ನಡೆಸಬೇಕು.ಹೀಗೆ ಲೋಭಬುದ್ಧಿಯಿಲ್ಲದೆ ತನ್ನ ಶಕ್ತಿಯಿದ್ದಷ್ಟು ಸರ್ವೋಪಚಾರಗಳಿಂದಲೂ ವಿಷ್ಣುವನ್ನು ಪೂಜಿಸಿ, ವಿಷ್ಣುಪ್ರೀತ್ಯರ್ಥವಾದ ಚರುವನ್ನು ಸಿದ್ಧಪಡಿಸಿ, ಪು ರುಷಸೂಕ್ತಮಂತ್ರದಿಂದ ಅದನ್ನು ಹೋಮಮಾಡಿ, ಭಗವಂತನಿಗೆ ಷಡ್ರ ಸೋಪೇತವಾದ ನೈವೇದ್ಯವನ್ನು ನಮರ್ಪಿಸಬೇಕು. ಆಮೇಲೆ ಗುರು

ವನ್ನೂ,ಬ್ರಾಹ್ಮಣರನ್ನೂ ವಸ್ತ್ರಾಭರಣಗಳಿಂದಲೂ,ಗೋದಾನಗಳಿಂದಲೂ ತೃಪ್ತಿಪಡಿಸಬೇಕು. ಈ ಬ್ರಾಹ್ಮಣಪೂಜೆಯಿಂದ ಭಗವಂತನು ವಿಶೇಷವಾಗಿ ಪ್ರೀತನಾಗುವನು ಎಲೆ ಪ್ರಿಯೆ! ಈ ವ್ರತವನ್ನು ಹಿಡಿದವನು, ಗುರುವಿಗೂ, ಬ್ರಾಹ್ಮಣರಿಗೂ, ಋತ್ವಿಕ್ಕುಗಳಿಗೂ ಸಂತೃಪ್ತಿಯಾಗಿ ಭೋಜನವನ್ನಿಕ್ಕಿ, ಅವರೆಲ್ಲರಿಗೂ ಯಥೋಚಿತವಾಗಿ ದಕ್ಷಿಣೆಯನ್ನು ಕೊಟ್ಟು ಸಂತೋಷಪಡಿಸಿದಮೇಲೆ, ಬೇರೆ ಎಲ್ಲಾ ವರ್ಣದವರನ್ನೂ ಭೋಜನಾದಿಗಳಿಂದ ತೃಪ್ತಿಪಡಿಸಬೇಕು. ಬಡಬಗ್ಗರನ್ನೂ, ಅಂಗಹೀನರನ್ನೂ, ಯಾಚಕರನ್ನೂ, ಭೋಜನಾದಿಗಳಿಂದ ಸಂತೋಷಪಡಿಸಿದರೆ, ಅದರಿಂದ ಭಗವಂತನು ವಿಶೇಷವಾಗಿ ಸಂತೋಷಪಡುವನು, ಪೂಜಾದಿನಗಳಲ್ಲಿ ಭಗವದ್ಗುಣಗಳನ್ನು ಗಾನಮಾಡಿಸುವುದು, ಹರಿಕಥೆಗಳನ್ನು ಹೇಳಿಸುವುದು, ಇವೇ ಮೊದಲಾದ ಸತ್ಕಾರ್ಯಗಳನ್ನು ನಡೆಸಬೇಕು. ಎಲೆ ದೇವಿ! ಈ ಪಯೋವ್ರತದಿಂದ ಭಗವಂತನು ಪ್ರೀತನಾಗುವಂತೆ, ಬೇರೆ ಯಾವ ವ್ರತಗಳಿಂದಲೂ ಸಂತೋಷಿಸಲಾರನು. ಇದನ್ನು ಸಾಕ್ಷಾಚ್ಚತುರ್ಮುಖಬ್ರಹ್ಮನೇ ನನಗೆ ಉಪದೇಶಿಸಿರುವನು ಅದನ್ನೇ ಈಗ ನಾನು ನಿನಗೂ ಉಪದೇಶಿಸಿರುವೆನು. ಎಲೆ ಪುಣ್ಯಾತ್ಮಳೆ! ನೀನು ಶುದ್ಧಮನಸ್ಸಿನಿಂದ ಈ ವ್ರತವನ್ನು ಹಿಡಿದು ಭಗವಂತನನ್ನಾರಾಧಿಸು! ಸಮಸ್ತ ಯಜ್ಞಗಳಿಂದಲೂ,ವ್ರತಗಳಿಂದಲೂ, ಅನೇಕ ತಪಸ್ಸುಗಳಿಂದಲೂ, ಸಮಸ್ತ ದಾನಧರ್ಮಗಳಿಂದಲೂ ಉಂಟಾಗತಕ್ಕ ಫಲವು ಇದರಿಂದ ಲಭಿಸುವುದು ಭಗವಂತನನ್ನು ಸಂತೋಷಪಡಿಸುವುದಕ್ಕೆ ಇದಕ್ಕೆ ಸಮಾನವಾದುದು ಬೇರೊಂದಿಲ್ಲ, ಲೋಕದಲ್ಲಿ ಆ ಶ್ರೀಹರಿಯನ್ನಾರಾಧಿಸತಕ್ಕ ವ್ರತವೇ ಉತ್ತಮವ್ರತವೆಂದು ತಿಳಿ! ಆದುದರಿಂದ ಎಲೆ ಭದ್ರೆ! ನೀನು ನಿನ್ನ ಸರ್ವಪ್ರಯತ್ನದಿಂದಲೂ ಶ್ರದ್ಧಾಪೂರ್ವಕವಾಗಿ ಈ ವ್ರತವನ್ನು ನಡೆಸಿದರೆ, ಭಗವಂತನು ನಿನ್ನಲ್ಲಿ ಪ್ರಸನ್ನನಾಗಿ, ನಿನಗೆ ಬೇಕಾದ ವರಗಳನ್ನು ಕೊಡುವನು" ಎಂದನು ಇದು ಹದಿನಾರನೆಯ ಅಧ್ಯಾಯವು.

---

## ಅದಿತಿಯು ಪಯೋವ್ರತವನ್ನು ನಡೆಸಿದುದು

ರಾಜೇಂದ್ರಾ! ಹೀಗೆ ತನ್ನ ಪತಿಯಾದ ಕಶ್ಯಪನು ಉಪದೇಶಿಸಿದ ವ್ರತವಿಧಿಯನ್ನು ಕೇಳಿ, ಅದಿತಿಯು ಅದರಂತೆಯೇ ಹನ್ನೆರಡುದಿನಗಳವರೆಗೆ ದೃಢಮನಸ್ಕಳಾಗಿ ಆ ವ್ರತವನ್ನು ನಡೆಸತೊಡಗಿದಳು. ಆಕೆಯು ತನ್ನ ಬುದ್ಧಿಯೆಂಬ ಸಾರಥಿಯ ಮೂಲಕವಾಗಿ,ಮನಸ್ಸೆಂಬ ಹಗ್ಗದಿಂದ,ಇಂದ್ರಿಯಗಳೆಂಬ ದುಷ್ಟಾಶ್ವಗಳನ್ನು ನಿಗ್ರಹಿಸಿ, ಒಂದೇ ಮನಸ್ಸಿನಿಂದ ಸರ್ವೇಶ್ವರನಾದ ಪರಮಪುರುಷನನ್ನು ಧ್ಯಾನಿಸುತ್ತ, ಆ ಪಯೋವ್ರತವನ್ನು ಯಥಾವಿಧಿಯಾಗಿ ನಡೆಸಿದಳು ಭಗವಂತನಾದ ವಾಸುದೇವನು, ಅವಳವ್ರತಕ್ಕೆ ಸಂತೋಷಪಟ್ಟು, ಪೀತಾಂಬರಧಾರಿಯಾಗಿ, ತನ್ನ ನಾಲ್ಕು ಭುಜಗಳಲ್ಲಿಯೂ ಶಂಖಚಕ್ರಾದಿ ದಿವ್ಯಾಯುಧಗಳನ್ನು ಧರಿಸಿ, ಅವಳಿಗೆ ಪ್ರತ್ಯಕ್ಷನಾದನು ಹೀಗೆ ಭಗವಂತನು ತನ್ನ ಮುಂದೆ ಗೋಚರಿಸಿದೊಡನೆ ಅದಿತಿಯು, ತಟ್ಟನೆ ಮೇಲೆದ್ದುನಿಂತು, ಪ್ರೇಮಾತಿಶಯದಿಂದ ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತ, ಬದ್ಧಾಂಜಲಿಯಾಗಿ ಆ ಭಗವಂತನನ್ನು ಸ್ತೋತ್ರಮಾಡುವುದಕ್ಕೆ ಯತ್ನಿಸಿದಳು ಆದರೇನು ? ಆನಂದಾತಿಶಯದಿಂದ ಅವಳಿಗೆ ಕಂಠಸ್ವರವು ಕುಗ್ಗಿ, ಬಾಯತ್ತಿ ಮಾತಾಡುವುದಕ್ಕೂ ಸಾಧ್ಯವಿಲ್ಲದಂತಾಯಿತು ಅವಳ ದೇಹವೆಲ್ಲವೂ ಪುಳಕಿತವಾಯಿತು ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುತಿತ್ತು ದೇಹವೆಲ್ಲವೂ ನಡುಗಲಾರಂಭಿಸಿತು ಕ್ಷಣಕಾಲದವರೆಗೆ ಏನೂ ತೋರದೆ ಸುಮ್ಮನೆ ನಿಂತುಬಿಟ್ಟಳು ಸ್ವಲ್ಪಕಾಲದಮೇಲೆ ಕ್ರಮಕ್ರಮವಾಗಿ ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡು, ಆ ಭಗವಂತನ ಸೌಂದರ್ಯಾಮೃತವನ್ನೆಲ್ಲಾ ತನ್ನ ಕಣ್ಣಿನಿಂದಲೇ ಕುಡಿದುಬಿಡುವಂತೆ ಎವೆಮುಚ್ಚದೆ ನೋಡುತ್ತ, ಗದ್ಗದಸ್ವರದಿಂದ ಹೀಗೆಂದು ನುತಿಸುವಳು “ಓ ಸರ್ವೇಶ್ವರಾ! ನೀನೇ ಸಮಸ್ತ ಯಜ್ಞಗಳಿಗೂ ಅಧಿಪತಿಯು ನೀನೇ ಯಜ್ಞಸ್ವರೂಪನು! ಆಶ್ರಿತರನ್ನು ಕೈಬಿಡದೆ ಕಾಪಾಡತಕ್ಕವನು ನಿನ್ನ ಪಾದಜಲವೇ ಪುಣ್ಯತೀರ್ಥವು ನಿನ್ನ ಕೀರ್ತಿಯು ಲೋಕಪಾವನವಾದುದು. ನಿನ್ನ ನಾಮೋಚ್ಚಾರಣವು ಸಕಲಮಂಗಳಕಾರಣವು ವಿಪತ್ತಿನಲ್ಲಿ ಸಿಕ್ಕಿ ಶರಣಾಗತರಾಗಿ ಬಂದವರ ದುಃಖವನ್ನು ನೀಗಿಸುವುದಕ್ಕಾಗಿಯೇ ನೀನು ಅವತಾರಗಳ

ನ್ನಿತ್ತತಕ್ಕವನು. ಹೀಗೆ ಅನಾಥಬಂಧುವಾದ ನೀನು ನಮಗೆ ಕ್ಷೇಮವನ್ನುಂ ಟುಮಾಡಬೇಕು. ಓ ಮಹಾಪುರುಷಾ! ನೀನು ವಿಶ್ವಸ್ವರೂಪನು ಸಮಸ್ತ ಪ್ರಪಂಚವೂ ನಿನ್ನ ಶರೀರವು. ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆಲ್ಲಾ ನೀನೇ ಕಾರಣನು ಈ ಸೃಷ್ಟ್ಯಾದಿಗಳೆಲ್ಲವೂ ನಿನ್ನ ಲೀಲೆ ಗಳಾಗಿರುವುವು ಈ ಕಾರ್ಯಗಳನ್ನು ನೆರವೇರಿಸುವುದಕ್ಕಾಗಿಯೇ ನೀನು, ನಾನಾವಿಧವಾಗಿ ಪರಿಣಮಿಸುವ ಸ್ವಭಾವವುಳ್ಳ ಮಾಯೆಯ ಗುಣ ಗಳಾದ ಸತ್ವರಜಸ್ತಮಸ್ಸುಗಳನ್ನು, ನೀನಾಗಿಯೇ ಸ್ವೇಚ್ಛೆಯಿಂದ ಕೈಕೊ ಳ್ಳುವೆ. ನೀನು ಸೂಕ್ಷ್ಮಸ್ವರೂಪವುಳ್ಳ ಜೀವನಿಗಿಂತಲೂ ಸೂಕ್ಷ್ಮನಾಗಿ, ಆ ಜೀವನಲ್ಲಿಯೂ ಅಂತರ್ಯಾಮಿಯಾಗಿರತಕ್ಕವನು. ಈ ಪ್ರಪಂಚರೂ ಪವಾಗಿ ಪರಿಣಮಿಸತಕ್ಕ ವಿಕಾರಗಳೆಲ್ಲವೂನಿನಗೆ ಶರೀರವೆನಿಸಿಕೊಂಡ ಆಪ್ರ ಕೃತಿಪುರುಷರಿಗೇಹೊರತು ನಿನಗಲ್ಲ! ನೀನು ಸ್ವರೂಪದಲ್ಲಿಯಾಗಲಿ,ಸ್ವಭಾವ ದಲ್ಲಿಯಾಗಲಿ ಎಂದಿಗೂ, ಯಾವ ವಿಕಾರವೂ ಇಲ್ಲದೆ, ಯಾವ ದೋಷಕ್ಕೂ ಈಡಾಗದೆ ನಿಜಸ್ಥಿತಿಯಲ್ಲಿಯೇ ಇರತಕ್ಕವನು ಯಾವಾಗಲೂ ಕುಂದು ಕುಂದಿಲ್ಲದಜ್ಞಾನಾನಂದಗಳೇನಿನ್ನ ಸ್ವರೂಪವು ನೀನುನಿನ್ನ ಸ್ವರೂಪಾನುಭ ವದಲ್ಲಿರುವ ಜೀವಾತ್ಮರ ಅಜ್ಞಾನವನ್ನೂ ನೀಗಿಸತಕ್ಕವನು ಇಂತಹ ನಿನಗೆ ನಮಸ್ಕಾರವು ಹೇ ಅನಂತಾ! ನಿನ್ನನ್ನು ಸಂತೋಷಗೊಳಿಸಿದವರಿಗೆ, ಪೂರ್ಣಾಯುಸ್ಸಾಗಲಿ, ಉತ್ತಮ ಶರೀರವಾಗಲಿ, ಇಷ್ಟಭೋಗಗಳಾಗಲಿ, ಸ್ವರ್ಗಮರ್ತ್ಯ ಪಾತಾಳಾದಿ ಲೋಕಾಂತರಗಳಾಗಲಿ,ಅಣಿಮಾದಿಸಿದ್ಧಿಗಳಾ ಗಲಿ, ಧರ್ಮಾರ್ಥಕಾಮಗಳಾಗಲಿ, ನಿಸ್ಸಂಶಯಜ್ಞಾನವಾಗಲಿ ಯಾವು ದೂ ದುರ್ಲಭವಲ್ಲ! ಹೀಗಿರುವಾಗ ಶತ್ರುಜಯರೂಪವಾದ ನನ್ನ ಸ್ವ ಲ್ಪಕೋರಿಕೆಯನ್ನಿಡೇರಿಸುವುದು ನಿನಗೊಂದು ಕಷ್ಟವೆ?" ಎಂದಳು. ಪುಂಡರೀಕಾಕ್ಷನಾದ ಭಗವಂತನು ಅದಿತಿಯ ಸ್ತೋತ್ರಕ್ಕೆ ಸಂತುಷ್ಟ ನಾಗಿ ಹೀಗೆಂದು ಹೇಳುವನು "ಎಲೆ ದೇವಮಾತೆ? ನಿನ್ನ ಕೋ ರಿಕೆಯನ್ನು ನಾನು ಬಲ್ಲೆನು! ನಿನ್ನ ಮಕ್ಕಳು ಶತ್ರುಗಳಿಂದ ರಾಜ್ಯಭ್ರ ಷ್ಟರಾಗಿ ಓಡಿಸಲ್ಪಟ್ಟಿರುವುದನ್ನೂ ಬಲ್ಲೆನು! ನಿನ್ನ ಮಕ್ಕಳು ಮದಾಂ ಧರಾದ ದೈತ್ಯರನ್ನು ಯುದ್ಧದಲ್ಲಿ ಜಯಿಸಿ, ಮೊದಲಿನಂತೆ ಕೀರ್ತಿಯನ್ನೂ

ಯಶಸ್ಸನ್ನೂ ಪಡೆದು, ಸ್ವರ್ಗರಾಜ್ಯದಲ್ಲಿ ಸಂತೋಷಿಸುತ್ತಿರುವುದನ್ನು ಕಣ್ಣಾರೆ ನೋಡಬೇಕೆಂದು ನೀನು ಬಯಸುತ್ತಿರುವೆ? ಆದರೆ ತತ್ಕಾಲಕ್ಕೆ ಆ ದೈತ್ಯರನ್ನು ಜಯಿಸುವುದು ನನಗೂ ಸಾಧ್ಯವಲ್ಲವೆಂದೆಣಿಸುವೆನು ಏಕೆಂದರೆ, ಈಗ ಅವರಿಗೆ ಕಾಲವು ಅನುಕೂಲವಾಗಿರುವುದು ಆದುದರಿಂದ ಈಗ ನಾವು ಅವರಮೇಲೆ ಕೈಮಾಡುವುದರಿಂದ ನಮಗೆ ಕ್ಷೇಮವಿಲ್ಲ! ಇದಕ್ಕಾಗಿ ಬೇರೆ ಉಪಾಯವನ್ನೇ ಯೋಚಿಸಬೇಕಾಗಿರುವುದು. ಇದುವರೆಗೆ ನೀನು ನನ್ನನ್ನು ಭಜಿಸಿದುದಕ್ಕಾಗಿ ನಾನು ಬಹಳ ಸಂತೋಷಪಟ್ಟೆನು ನನ್ನ ಸಂತೋಷವು ವ್ಯರ್ಥವಾಗಲಾರದು. ನನ್ನನ್ನು ಆರಾಧಿಸಿದವರಿಗೆ ಅವರವರ ಶ್ರದ್ಧಾಭಕ್ತಿಗಳಿಗೆ ತಕ್ಕಂತ ಫಲವನ್ನು ತೋರಿಸಬೇಕಾದುದು ನನ್ನ ಅವಶ್ಯಕೃತ್ಯವಾದುದರಿಂದ, ನಾನು ಬೇರೆ ಯಾವುದಾದರೂ ಉಪಾಯದಿಂದ ನಿನ್ನ ಉದ್ದೇಶವನ್ನು ನೆರವೇರಿಸುವೆನು ಎಲೆ ದೇವಿ! ನಿನ್ನ ಪತಿಯಾದ ಕಶ್ಯಪನ ತಪಸ್ಸಿಗೆ ಫಲರೂಪವಾಗಿ, ನಾನು ನಿನ್ನ ಗರ್ಭದಲ್ಲಿ ಪುತ್ರನಾಗಿ ಜನಿಸಿ, ಉಪಾಯಾಂತರದಿಂದ ನಿನ್ನ ಮಕ್ಕಳಿಗೆ ತಿರುಗಿ ಸ್ವರ್ಗರಾಜ್ಯವು ಕೈಸೇರುವಂತೆ ಮಾಡುವೆನು ಆ ಪುತ್ರೋತ್ಪತ್ತಿಯಾಗುವವರೆಗೆ, ನೀನು ಶುದ್ಧಮನಸ್ಸಿನಿಂದ ನಿನ್ನ ಪತಿಯನ್ನು ಅನುವರ್ತಿಸುತ್ತಿರಬೇಕು. ನಿನ್ನ ಪತಿಯ ಅನುವರ್ತನೆಯಿಂದ, ನೀನು ನನ್ನನ್ನು ಗರ್ಭದಲ್ಲಿ ಧರಿಸುವೆ ಆದರೆ ಈ ವೃತ್ತಾಂತವನ್ನು ನೀನು ಬೇರೆ ಯಾರಿಗೂ ತಿಳಿಸದೆ, ಬಹಳ ರಹಸ್ಯವಾಗಿರಿಸಬೇಕು. ಹೀಗೆ ಗುಪ್ತವಾಗಿರಿಸಿದ್ದಪಕ್ಷದಲ್ಲಿ ಅದರ ಫಲವನ್ನು ನೀನು ಶೀಘ್ರದಲ್ಲಿಯೇ ಹೊಂದಬಹುದು" ಎಂದು ಅಂತರ್ಧಾನವನ್ನು ಹೊಂದಿದನು.

ಬೇರೊಬ್ಬರಿಗೆ ಕಣ್ಣಿಂದ ನೋಡುವುದಕ್ಕೂ ದುರ್ಲಭನಾದ ಭಗವಂತನನ್ನು ಗರ್ಭದಲ್ಲಿ ಧರಿಸತಕ್ಕ ಭಾಗ್ಯವು ತನಗೆ ಲಭಿಸಿದುದಕ್ಕಾಗಿ,ಅದಿತಿಯು ಪರಮಾನಂದಭರಿತಳಾಗಿ, ಆ ಭಗವದಾಜ್ಞೆಯಂತೆ ತನ್ನ ಪತಿಯನ್ನು ಭಕ್ತಿಯಿಂದ ಅನುವರ್ತಿಸುತ್ತಿದ್ದಳು ಒಡನೆಯೇ ಇತ್ತ ದಿವ್ಯಜ್ಞಾನವುಳ್ಳ ಕಶ್ಯಪನಿಗೆ ನಾರಾಯಣನು ನಿಜಾಂಶದಿಂದ ತನ್ನ ದೇಹದಲ್ಲಿ ಪ್ರವೇಶಿಸಿರುವಂತೆ ಧ್ಯಾನದೃಷ್ಟಿಯಿಂದತಿಳಿದು ಬಂದಿತು.ಬಹುಕಾಲದ ತಪಸ್ಸಿನಿಂದ ಸಂಪಾದಿ

ಸಲ್ಪಟ್ಟುದಾಗಿಯೂ,ಅಗ್ನಿಯಂತೆ ತೇಜೋವಿಶಿಷ್ಟವಾಗಿಯೂ ಇರುವಅವನ ವೀರ್ಯವು ಅದಿತಿಯಲ್ಲಿಯೂ ಸೇರಿತು,ಒಡನೆಯೇ ಅದಿತಿಯು ಗರ್ಭವತಿಯಾದಳು. ಹೀಗೆ ಭಗವಂತನು ಅದಿತಿಯ ಗರ್ಭದಲ್ಲಿ ಪ್ರವೇಶಿಸಿರುವ ಸಂಗತಿಯನ್ನು ಚತುರ್ಮುಖಬ್ರಹ್ಮನು ತನ್ನ ಜ್ಞಾನದೃಷ್ಟಿಯಿಂದ ತಿಳಿದುಕೊಂಡು, ಆ ಅದಿತಿಯ ಬಳಿಗೆ ಬಂದು, ಆ ಭಗವಂತನನ್ನು ಹೀಗೆಂದು ಸ್ತುತಿಸುವನು "ಓ ದೇವಾ ! ತ್ರೈಲೋಕ್ಯವನ್ನೂ ಆಕ್ರಮಿಸತಕ್ಕ ಪಾದವಿನ್ಯಾಸವುಳ್ಳ ನೀನು ಜಯಶೀಲನಾಗು ! ಬ್ರಾಹ್ಮಣಪ್ರಿಯನಾದ ನಿನಗೆ ನಮಸ್ಕಾರವು ಸತ್ವಾದಿಗುಣಗಳನ್ನು ಕೈಕೊಂಡು ಸೃಷ್ಟಿ, ಸ್ಥಿತಿ, ಲಯಗಳನ್ನು ನಡೆಸತಕ್ಕ ನಿನಗೆ ಬಾರಿಬಾರಿಗೂ ನಮಸ್ಕಾರವು. ಓ ಪ್ರಭೂ ! ಹಿಂದೆಯೂ ನೀನು ಇದೇರೀತಿಯಲ್ಲಿ ಲೋಕರಕ್ಷಣಾರ್ಥವಾಗಿ ಪೃಶ್ನಿಯೆಂಬವಳ ಗರ್ಭದಲ್ಲಿ ವಾಸಮಾಡುತಿದ್ದೆ ! ಸಮಸ್ತ ವೇದಗಳಿಗೂ ನೀನು ಆಶ್ರಯಭೂತನು ತ್ರೈಲೋಕ್ಯರೂಪವಾದ ಕಮಲವನ್ನು ನಾಭಿಯಲ್ಲಿ ಧರಿಸಿದವನು. ಈ ಮೂರು ಲೋಕಗಳಿಗಿಂತಲೂ ಮೇಲಾದ ಪರಮಾಕಾಶದಲ್ಲಿ ನೆಲೆಗೊಂಡವನು. ಸಮಸ್ತಜೀವಗಳಿಗೂ ಅಂತರ್ಯಾಮಿಯಾಗಿರತಕ್ಕವನು ಸಮಸ್ತಪ್ರಪಂಚವನ್ನೂ ವ್ಯಾಪಿಸಿದವನು. ಈ ಪ್ರಪಂಚಕ್ಕೆ ಆದಿಮಧ್ಯಾಂತಗಳೆಂಬ ಮೂರು ಸ್ಥಿತಿಗಳಿಗೂ ನೀನೇ ಕಾರಣಭೂತನು.ಜ್ಞಾನಿಗಳು ನಿನ್ನನ್ನೇ ಅನಂತಶಕ್ತಿಯುಳ್ಳ ಪರಮಪುರುಷನನ್ನಾಗಿಹೇಳುವರು ಮಹಾನದೀಪ್ರವಾಹವು, ತನ್ನಲ್ಲಿ ಬಿದ್ದ ಸಣ್ಣ ಹುಲ್ಲು ಕಡಿಗಳನ್ನು ಕೊಚ್ಚಿಸಿಕೊಂಡು ಹೋಗುವಂತೆ ನೀನೇ ಕಾಲಶರೀರಕನಾಗಿ ಈ ಸಮಸ್ತ ಪ್ರಪಂಚವನ್ನೂ ನಿನ್ನ ಶಕ್ತಿಯಿಂದಾಕರ್ಷಿಸುತ್ತಿರುವೆ. ಜೀವವರ್ಗಗಳಿಗೂ, ಇತರ ಸ್ಥಾವರವರ್ಗಗಳಿಗೂ ನಮ್ಮಂತಹ ಪ್ರಜಾಧಿಪತಿಗಳಿಗೂ ನೀನೇ ಉತ್ಪತ್ತಿಕಾರಣನು. ಓ ದೇವಾ! ಸಮುದ್ರದಲ್ಲಿ ಮುಳುಗಿ ಹೋಗತಕ್ಕವನಿಗೆ ನಾವೆಯು ಹೇಗೋಹಾಗೆ,ಈಗ ರಾಜ್ಯಭ್ರಷ್ಟರಾದ ದೇವತೆಗಳಿಗೆ ನೀನೇ ರಕ್ಷಕನಾಗಿ ನಿಂತು, ಉದ್ಧರಿಸಬೇಕು" ಎಂದನು. ಇದು ಹದಿನೇಳನೆಯ ಅಧ್ಯಾಯವು.

---

## ಭಗವಂತನು ವಾಮನರೂಪದಿಂದ ಅದಿತಿಯ ಗರ್ಭದಲ್ಲಿ ಜನಿಸಿದುದು.

ಹೀಗೆ ಬ್ರಹ್ಮದೇವನು, ತನ್ನ ಗುಣಗಳನ್ನೂ, ವೀರ್ಯವನ್ನೂ, ಕಾರ್ಯಗಳನ್ನೂ ಕೊಂಡಾಡುತ್ತಿರುವಾಗಲೇ, ಭಗವಂತನು ತನಗೆ ಕರ್ಮಾಧೀನವಾದ ಜನನಮರಣಗಳೊಂದೂ ಇಲ್ಲದಿದ್ದರೂ ದೇವಕಾರ್ಯಾರ್ಥವಾಗಿ ಅದಿತಿಯ ಗರ್ಭದಿಂದ ಅವತರಿಸಿದನು. ಅವತರಿಸಿದಾಗ ಆ ಭಗವಂತನಿಗೆ ನಾಲ್ಕುಭುಜಗಳು ! ಆ ನಾಲ್ಕುಭುಜಗಳಲ್ಲಿಯೂ ಶಂಖಚಕ್ರಗದಾಪದ್ಮಗಳೆಂಬ ನಾಲ್ಕು ದಿವ್ಯಾಯುಧಗಳು! ನಡುವಿನಲ್ಲಿ ಪೀತಾಂಬರವೆಂಬ ಪಟ್ಟೆಮಡಿ! ಕಮಲದಳದಂತೆ ವಿಸ್ತಾರವಾದ ಕಣ್ಣುಗಳು! ಶುದ್ಧವಾಗಿಯೂ, ಶ್ಯಾಮಲವಾಗಿಯೂ ಇರುವ ದೇಹಕಾಂತಿ! ಕಿವಿಯಲ್ಲಿ ತೂಗಾಡುತ್ತಿರುವ ಮಕರಕುಂಡಲಗಳ ಕಾಂತಿಯಿಂದ ಅಂದವೇರಿದ ಮುಖದ ಸೊಬಗು! ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆ ! ತಲೆಯಿಂದ ಕಾಲಿನವರೆಗೆ ಸರ್ವಾವಯವಗಳಲ್ಲಿಯೂ ಕ್ರಮವಾಗಿ ಕಿರೀಟ, ಕೇಯೂರ, ಕಾಂಚಿ, ಹಾರ, ನೂಪುರ ಮೊದಲಾದ ದಿವ್ಯಾಭರಣಗಳು! ಕಂಠದಲ್ಲಿ ಭ್ರಮರಪಙ್ತ್ತಿಗಳಿಂದ ಆವೃತವಾದ ವನಮಾಲಿಕೆ! ಕಶ್ಯಪಾಶ್ರಮವೆಲ್ಲವನ್ನೂ ಬೆಳಗುವಂತಿರುವ ದಿವ ತೇಜಸ್ಸು ಕಂಠದಲ್ಲಿ ಕೌಸ್ತುಭಮಣಿ ! ಇಂತಹ ಅಸಾಧಾರಣಲಕ್ಷಣಗಳೊಡನೆಯೇ ಆ ಕಶ್ಯಪಾಶ್ರಮದಲ್ಲಿ ಕಾಣಿಸಿಕೊಂಡನು. ಹೀಗೆ ಭಗವಂತನು ಅದಿತಿಪುತ್ರನಾಗಿ ಅವತರಿಸಿದಾಗ ದಿಕ್ಕುಗಳೆಲ್ಲವೂ ಪ್ರಕಾಶಗೊಂಡುವು. ಸರೋವರಗಳೆಲ್ಲವೂ ಸ್ವಚ್ಛವಾದುವು. ಲೋಕದ ಸಮಸ್ತಪ್ರಜೆಗಳಿಗೂ ಅಪೂರ್ವವಾದ ಉತ್ಸಾಹವು ಹುಟ್ಟಿತು ಸಮಸ್ತಋತುಗಳೂ ತಮ್ಮತಮ್ಮ ಋತುಧರ್ಮವನ್ನು ಚೆನ್ನಾಗಿ ತೋರಿಸುತಿದ್ದುವು ಸ್ವರ್ಗಲೋಕವೂ, ಅಂತರಿಕ್ಷಕವೂ, ಭೂಮಿಯೂ, ಅಗ್ನಿಯೂ, ಬ್ರಾಹ್ಮಣರೂ, ಪರ್ವತಗಳೂ ಇವೆಲ್ಲವೂ ಸಂತೋಷಭರಿತವಾದುವು. ಶ್ರವಣನಕ್ಷತ್ರವಿಶಿಷ್ಟವಾದ ಭಾದ್ರಪದಶುದ್ಧದ್ವಾದಶೀದಿನದಲ್ಲಿ, ಅಭಿಜಿತ್ತೆಂಬ ಮುಹೂರ್ತದಲ್ಲಿ, ಸೂರ್ಯನು ಗಗನಮಧ್ಯವರ್ತಿಯಾಗಿದ್ದು, ಸಕಲಗ್ರಹನಕ್ಷತ್ರಗಳೂ ಪ್ರದಕ್ಷಿಣವಾಗಿ ಸುತ್ತುತ್ತಿರುವಾಗ, ಪರಮಪುರುಷನು ಅದಿತಿಯ ಗರ್ಭದಿಂದ ಜನಿಸಿದನು ಭಗವಂತ

ನು ಅವತರಿಸಿದ ಈ ದಿನವನ್ನೇ ವಿಜಯದ್ವಾದಶಿಯೆಂದು ಹೇಳುವರು. ಈ ಭಗವದವತಾರಕಾಲದಲ್ಲಿ, ಆಕಾಶದಲ್ಲಿ ದೇವತೆಗಳು ವಿಜಯಶಂಖವನ್ನು ಧ್ವನಿಮಾಡಿದರು. ದೇವದುಂದುಭಿಗಳು ಮೊಳಗಿದುವು ಮೃದಂಗ, ಪಣ ವ, ಮೊದಲಾದ ಮಂಗಳವಾದ್ಯಗಳು ನುಡಿಸಲ್ಪಟ್ಟುವು ಅಪ್ಸರಸಿಯರು ನರ್ತಿಸಿದರು ಗಂಧರ್ವರು ಗಾನಮಾಡಿದರು ಮಹರ್ಷಿಗಳು ಸಂತೋಷ ಭರಿತರಾದರು ದೇವತೆಗಳೂ, ಮನುಗಳೂ, ಪಿತೃದೇವತೆಗಳೂ, ಆನಂದ ವಿಶಿಷ್ಟರಾದರು ಸಿದ್ಧ, ವಿದ್ಯಾಧರ, ಚಾರಣ, ಕಿನ್ನರ, ಕಿಂಪುರುಷ, ಯಕ್ಷ ರಾಕ್ಷಸ, ಗರುಡ, ಪನ್ನಗರೇ ಮೊದಲಾದ ದೇವಜಾತಿಯವರೂ. ಅವರ ಅ ನುಚರರೂ,ಭಗವಂತನನ್ನು ಸ್ತುತಿಸುತ್ತ, ಅವನ ದಿವ್ಯಚರಿತ್ರಗಳನ್ನು ಕೀರ್ತಿ ಸಿ, ಆಟಪಾಟಗಳಿಂದ ತಮ್ಮ ಸಂತೋಷಸೂಚಕವಾದ ಉತ್ಸವಗಳ ನ್ನು ನಡೆಸಿದರು. ದೇವತೆಗಳು ಆ ಕಶ್ಯಪಾಶ್ರಮದಲ್ಲಿ ಪುಷ್ಪವರ್ಷವನ್ನು ಕರೆದರು ಅದಿತಿಯು ತನ್ನ ಗರ್ಭದಲ್ಲಿ ಜನಿಸಿದ ಆ ಪರಮಪುರುಷನನ್ನು ನೋಡಿ, ಆಶ್ಚರ್ಯಭರಿತಳಾಗಿ ಸಂತೋಷದಿಂದ ಮೈಮರೆತಿದ್ದಸಮಯ ದಲ್ಲಿ, ಶ್ರೀಹರಿಯು, ತನ್ನ ಆಶ್ಚರ್ಯಶಕ್ತಿಯಿಂದ, ಸಾಮಾನ್ಯಶಿಶುವಿನಂತೆ ಕಾಣಿಸಿಕೊಂಡನು. ಅವನ ನಾಲ್ಕು ಭುಜಗಳೂ, ಶಂಖಚಕ್ರಾದ್ಯಾಯುಧ ಗಳೂ ಅಗೋಚರವಾದುವು ಭಗವಂತನ ಈ ಮಾಯಾಪ್ರಭಾವವನ್ನು ನೋಡುತಿದ್ದ ಚತುರ್ಮುಖನು, ಆಶ್ಚರ್ಯದಿಂದ ಜಯಘೋಷವನ್ನುಮಾ ಡಿದನು. ಮೊದಲು ಅವತಾರಕಾಲದಲ್ಲಿ ಚತುರ್ಭುಜಗಳಿಂದಲೂ, ದಿವ್ಯಾ ಯುಧಗಳಿಂದಲೂ ಶೋಭಿಸುತಿದ್ದ ಪರಮಪುರುಷನು, ಆ ಆಶ್ರಮದಲ್ಲಿದ್ದ ವರೆಲ್ಲರೂ ಕಣ್ಣಿಟ್ಟು ನೋಡುತಿದ್ದಹಾಗೆಯೇ, ನಾಟಕದಲ್ಲಿ ತಟ್ಟನೆ ವೇಷ ವನ್ನು ಬದಲಾಯಿಸತಕ್ಕ ನಟನಂತೆ, ಒಂದು ಸಣ್ಣಗುಜ್ಜಾರಿಯ ಆಕಾರ ದಿಂದ ಕಾಣಿಸಿಕೊಂಡನು. ಮಹರ್ಷಿಗಳೆಲ್ಲರೂ ಸೇರಿ ಆ ಶಿಶುವಿಗೆ ಕಶ್ಯಪ ನಿಂದ ಜಾತಕರ್ಮವನ್ನು ಮಾಡಿಸಿದರು ಆಮೇಲೆ ಕಶ್ಯಪನು ಆ ಶಿಶುವಿಗೆ ಉಪನಯನಸಂಸ್ಕಾರವನ್ನೂ ನಡೆಸಿದನು ಆಗ ಸೂರ್ಯದೇವನೇ ಸಾಕ್ಷಾ ತ್ತಾಗಿ ಬಂದು ಆ ವಾಮನವಟುವಿಗೆ ಸಾವಿತ್ರೀಮಂತ್ರವನ್ನುಪದೇಶಿಸಿದನು ಬೃಹಸ್ಪತಿಯು ಆ ವಟುವಿಗೆ ಯಜ್ಞೋಪವೀತವನ್ನೂ, ಕಶ್ಯಪನು ಮೌಂಜಿ

ಯನ್ನೂ, ಭೂದೇವಿಯು ಕೃಷ್ಣಾಜಿನವನ್ನೂ, ಓಷಧೀಶ್ವರನಾದ ಚಂದ್ರನು ದಂಡವನ್ನೂ, ತಾಯಿಯಾದ ಅದಿತಿಯು ಕೌಪೀನವನ್ನೂ, ದ್ಯುದೇವತೆಯು, ಛತ್ರವನ್ನೂ, ಬ್ರಹ್ಮನು ಕಮಂಡಲುವನ್ನೂ, ಸಪ್ತರ್ಷಿಗಳು ದರ್ಭಪವಿತ್ರವನ್ನೂ, ಸರಸ್ವತಿಯು ಅಕ್ಷಮಾಲಿಕೆಯನ್ನೂ, ಕುಬೇರನು ಭಿಕ್ಷಾಪಾತ್ರವನ್ನೂ.ತಂದೊಪ್ಪಿಸಿದರು ಪಾರ್ವತೀದೇವಿಯು ಭಿಕ್ಷೆಯನ್ನಿಕ್ಕಿದಳು. ಹೀಗೆ ಎಲ್ಲಾ ಬ್ರಹ್ಮಚಾರಿಲಕ್ಷಣಗಳಿಂದಲೂ ಕೂಡಿದ ಆ ವಾಮನವಟುವು.ಅನೇಕ ಬ್ರಹ್ಮರ್ಷಿಗಳಿಂದ ಶೋಭಿತವಾದ ಆ ಸಭೆಯನ್ನೆಲ್ಲಾ ತನ್ನ ತೇಜಸ್ಸಿನಿಂದಲೇ ಬೆಳಗುತಿದ್ದನು. ಅಮೇಲೆ ಕಶ್ಯಪನು ಉಪನಯನಕಾಲದ ಹೋಮಾಗ್ನಿಯನ್ನು ಪ್ರತಿಷ್ಠಿಸಿ, ದರ್ಭಗಳಿಂದ ಮಂತ್ರಪೂರ್ವಕವಾಗಿ ಪರಿಸ್ತರಣವನ್ನಿಟ್ಟು, ಯಥೋಕ್ತವಾಗಿ ಅಗ್ನಿಯನ್ನು ಪೂಜಿಸಿ, ಹೋಮಕಾರ್ಯವನ್ನು ಮುಗಿಸಿದನು ವಾಮನನಿಗೆ ಈ ಉಪನಯನಸಂಸ್ಕಾರವು ಮುಗಿಯುವಷ್ಟರಲ್ಲಿ, ಅತ್ತಲಾಗಿ ಬಲಿಚಕ್ರವರ್ತಿಯು ತನ್ನ ಪುರೋಹಿತರಾದ ಶುಕ್ರಾಚಾರ್ಯರ ಸಹಾಯದಿಂದ ಅಶ್ವಮೇಧಯಾಗವನ್ನಾರಂಭಿಸಿದ್ದನು. ಆ ಬಲಿಚಕ್ರವರ್ತಿಯ ಕೀರ್ತಿಯು ಮೂರು ಲೋಕವನ್ನೂ ವ್ಯಾಪಿಸಿತು. ಇದನ್ನು ಕೇಳಿ ಮಹಾಬಲಾಢ್ಯನಾದ ವಾಮನನು, ಹೆಜ್ಜೆಹೆಜ್ಜೆಗೂ ಭೂಮಿಯನ್ನು ನಡುಗಿಸುವಂತೆ, ಕಶ್ಯಪಾಶ್ರಮದಿಂದ ಹೊರಟು, ಬಲಿಯ ಯಜ್ಞಶಾಲೆಗೆ ಬಂದು ಸೇರಿದನು ನರ್ಮದಾತೀರದಲ್ಲಿ ಭೃಗುವತ್ಸಕವೆಂಬ ಕ್ಷೇತ್ರದಲ್ಲಿ ಯಜ್ಞವು ನಡೆಯುತ್ತಿತ್ತು. ಸೂರ್ಯನಂತೆ ಮಹಾತೇಜಸ್ವಿಯಾದ ಈ ವಾಮನಬ್ರಹ್ಮಚಾರಿಯು, ಯಜ್ಞಶಾಲೆಗೆ ಪ್ರವೇಶಿಸುತ್ತಿರುವುದನ್ನು ಕಂಡು, ಅಲ್ಲಿ ನೆರೆದಿದ್ದ ಬ್ರಾಹ್ಮಣೋತ್ತಮರೂ, ಶುಕ್ರನೇ ಮೊದಲಾದ ಪುರೋಹಿತರೂ ಆಶ್ಚರ್ಯದಿಂದ ಬೆಚ್ಚರಬಿದ್ದರು ದಿವ್ಯತೇಜಸ್ಸುಳ್ಳ ವಾಮನಮೂರ್ತಿಯು ಮುಂದೆಮುಂದೆ ಬಂದಹಾಗೆಲ್ಲಾ ಇವನ ತೇಜಸ್ಸಿನಿಂದ ಅಲ್ಲಿದ್ದ ಮಹರ್ಷಿಗಳ, ಮತ್ತು ಬಲಿಚಕ್ರವರ್ತಿಯ ತೇಜಸ್ಸು ಮಾಸಿದಂತಾಯಿತು. ಶುಕ್ರಾದಿಗಳೆಲ್ಲರೂ ಅವನನ್ನು ನೋಡಿ "ಆಹಾ! ಇಲ್ಲಿಗೆ ಬರುತ್ತಿರುವ ಆ ಮಹಾತ್ಮನಾರು? ಸೂರ್ಯನೋ! ಅಗ್ನಿದೇವನೋ ಕಾಣೆವಲ್ಲಾ! ಅಥವಾ ನಮ್ಮ ಯಾಗವನ್ನು ನೋಡಬೇಕೆಂಬ ಕುತೂಹಲ

ದಿಂದ ಸನತ್ಕುಮಾರನೇ ಬರುತ್ತಿರಬಹುದೆ ? ಎಂದು ತಮ್ಮೊಳಗೆ ತಾವು ನಾನಾವಿಧವಾದ ಸಂದೇಹದಿಂದ ಮಾತಾಡಿಕೊಳ್ಳುತಿದ್ದರು. ಇಷ್ಟರಲ್ಲಿ ವಾಮನಮೂರ್ತಿಯೂ ಆ ಯಾಗಶಾಲೆಯೊಳಗೆ ಪ್ರವೇಶಿಸಿದನು ಆಗ ವಾಮನನಿಗಾದರೋ ಕೈಯಲ್ಲಿ ದಂಡಕಮಂಡಲುಗಳು ! ಕಕ್ಷದಲ್ಲಿ ಕೊಡೆ ! ನಡುವಿನಲ್ಲಿ ಮುಂಜಿ ! ಬೆನ್ನಮೇಲೆ ಕರೀಜಿಂಕೆಯ ತೊಗಲು! ಕಂಠದಲ್ಲಿ ಜನಿವಾರದ ಹುರಿ ! ತಲೆಯಲ್ಲಿ ಜಡೆ ! ಹೀಗೆ ಕಪಟಬ್ರಹ್ಮ ಚಾರಿವೇಷವನ್ನು ತಾಳಿದ ಪರಮಪುರುಷನು. ಯಜ್ಞಶಾಲೆಗೆ ಪ್ರವೇಶಿ ಸಿದೊಡನೆ, ಅಲ್ಲಿದ್ದ ಶುಕ್ರಾದಿಬ್ರಾಹ್ಮಣರೆಲ್ಲರೂ ಶಿಷ್ಯಸಹಿತರಾಗಿ ಥ ಟ್ಟನೆ ಮೇಲೆದ್ದುನಿಂತು, ಅವನನ್ನು ಗೌರವದಿಂದ ಬರಮಾಡಿಕೊಂಡರು.ಆ ಕಪಟಬ್ರಹ್ಮಚಾರಿಯು ಬಹಳ ಕುಳ್ಳನಾಗಿದ್ದರೂ, ಆಕಾರಕ್ಕೆ ತಕ್ಕ ಅವಯ ವಸನ್ನಿವೇಶಗಳಿಂದ ಅವನ ರೂಪವು ನೋಡುವವರಿಗೆ ಆಸೆಯನ್ನು ಹುಟ್ಟಿ ಸುವಂತಿದ್ದಿತು ಬಲಿಚಕ್ರವರ್ತಿಯೂಕೂಡ, ಇವನ ತೇಜಸ್ಸಿಗೂ, ಸೌಂ ದರ್ಯಕ್ಕೂ ಮರುಳಾಗಿ,ಅವನನ್ನಿದಿರುಗೊಂಡು ಬಂದು,ಕುಶಲಪ್ರಶ್ನವನ್ನು ಮಾಡಿ, ಅವನ ಪಾದಗಳನ್ನು ತೊಳೆದು, ಉಚಿತಾಸನವನ್ನು ಕೊಟ್ಟು ಕು ಳ್ಳಿರಿಸಿದನು ಸರ್ವಸಂಗಪರಿತ್ಯಾಗಮಾಡಿದ ಯೋಗಿಗಳಿಗೂ ಕೇವಲ ಜ್ಞಾನಗಮ್ಯನಾದ ಆ ಪರಮಪುರುಷನಿಗೆ, ತಾನು ಪ್ರತ್ಯಕ್ಷವಾಗಿ ಅತಿಥಿಪೂ ಜೆಯನ್ನೂ ನಡೆಸಿದನು ಬ್ರಹ್ಮರುದ್ರಾದಿದೇವತೆಗಳೂಕೂಡ,ಯಾವನ ಪಾ ದತೀರ್ಥವೆನಿಸಿಕೊಂಡ ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿ ಪವಿತ್ರರೆನಿಸಿಕೊಂ ಡರೋ, ಅಂತಹ ಪರಮೇಶ್ವರನ ಪಾದಗಳನ್ನು ಬಲಿಯು ತನ್ನ ಕೈಯಿಂದ ಲೇ ತೊಳೆದು, ಆ ಪಾದಜಲವನ್ನು ಭಕ್ತಿಯಿಂದ ತಲೆಗೆ ಪ್ರೋಕ್ಷಿಸಿಕೊಂಡ ನು ಈಬ್ರಾಹ್ಮಣಪೂಜೆಯಿಂದ ತನ್ನನ್ನು ಕೃತಾರ್ಥನನ್ನಾಗಿತಿಳಿದುಸಂತೋ ಷಿಸುತ್ತ, ಆ ಬ್ರಹ್ಮಚಾರಿಯನ್ನುಕುರಿತು ಹೀಗೆಂದು ಹೇಳುವನು “ ಓ ಬ್ರಾಹ್ಮಣೋತ್ತಮಾ!ನಿನಗೆ ವಂದನವು!ನೀನು ಯಜ್ಞಕಾಲಕ್ಕೆ ಇಲ್ಲಿಗೆ ಬಂ ದುದಕ್ಕಾಗಿ ನಾನು ಬಹಳ ಸಂತೋಷಪಟ್ಟೆನು. ನಾವು ನಿನ್ನ ಪಾದಕಿಂಕ ರರು ಈಗ ನಿನಗೆ ನನ್ನಿಂದ ಆಗಬೇಕಾದುದೇನು ? ನಿನ್ನನ್ನು ನೋಡಿದರೆ ಅನೇಕಬ್ರಹ್ಮರ್ಷಿಗಳ ತಪಶ್ಶಕ್ತಿಯೇ ಮೂರ್ತೀಭವಿಸಿ ಇಲ್ಲಿಗೆ ಬಂದಂತೆ




1524. ಭಗವಂತನು ವಾಮನರೂಪದಿಂದ ಬಲಿಯ ಯಜ್ಞವಾಟಿಕೆಗೆ
ಬಂದು ಮೂರಡಿಗಳ ನೆಲವನ್ನು ಯಾಚಿಸಿದುದು.

ತೋರುವುದು. ನೀನು ಮನೆಗೆ ಬಂದುದರಿಂದ ಈಗ ನಮ್ಮ ಪಿತೃದೇವತೆಗಳೆಲ್ಲರೂ ತೃಪ್ತರಾದರು. ನಮ್ಮ ಕುಲವೇ ಪಾವನವಾಯಿತು ನನ್ನ ಯಜ್ಞವೂ ಸಫಲವಾಯಿತು ನಮ್ಮ ಅಗ್ನಿಹೋತ್ರಗಳೂ ಸಾರ್ಥಕವಾದುವು. ನಿನ್ನ ಪಾದತೀರ್ಥಪ್ರೋಕ್ಷಣದಿಂದ ನನ್ನ ಜನ್ಮಾಂತರಪಾಪಗಳೆಲ್ಲವೂ ಕಳೆದುಹೋದುವು ನಿನ್ನ ಪಾದಸ್ಪರ್ಶದಿಂದ ಈ ಆಶ್ರಮಭೂಮಿಯೂ, ನನ್ನ ಶರೀರವೂ ಪಾವನವಾದುವು ಓ ಬ್ರಾಹ್ಮಣಕುಮಾರಾ! ನೀನು ಯಾವುದನ್ನೋ ಅಪೇಕ್ಷಿಸಿ ನಮ್ಮಲ್ಲಿಗೆ ಬಂದಹಾಗಿದೆ! ನಿನ್ನ ಕೋರಿಕೆಯೇನೆಂಬುದನ್ನು ನಿಸ್ಸಂಕೋಚವಾಗಿ ತಿಳಿಸು! ನಿನಗೆ ಬೇಕಾದುದೇನು? ಭೂಮಿಯೇ? ಗೋವುಗಳೆ? ಬಂಗಾರವೆ? ಯಾವುದು ಬೇಕಾಗಿದ್ದರೂ ಕೇಳಬಹುದು ನಿನಗೆ ವಾಸಮಾಡುವುದಕ್ಕಾಗಿ ಸಕಲವಸ್ತುಸಮೃದ್ಧವಾದ ಮನೆಯು ಬೇಕೆ? ಊಟಮಾಡುವುದಕ್ಕೆ ಷಡ್ರಸೋಪೇತವಾದ ಮೃಷ್ಟಾನ್ನವು ಬೇಕೆ? ವಿವಾಹಯೋಗ್ಯರಾದ ಕನ್ಯೆಯರು ಬೇಕೆ? ನಿನಗೆ ಬೇಕಾದುದನ್ನು ಕೇಳಬಹುದು! ಇಷ್ಟೇಅಲ್ಲ! ಆನೆಗಳನ್ನಾಗಲಿ, ಕುದುರೆಗಳನ್ನಾಗಲಿ, ರಥಗಳನ್ನಾಗಲಿ, ಸಸ್ಯಸಮೃದ್ಧಿಯುಳ್ಳ ಗ್ರಾಮಗಳನ್ನಾಗಲಿ, ಯಾವುದನ್ನಪೇಕ್ಷಿಸಿದರೂ ನಾನು ತಪ್ಪದೆ ಕೊಡುವೆನು. ನಿನಗೆ ಬೇಕಾದುದನ್ನು ನನ್ನಿಂದ ಕೇಳಿ ತೆಗೆದುಕೊಂಡು, ನನ್ನ ಮನಸ್ಸನ್ನು ಸಂತೋಷಪಡಿಸಬೇಕು" ಎಂದನು. ಇಲ್ಲಿಗೆ ಹದಿನೆಂಟನೆಯ ಅಧ್ಯಾಯವು.

---

**{ ವಾಮನನು ಬಲಿಯಲ್ಲಿ ಮೂರಡಿಯ ನೆಲವನ್ನು ಯಾಚಿಸಿದುದು. ಬಲಿಯು ಅದಕ್ಕೆ ಸಮ್ಮತಿಸುತಿದ್ದಾಗ, ಶುಕ್ರಾಚಾರ್ಯನು ಬೇಡವೆಂದು ತಡೆದುದು. }**

ಹೀಗೆ ಬಲಿಚಕ್ರವರ್ತಿಯು ಸತ್ಯವಾಗಿಯೂ, ಧರ್ಮಯುಕ್ತವಾಗಿಯೂ ಹೇಳಿದ ಮಾತನ್ನು ಕೇಳಿ ವಾಮನನು, ಅವನಿಂದ ಇನ್ನೂ ದೃಢವಾದ ವಾಗ್ದಾನವನ್ನು ತೆಗೆದುಕೊಳ್ಳಬೇಕೆಂಬ ಉದ್ದೇಶದಿಂದ, ಅವನನ್ನು ಮುಖಸ್ತುತಿಯಿಂದುಬ್ಬಿಸುತ್ತ ಹೀಗೆಂದು ಹೇಳುವನು. "ಓ ದಾನವೇಂದ್ರಾ! ನಿನ್ನ ಮಾತು ಧರ್ಮಯುಕ್ತವಾಗಿಯೂ, ಸತ್ಯವಾಗಿಯೂ, ಕೀರ್ತಿಕರವಾಗಿಯೂ ಇರುವುದು ನೀನು ನಿನ್ನ ಕುಲಕ್ಕೆ ತಕ್ಕಮಾತನ್ನೇ ಆಡಿದೆ! ಕುಲ

ವೃದ್ಧನೂ, ಶಾಂತನೂ ಆದ ನಿನ್ನ ತಾತನಾದ ಪ್ರಹ್ಲಾದನು ಪರ ಲೋಕಸಾಧನಗಳಾದ ಧರ್ಮಗಳನ್ನು ನಿರ್ಣಯಿಸುವುದರಲ್ಲಿ ಲೋಕಕ್ಕೆ ತಾನೇ ಮುಖ್ಯಪ್ರಮಾಣವಾಗಿರುವನು ಆ ಕುಲದಲ್ಲಿ ಹುಟ್ಟಿದ ನಿನಗೆ ಈ ಮಾತು ಯುಕ್ತವಾಗಿಯೇ ಇರುವುದು ಓ ರಾಜಾ ! ನಿನ್ನ ಕುಲ ದಲ್ಲಿ ಬಲಹೀನನಾಗಲಿ, ಕೃಪಣಬುದ್ಧಿಯುಳ್ಳವನಾಗಲಿ ಇದುವರೆಗೆ ಹು ಟ್ಟಿದುದಿಲ್ಲ. ಮುಂದೆಯೂ ಹುಟ್ಟಲಾರನು. ಈಗ ನೀನೂ ಅದಕ್ಕೆ ತಕ್ಕಂತೆ ನಡೆಯುತ್ತಿರುವುದೇನಾಶ್ಚರ್ಯವು ? ನಮ್ಮಂತಹ ಬ್ರಾಹ್ಮಣರಿಗೆ ವಾಗ್ದಾನಮಾಡಿದುದನ್ನು ಕೊಡಲಾರದೆ ತಿರಸ್ಕರಿಸತಕ್ಕ ದುರ್ಬಲರು, ನಿ ಮ್ಮ ಕುಲದಲ್ಲಿ ಹುಟ್ಟಲೇಬಾರದು ದಾನಕಾಲದಲ್ಲಿ ಯಾಚನಾರ್ಥವಾಗಿ ಬಂ ದ ಯಾಚಕರಿಗೂ, ಯುದ್ಧಕಾಲದಲ್ಲಿ ಇದಿರಾಗಿ ನಿಂತ ವೀರರಿಗೂ ಎದೆ ಗೊಟ್ಟು ನಿಲ್ಲಲಾರದೆ, ಹೆದರಿ ಹಿಂದೆ ಬೀಳತಕ್ಕ ಹೇಡಿಗಳು ನಿಮ್ಮ ವಂಶದ ಲ್ಲಿಯೇ ಹುಟ್ಟಿದುದಿಲ್ಲ ಆಕಾಶದಲ್ಲಿ ಚಂದ್ರನಂತೆ ಯಾವ ಕುಲದಲ್ಲಿ ಮ ಹಾತ್ಮನಾದ ಪ್ರಹ್ಲಾದನು ಜನಿಸಿ, ನಿರ್ಮಲವಾದ ತನ್ನ ಕೀರ್ತಿಯಿಂದ ಲೋಕವನ್ನು ಬೆಳಗುತ್ತಿರುವನೋ, ಆ ನಿನ್ನ ಕುಲದ ಮಹಿಮೆಯನ್ನು ಹೇ ಳಬೇಕಾದುದೇನು ? ದಾನವೀರರನ್ನಾಗಲಿ, ಯುದ್ಧವೀರರನ್ನಾಗಲಿ ನಿ ಮ್ಮ ವಂಶದಿಂದಲೇ ಹುಡುಕಿ ತೆಗೆಯಬೇಕು. ನಿನ್ನ ಮುತ್ತಾತಂದಿರಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳ ವೀರ್ಯವು ಲೋಕಪ್ರಸಿದ್ಧವಾದುದಲ್ಲವೆ? ಹಿಂ ದೆ ಹಿರಣ್ಯಾಕ್ಷನು ಗದಾಪಾಣಿಯಾಗಿ ಹೊರಟು, ಸಮಸ್ತ ದಿಕ್ಕುಗಳ ನ್ನೂ ಜಯಿಸಿದಮೇಲೆ, ತನಗೆ ಸಮಾನರಾದ ವೀರರನ್ನು ಯುದ್ಧಕ್ಕಾಗಿ ಹುಡುಕುತ್ತ ಭೂಮಂಡಲವೆಲ್ಲವನ್ನೂ ತಿರುಗಿ ಬಂದರೂ,ಅವನಿಗಿದಿರಾಗಿನಿಲ್ಲ ತಕ್ಕ ವೀರನೊಬ್ಬನೂ ದೊರಕಲಿಲ್ಲ ಕೊನೆಗೆ ಸಾಕ್ಷಾತ್ಪರಮಪುರುಷನೇ ಕಪ ಟ ವರಾಹರೂಪವನ್ನು ಧರಿಸಿ, ಎಷ್ಟೋ ಕಷ್ಟದಿಂದ ಅವನನ್ನು ಜಯಿಸಿ,ಅವ ನಿಂದಪಹೃತವಾದ ಭೂಮಿಯನ್ನುದ್ಧರಿಸಬೇಕಾಯಿತಲ್ಲವೆ? ಅದೂ ಹಾಗಿ ರಲಿ ! ನಿನ್ನ ಮುತ್ತಜ್ಜನಾದ ಹಿರಣ್ಯಕಶಿಪುವಿನ ಸಾಮರ್ಥ್ಯವನ್ನೂ ಕೇಳಿಬ ಲ್ಲೆಯಷ್ಟೆ? ಹಿರಣ್ಯಾಕ್ಷನ ಮರಣವನ್ನು ಕೇಳಿದೊಡನೆ, ಆ ಹಿರಣ್ಯಕಶಿ ಪುವು, ಕೋಪೋದ್ದೀಪಿತನಾಗಿ, ತನ್ನ ತಮ್ಮನನ್ನು ಕೊಂದ ಆ ಶ್ರೀಹರಿ

ಯನ್ನು ಕೊಲ್ಲುವುದಕ್ಕಾಗಿ, ಆತನಿಗೆ ನಿವಾಸಸ್ಥಾನವಾದ ವೈಕುಂಠಕ್ಕೆ ಹೋದನು ಹೀಗೆ ಹಿರಣ್ಯಕಶಿಪುವು, ಪ್ರಳಯಕಾಲದ ಯಮನಂತೆ ಶೂಲ ವನ್ನು ಹಿಡಿದು ತನಗಿದಿರಾಗಿ ಬರುತ್ತಿರುವುದನ್ನು ಕಂಡೊಡನೆ, ಕಾಲಜ್ಞ ನಾಗಿಯೂ, ಮಾಯಾವಿಯಾಗಿಯೂ ಇರುವ ಶ್ರೀಮಹಾವಿಷ್ಣುವು, ತ ನ್ನೊಳಗೆ ತಾನು ಮನಸ್ಸಿನಲ್ಲಿ "ಅಹಾ! ಈತನಾದರೋ, ನಾನು ಎಲ್ಲೆಲ್ಲಿ ಗೆ ಹೋದರೂ ಅಲ್ಲಲ್ಲಿಗೆ ನನ್ನನ್ನು ಹಿಂಬಾಲಿಸಿ ಬಂದು, ಅಲ್ಲಲ್ಲಿ ಕಣ್ಣಿಗೆ ಕಂ ಡಪ್ರಾಣಿಗಳನ್ನೆಲ್ಲಾ ಮೃತ್ಯುವಿನಂತೆ ಕೊಲ್ಲುತ್ತಿರುವನು. ಇದರಿಂದ ಲೋ ಕಕ್ಕೆ ಬಹಳ ಹಾನಿಯುಂಟಾಗುವುದು. ಆದುದರಿಂದ ಇನ್ನುಮೇಲೆ ನಾನು ಹೊರಕ್ಕೆ ಕಾಣಿಸದಂತೆ ಇವನ ಹೃದಯದಲ್ಲಿಯೇ ಪ್ರವೇಶಿಸಿಬಿಡುವೆನು." ಎಂದು ನಿಶ್ಚಯಿಸಿಕೊಂಡು, ಆ ಹಿರಣ್ಯಕಶಿಪುವಿನ ಶರೀರದಲ್ಲಿ ಪ್ರವೇಶಿಸಿದ ನು. 'ಹೃದಯದಲ್ಲಿದ್ದರೂ 'ಅವನು ತನ್ನನ್ನು ಕಂಡು ಹಿಡಿಯುವನೆಂಬ ಭಯದಿಂದ, ಅತಿಸೂಕ್ಷ್ಮರೂಪವನ್ನು ತಾಳಿ,ಅವನ ನಿಟ್ಟುಸಿರಿನ ಗಾಳಿಯೊ ಡನೆ ಕಲೆತು, ಅವನ ಮೂಗಿನ ರಂಧ್ರಗಳಲ್ಲಿ ಹೊರಡುವ ಉಛ್ವಾಸನಿಶ್ವಾ ಸಗಳಲ್ಲಿ ಬಹುಕಾಲದವರೆಗೆ ತೂಗಾಡುತ್ತ, ತಾನೂ ಅಲ್ಲಿನ ವಾಯುವಿ ನೊಡನೆ ವಾಯುವಾಗಿದ್ದನು. ಇದನ್ನು ತಿಳಿಯದೆ ಹಿರಣ್ಯಕಶಿಪುವು, ಜನ ಶೂನ್ಯವಾದ ವೈಕುಂಠವನ್ನು ಸುತ್ತಿಸುತ್ತಿ ನೋಡಿದನು. ಎಲ್ಲೆಲ್ಲಿ ಹುಡು ಕಿದರೂ ವಿಷ್ಣುವನ್ನು ಕಾಣದೆ, ತಾನು ಜಯಿಸಿದಂತಾಯಿತೆಂಬ ಹೆಮ್ಮೆ ಯಿಂದ ಸಿಂಹನಾದವನ್ನು ಮಾಡಿದನು. ಮತ್ತು ಸ್ವರ್ಗಮರ್ತ್ಯಪಾ ತಾಳಗಳನ್ನೂ, ದಿಕ್ಕುಗಳನ್ನೂ, ಅಂತರಿಕ್ಷವನ್ನೂ, ಸಪ್ತಸಮುದ್ರಗಳ ನ್ನೂ, ಪಾತಾಳರಂಧ್ರಗಳನ್ನೂ ಸುತ್ತಿಸುತ್ತಿ ಹುಡುಕಿ, ಎಲ್ಲಿಯೂ ಆ ವಿ ಷ್ಣುವನ್ನು ಕಾಣದೆಹೋದಮೇಲೆ, ತನ್ನಲ್ಲಿ ತಾನು ಹೀಗೆಂದು ಯೋಚಿಸಿ ದನು. "ಅಹಾ! ನನ್ನ ತಮ್ಮನನ್ನು ಕೊಂದ ಆ ವಿಷ್ಣುವಿಗಾಗಿ ನಾನು ತ್ರೈಲೋಕ್ಯವನ್ನೂ ಸುತ್ತಿದೆನು ಎಲ್ಲಿಯೂ ಅವನು ನನ್ನ ಕಣ್ಣಿಗೆ ಬೀಳಲಿಲ್ಲ. ಅವನ ಸುಳಿವೇ ಇಲ್ಲದುದರಿಂದ, ಅವನು ಮೃತನಾಗಿ ಯೇ ಇರಬೇಕು ಸತ್ತವನಮೇಲೆ ವೈರವನ್ನಿಟ್ಟು ಫಲವೇನು? ಲೋಕದ ಲ್ಲಿ ಒಬ್ಬರಮೇಲೆ ಮತ್ತೊಬ್ಬರಿಗೆ ಹುಟ್ಟುವ ಕ್ರೋಧ, ದ್ವೇಷ, ಅಸೂಯೆ

ಮುಂತಾದುವೆಲ್ಲವೂ, ಅವರಲ್ಲಿ ಯಾರಾದರೂ ಒಬ್ಬರು ಸಾಯುವವರೆಗೆ ಮಾತ್ರವೇ ಅನುಸರಿಸಿಬರುವುವೇ ಹೊರತು,ಅದರಿಂದಾಚೆಗೆ ಅವು ತನಗೆ ತಾನೇ ಬಿಟ್ಟುಹೋಗುವುವು ಆದುದರಿಂದ ಈ ಕ್ರೋಧದ್ವೇಷಾದಿಗಳೆಲ್ಲವೂ ದೇಹಾಭಿಮಾನದಿಂದುಂಟಾಗುವ ಅಜ್ಞಾನದ ಕಾರ್ಯವಲ್ಲದೆ ಬೇರೆಯಲ್ಲ. ದೇಹವು ನಷ್ಟವಾದಮೇಲೆ ದ್ವೇಷಾಸೂಯೆಗಳೂ ಬಿಟ್ಟುಹೋಗುವುವು ಇದರಿಂದಲೇ ಆತ್ಮಸ್ವರೂಪವನ್ನು ತಿಳಿದವರಿಗೆ ಈ ದ್ವೇಷಬುದ್ಧಿಯೇ ಹುಟ್ಟದು ಈ ವೈರಬುದ್ಧಿಯೆಲ್ಲವೂ ದೇಹಾವಸಾನದವರೆಗೇಹೊರತು, ಸತ್ತಮೇಲೆ ಯಾರಿಗೆ ಯಾರೊಡನೆ ದ್ವೇಷವು? ಹುಟ್ಟೇ ಇಲ್ಲದಂತೆ ತಲೆತಪ್ಪಿಸಿಕೊಂಡು ಹೋದ ವಿಷ್ಣುವಿನಲ್ಲಿ ಇನ್ನು ನನಗೆ ದ್ವೇಷವೇಕ" ! ಎಂದು ತನಗೆತಾನೇ ಕೋಪವನ್ನಡಗಿಸಿಕೊಂಡನು ರಾಜೇಂದ್ರಾ!ಹೀಗೆಮಹಾವಿಷ್ಣುವಿಗೂಭಯವನ್ನುಂಟುಮಾಡಿ, ಅವನನ್ನು ತನ್ನ ಉಸಿರಿನ ಗಾಳಿಯಲ್ಲಿ ಅಡಗಿರುವಹಾಗೆ ಮಾಡಿದ ನಿನ್ನ ಮುತ್ತಾತನ ಪರಾಕ್ರಮವನ್ನು ನೀನೂ ಕೇಳಿರಬಹುದಲ್ಲವೆ? ಹೀಗೆಯೇ ನಿನ್ನ ತಂದೆಯಾದ ವಿರೋಚನನೂ, ವಿಷ್ಣುಭಕ್ತನಾಗಿ ತನ್ನಲ್ಲಿಗೆ ಬ್ರಾಹ್ಮಣವೇಷದಿಂದ ದೇವತೆಗಳು ಯಾಚನಾರ್ಥವಾಗಿ ಬಂದಾಗ, ಅವರು ವೇಷಧಾರಿಗಳೆಂಬುದನ್ನು ತಿಳಿದೂ,ತನ್ನ ತಂದೆತಾತಂದಿರ ನಡತೆಯನ್ನೇ ಅನುವರ್ತಿಸುತ್ತ, ತನ್ನ ಆಯುಸ್ಸನ್ನೇ ಅವರಿಗೆ ಒಪ್ಪಿಸಿಬಿಟ್ಟನು ಹೀಗೆ ಔದಾರ್ಯಕ್ಕೂ, ವೀರ್ಯಕ್ಕೂ ಪ್ರಸಿದ್ಧಿಹೊಂದಿದ ಕುಲದಲ್ಲಿ ಹುಟ್ಟಿರುವ ನೀನು, ನಮ್ಮಂತಹ ಯಾಚಕರನ್ನು ಸಂತೋಷಪಡಿಸುವುದೇನಾಶ್ಚರ್ಯವು ? ಮಹಾತ್ಮರಾದ ಆ ನಿನ್ನ ಪೂರ್ವಜರಿಂದಲೂ, ಮಹಾಧೀಮಂತರಾದ ಶುಕ್ರಾದಿಗಳಿಂದಲೂ ನಡೆಸಲ್ಪಟ್ಟ ಧರ್ಮಗಳೆಲ್ಲವನ್ನೂ ನೀನು ನಡೆಸುತ್ತಿರುವೆ. ದಾತೃಗಳಲ್ಲಿ ನಿನ್ನ ಹೆಸರನ್ನೇ ಮೊದಲು ಹೇಳಬೇಕು ಈಗ ನಾನು ನಿನ್ನಲ್ಲಿ ಒಂದನ್ನುಮಾತ್ರ ಯಾಚಿಸುವೆನು. ನನ್ನ ಕಾಲಳತೆಯಲ್ಲಿ ಮೂರಡಿಗಳ ನೆಲವನ್ನುಮಾತ್ರ ನನಗೆ ಕೊಡು! ಇದಕ್ಕೆಮೇಲೆ ನಾನು ಆಸೆಪಡತಕ್ಕವನಲ್ಲ ನೀನಾಗಿ ಕೊಟ್ಟರೂ ನಾನು ಅಂಗೀಕರಿಸತಕ್ಕವನಲ್ಲ ನೀನು ಜಗದೀಶ್ವರನೆನಿಸಿಕೊಂಡು ಕೇಳಿದುದೆಲ್ಲವನ್ನೂ ಕೊಡತಕ್ಕ ದಾತನಾಗಿದ್ದರೂ ನಾನು ನಿನ್ನಲ್ಲಿ ಕೋರಬೇಕಾದುದಿಷ್ಟೇ ? ಲೋಕದಲ್ಲಿ ಪಂಡಿತನು

ತನಗೆ ಉಪಯುಕ್ತವಾದ ಪಧಾರ್ಥಗಳನ್ನುಮಾತ್ರವೇ ಯಾಚಿಸಿ ತೆಗೆಯ
ಬಹುದು ಅದನ್ನು ತೆಗೆಯುವುದರಿಂದ ಪಾಪಕ್ಕೂ ಗುರಿಯಾಗಲಾರನು.
ಅವಶ್ಯವಾಗಿ ತನಗೆ ಬೇಕಾದುದಕ್ಕಿಂತಲೂ ಅಧಿಕವಾಗಿ ಅಪೇಕ್ಷಿಸತಕ್ಕವನು
ಲೋಭಿಯೆನಿಸಿಕೊಂಡು,ಪಾಪಕ್ಕೂ ಗುರಿಯಾಗುವನು ಆದುದರಿಂದ ನೀನು
ದಯವಿಟ್ಟು ನಾನು ಕೇಳಿದುದನ್ನುಮಾತ್ರ ಕೊಟ್ಟರೆ ಸಾಕು" ಎಂದನು.
ಇದನ್ನು ಕೇಳಿ ಬಲಿಯು ಆಶ್ಚರ್ಯಪಡುತ್ತ, "ಓ ಬ್ರಾಹ್ಮಣಕುಮಾರಾ !
ನೀನು ಹೇಳಿದ ಮಾತುಗಳೇನೋ ವೃದ್ಧಸಮ್ಮತವಾದುವು.ಆದರೇನು?ನೀನು
ಅರಿಯದ ಬಾಲನಾದುದರಿಂದ, ನಿನ್ನ ಸ್ವಪ್ರಯೋಜನವನ್ನೇ ನೀನು
ತಿಳಿದಂತೆ ತೋರುವುದಿಲ್ಲ ಲೋಕೈಕನಾಥನಾಗಿ, ಈ ಜಂಬೂದ್ವೀಪದಂ
ತಿರುವ ದ್ವೀಪವನ್ನೆ ಯಾಚಕರಿಗೆ ಸಂತೋಷಪೂರ್ವಕವಾಗಿ ಧಾರೆಯೆರೆದು
ಕೊಡತಕ್ಕ ಉದಾರಬುದ್ಧಿಯುಳ್ಳ ನನ್ನಬಳಿಗೆ ಬಂದು, ಮಧುರವಾಕ್ಯಗಳಿಂ
ದ ನನ್ನನ್ನು ಸಂತೋಷಪಡಿಸಿಯೂ ನೀನು, ಮೂರಡಿಗಳ ನೆಲವನ್ನುಮಾತ್ರ
ಯಾಚಿಸಿದೆಯಲ್ಲವೆ? ಅಯ್ಯೋ! ಇನ್ನೂ ನೀನು ಬಾಲನು! ಆದರೆ ನನ್ನ
ದೊಂದು ಪ್ರತಿಜ್ಞೆಯುಂಟು ಬಲ್ಲೆಯಾ? ನನ್ನನ್ನು ಯಾಚಿಸಿದವರು
ಅವರವರಿಗೆ ಬೇಕಾದುದನ್ನ ಯಥೇಷ್ಟವಾಗಿ ನನ್ನಲ್ಲಿಯೇ ಪಡೆದುಕೊಳ್ಳ
ಬೇಕೇಹೊರತು, ನನ್ನ ಮನೆಯಿಂದ ಅತೃಪ್ತರಾಗಿ ಹೋಗಿ, ಬೇರೊ
ಬ್ಬರನ್ನು ಯಾಚಿಸಬಾರದು. ಆದುದರಿಂದ ನೀನು ಯಥೇಷ್ಟವಾಗಿ ನಿನ್ನ
ಜೀವನಕ್ಕೆ ಬೇಕಾದಷ್ಟು ಭೂಮಿಯನ್ನು ಕೇಳು ಕೊಡುವೆನು." ಎಂದನು.
ಅದಕ್ಕಾ ವಾಮನನು "ಓ, ರಾಜೇಂದ್ರಾ! ಲೋಕದಲ್ಲಿ, ಆಸೆಗೆ ಪಾರವುಂ
ಟೆ? ತ್ರೈಲೋಕ್ಯವನ್ನೂ ಧಾರೆಯೆರೆದು ಕೊಟ್ಟರೂ, ಪೇರಾಸೆಯುಳ್ಳ
ವನಿಗೆ ಅದು ತೃಪ್ತಿಯನ್ನುಂಟುಮಾಡಲಾರದು ಮೂರಡಿಗಳ ನೆಲದ
ಲ್ಲಿ ತೃಪ್ತಿಯಿಲ್ಲದವನಿಗೆ ನವಖಂಡಗಳಿಂದ ಕೂಡಿದ ಜಂಬೂದ್ವೀಪದಿಂದ
ಲೂ ತೃಪ್ತಿಯುಂಟಾಗದು ಜಂಬೂದ್ವೀಪವು ಲಭಿಸಿದಮೇಲೆ ಸಪ್ತದ್ವೀ
ಪಗಳೂ ತನ್ನ ವಶವಾಗಬೇಕೆಂಬ ಆಸೆಯುಂಟಾಗುವುದು ಪೃಥು ಮೊದ
ಲಾದ ರಾಜಶ್ರೇಷ್ಠರೂಕೂಡ ಸಪ್ತದ್ವೀಪಗಳೂ ತಮ್ಮ ಕೈವಶವಾಗಿದ್ದ
ರೂ ತೃಪ್ತಿಯಿಲ್ಲದಿದ್ದರೆಂದು ಕೇಳಿರುವೆನು. ಆದುದರಿಂದ ಆಸೆಗೆ

ಪಾರವಿಲ್ಲ. ಪೇರಾಸೆಯಿದ್ದವನಿಗೆ ಎಂದಿಗೂ ಸುಖವಿಲ್ಲ ಪಂಡಿತರು ದೈವ
ಲಬ್ಧವಾದುದದರಲ್ಲಿಯೇ ತೃಪ್ತಿಹೊಂದಿ ಸುಖಿಸುವರು. ಇಂದ್ರಿಯಗಳನ್ನು
ಜಯಿಸಲಾರದ ಅಜ್ಞನಾದರೋ, ತ್ರೈಲೋಕ್ಯವೂ ತನಗೆ ಲಭಿಸಿದರೂ,
ತೃಪ್ತಿಯಿಲ್ಲದೆ ಕೊರಗುವನು ಅರ್ಥಕಾಮಗಳಲ್ಲಿ ಅತೃಪ್ತಿಯೇ ಪುರುಷನನ್ನು
ಸಂಸಾರದಲ್ಲಿ ಕಟ್ಟಿಡುವುದು. ತೃಪ್ತಿಯೇ ಅವನ ಮುಕ್ತಿಗೆ ಕಾರಣವು. ತೃ
ಪ್ತನಾದ ಬ್ರಾಹ್ಮಣನಿಗೆ ಬ್ರಹ್ಮತೇಜಸ್ಸು ವೃದ್ಧಿಹೊಂದುವುದು. ಅತೃ
ಪ್ತನಾದ ಬ್ರಾಹ್ಮಣನ ತೇಜಸ್ಸು, ಜಲದಿಂದ ಅಗ್ನಿಯು ಹೇಗೋಹಾಗೆ ನಶಿ
ಸುವುದು ಆದುದರಿಂದ ಓ ದೈತ್ಯೇಂದ್ರಾ! ನನಗೆ ಮೂರಡಿಗಳ ಭೂಮಿ
ಯೇ ಸಾಕು! ಅಷ್ಟರಿಂದಲೇ ನಾನು ಕೃತಾರ್ಥನು! ತನ್ನ ಉಪ
ಯೋಗಕ್ಕೆ ಬೇಕಾದಷ್ಟು ಧನವಿದ್ದರೆಮಾತ್ರವೇ ಮನುಷ್ಯನಿಗೆ ಸುಖವುಂಟೇ
ಹೊರತು, ಅದಕ್ಕಿಂತಲೂ ಅಧಿಕವಾಗಿದ್ದರೆ ದುಃಖಕ್ಕೆ ಕಾರಣವಾಗುವು
ದು"ಎಂದನು ಈ ಮಾತಿಗೆ ಬಲಿಚಕ್ರವರ್ತಿಯು ನಗುತ್ತ "ಓ ಬ್ರಾಹ್ಮಣಾ!
ಹಾಗಿದ್ದರೆ ನೀನು ಕೇಳಿದಷ್ಟನ್ನೇ ಕೊಡುವೆನು ಸ್ವೀಕರಿಸು" ಎಂದು ಹೇಳಿ
ವಾಮನನಿಗೆ ಭೂಮಿಯನ್ನು ಧಾರೆಯೆರೆಯುವುದಕ್ಕಾಗಿ ಜಲಪಾತ್ರವನ್ನು ಕೈ
ಗೆತ್ತಿಕೊಂಡನು ಇಷ್ಟರಲ್ಲಿ ಕಾಲಜ್ಞನಾದ ಶುಕ್ರಾಚಾರ್ಯನು, ಬಲಿಯ
ಪ್ರಯತ್ನವನ್ನು ತಿಳಿದು ಥಟ್ಟನೆ ಮುಂದೆ ಬಂದು "ಓ ರಾಜಾ! ಮೋಸ
ಹೋಗಬೇಡ! ಇವನು ನಿಜವಾದ ಬ್ರಹ್ಮಚಾರಿಯಲ್ಲ! ಇವನು ಸಾಕ್ಷಾನ್ಮಹಾ
ವಿಷ್ಣುಮೂರ್ತಿಯು. ವಿಷ್ಣುವೇ ಕಶ್ಯಪಕುಮಾರನಾಗಿ ಅದಿತಿಯಗರ್ಭ
ದಲ್ಲಿ ಹುಟ್ಟಿ, ದೇವತೆಗಳ ಕಾರ್ಯವನ್ನು ಸಾಧಿಸುವುದಕ್ಕಾಗಿ ಈ ವೇಷದಿಂದ
ಇಲ್ಲಿಗೆ ಬಂದಿರುವನು ನೀನು ಮುಂದಾಲೋಚನೆಯಿಲ್ಲದೆ ಇವನಿಗೆ ಭೂಮಿ
ಯನ್ನು ಕೊಡುವುದಾಗಿ ವಾಗ್ದಾನಮಾಡಿದುದೇ ಯುಕ್ತವಲ್ಲ ಇದ
ರಿಂದ ಮುಂದೆ ದೈತ್ಯರಿಗೆ ದೊಡ್ಡ ಅನರ್ಥವುಂಟಾಗುವುದು. ನಿನ್ನ
ಐಶ್ವರ್ಯವನ್ನೂ, ರಾಜ್ಯವನ್ನೂ, ಕೀರ್ತಿಯನ್ನೂ ಯಶಸ್ಸನ್ನೂ ಉಪಾಯ
ದಿಂದ ಕಿತ್ತು, ಇಂದ್ರನಿಗೆ ಕೊಡಬೇಕೆಂದು ಬಂದ ವಿಷ್ಣುವೇಹೊರತು
ಇವನು ಬ್ರಹ್ಮಚಾರಿಯಲ್ಲ. ಇವನು ಈಗ ತನ್ನ ಮೂರಡಿಗಳಿಂದಲೇ ಮೂ
ರುಲೋಕವನ್ನೂ ಆಕ್ರಮಿಸುವನೆಂದು ತಿಳಿ! "ಹಾಗಿದ್ದರೂ ನನಗೆ ಇಷ್ಟ

ವೇ” ಎಂದು ಹೇಳುವೆಯಾ? ಓ ಮೂಢಾ! ನಿನ್ನ ಸರ್ವಸ್ವವನ್ನೂ ವಿಷ್ಣುವಿಗೆ ಕೊಟ್ಟಮೇಲೆ, ನೀನು ಬದುಕುವ ಬಗೆಯೇನು? “ಕೊಟ್ಟ ಮಾತಿಗೆ ತಪ್ಪಬಹುದೆ” ಎಂದು ಕೇಳುವೆಯೇನು? ಹೇಗಿದ್ದರೂ ನೀನು ನಿನ್ನ ಪ್ರತಿಜ್ಞೆಯನ್ನು ನಡೆಸಿಕೊಡಲಾರೆ? ಹೇಗೆಂದು ಕೇಳುವೆಯಾ? ಇವನು ಒಂದಡಿಯಿಂದ ಭೂಮಿಯನ್ನೂ, ಮತ್ತೊಂದಡಿಯಿಂದ ಸ್ವರ್ಗವನ್ನೂ ಅಳೆದು ತನ್ನ ವಶಮಾಡಿಕೊಂಡು, ಮೂರನೆಯ ಹಜ್ಜೆಗೆ ನೆಲವನ್ನು ಕೊಡೆಂದು ನಿರ್ಬಂಧಿಸುವನು. ಆಗ ನೀನು ಎಲ್ಲಿಂದ ಕೊಡಬಲ್ಲೆ? ಕೊಡದಿದ್ದಪಕ್ಷದಲ್ಲಿ ನಿನ್ನ ಪ್ರತಿಜ್ಞೆಯು ನೆರವೇರುವುದು ಹೇಗೆ? ಆಗಲೂ ನಿನಗೆ ಪ್ರತಿಜ್ಞಾಭಂಗದಿಂದುಂಟಾದ ನರಕವು ತಪ್ಪುವುದಿಲ್ಲವಷ್ಟೆ? ಈ ಸಂದರ್ಭದಲ್ಲಿ ನೀನು, ಈತನಿಗೆ ಕೊಡಬೇಕಾದುದನ್ನೂ ಕೊಡದೆ, ಕಷ್ಟಕ್ಕೂ ಗುರಿಯಾಗುವೆಯಲ್ಲವೆ? ಯಾಚಕರ ಕೋರಿಕೆಯನ್ನು ಈಡೇರಿಸುವುದರಿಂದ ಉತ್ತಮಕೀರ್ತಿಯನ್ನು ಸಂಪಾದಿಸಬಹುದೆಂಬ ಮಾತೇನೋ ಸತ್ಯವು! ಆದರೆ ತನ್ನ ಜೀವನಕ್ಕೆ ಭಂಗವನ್ನುಂಟುಮಾಡತಕ್ಕ ದಾನವು ಪ್ರಶಸ್ತವಲ್ಲವೆಂದು ಹಿರಿಯರು ಹೇಳುವರು. ಮೊದಲು ತನ್ನ ಜೀವನವನ್ನು ಸ್ಥಿರಪಡಿಸಿಕೊಂಡೇ, ಆಮೇಲೆ ದಾನಾದಿಗಳನ್ನು ಮಾಡಬೇಕು. ಹಾಗೆ ನಡೆಸಿದಾಗಲೇ ಯಜ್ಞ, ದಾನ, ತಪಸ್ಸು ಮುಂತಾದುವೆಲ್ಲವೂ ಧರ್ಮಸಮ್ಮತವಾಗುವುವು. ತನ್ನ ಜೀವನವ್ಯಾಪಾರವನ್ನು ಕೆಡಿಸಿಕೊಂಡು ನಡೆಸತಕ್ಕ ದಾನಾದಿಗಳು ಧರ್ಮಸಮ್ಮತಗಳಲ್ಲ. ವಿದ್ವಾಂಸನು ತನ್ನ ಹಣವನ್ನು ಐದುಭಾಗಮಾಡಿ, ಧರ್ಮಾರ್ಜನೆಗೂ, ಕೀರ್ತಿಗೂ, ಅರ್ಥಕ್ಕೂ, ಭೋಗಕ್ಕೂ, ತನ್ನ ಮಕ್ಕಳಿಗೂ ಸಮವಾಗಿ ಹಂಚಬೇಕು ಇದರಿಂದ ಇಹಪರಲೋಕಗಳೆರಡರಲ್ಲಿಯೂ ಕ್ಷೇಮವುಂಟು. ನೀನೂ ಹಾಗೆ ಮಾಡಬೇಕಾದುದೇ ಯುಕ್ತವು ಹಾಗಿಲ್ಲದೆ ಈಗ ನೀನು ಕೀರ್ತಿಯನ್ನು ಪಡೆಯುವುದಕ್ಕಾಗಿ, ನಿನ್ನ ಸರ್ವಸ್ವವನ್ನೂ ಇವನಿಗೆ ಧಾರೆಯೆರೆದು ಕೊಟ್ಟುಬಿಟ್ಟರೆ ಅನರ್ಥಕ್ಕೆ ಗುರಿಯಾಗುವೆ “ಆಡಿದ ಮಾತಿಗೆ ತಪ್ಪುವುದು ಅಸತ್ಯವಲ್ಲವೆ?”ಎಂದು ನೀನು ಶಂಕಿಸಬಹುದು. ಪೂರ್ವದಲ್ಲಿ ಬಹ್ವೃಚರೆಂಬವರು ಸತ್ಯವಾವುದು, ಅಸತ್ಯವಾವುದು, ಎಂಬುದನ್ನು ಬಹಳಸೂಕ್ಷ್ಮವಿಚಾ

ರದಿಂದ ವಿಮರ್ಶಿಸಿ, “ತನ್ನಲ್ಲಿದ್ದುದನ್ನು ಅಂಗೀಕಾರಪೂರ್ವಕವಾಗಿ ಕೊಡು ವೆನೆಂದು ಹೇಳುವ ಮಾತೇ ಸತ್ಯವು ತನ್ನಲ್ಲಿದ್ದುದನ್ನೂ ಇಲ್ಲವೆಂದು ಹೇಳು ವುದೇ ಅಸತ್ಯವು” ಎಂದು ವ್ಯವಸ್ಥೆಮಾಡಿ, ಅದಕ್ಕೆ ವಿಶೇಷವಿಧಿ ಯನ್ನೂ ಹೇಳಿರುವರು ದೇಹವೆಂಬ ವೃಕ್ಷಕ್ಕೆ ಸತ್ಯವೆಂಬುದು ಫಲಪು ಷ್ಪಗಳಂತಿರುವುದು. ವೃಕ್ಷಕ್ಕೆ ಹಾನಿಯುಂಟಾದಪಕ್ಷದಲ್ಲಿ ಫಲಪುಷ್ಪಗ ಳೂ ಇಲ್ಲದೆಹೋಗುವಂತೆ, ದೇಹವನ್ನು ಕೆಡಿಸಿಕೊಂಡಮೇಲೆ ಸತ್ಯ ವನ್ನು ಸಂಪಾದಿಸುವುದೇ ಅಸಂಭವವು ದೇಹವೆಂಬ ವೃಕ್ಷಕ್ಕೆ ಅಸತ್ಯ ವೇ ಬೇರಿನಂತಿರುವುದು ಲೋಕದಲ್ಲಿ ಅಸತ್ಯವನ್ನು ನುಡಿಯದೆ ಬದು ಕುವುದೇ ಕಷ್ಟವು. ಬೇರನ್ನು ಕಿತ್ತ ವೃಕ್ಷವು ಶೀಘ್ರದಲ್ಲಿಯೇ, ಸತ್ತು ಬಿದ್ದುಹೋಗುವಂತೆ,ಅಸತ್ಯಕ್ಕೆ ಹಿಂಜರಿಯುವ ಮನುಷ್ಯನ ಶರೀರವು ಅಪಾ ಯಕ್ಕೆ ಗುರಿಯಾಗುವುದು ಆದುದರಿಂದ ಅಸತ್ಯವನ್ನಾದರೂ ಹೇ॰ ದೇಹ ವನ್ನುಳಿಸಿಕೊಳ್ಳಬೇಕಾದುದೇ ಅವಶ್ಯವು. ಮತ್ತು ಓ ರಾಜೇಂದ್ರಾ! ನೀನು ಈ ವಾಮನನಿಗೆ ಸರ್ವಸ್ವವನ್ನೂ ಕೊಡುವುದಾಗಿ ಹೇಳಿದಮಾತಿಗೆ ನಿನ್ನಲ್ಲಿರುವುದೆಲ್ಲವನ್ನೂ ಪೂರ್ಣವಾಗಿ ಕೊಡುವೆನೆಂದು ಅಭಿಪ್ರಾಯವಲ್ಲ. ನೀನು ಹೇಳಿದ ಮಾತಿಗೆ, ಯಾವುದೋ ಸ್ವಲ್ಪವನ್ನು ಕೊಡುವುದಾಗಿ ಹೇಳಿದಂತೆಯೇಅರ್ಥವನ್ನಿಟ್ಟುಕೊಳ್ಳಬೇಕು.ಈಗಲೂ ನೀನು,ಹಿಂದೆ ಕೊಟ್ಟ ಮಾತಿಗೆ ಇದೇ ಅಭಿಪ್ರಾಯವೆಂದು ತಿಳಿಸಿ, ಅವನಿಗೆ ಅಲ್ಪಸ್ವಲ್ಪವನ್ನು ಕೊಟ್ಟು ಉಳಿದುದರಿಂದ ನೀನು ಜೀವಿಸಬಹುದು. ಯಾಚಕರಿಗೆ ಸರ್ವಸ್ವ ವನ್ನೂ ಕೊಡುವುದಾಗಿ ಹೇಳಿದಮೇಲೆಯೂ, ಅದನ್ನು ಕೊಡುವುದಕ್ಕೆ ಸಾ ಮರ್ಥ್ಯವಿಲ್ಲದವನು, ಸ್ವಲ್ಪವನ್ನೇ ಕೊಟ್ಟು ಅವನನ್ನು ಸಂತೋಷಪಡಿಸಬ ಹುದು ಯಾಚಕರು ತಮ್ಮಬಳಿಗೆ ಬಂದು ಕೇಳಿದಾಗ, ತನ್ನಲ್ಲಿದ್ದುದನ್ನೂ ಇಲ್ಲವೆಂದು ಹೇಳುವುದೇ ಅಸತ್ಯವು ಅಂತವನು ಜೀವನ್ಮೃತನೆನಿಸಿಕೊಂಡು ಅಪಯಶಸ್ಸಿಗೆ ಗುರಿಯಾಗುವನು. ಆದುದರಿಂದ ಮೊದಲು ಪ್ರತಿ ಜ್ಞೆಮಾಡಿ ಕೊಟ್ಟ ವಸ್ತುಗಳಲ್ಲಿ, ತನ್ನ ದೇಹಪೋಷಣೆಗೆ ಬೇಕಾದಷ್ಟನ್ನು ತನ್ನಲ್ಲಿರಿಸಿಕೊಂಡು, ಕೇಳಿದವರಿಗೂ ಸ್ವಲ್ಪವನ್ನು ಕೊಡಬೇಕಾದುದೇಯುಕ್ತ ವು. ರಾಜೇಂದ್ರಾ!ಸ್ತ್ರೀಯರನ್ನು ವಶಪಡಿಸಿಕೊಳ್ಳುವುದರಲ್ಲಿಯೂ,ಪರಿಹಾಸ

ಗಳಲ್ಲಿಯೂ,ವಿವಾಹಪ್ರಯತ್ನದಲ್ಲಿಯೂ, ಪ್ರಾಣಾಪಾಯಗಳಲ್ಲಿಯೂ, ಗೋ ಬ್ರಾಹ್ಮಣರನ್ನು ರಕ್ಷಿಸಬೇಕಾದ ಕಾಲಗಳಲ್ಲಿಯೂ ಸುಳ್ಳಾಡುವುದರಿಂದ ದೋಷವಿಲ್ಲ. ಆದುದರಿಂದ ಈಗ ನೀನು ನಿನ್ನ ಜೀವನಕ್ಕಾಗಿ ಮಾತಿಗೆ ತಪ್ಪಿದರೂ,ಅದರಿಂದ ದೋಷವಿಲ್ಲ!ಹಾಗೆ ನಡೆಸು"ಎಂದನು ಇದು ಹತ್ತೊಂಭತ್ತನೆಯ ಅಧ್ಯಾಯವು.

---

**ಬಲಿಯು ತಾನು ಕೊಟ್ಟ ಮಾತನ್ನು ತಪ್ಪಲಾರೆನೆಂದು ಶುಕ್ರನಿಗೆ ತಿಳಿಸಿದುದು**

ಈ ಶುಕ್ರನ ಮಾತನ್ನು ಕೇಳಿ ಬಲಿಯು, ಸ್ವಲ್ಪಹೊತ್ತಿನವರೆಗೆ ಯೋಚಿಸುತ್ತ ಸುಮ್ಮನಿದ್ದು, ಕೊನೆಗೆ ಮನಸ್ಸನ್ನು ದೃಢಪಡಿಸಿಕೊಂಡು, ಹೀಗೆಂದು ಹೇಳುವನು "ಓ ಗುರುವರ್ಯಾ! ನೀನು ಹೇಳಿದುದೇನೋ ಸತ್ಯವು! ಅರ್ಥಕಾಮಗಳಿಗೂ, ಕೀರ್ತಿಗೂ, ತನ್ನ ಜೀವನಕ್ಕೂ ಅಪಾಯವಿಲ್ಲದಂತೆ ಪ್ರವರ್ತಿಸಬೇಕಾದುದೇ ಗೃಹಸ್ಥರಿಗೆ ಮುಖ್ಯವು ಆದರೇನು ? ನಾನು ಈ ಬ್ರಾಹ್ಮಣನಿಗೆ ಮೊದಲು ಪ್ರತಿಜ್ಞೆಮಾಡಿದುದನ್ನು, ಈಗ ಇಲ್ಲವೆಂದು ಹೇಳಿ ಹೇಗೆ ನಿರಾಕರಿಸಲಿ ? ಮಹಾತ್ಮನಾದ ಪ್ರಹ್ಲಾದನ ಕುಲದಲ್ಲಿ ಹುಟ್ಟಿದ ನಾನು, ನೀಚಜನದಂತೆ ಮಾತಿಗೆ ತಪ್ಪುವುದು ಸರಿಯೆ ? ಹಿಂದೊಮ್ಮೆ ಭೂದೇವಿಯು, "ಅಸತ್ಯಕ್ಕಿಂತಲೂ ಹೀನವಾದ ಅಧರ್ಮವು ಬೇರೊಂದಿಲ್ಲವೆಂದೂ, ಪರ್ವತಸಮುದ್ರಾದಿಗಳ ಭಾರವನ್ನಾದರೂ ನಾನು ಸುಲಭವಾಗಿ ಹೊರಬಲ್ಲೆನೇಹೊರತು ಸುಳ್ಳಾಡುವವನನ್ನುಮಾತ್ರ ನಾನು ಭರಿಸಲಾರೆ"ನೆಂದೂ ಹೇಳಿರುವಳು ಆದುದರಿಂದ ಆಚಾರ್ಯಾ! ನಾನು ನರಕಕ್ಕೂ ಭಯಪಡತಕ್ಕವನಲ್ಲ ದಾರಿದ್ರ್ಯಕ್ಕೂ ಭಯಪಡತಕ್ಕವನಲ್ಲ. ಬೇರೆ ಯಾವವಿಪತ್ತಿಗೂ ಹೆದರತಕ್ಕವನಲ್ಲ ನನಗೆ ರಾಜ್ಯಭ್ರಂಶವಾದರೂ ಚಿಂತೆಯಿಲ್ಲ. ಸಾವಿಗೂ ನಾನು ಅಂಜತಕ್ಕವನಲ್ಲ. ಆಡಿದ ಮಾತಿಗೆ ತಪ್ಪಿ, ಈ ಬ್ರಾಹ್ಮಣನನ್ನು ವಂಚಿಸುವವಿಷಯದಲ್ಲಿಮಾತ್ರ ನಾನು ಬಹಳವಾಗಿ ಭಯಪಡುವೆನು. ಲೋಕದಲ್ಲಿ ಮನುಷ್ಯನು ಸಂಪಾದಿಸತಕ್ಕ ಹಣ,ಕಾಸು,ಭೂಮಿ ಮುಂತಾದುವುಗಳೊಂದೂಸತ್ತಮೇಲೆಹಿಂಬಾಲಿಸತಕ್ಕುವಲ್ಲ. ಬದುಕಿದ್ದಾಗ

ಲೇ ಅವುಗಳಿಗೆ ಸಾರ್ಥಕವನ್ನುಂಟುಮಾಡಬೇಕು ಅವೆಲ್ಲಕ್ಕೂ ತ್ಯಾಗವೇ ಫಲವು. ಆ ವಿಧವಾದ ತ್ಯಾಗಗಳಿಂದ ಬ್ರಾಹ್ಮಣರನ್ನು ಸಂತೋಷಪಡಿಸದಿದ್ದಮೇಲೆ ಅವುಗಳಿಂದ ಫಲವೇನು ? ಶಿಬಿ, ದಧೀಚಿ, ಮೊದಲಾದವರೆಲ್ಲರೂ ಭೂತಹಿತಕ್ಕಾಗಿ ತಮ್ಮ ಪ್ರಾಣಗಳನ್ನೇ ಒಪ್ಪಿಸಿರುವಾಗ, ನಾನು ನನ್ನ ಧನವನ್ನಾಗಲಿ, ರಾಜ್ಯವನ್ನಾಗಲಿ ಕೊಡುವುದೊಂದು ದೊಡ್ಡದೆ ? ಯುದ್ಧದಲ್ಲಿ ತಮಗೆ ಯಾರೂ ಇದಿರಿಲ್ಲದ ವೀರ್ಯವುಳ್ಳ ನನ್ನ ಪಿತಾಮಹಪ್ರಪಿತಾಮಹಾದಿಗಳೆಲ್ಲರೂ ಈ ಭೂಮಿಯನ್ನು ಏಕಾಧಿಪತ್ಯದಿಂದ ಪಾಲಿಸುತಿದ್ದರು ಕಾಲವು ಅವರಿಗಿದ್ದ ರಾಜ್ಯಭೋಗಗಳನ್ನು ತಪ್ಪಿಸಿತೇಹೊರತು, ಅವರ ಕೀರ್ತಿಯನ್ನು ಕೆಡಿಸಲಾರದೆ ಹೋಯಿತಲ್ಲವೆ ? ಹಣದಾಸೆಯಿಂದ ಯುದ್ಧದಲ್ಲಿ ತಮ್ಮ ದೇಹವನ್ನೊಪ್ಪಿಸಿದ ರಾಜರೂ ಎಷ್ಟೋ ಮಂದಿಯುಂಟು. ಆ ಹಣದಾಸೆಯಿಲ್ಲದೆ ತಮ್ಮ ಸರ್ವಸ್ವವನ್ನೂ ಸತ್ಪಾತ್ರದಲ್ಲಿ ಶ್ರದ್ಧೆಯಿಂದ ವಿನಿಯೋಗಿಸಿದವರನ್ನು ಇದುವರೆಗೆ ನಾನು ಕೇಳಿಲ್ಲ ಈಗ ನನಗೆ ಆ ಭಾಗ್ಯವು ಲಭಿಸುವುದಾದರೆ, ಆ ಘನಕಾರ್ಯವನ್ನು ನಡೆಸದೆ ಬಿಡಬಹುದೆ ? ಈ ಯಾಚಕನ ಕೋರಿಕೆಯನ್ನೀಡೇರಿಸುವುದರಿಂದ,ಅನರ್ಥವುಂಟಾಗುವುದೆಂದು ಹೇಳಿದೆಯಲ್ಲವೆ ? ಈ ವಿಧವಾದ ಅನರ್ಥವನ್ನು ವಿವೇಕಿಯಾಗಿಯೂ, ದಯಾಳುವಾಗಿಯೂ ಇರುವ ಸಾಮಾನ್ಯಮನುಷ್ಯನೂಕೂಡ ತನಗೆ ಕ್ಷೇಮವೆಂದೇ ಭಾವಿಸುವನು ಹೀಗಿರುವಾಗ ಬ್ರಹ್ಮವಿದರಾದ ನಿಮ್ಮಂತವರು ಇದಕ್ಕಾಗಿ ಭಯಪಡಬಹುದೆ? ನೀವು ಇಂತಹ ವಿಷಯಗಳಲ್ಲಿ ಬೇರೆಯವರಿಗೆ ಪ್ರೋತ್ಸಾಹವನ್ನು ಕೊಡಬೇಕಲ್ಲವೆ? ಆದುದರಿಂದ ನಾನು ಈ ಬ್ರಾಹ್ಮಣನ ಕೋರಿಕೆಯನ್ನು ನಡೆಸದೆ ಬಿಡಲಾರೆನು. ಇವನು ವೇಷಧಾರಿಯಾಗಿ ಬಂದ ವಿಷ್ಣುವೇಹೊರತು ಸಾಧಾರಣಬ್ರಹ್ಮಚಾರಿಯಲ್ಲವೆಂದು ಹೇಳಿದೆಯಲ್ಲವೆ ? ಹಾಗೆ ವಿಷ್ಣುವೇ ನನ್ನಲ್ಲಿಗೆ ಯಾಚಕನಾಗಿ ಬಂದಿದ್ದಪಕ್ಷದಲ್ಲಿ ನನ್ನ ಭಾಗ್ಯಕ್ಕಿಂತಲೂ ಭಾಗ್ಯವುಂಟೆ ? ಯಜ್ಞವಿದರಾದ ನಿಮ್ಮಂತಹ ಮಹಾತ್ಮರೆಲ್ಲರೂ ಯಾವನನ್ನುದ್ದೇಶಿಸಿ ಎಷ್ಟೋಶ್ರದ್ಧೆಯಿಂದ ಯಜ್ಞಗಳನ್ನೂ, ಕ್ರತುಗಳನ್ನೂ ನಡೆಸುತ್ತಿರುವಿರೋ, ಆ ಮಹಾವಿಷ್ಣುವೇ ವಟುವೇಷದಿಂದ ಬಂದು ನನಗೆ ಪ್ರತ್ಯಕ್ಷನಾದಮೇಲೆ, ನನಗಿಂತಲೂ ಧನ್ಯರಾ

ರು ? ಈತನು ನನಗೆ ವರಪ್ರದನಾಗಿ ಬಂದಿದ್ದರೂ,ಶತ್ರುವಾಗಿ ಬಂದಿದ್ದರೂ ಇವನು ಕೋರಿದುದನ್ನು ನಾನು ಕೊಡುವುದೇ ಸಿದ್ಧವು! ಓ ಮುನೀಂದ್ರಾ! ಮೂರನೆಯ ಹಜ್ಜೆಗೆ ಸ್ಥಳವಿಲ್ಲದೆ ಹೋಗುವುದರಿಂದ, ಇವನು ನನ್ನನ್ನು ವಂಚಿಸುವನೆಂದು ಹೇಳಿದೆಯಲ್ಲವೆ ? ಅದಕ್ಕೂ ನಾನು ಚಿಂತಿಸುವವನಲ್ಲ! ನನ್ನಲ್ಲಿರುವ ಸರ್ವಸ್ವವನ್ನೂ ಅವನಿಗೆ ಕೊಟ್ಟಮೇಲೆ, ನಿರಪರಾಧಿಯಾಗಿರುವ ನನ್ನನ್ನು ಈತನು ಅನ್ಯಾಯವಾಗಿ ಬಂಧಿಸಿಟ್ಟರೂ. ಈ ಬ್ರಾಹ್ಮಣವೇಷ ಮಾತ್ರಕ್ಕಾಗಿಯೇ ನಾನು ಆತನನ್ನು ಗೌರವಿಸುವೆನೇಹೊರತು ಎಷ್ಟು ಮಾತ್ರವೂ ಅವನನ್ನು ಹಿಂಸಿಸುವನಲ್ಲ ಇದಕ್ಕಾಗಿ ನಾನು ಭಯಪಡತಕ್ಕವನೂ ಅಲ್ಲ ಈತನು ಪವಿತ್ರಕೀರ್ತಿಯುಳ್ಳ ಆ ಶ್ರೀಹರಿಯೇ ಆಗಿದ್ದಪಕ್ಷದಲ್ಲಿ ತನ್ನ ಪರಾಕ್ರಮದಿಂದ ನನ್ನನ್ನು ಜಯಿಸಿ, ಈ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುತಿದ್ದನೇಹೊರತು, ಉಪಾಯದಿಂದ ನನ್ನ ಸರ್ವಸ್ವವನ್ನೂ ಕಿತ್ತುಕೊಂಡು, ಅನ್ಯಾಯವಾಗಿ ನನ್ನನ್ನು ನಿರ್ಬಂಧಿಸಿ, ತನ್ನ ಕೀರ್ತಿಯನ್ನು ಹಾಳುಮಾಡಿಕೊಳ್ಳಲಾರನು "ಯುದ್ಧದಲ್ಲಿ ಜಯಸಲಾರದುದಕ್ಕಾಗಿಯೇ ಹೀಗೆ ವೇಷಾಂತರದಿಂದ ಬಂದಿರುವನೆಂದು ಹೇಳುವೆಯೇನು ? ಹಾಗೆ ನನ್ನನ್ನು ಕೊಲ್ಲುವುದಕ್ಕೆ ಶಕ್ತಿಯಿಲ್ಲದವನು, ನನ್ನ ಕೈಯಿಂದ ಸತ್ತರೂ ಉತ್ತಮವಲ್ಲವೆ ? ಆದುದರಿಂದ ನಾನು ಇವನನ್ನು ವಿಷ್ಣುವೆಂದು ನಂಬಲಾರೆನು." ಎಂದನು. ಹೀಗೆ ಗುರುವಾದ ಶುಕ್ರಾಚಾರ್ಯನ ಮಾತನ್ನೂ ತಿರಸ್ಕರಿಸಿ, ಬಲಿಯು ದಾನಮಾಡುವುದಕ್ಕೆ ಸಿದ್ಧನಾದನು. ತನ್ನ ಮಾತನ್ನು ತಿರಸ್ಕರಿಸಿದುದಕ್ಕಾಗಿ ಶುಕ್ರನಿಗೆ ಬಹಳಕೋಪವುಂಟಾಯಿತು ಆಗ ಶುಕ್ರನು ದೈವಚೋದಿತನಾಗಿ, ಸತ್ಯಸಂಪನ್ನನಾದ ಆ ಬಲಿಯನ್ನು ಹೀಗೆಂದು ಶಪಿಸುವನು. "ಓ ರಾಜಾ ! ನೀನು ಬುದ್ಧಿಹೀನನಾಗಿದ್ದರೂ ನಾನೇ ಪಂಡಿತನೆಂಬ ಗರ್ವದಿಂದ, ಮುಂದೆ ಬರುವ ಅನರ್ಥವನ್ನೂ ತಿಳಿಯದೆ ನನ್ನ ಹಿತವಾಕ್ಯವನ್ನೂ ತಿರಸ್ಕರಿಸುತ್ತಿರುವೆ? ಹೀಗೆ ನನ್ನಮಾತನ್ನು ಮೀರಿ ನಡೆಯುತ್ತಿರುವುದರಿಂದ, ಶೀಘ್ರದಲ್ಲಿಯೇ ನಿನಗೆ ಈ ತ್ರೈಲೋಕ್ಯಾಧಿಪತ್ಯವು ತಪ್ಪಿಹೋಗಲಿ" ಎಂದನು. ಶುಕ್ರಾಚಾರ್ಯನು ಹೀಗೆ ಶಾಪವನ್ನು ಕೊಟ್ಟರೂ ಹೆದರದೆ, ಬಲಿಯು ಸತ್ಯಕ್ಕೆ ಕಟ್ಟುಬಿದ್ದು ದೃಢಸಂಕಲ್ಪ

ನಾಗಿ, ಆ ವಾಮನಬ್ರಹ್ಮಚಾರಿಗೆ ಯಥೋಕ್ತವಾಗಿ ಪೂಜೆಯನ್ನು ನಡೆಸಿ, ಭೂಮಿಯನ್ನು ಧಾರೆಯೆರೆಯುವುದಕ್ಕೆ ಸಿದ್ಧನಾದನು. ಒಡನೆಯೇ ಬಲಿಯ ಭಾರ್ಯೆಯಾದ ವಿಂಧ್ಯಾವಳಿಯು, ಮುಕ್ತಾಹಾರ ಮೊದಲಾದ ಆಭರಣಗಳಿಂದಲಂಕೃತಳಾಗಿ. ಜಲಪೂರ್ಣವಾದ ಬಂಗಾರದ ಕರಗವನ್ನು ಕೈಯಲ್ಲಿ ಹಿಡಿದು ಬಂದಳು. ಆ ಜಲದಿಂದ ಬಲಿಯು ಬ್ರಹ್ಮಚಾರಿಯ ಪಾದಗಳನ್ನು ತೊಳೆದು, ಲೋಕಪಾವನವಾದ ಆ ತೀರ್ಥವನ್ನು ತಲೆಯಲ್ಲಿ ಪ್ರೋಕ್ಷಿಸಿಕೊಂಡನು ಆಗ ಯಾರು ಯಾರು ಎಷ್ಟೆಷ್ಟುವಿಧದಿಂದ ತಡೆದರೂ ಅವರ ಮಾತಿಗೆ ಕಿವಿಗೊಡದೆ ಬಲಿಯು, ಒಂದೇ ಧೈರ್ಯದಿಂದ ಆ ವಾಮನನ ಕೈಗೆ ದಾನಜಲವನ್ನು ಬಿಡುತ್ತಿರುವಾಗ, ಅವನ ಸಾಹಸಕ್ಕೆ ಆಶ್ಚರ್ಯಪಟ್ಟು ದೇವತೆಗಳೂ, ಗಂಧರ್ವರೂ, ವಿದ್ಯಾಧರರೂ, ಸಿದ್ಧರೂ, ಚಾರಣರೂ ಆಕಾಶದಿಂದ ಅವನಮೇಲೆ ಪುಷ್ಪವರ್ಷವನ್ನು ಕರೆದರು ! ದೇವದುಂದುಭಿಗಳು ಮೊಳಗಿದುವು. ಗಂಧರ್ವರೂ, ಕಿಂಪುರುಷರೂ, ಕಿನ್ನರರೂ ಆಕಾಶದಲ್ಲಿ ನೆರೆದು “ಆಹಾ ! ಈತನಲ್ಲವೇ ಸತ್ಯಸಂಧನು! ಸಾಕ್ಷಾದ್ವಿಷ್ಣುವಿಗೆ ತ್ರೈಲೋಕ್ಯವನ್ನೂ ಧಾರೆಯೆರೆದು ಕೊಡುತ್ತಿರುವ ಈತನಲ್ಲವೇ ಮಹಾನುಭಾವನು” ಎಂದು ಕೊಂಡಾಡುತಿದ್ದರು ಹೀಗೆ ಬಲಿಯು ಸಮಸ್ತದೇವಗಣಗಳಿಂದಲೂ ಸರ್ವತೋಮುಖವಾಗಿ ಸ್ತುತಿಸಲ್ಪಡುತ್ತಿರುವಾಗ, ವಾಮನಬ್ರಹ್ಮಚಾರಿಯು ಮುಂದೆ ಬಂದು ಕೈನೀಡಿದನು. ಬಲಿಯು ದಾನಜಲವನ್ನು ಬಿಡುತ್ತ “ಇದೋ ನೀನು ಕೇಳಿದುದನ್ನು ಸ್ವೀಕರಿಸು” ಎಂದು ಕೊಡುತ್ತಿದ್ದನು. ಇಷ್ಟರಲ್ಲಿಯೇ ಆ ಬ್ರಾಹ್ಮಣವಟುವಿನ ಆಕಾರವು ಎಲ್ಲರಿಗೂ ಆಶ್ಚರ್ಯವುಂಟಾಗುವಂತೆ ಉಬ್ಬಿ ಬೆಳೆಯಲಾರಂಭಿಸಿತು. ಹಾಗೆ ಬೆಳೆಯುತಿದ್ದ ವಾಮನಾಕಾರವು ಗುಣತ್ರಯಪರಿಣಾಮರೂಪವಾದ ಈ ಸಮಸ್ತಪ್ರಪಂಚವನ್ನೂ ತನ್ನಲ್ಲಿಯೇ ಕಾಣಿಸುವಂತೆ ತೋರುತ್ತಬಂದಿತು. ಭೂಮಿ, ಆಕಾಶ, ಸ್ವರ್ಗ, ದಿಕ್ಕು ವಿದಿಕ್ಕುಗಳು, ಅತಲವೇ ಮೊದಲಾದ ಅಧೋಲೋಕಗಳು, ಸಪ್ತಸಮುದ್ರಗಳು, ದೇವತಿರ್ಯಙ್ಮನುಷ್ಯವರ್ಗಗಳು, ಮುನಿಗಳು, ಇವೆಲ್ಲವೂ ಆ ರೂಪದಲ್ಲಿ ಕಾಣಿಸಿಕೊಂಡುವು. ಆ ಯಜ್ಞಶಾಲೆಯಲ್ಲಿದ್ದಂತೆಯೇ ಬಲಿಯೂ, ಋತ್ವಿಕ್ಪುರೋಹಿ



1536. ತ್ರಿವಿಕ್ರಮಾವತಾರವು.

ತರೂ, ಇತರಸಭಿಕರೂ, ಮಹಾವಿಭೂತಿಯೆನಿಸಿಕೊಂಡ ಆ ವಾಮನನ ಶ
ರೀರದಲ್ಲಿ, ಪಂಚಭೂತಗಳಿಂದಲೂ, ಇಂದ್ರಿಯಗಳಿಂದಲೂ, ಶಬ್ದಾದಿವಿ
ಷಯಗಳಿಂದಲೂ, ಅಂತಃಕರಣದಿಂದಲೂ, ಜೀವವರ್ಗದಿಂದಲೂ ಕೂ
ಡಿದ ಗುಣತ್ರಯಾತ್ಮಕವಾದ ಈ ಸಮಸ್ತಪ್ರಪಂಚವನ್ನೂ ಕಂಡರು.
ಮತ್ತು, ವಿಶ್ವರೂಪಿಯಾದ ಆ ಭಗವಂತನ ಅಂಗಾಲಿನಲ್ಲಿ ಅಧೋ
ಲೋಕಗಳನ್ನೂ, ಪಾದಗಳಲ್ಲಿ ಭೂಲೋಕವನ್ನೂ, ಕಣಕಾಲಲ್ಲಿ ಪರ್ವತಗಳ
ನ್ನೂ, ಮೊಳಕಾಲಲ್ಲಿ ಪಕ್ಷಿಗಳನ್ನೂ, ತೊಡೆಗಳಲ್ಲಿ ವಾತಾವರಣವನ್ನೂ,
ಅವನ ನಡುಬಟ್ಟೆಯಲ್ಲಿ ಸಂಧ್ಯಾಕಾಲಗಳನ್ನೂ, ಅವನ ಜಘನಭಾಗದಲ್ಲಿ ತ
ನ್ನೊಡನೆ ಇತರದೈತ್ಯವರ್ಗಗಳನ್ನೂ, ಅವನ ನಾಭಿಯಲ್ಲಿ ಅಂತರಿಕ್ಷವನ್ನೂ
ಅವನ ಉದರದಲ್ಲಿ ಸಪ್ತಸಮುದ್ರಗಳನ್ನೂ, ವಕ್ಷಸ್ಥಳದಲ್ಲಿ ನಕ್ಷತ್ರಗಳನ್ನೂ,
ಕಂಡರು ಹಾಗೆಯೇ ಕ್ರಮವಾಗಿ, ಆ ಭಗವಂತನ ಹೃದಯದಲ್ಲಿ ಧರ್ಮವೂ,
ಸ್ತನಭಾಗದಲ್ಲಿ ಸತ್ಯವೂ, ಮನಸ್ಸಿನಲ್ಲಿ ಚಂದ್ರನೂ, ವಕ್ಷಸ್ಥಲದಲ್ಲಿ ಕಮಲ
ಹಸ್ತೆಯಾದ ಲಕ್ಷ್ಮೀದೇವಿಯೂ, ಕಂಠಭಾಗದಲ್ಲಿ ಸಾಮವೇದದೊಡಗೂ
ಡಿದ ಸಮಸ್ತಶಬ್ದಜಾಲಗಳೂ, ಭುಜದಲ್ಲಿ ಇಂದ್ರಾದಿದೇವತೆಗಳೂ. ಕಿ
ವಿಗಳಲ್ಲಿ ದಿಕ್ಕುಗಳೂ, ಶಿರಸ್ಸಿನಲ್ಲಿ ದ್ಯುಲೋಕವೂ, ತಲೆಕೂದಲುಗಳಲ್ಲಿ
ಮೇಘಗಳೂ, ಮೂಗಿನಲ್ಲಿ ಶ್ವಾಸವಾಯುವೂ, ಕಣ್ಣುಗಳಲ್ಲಿ ಸೂರ್ಯ
ನೂ, ಮುಖದಲ್ಲಿ ಅಗ್ನಿಯೂ, ವಾಕ್ಕಿನಲ್ಲಿ ವೇದಗಳೂ, ರಸನೇಂದ್ರಿಯದ
ಲ್ಲಿ ವರುಣದೇವನೂ, ಹುಬ್ಬುಗಳಲ್ಲಿ ಪ್ರವೃತ್ತಿನಿವೃತ್ತಿಶಾಸ್ತ್ರಗಳೂ, ರೆಪ್ಪೆ
ಗಳಲ್ಲಿ ಹಗಲುರಾತ್ರಿಗಳೂ, ಹಣೆಯಲ್ಲಿ ಕೋಪವೂ, ಕೆಳತುಟಿಯಲ್ಲಿ
ಲೋಭವೂ, ತ್ವಗಿಂದ್ರಿಯದಲ್ಲಿ ಕಾಮವೂ, ರೇತಸ್ಸಿನಲ್ಲಿ ಜಲವೂ, ಬೆನ್ನಿನಲ್ಲಿ
ಅಧರ್ಮವೂ, ನಡೆಯಲ್ಲಿ ಯಜ್ಞವೂ, ಛಾಯೆಯಲ್ಲಿ ಮೃತ್ಯುದೇವತೆಯೂ,
ಅಟ್ಟಹಾಸದಲ್ಲಿ ಮಾಯೆಯೂ, ರೋಮಗಳಲ್ಲಿ ಓಷಧಿವರ್ಗಗಳೂ, ನರಗಳಲ್ಲಿ
ನದಿಗಳೂ, ನಖಗಳಲ್ಲಿ ಶಿಲೆಗಳೂ, ಬುದ್ಧಿಯಲ್ಲಿ ಬ್ರಹ್ಮದೇವನೂ, ಇಂದ್ರಿಯಗಳ
ಲ್ಲಿ ದೇವತೆಗಳೊಡಗೂಡಿದ ಋಷಿಗಳೂ ನೆಲೆಗೊಂಡಂತೆ ಕಾಣಿಸಿದುವು ಸಾವಿ
ರಮಾತುಗಳಿಂದೇನು ? ಆಗ ಆ ಭಗವಂತನ ಶರೀರವೊಂದರಲ್ಲಿಯೇ, ನಾಮ
ರೂಪವಿಭಾಗಗಳಿಂದ ಬೇರೆಬೇರೆಯಾಗಿ ತೋರುವ ಚರಾಚರಪ್ರಪಂಚವೆಲ್ಲ

ವೂ ಏಕಕಾಲದಲ್ಲಿ ಬಲಿಚಕ್ರವರ್ತಿಗೆ ಗೋಚರಿಸಿದುವು ಹೀಗೆ ವಿಶ್ವಾ ತ್ಮಕನಾದ ಆ ಭಗವಂತನ ರೂಪವನ್ನು ನೋಡಿ, ಅಲ್ಲಿದ್ದ ದೈತ್ಯರೆಲ್ಲರೂ ಭಯಾಶ್ಚರ್ಯಗಳಿಂದ ಏನೊಂದೂ ತಿಳಿಯದೆ ಸ್ತಬ್ಧರಾಗಿ ನಿಂತುಬಿಟ್ಟರು ಇದಲ್ಲದೆ ಆಗ,ಶತ್ರುದುಸ್ಸಹವಾದ ತೇಜಸ್ಸುಳ್ಳ ಸುದರ್ಶನವೆಂಬ ಚಕ್ರವೂ, ಪಾಂಚಜನ್ಯವೆಂಬ ಶಂಖವೂ,ಕೌಮೋದಕಿಯೆಂಬ ಗದೆಯೂ ನಂದಕವೆಂಬ ಕತ್ತಿಯೂ, ಶಾರ್ಙ್ಗವೆಂಬ ಮಹಾಧನುಸ್ಸೂ, ಶತಚಂದ್ರವೆಂಬ ಖೇಟಕವೂ ಅಕ್ಷಯಸಾಯಕಗಳೆಂಬ ಎರಡು ಬತ್ತಳಿಕೆಗಳೂ, ಈ ದಿವ್ಯಾಯುಧಗಳೆಲ್ಲವೂ ಆ ಭಗವಂತನ ಪಾರ್ಶ್ವವರ್ತಿಗಳಾಗಿ ನಿಂತಿದ್ದುವು ಮತ್ತು ಸುನಂ ದನಂದರೇ ಮೊದಲಾದ ಪಾರ್ಷದರೂ, ಲೋಕಪಾಲಕರೂ, ಆ ಭಗವಂತ ನ ಸುತ್ತುಮುತ್ತಲೂ ಕೈಕಟ್ಟಿ ನಿಂತು ಸೇವೆಮಾಡುತಿದ್ದರು ಭಗವಂತನು ತನ್ನ ಮೂರಡಿಗಳಿಂದಲೇ ಮೂರುಲೋಕವನ್ನೂ ಅಳೆಯುವುದಕ್ಕಾಗಿ ಈ ಅದ್ಭುತರೂಪವನ್ನು ತಾಳಿದ್ದಾಗಲೂ, ಆತನ ಪಾದದಿಂದ ತಲೆಯವರೆಗೆ ಸ ರ್ವಾವಯವಗಳಲ್ಲಿಯೂ, ಕಿರೀಟ, ಕುಂಡಲ, ಹಾರ, ಕೇಯೂರಾದ್ಯಾಭರ ಣಗಳೆಲ್ಲವೂ ಶೋಭಿಸುತಿದ್ದುವು ಅವನ ಅಸಾಧಾರಣಚಿಹ್ನಗಳಾದ ಶ್ರೀ ವತ್ಸ, ಕೌಸ್ತುಭ, ಕಾಂಚೀ,ಪೀತಾಂಬರ, ವನಮಾಲಿಕೆಗಳೆಲ್ಲವೂ ಕಾಣಿಸು ತಿದ್ದುವು. ಹೀಗೆ ವಿಶ್ವರೂಪವನ್ನು ತಾಳಿದ ಭಗವಂತನು, ಬಲಿಯು ತನಗೆ ಧಾರೆಯೆರೆದು ಕೊಟ್ಟ ಮೂರಡಿಯ ನೆಲವನ್ನಳೆಯುವುದಕ್ಕಾಗಿ ಕಾಲಿಡು ವಾಗ, ಭೂಲೋಕವೆಲ್ಲವನ್ನೂ ತನ್ನ ಪಾದದಿಂದಲೂ, ದಿಕ್ಕುಗಳನ್ನು ಭುಜಗಳಿಂದಲೂ ಆಕ್ರಮಿಸಿಬಿಟ್ಟನು ದ್ಯುಲೋಕವನ್ನಾಕ್ರಮಿಸುವುದಕ್ಕಾ ಗಿ ಎರಡನೆಯ ಹಜ್ಜೆಯನ್ನು ಮೇಲೆ ನೀಡಿದನು. ಅದು ದ್ಯುಲೋಕವನ್ನೂ ಮೀರಿ ಹೋಗುವುದಲ್ಲದೆ, ಅದಕ್ಕೆ ಮೇಲೆಯೂ ಕ್ರಮವಾಗಿ ಮಹರ್ಲೋಕ, ಜನೋಲೋಕ, ತಪೋಲೋಕಗಳನ್ನೂ ದಾಟಿ, ಈ ಎಲ್ಲಾ ಪ್ರಪಂಚಕ್ಕಿಂ ತಲೂ ಹೊರಗಿರುವ ಸತ್ಯಲೋಕವನ್ನೂ ಮುಟ್ಟಿತು. ಬಲಿಯು ಮೂರನೆ ಯ ಹಜ್ಜೆಗಾಗಿ ಕೊಡಬೇಕಾದ ಸ್ಥಳಕ್ಕೆ ಅಣುಮಾತ್ರವೂ ಸ್ಥಳವು ಉಳಿಯ ದಂತಾಯಿತು ಇದು ಇಪ್ಪತ್ತನೆಯ ಅಧ್ಯಾಯವು

---

ತ್ರಿವಿಕ್ರಮನು ತನ್ನ ಮೂರನೆಯ ಹಜ್ಜೆಗೆ ಸ್ಥಳವು ಸಾಲದುದಕ್ಕಾಗಿ ಬಲಿಯನ್ನು ವರುಣಪಾಶದಿಂದ ಬಂಧಿಸಿದುದು ಇದಕ್ಕಾಗಿಕೋಪದಿಂದ ಮೇಲೆಬಿದ್ದ ದೈತ್ಯಭಟರನ್ನು ವಿಷ್ಣುದೂತರು ಓಡಿಸಿದುದು.

ಓ ಪರೀಕ್ಷಿದ್ರಾಜಾ ಕೇಳು! ತ್ರಿವಿಕ್ರಮನ ಪಾದವು ಸತ್ಯಲೋಕವನ್ನು ಮುಟ್ಟಿದೊಡನೆ, ಅಲ್ಲಿ ಅದರ ನಖಕಾಂತಿಯಿಂದ ಅಪೂರ್ವವಾದ ಒಂದು ಪ್ರಕಾಶವುಂಟಾಯಿತು. ಅಲ್ಲಿದ್ದ ಚತುರ್ಮುಖಬ್ರಹ್ಮನು ಇದೇನೆಂದು ಆಶ್ಚರ್ಯಯುಕ್ತನಾಗಿ ಇದಿರೆದ್ದುಬಂದನು ಮರೀಚಿ ಮೊದಲಾದ ಬ್ರಹ್ಮಪುತ್ರರೂ, ಸನಕಾದಿಯೋಗಿಗಳೂ ಅವನನ್ನು ಹಿಂಬಾಲಿಸಿ, ಅಲ್ಲಿ ಭಗವಂತನ ಪಾದವನ್ನು ಕಂಡರು ಮತ್ತು ವೇದಗಳು, ಉಪವೇದಗಳು, ವೇದಾಂಗಗಳು, ನ್ಯಾಯ, ಮೀಮಾಂಸೆ, ಮೊದಲಾದ ಶಾಸ್ತ್ರಗಳು, ಇತಿಹಾಸ ಪುರಾಣಗಳು, ಪಾಂಚರಾತ್ರಗಳು ಈ ಮೊದಲಾದ ವಿದ್ಯಾಭಿಮಾನಿದೇವತೆಗಳೂ, ಯೋಗವೆಂಬ ವಾಯುವಿನ ಸಹಾಯದಿಂದ ಉದ್ದೀಪಿತವಾದ ಜ್ಞಾನಾಗ್ನಿಯಿಂದ ತಮ್ಮ ಕರ್ಮಜಾಲವನ್ನು ಭಸ್ಮಮಾಡಿದ ಶುದ್ಧಾತ್ಮರೂ, ಈಶ್ವರಧ್ಯಾನದಿಂದ ಕರ್ಮಪಾಶವನ್ನು ಹರಿದು ಸತ್ಯಲೋಕದಲ್ಲಿ ವಾಸಮಾಡುತಿದ್ದ ಇತರರೂ, ಗುಂಪುಗುಂಪಾಗಿ ಬಂದು, ಆ ತ್ರಿವಿಕ್ರಮನ ಪಾದಕ್ಕೆ ಸಾಷ್ಟಾಂಗಪ್ರಣಾಮವನ್ನು ಮಾಡಿದರು. ಆಗ ಪುಣ್ಯಶ್ಲೋಕನಾದ ಬ್ರಹ್ಮದೇವನು, ತನ್ನ ಉತ್ಪತ್ತಿಗೆ ಕಾರಣಭೂತನಾದ ಶ್ರೀಮಹಾವಿಷ್ಣುವಿನ ಪಾದವು ತನ್ನಲೋಕದಲ್ಲಿ ಆಕಸ್ಮಿಕವಾಗಿಗೋಚರಿಸಿದುದನ್ನು ಕಂಡು, ಅತ್ಯಾನಂದಭರಿತನಾಗಿ, ಅದನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಭಕ್ತಿಯಿಂದ ಸ್ತುತಿಸಿದನು ಓ ರಾಜಾ! ಬ್ರಹ್ಮನು ತನ್ನ ಕಮಂಡಲುಜಲದಿಂದ ಆ ತ್ರಿವಿಕ್ರಮನ ಪಾದವನ್ನು ತೊಳೆದಾಗ, ಆ ಪಾದತೀರ್ಥವೇ ಒಂದು ನದಿಯಾಗಿ ಹೊರಟಿತು ಆ ನದಿಯು ಭಗವಂತನ ಕೀರ್ತಿಯಂತೆ ನಿರ್ಮಲವಾಗಿ ಪ್ರವಹಿಸುತ್ತ, ಮೊದಲು ಧ್ರುವಮಂಡಲದಮೇಲೆ ಬಿದ್ದು, ಆಮೇಲೆ ಕ್ರಮವಾಗಿ ಕೆಳಕೆಳಗಿನ ಲೋಕಗಳಲ್ಲಿ ಪ್ರವಹಿಸಿ, ತ್ರೈಲೋಕ್ಯವನ್ನೂ ಪಾವನಮಾಡುತ್ತಿರುವುದು ಆ ನದಿಯೇ ಭೂಲೋಕದಲ್ಲಿ ಗಂಗೆಯೆಂಬ ಪ್ರಸಿದ್ಧಿಯನ್ನು ಹೊಂದಿರುವುದು ಆಮೇಲೆ ಇತ್ತಲಾಗಿ ತ್ರಿವಿಕ್ರಮಮೂರ್ತಿಯು, ತನ್ನ

ದೇಹವನ್ನಡುಗಿಸಿ ಮೊದಲಿನಂತೆ ವಾಮನರೂಪವನ್ನು ಗ್ರಹಿಸಿದನು. ಬ್ರಹ್ಮಾದಿಗಳೂ, ಲೋಕಪಾಲಕರೂ ತಮ್ಮತಮ್ಮ ಅನುಚರರೊಡನೆ ಬಂದು ಅವನಿಗೆ ಪೂಜೆಗಳನ್ನೊಪ್ಪಿಸಿ, ಅರ್ಘ್ಯಪಾದ್ಯಗಳನ್ನು ಕೊಟ್ಟರು. ಪುಷ್ಪಫಲಗಂಧಧೂಪಗಳನ್ನೂ ಸಮರ್ಪಿಸಿದರು. ಅರಳುಗಳಿಂದಲೂ, ಅಕ್ಷತೆಗಳಿಂದಲೂ ಪೂಜಿಸಿದರು. ಅವನ ವೀರ್ಯವನ್ನೂ, ಮಹಿಮೆಯನ್ನೂ, ಕೊಂಡಾಡುತ್ತ ಜಯಶಬ್ದಗಳಿಂದ ಸ್ತುತಿಸಿದರು. ಅವನ ಮುಂದೆ ಗಾನನರ್ತನಗಳನ್ನು ನಡೆಸಿದರು ಶಂಖಗಳನ್ನೂ, ದುಂದುಭಿಗಳನ್ನೂ ನುಡಿಸಿದರು ಈ ಸಮಯದಲ್ಲಿ ಭಲ್ಲೂಕರಾಜನಾದ ಜಾಂಬವಂತನು, ಭೇರಿಯನ್ನು ನುಡಿಸುತ್ತ, ನಾನಾದಿಕ್ಕುಗಳಲ್ಲಿಯೂ ಭಗವಂತನ ಮಹಿಮೆಯನ್ನು ಕೊಂಡಾಡಿ ಜಯಘೋಷವನ್ನು ಮಾಡುತಿದ್ದನು ಅದೊಂದು ದೊಡ್ಡಮಹೋತ್ಸವವಾಯಿತು ಇಷ್ಟರಲ್ಲಿ ಬಲಿಯ ಅನುಚರರಾದ ದೈತ್ಯಭಟರೆಲ್ಲರೂ, ಭಗವಂತನು ವೇಷಧಾರಿಯಾಗಿ ಬಂದು ಮೂರಡಿಗಳ ನೆಲವನ್ನು ಯಾಚಿಸುವನೆವದಿಂದ ತ್ರೈಲೋಕ್ಯವನ್ನೂ ತನ್ನ ವಶಪಡಿಸಿಕೊಂಡುದನ್ನು ನೋಡಿ, ಕೋಪದಿಂದ ತಮ್ಮೊಳಗೆ ತಾವು ಹೀಗೆಂದು ಹೇಳುವರು ಎಲೈ ಮಿತ್ರರೆ! ಈ ಕುಳ್ಳನು ನಿಜವಾದ ಬ್ರಾಹ್ಮಣನಲ್ಲ! ಮಾಯಾವಿಯಾದ ವಿಷ್ಣುವೇ ದೇವಕಾರ್ಯಾರ್ಥವಾಗಿ ಈ ವೇಷದಿಂದ ಬಂದು ನಮ್ಮನ್ನು ವಂಚಿಸಿರುವನು ಈ ಕಪಟಬ್ರಹ್ಮಚಾರಿಯಿಂದ ನಮ್ಮ ಸರ್ವಸ್ವವೂ ಅಪಹೃತವಾಯಿತು ನಮ್ಮ ಪ್ರಭುವಾದ ಬಲಿಯು ಸತ್ಯಸಂಧನಾದುದರಿಂದಲೂ, ಬ್ರಾಹ್ಮಣಭಕ್ತಿಯುಳ್ಳವನಾದುದರಿಂದಲೂ, ದಯಾವಂತನಾದುದರಿಂದಲೂ ಇದರಮೇಲೆ ಯಜ್ಞದೀಕ್ಷಿತನಾಗಿದ್ದುದರಿಂದಲೂ, ಮಾತಿಗೆ ತಪ್ಪಲಾರದೆ ಇವನ ಮೋಸಕ್ಕೊಳಗಾದನು ಹೀಗೆ ಸತ್ಯವಂತನಾದ ನಮ್ಮ ಪ್ರಭುವಿನಲ್ಲಿಯೂ ಕಪಟಬುದ್ಧಿಯನ್ನು ತೋರಿಸಿದ ಈ ವಾಮನನನ್ನು ನಾವುಕೊಲ್ಲದೆ ಬಿಡಬಾರದು. ನಾವು ನಮ್ಮ ಸ್ವಾಮಿಭಕ್ತಿಯನ್ನು ತೋರಿಸುವುದಕ್ಕೆ ಇದೇ ತಕ್ಕಸಮಯವು" ಎಂದು ಗುಂಪುಗೂಡಿ, ಬಲಿಯು ಬಹಳವಾಗಿ ತಡೆದರೂ ಕೇಳದೆ, ವಾಮನನಮೇಲೆ ಬಿದ್ದು ಹೊಡೆಯುವುದಕ್ಕೆ ಬಂದರು ಹೀಗೆ ಆಯುಧಪಾಣಿಗಳಾಗಿ ಬರುತ್ತಿರುವ ದೈತ್ಯಭಟರನ್ನು ನೋಡಿ ನಂದ,ಸುನಂದ,

ವಿಷ್ವಕ್ಸೇನ, ಜಯಂತ, ಶ್ರುತದೇವ, ಪುಷ್ಪದಂತ, ಸಾತ್ವತರೇ ಮೊದಲಾದ ವಿಷ್ಣು ಕಿಂಕರರೆಲ್ಲರೂ, ಆಯುಧಪಾಣಿಗಳಾಗಿ ನಿಂತು, ಆರಾಕ್ಷಸಸೈನ್ಯವನ್ನು ಕಂಡಕಂಡ ಕಡೆಯಲ್ಲಿ ಕೊಲ್ಲುತ್ತ ಎಲ್ಲರನ್ನೂ ಓಡಿಸಿದರು ತನ್ನ ಸೈನ್ಯವು ಹೀಗೆ ವಿಷ್ಣು ದೂತರಿಂದ, ಕೊಲ್ಲಲ್ಪಡುತ್ತಿದ್ದಾಗಲೂ ಬಲಿಯು, ತನ್ನ ಗುರುವಾದ ಶುಕ್ರಾಚಾರ್ಯನ ಶಾಪವನ್ನು ಸ್ಮರಿಸಿಕೊಂಡು, ಅದು ಯುದ್ಧಮಾಡುವುದಕ್ಕೆ ತಕ್ಕ ಕಾಲವಲ್ಲವೆಂದು ನಿಶ್ಚಯಿಸಿ ತನ್ನ ಸೈನಿಕರನ್ನು ನೋಡಿ ಹೀಗೆಂದು ಹೇಳುವನು ''ಓ ವಿಪ್ರಚಿತ್ತೀ!ಓ ರಾಹೂ!ಓ ಹೇತೀ! ನನ್ನ ಮಾತನ್ನು ಕೇಳಿರಿ! ಈಗ ನೀವು ಯುದ್ಧಕ್ಕೆ ಹೋಗಬಾರದು ಈಗ ನಮಗೆ ಕಾಲವು ಪ್ರತಿಕೂಲವಾಗಿರುವುದು ವಾಮನರೂಪದಿಂದ ಬಂದಿರುವ ಈ ಭಗವಂತನೇ ಕಾಲಸ್ವರೂಪನೆಂದು ತಿಳಿಯಿರಿ! ಈತನೇ ಸಮಸ್ತಭೂತಗಳಿಗೂ ಅಧಿಪತಿಯು! ಹೀಗೆ ಸರ್ವೇಶ್ವರನೇ ಪ್ರತಿಕೂಲನಾಗಿರುವಾಗ, ಪುರುಷನು ಎಷ್ಟೇ ಪ್ರಯತ್ನಿಸಿದರೂ ಅವೆಲ್ಲವೂ ವ್ಯರ್ಥವಾಗುವುದೇಹೊರತು ಸಫಲವಾಗಲಾರದು ಕಾಲವಶರಾದ ಮನುಷ್ಯರ ಪೌರುಷವು ಕೆಲಸಕ್ಕೆ ಬಾರದು. ಕಾಲಗತಿಯನ್ನು ಯಾರುತಾನೇಮೀರಬಲ್ಲರು? ಮೊದಲು ನಮಗೆ ಸುಖವನ್ನುಂಟುಮಾಡುವುದಕ್ಕಾಗಿ ದೇವತೆಗಳಿಗೆ ದುಃಖವನ್ನು ತಂದಿಟ್ಟ ಆ ಭಗವಂತನೇ; ಈಗ ನಮಗೆ ದುಃಖವನ್ನೂ, ದೇವತೆಗಳಿಗೆ ಸುಖವನ್ನೂ ಉಂಟುಮಾಡಬೇಕೆಂದು ನಿಶ್ಚಯಿಸಿರುವನು ಇದನ್ನು ತಪ್ಪಿಸುವುದಕ್ಕೆ ನಮ್ಮಿಂದ ಸಾಧ್ಯವೆ? ಮನುಷ್ಯನು ತನ್ನ ದೇಹಬಲದಿಂದಾಗಲಿ, ತಂತ್ರಬಲದಿಂದಾಗಲಿ, ಔಷಧಾದಿಗಳಿಂದಾಗಲಿ, ಸಾಮಾದ್ಯುಪಾಯಗಳಿಂದಾಗಲಿ, ಕಾಲಸ್ವರೂಪಿಯಾದ ಆ ಭಗವಂತನ ಸಂಕಲ್ಪವನ್ನು ಅತಿಕ್ರಮಿಸಲಾರನು ಮೊದಲು ನಿಮಗೆ ದೈವಾನುಕೂಲ್ಯವಿದ್ದುದರಿಂದಲೇ ನೀವು ಅನೇಕಾವರ್ತಿ ಇಂದ್ರಾದಿದೇವತೆಗಳನ್ನೂ ಬಹಳಸುಲಭವಾಗಿ ಜಯಿಸಿದಿರಿ! ಹಿಂದೆ ನಿಮ್ಮಿಂದ ಪರಾಜಿತವಾದವರೇ, ಈಗ ನಿಮ್ಮನ್ನು ಜಯಿಸಿ ಸಿಂಹನಾದವನ್ನು ಮಾಡುತ್ತಿರುವರು! ಆದುದರಿಂದ ಎಲೈ ವೀರರೆ ! ಹಿಂದಿನಂತೆ ನಮಗೆ ಅನುಕೂಲಕಾಲವು ಬರುವವರೆಗೆ ನಾವು ಯುದ್ಧಕ್ಕೆ ಪ್ರಯತ್ನಿಸಬಾರದು ಅನುಕೂಲಕಾಲವು ಬಂದ ಮೇಲೆ ನಾವು ಈ ದೇವತೆಗಳನ್ನು ಅನಾಯಾಸವಾಗಿಯೇ ಜಯಿಸಬಹುದು.

ಆದುದರಿಂದ ನೀವು ಕಾಲನಿರೀಕ್ಷಣೆಯನ್ನು ಮಾಡುತ್ತ ತಾಳ್ಮೆಯಿಂದಿರ ಬೇಕು" ಎಂದನು ಬಲಿಯ ಈ ವಾಕ್ಯವನ್ನು ಕೇಳಿ, ದೈತ್ಯದಾನವ ವೀರರೆಲ್ಲರೂ, ಅಡ್ಡಮಾತಾಡದೆ, ವಿಷ್ಣುದೂತರ ಪ್ರಹಾರವನ್ನು ತಡೆಯ ಲಾರದೆ ಓಡಿಹೋಗಿ, ಪಾತಾಳದಲ್ಲಿ ಅವಿತುಕೊಂಡರು ಇಷ್ಟರಲ್ಲಿ ಭಗವಂ ತನ ಮನೋಭಿಪ್ರಾಯವನ್ನು ತಿಳಿದು, ಗರುತ್ಮಂತನು ಬಲಿಚಕ್ರವರ್ತಿ ಯನ್ನು ವರುಣಪಾಶದಿಂದ ಕಟ್ಟಿ ಹಾಕಿದನು ಹೀಗೆ ಗರುಡನು ನಿರಪರಾ ಧಿಯಾದ ಬಲಿಯನ್ನು ಪಾಶದಿಂದ ಬಿಗಿಯುತ್ತಿರುವಾಗ, ಸಮಸ್ತದಿಕ್ಕು ಗಳಲ್ಲಿಯೂ, ಆಕಾಶದಲ್ಲಿಯೂ, ಭೂಮಿಯಲ್ಲಿಯೂ ವಿಶೇಷವಾದ ಹಾಹಾ ಕಾರವುಂಟಾಯಿತು ಇತ್ತಲಾಗಿ ಬಲಿಯು ತನ್ನ ಸರ್ವಸ್ವವನ್ನೂ ಕಳೆದು ಕೊಂಡು, ಪಾಶದಿಂದ ಬಿಗಿಯಲ್ಪಟ್ಟಿದ್ದಾಗಲೂ, ತನ್ನ ಧೈರ್ಯವನ್ನೂ, ವಿವೇಕವನ್ನೂ ಬಿಡದೆ, ಉತ್ಸಾಹದಿಂದಿರುವುದನ್ನು ನೋಡಿ, ವಾಮನರೂಪಿ ಯಾದ ಭಗವಂತನು ತನ್ನಲ್ಲಿಯೇ ತಾನು ಆಶ್ಚರ್ಯಪಡುತ್ತ, ಅವನನ್ನು ಕುರಿತು "ಓ ರಾಕ್ಷಸೇಂದ್ರಾ! ನೀನು ನನಗೆ ಮೂರಡಿಗಳ ನೆಲ ವನ್ನು ಕೊಡುವುದಾಗಿ ವಾಗ್ದಾನಮಾಡಿದೆ! ನೀನು ಪಾಲಿಸುತ್ತಿದ್ದ ಭೂ ಮಿಯೆಲ್ಲವೂ ನನ್ನ ಎರಡಡಿಗಳಿಗೇ ಸಾಲದೆಹೋಯಿತು. ನಿನ್ನಿಂದ ನನಗೆ ಇನ್ನೊಂದಡಿಯ ಭೂಮಿಯು ಸೇರಬೇಕಾಗಿರುವುದು. ಅದನ್ನು ಕೊಡುವು ದಕ್ಕೇನು ಮಾಡುವೆ? ಕೊಟ್ಟಲ್ಲದೆ ತೀರದು ಸೂರ್ಯಕಿರಣವು ಎಲ್ಲಿಯ ವರೆಗೆ ಪ್ರಸರಿಸುವುದೋ, ನಕ್ಷತ್ರಗಳೊಡಗೂಡಿದ ಚಂದ್ರನು ಎಲ್ಲಿಯವರೆಗೆ ಕಾಣುತ್ತಿರುವನೋ, ಪರ್ಜನ್ಯನೂ, ವಹ್ನಿಯೂ ಎಷ್ಟುದೂರದವರೆಗೆ ವ್ಯಾ ಪಿಸಿರುವರೋ ಅದುವರೆಗಲ್ಲವೇ ನಿನ್ನ ಭೂಮಿಯು! ಅವುಗಳಲ್ಲಿ ನಾನು ಭೂಲೋಕವನ್ನು ನನ್ನ ಒಂದಡಿಯಿಂದಲೇ ಅಳೆದುಬಿಟ್ಟೆನು. ದಿಕ್ಕುಗಳೂ, ಆಕಾಶವೂ ನನ್ನ ಶರೀರದಿಂದ ಆಕ್ರಮಿಸಲ್ಪಟ್ಟುವು. ನೀನು ನೋಡುತಿದ್ದ ಹಾಗೆಯೇ ನನ್ನ ಎರಡನೆಯ ಹಜ್ಜೆಯಿಂದ ಸ್ವರ್ಗಲೋಕವನ್ನೂ ಅಳೆದುಬಿ ಟ್ಟೆನು. ಮೂರನೆಯ ಹಜ್ಜೆಗೆ ಸ್ಥಳವೆಲ್ಲಿ? ವಾಗ್ದಾನಮಾಡಿ ತಪ್ಪಿದವನಿಗೆ ನರಕವಾಸವು ತಪ್ಪಿದುದಲ್ಲ ಈ ನಿನ್ನ ಗುರುವಾದ ಶುಕ್ರಾಚಾರ್ಯನೂ ಇ ದನ್ನು ಚೆನ್ನಾಗಿ ಬಲ್ಲನು ಆದರಿಂದ ನೀನು ನರಕದಲ್ಲಿ ಬೀಳದೆ ತೀರದು

ಯಾವನು ಯಾಚಕರಿಗೆ ಕೊಡುವುದಾಗಿ ಹೇಳಿ, ಅದನ್ನು ಕೊಡಲಾರದೆ ಹೋಗುವನೋ. ಅವನ ಮನೋರಥವು ಕೇವಲ ವ್ಯರ್ಥವೆನಿಸುವುದು. ಕೈಲಾಗದಿದ್ದಮೇಲೆ ಬಾಯಿಂದಾಡಲೇ ಬಾರದು. ಆಡಿದಮೇಲೆ ತಪ್ಪಿದರೆ ಅವನಿಗೆ ಅಧೋಲೋಕವಲ್ಲದೆ ಎಂದಿಗೂ ಸ್ವರ್ಗವು ಲಭಿಸಲಾರದು ಈಗ ನೀನೂ ನನಗೆ ವಾಗ್ದಾನಮಾಡಿದುದನ್ನು ಕೊಡಲಾರದುದರಿಂದ. ನನ್ನನ್ನು ವಂಚಿಸಿದಂತಾಯಿತು. ಈ ನಿನ್ನ ಅಸತ್ಯದೋಷಕ್ಕೆ ಫಲವಾಗಿ, ಕೆಲವು ಸಂವತ್ಸರಗಳವರೆಗೆ ನೀನು ನರಕವಾಸವನ್ನು ಮಾಡದೆ ತೀರದು" ಎಂದನು. ಇದು ಇಪ್ಪತ್ತೊಂದನೆಯ ಅಧ್ಯಾಯವು

---

ಬಲಿಯು ಮೂರನೆಯ ಅಡಿಗಾಗಿ ತನ್ನ ತಲೆಯನ್ನೊಡ್ಡಿದುದು. ಪ್ರಹ್ಲಾದಾದಿಗಳು ಬಲಿಯನ್ನು ರಕ್ಷಿಸಬೇಕೆಂದು ವಾಮನಮೂರ್ತಿಯನ್ನು ಪ್ರಾರ್ಥಿಸಿದುದು

ರಾಜೇಂದ್ರಾ ಕೇಳು ! ಹೀಗೆ ಭಗವಂತನು ಮರ್ಮಭೇದಕವಾಕ್ಯಗಳಿಂದ ಅವಮಾನಪಡಿಸಿ ನಿಂದಿಸುತಿದ್ದರೂ, ಬಲಿಯು ಅವನ ಮಾತಿಗೆ ಕೋಪಿಸದೆ, ಅದಕ್ಕಾಗಿ ಧೈರ್ಯಗೆಡದೆ,ಗಂಭೀರವಾಕ್ಯದಿಂದ ಪ್ರತ್ಯುತ್ತರವನ್ನು ಹೇಳುವನು. "ಓ ಪರಮಪುರುಷಾ ! ನನ್ನ ಬಾಯಿಂದ ಹೊರಟ ಮಾತು ಎಂದಿಗೂ ಅಸತ್ಯವಾಗಲಾರದು ಈಗಲೂ! ನಾನು ಆಡಿದ ಮಾತಿಗೆ ತಪ್ಪುವವನಲ್ಲ! ನನ್ನ ಮಾತನ್ನು ಹೇಗಾದರೂ ಸತ್ಯವಾಗಿಯೇ ಮಾಡುವೆನು ನಿನ್ನನ್ನು ವಂಚಿಸಬೇಕೆಂಬ ಬುದ್ಧಿಯಿಂದ ನಾನು ನಿನಗೆ ವಾಗ್ದಾನಮಾಡಿದವನಲ್ಲ ದೈವಾಧೀನವಾಗಿ ಬಂದುದಕ್ಕೆ ನಾನೇನು ಮಾಡಲಿ! ಈಗಲೂ ಚಿಂತೆಯಿಲ್ಲ ನನ್ನ ಸರ್ವಸ್ವವೂ ಹೋಗಿದ್ದರೂ, ಈಗ ನನ್ನ ಶರೀರವು ನನ್ನದಾಗಿರುವುದಲ್ಲವೆ ? ಇದೋ! ಮೂರನೆಯ ಅಡಿಗಾಗಿ ನನ್ನ ತಲೆಯನ್ನೊಡ್ಡಿರುವೆನು ಇದರಮೇಲೆ ನಿನ್ನ ಪಾದವನ್ನಿಡು! ನಾನು ಆಡಿದ ಮಾತಿಗೆ ತಪ್ಪಿದೆನೆಂದೂ,ಅದಕ್ಕಾಗಿ ನರಕದಲ್ಲಿ ಬೀಳಬೇಕೆಂದೂ ಹೇಳಿದೆಯಲ್ಲವೆ?ಓ ಬ್ರಾಹ್ಮಣಕುಮಾರಾ! ನರಕಕ್ಕೂ ನಾನು ಹೆದರತಕ್ಕವನಲ್ಲ. ರಾಜ್ಯವು ಕೈಬಿಟ್ಟುಹೋದುದಕ್ಕೂ ನಾನು ಚಿಂತಿಸುವನಲ್ಲ! ನೀನು ನನ್ನನ್ನು ವರುಣಪಾಶಗಳಿಂದ ಕಟ್ಟಿಸಿದುದಕ್ಕೂ ನಾನು ದುಃಖಿಸುವವನಲ್ಲ! ಇದಕ್ಕಿಂತಲೂ ದೊಡ್ಡವಿಪತ್ತಿ

ಗೂ ನಾನು ಹೆದರುವವನಲ್ಲ. ನನ್ನ ಸರ್ವಸ್ವವು ಹೋದುದಕ್ಕೂ ನಾನು ಚಿಂತಿಸುವವನಲ್ಲ ನಿನ್ನ ದ್ವೇಷಕ್ಕೂ ನಾನು ಅಂಜುವವನಲ್ಲ ಅಸತ್ಯ ವೊಂದಕ್ಕೇ ಭಯಪಡುವೆನು ಲೋಕದಲ್ಲಿ ಮನುಷ್ಯನಿಗೆ ತಂದೆತಾಯಿಗಳಾಗಲಿ, ಸಹೋದರರಾಗಲಿ, ಸಮಾನಸ್ಕಂಧರಾದ ಸ್ನೇಹಿತರಾಗಲಿ, ದಾಕ್ಷಿಣ್ಯ ದಿಂದ ಮಾಡದಿರತಕ್ಕ ಶಿಕ್ಷೆಯನ್ನು, ಯೋಗ್ಯನಾದ ಬೇರೊಬ್ಬನು ಮಾಡಿದ ಪಕ್ಷದಲ್ಲಿ, ಅದು ಶ್ರೇಯಃಕಾರಣವೇ ಹೊರತು, ಅವಮಾನಕರವಲ್ಲವೆಂಬುದೇ ನನ್ನ ಮತವು ಆದುದರಿಂದ ಈಗ ನೀನು ನನಗೆ ಮಾಡಿದ ಶಿಕ್ಷೆಯನ್ನು ಗೌರವಪೂರ್ವಕವಾಗಿಯೇ ಅಂಗೀಕರಿಸುವೆನು ಓ ಮಹಾತ್ಮಾ! ಇದುವರೆಗೆ ನಾನು ಶೌರ್ಯ, ವೀರ್ಯ, ಧನಸಮೃದ್ಧಿ ಮುಂತಾದುವುಗಳಿಂದ ವಿಶೇಷ ಮದಾಂಧನಾಗಿದ್ದೆನು ಹೀಗೆ ಗರ್ವದಿಂದ ಕಣ್ಕಾಣದೆ ಕುರುಡರಾದ ನಮಗೆ ನೀನು ತಕ್ಕ ಶಿಕ್ಷೆಯಿಂದ ಕಣ್ಣನ್ನು ಕೊಟ್ಟಂತಾಯಿತು ಆದುದರಿಂದ ನೀನೇ ನಮಗೆ ಗುರು। ಪೂರ್ವದಲ್ಲಿ ನಮ್ಮ ವಂಶದ ಅನೇಕದೈತ್ಯರು, ತಾವಾಗಿ ನಿನ್ನಲ್ಲಿ ಉಗ್ರವಿರೋಧವನ್ನು ಬೆಳೆಸಿದರೂ, ಅದರಿಂದಲೇ ಯೋಗೀಶ್ವರರಿಗೂ ದುರ್ಲಭವಾದ ಉತ್ತಮಪದವನ್ನು ಹೊಂದಿದರು. ನಾನಾದರೋ ಅವರಂತಲ್ಲದೆ ನಿರಪರಾಧಿಯಾಗಿದ್ದರೂ, ವಿಚಿತ್ರಚೇಷ್ಟೆಯುಳ್ಳ ನಿನ್ನಿಂದ ವರುಣಪಾಶದಲ್ಲಿ ಬಿಗಿಸಲ್ಪಟ್ಟೆನು ನಿನ್ನ ನಿಗ್ರಹಕ್ಕೆ ಪಾತ್ರನಾದರೂ ನಾನುಲಜ್ಜೆಪಡಲಾರೆನು ಅದಕ್ಕಾಗಿ ದುಃಖಿಸಲಾರೆನು, ನಿನ್ನಲ್ಲಿ ದ್ವೇಷವನ್ನೂ ಬೆಳೆಸಲಾರೆನು ; ನೀನು ನನಗೆ ಮಾಡಿದ ಈ ಬಂಧನವೇ ನನಗೆ ವಿಶೇಷಕೀರ್ತಿಗೆ ಕಾರಣವಾಗಿರುವುದು. ಓ ಪರಮಪುರುಷಾ! ನನ್ನ ಅಜ್ಜನಾದ ಪ್ರಹ್ಲಾದನು, ನಿನ್ನ ಭಕ್ತರಲ್ಲಿ ತಾನೇ ಮೇಲೆನಿಸಿಕೊಂಡು, ಮೂರುಲೋಕದಲ್ಲಿಯೂ ಪ್ರಸಿದ್ಧಿ ಹೊಂದಿದನು ಅವನು, ತನ್ನ ಹೆತ್ತತಂದೆಯಾದ ಹಿರಣ್ಯಕಶಿಪುವಿನಿಂದ ಪ್ರಾಣಾಂತವಾಗಿ ಹಿಂಸಿಸಲ್ಪಟ್ಟಾಗಲೂ, ಸ್ವಲ್ಪಮಾತ್ರವೂ ಧೈರ್ಯಗುಂದದೆ, ನಿನ್ನನ್ನೇ ಸರ್ವವಿಧದಲ್ಲಿಯೂ ನಂಬಿ, ನಿನ್ನ ಅನುಗ್ರಹದಿಂದ ಉತ್ತಮಗತಿಯನ್ನೂ ಹೊಂದಿದನು ಮತ್ತು ಆ ಪ್ರಹ್ಲಾದನು, ತನ್ನ ತಂದೆಯು ತನ್ನನ್ನು ಹಿಂಸಿಸುತ್ತಿರುವಾಗಲೂ ಭಯಪಡದೆ, ತನ್ನಲ್ಲಿ ತಾನು ಹೀಗೆಂದು ಯೋಚಿಸುತ್ತಿದ್ದನು. "ಎಂ

ದಿದ್ದರೂ ಕೊನೆಗಾಲಕ್ಕೆ ಆತ್ಮವನ್ನು ಬಿಟ್ಟು ಹೋಗತಕ್ಕ ಈ ಶರೀ ರದಿಂದ ಮನುಷ್ಯನಿಗೆ ಯಾವಪುರುಷಾರ್ಥವುಂಟು ? ಶರೀರಸಂಬಂಧಿಗ ಳಾದ ಈ ಬಂಧುಗಳಿಂದತಾನೇ ಪ್ರಯೋಜನವೇನು ? ಕಳ್ಳರಂತೆ ಸುತ್ತ ಮುತ್ತಲೂ ಸೇರಿ ಕಿತ್ತು ತಿನ್ನುತ್ತಿರುವ ಈ ದೇಹಸಂಬಂಧಿಗಳಿಂದಾಗಲಿ, ಈ ದೇಹದಿಂದಾಗಲಿ, ಮನುಷ್ಯರಿಗೆ ಪಡೆಯಬೇಕಾದ ಪುರುಷಾರ್ಥವೊಂ ದೂ ಇರುವುದಿಲ್ಲ. ಸಂಸಾರಬಂಧಕ್ಕೆ ಮೂಲವೆನಿಸಿಕೊಂಡ ಪತ್ನಿಯು ಯಾವ ಪುರುಷಾರ್ಥವನ್ನು ಗೈಗೂಡಿಸುವಳು ? ಈ ಮನೆಮಠಗಳಿಂದ ತಾನೇ ಫಲವೇನು ? ಇವೆಲ್ಲವೂ ಮನುಷ್ಯನ ಆಯುಸ್ಸನ್ನು ವ್ಯರ್ಥವಾಗಿ ಕಳೆಯುವುದಕ್ಕೆ ಕಾರಣಗಳಾಗುವುವೇಹೊರತು, ಯಾವಫಲವನ್ನೂ ಕೈ ಗೂಡಿಸಲಾರವು" ಎಂಬ ನಿಶ್ಚಯಬುದ್ಧಿಯಿಂದ, ಜ್ಞಾನಭಕ್ತಿಗಳನ್ನು ಸಂ ಪಾದಿಸಿ, ಸಂಸಾರಕ್ಕೆಮಾತ್ರ ಭಯಪಡುತಿದ್ದನೇ ಹೊರತು, ತನ್ನ ತಂದೆಯ ಕೋಪಕ್ಕೆ ಭಯಪಡುತ್ತಿರಲಿಲ್ಲ ಸರ್ವವಿಧದಿಂದಲೂ ನಿನ್ನನ್ನೇ ನಂಬಿ ಸಂಸಾ ರಭಯನಿವಾರಕಗಳಾಗಿಯೂ ಪರಮಪುರುಷಾರ್ಥರೂಪವಾಗಿಯೂ ಇರು ವ ನಿನ್ನ ಪಾದಪದ್ಮಗಳನ್ನೇ ಶರಣುಹೊಂದಿದನಲ್ಲವೆ? ಹಾಗೆಯೇ ಈಗ ನಾ ನೂಕೂಡ, ದೈವವಶದಿಂದ ರಾಜ್ಯಲಕ್ಷ್ಮಿಯನ್ನು ಕಳೆದುಕೊಂಡರೂ,ನೀನು ನನ್ನಲ್ಲಿ ದ್ವೇಷವನ್ನು ತೋರಿಸುತಿದ್ದರೂ, ನಿನ್ನ ಪಾದಗಳನ್ನೇ ನಂಬಿ ರುವೆನು. ಓ ಮಹಾತ್ಮಾ! ಐಶ್ವರ್ಯವೆಂಬುದೇ ಮನುಷ್ಯನಿಗೆ ಅಜ್ಞಾ ನವನ್ನು ತಂದಿಡುವುದು ಇದರಿಂದ ಜ್ಞಾನವೆಲ್ಲವೂ ನಷ್ಟವಾಗುವುದು ಮೃ ತ್ಯುವಿನ ಕೈಯಲ್ಲಿ ಸಿಕ್ಕಿಬಿದ್ದಾಗಲೂ ಮನುಷ್ಯನು,ಜೀವವು ಚಂಚಲವೆಂಬು ದನ್ನು ತಿಳಿಯದೆ ಸ್ಥಿರವೆಂದೇ ತಿಳಿಯುವನು ಹೀಗೆ ಅಜ್ಞಾನಹೇತುವಾದನನ್ನ ರಾಜ್ಯವನ್ನು ನೀನು ಕಿತ್ತುಕೊಂಡುದಕ್ಕಾಗಿ ಈಗ ನಾನು ಸಂತೋಷಿಸುವೆನೇ ಹೊರತು ದುಃಖಿಸುವವನಲ್ಲ"ಎಂದನು. ಓ ಪರೀಕ್ಷಿದ್ರಾಜಾ! ತತ್ವಜ್ಞನಾದ ಬಲಿಚಕ್ರವರ್ತಿಯು, ದೈನ್ಯದಿಂದ ಈ ಮಾತನ್ನು ಹೇಳುತ್ತಿರುವಾಗಲೇ, ಭಾ ಗವತೋತ್ತಮನಾಗಿಯೂ, ದಿವ್ಯತೇಜೋವಿಶಿಷ್ಟನಾಗಿಯೂ, ಕಮಲದಳ ದಂತೆ ಕಣ್ಣುಳ್ಳವನಾಗಿಯೂ, ಹೊಂಬಣ್ಣದ ವಸ್ತ್ರವನ್ನು ಥರಿಸಿದವನಾಗಿ ಯೂ, ಅಂಜನದಂತೆ ಕಪ್ಪಾದ ದೇಹಕಾಂತಿಯುಳ್ಳವನಾಗಿಯೂ, ಆ

ಜಾನುಬಾಹುವಾಗಿಯೂ, ಮಹೋನ್ನತನಾಗಿಯೂ ಇರುವ ಪ್ರಹ್ಲಾದನು ಉದಿಸಿಬಂದ ಪೂರ್ಣಚಂದ್ರನಂತೆ ಅಲ್ಲಿಗೆ ಬಂದು ಸೇರಿದನು ಆಗ ಬಲಿಯು ವರುಣಪಾಶದಿಂದ ಬಿಗಿಯಲ್ಪಟ್ಟಿದ್ದುದರಿಂದ, ಅವನಿಗೆ ತಕ್ಕ ಸತ್ಕಾರಗಳನ್ನು ಸಮರ್ಪಿಸಲಾರದೆ ತಲೆಯನ್ನುಮಾತ್ರ ಬಗ್ಗಿಸಿ ನಮಸ್ಕರಿಸಿದನು ಅವನ ಕಣ್ಣುಗಳಲ್ಲಿ ನೀರು ತುಳುಕುತಿತ್ತು ನಾಚಿಕೆಯಿಂದ ತಲೆಯೆತ್ತಿ ನೋಡಲಾರದೆ ಸುಮ್ಮನೆ ನಿಂತಿದ್ದನು ಆಗ ಪ್ರಹ್ಲಾದನು ಸುನಂದಾದಿ ಪಾರ್ಷದರಿಂದ ಸೇವಿತನಾಗಿ ನಿಂತಿದ್ದ ವಾಮನನನ್ನು ನೋಡಿ, ಆನಂದದಿಂದ ಪುಳಕಿತವಾದ ಮೈಯುಳ್ಳವನಾಗಿ, ಕಣ್ಣುಗಳಲ್ಲಿ ಆನಂದಬಾಷ್ಪಗಳನ್ನು ತುಳುಕಿಸುತ್ತ ಮುಂದೆ ಬಂದು, ವಾಮನಮೂರ್ತಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ ಹೀಗೆಂದು ವಿಜ್ಞಾಪಿಸುವನು, "ಓ! ಪರಮಪುರುಷಾ! ಈ ಬಲಿಯು ಹಿಂದೆ ವಿಶ್ವಜಿತ್ತೆಂಬ ಯಾಗವನ್ನು ಮಾಡಿದಾಗ, ಅದರಿಂದ ನೀನು ತೃಪ್ತನಾಗಿ, ನೀನಾಗಿಯೇ ಇವನಿಗೆ ಇಂದ್ರಪದವಿಯನ್ನು ಕೊಡಿಸಿದೆ. ಈಗ ನೀನೇ ಅದನ್ನು ಉಪಾಯದಿಂದ ಕಿತ್ತುಕೊಂಡೆ ಪುರುಷರನ್ನು ಮೋಹಪಾಶದಲ್ಲಿ ಸಿಕ್ಕಿಸುವ ಈ ರಾಜ್ಯಸಂಪತ್ತುಗಳಿಂದ ಇವನನ್ನು ಬಿಡಿಸಿದುದಕ್ಕಾಗಿ ನಾನು ಸಂತೋಷಪಡುವೆನೇಹೊರತು ಚಿಂತಿಸುವವನಲ್ಲ ಲೋಕದಲ್ಲಿ ಎಷ್ಟೇ ವಿದ್ವಾಂಸನಾದರೂ, ಎಷ್ಟೇ ಧೀರನಾಗಿದ್ದರೂ, ಐಶ್ವರ್ಯದಿಂದ ಮೋಹಿತನಾಗಿ ಆತ್ಮಸ್ವರೂಪವನ್ನು ಮರೆತು ಕೆಟ್ಟು ಹೋಗುವನು ಈಗ ನೀನು ಈತನನ್ನು ಭಾಗ್ಯಹೀನನನ್ನಾಗಿ ಮಾಡಿದುದು ಅನುಗ್ರಹವೇಹೊರತು ನಿಗ್ರಹವಲ್ಲ ಹೀಗೆ ಮಹೋಪಕಾರಿಯಾಗಿಯೂ, ಜಗದೀಶ್ವರನಾಗಿಯೂ, ಸರ್ವಜ್ಞನಾಗಿಯೂ ಇರುವ ನಿನಗೆ ನಮಸ್ಕಾರವು" ಎಂದನು ಓ! ಪರೀಕ್ಷಿದ್ರಾಜಾ! ಹೀಗೆ ಪ್ರಹ್ಲಾದನು ಬದ್ಧಾಂಜಲಿಯಾಗಿ ಭಗವಂತನಲ್ಲಿ ವಿಜ್ಞಾಪಿಸಿ ಸುಮ್ಮನಾದಮೇಲೆ, ಬ್ರಹ್ಮದೇವನು ಮುಂದೆ ಬಂದು ವಾಮನಮೂರ್ತಿಯೊಡನೆ ಒಂದೆರಡು ಮಾತುಗಳನ್ನು ಹೇಳುವುದಕ್ಕಾಗಿ ಬಾಯೆತ್ತುವಷ್ಟರಲ್ಲಿ ಬಲಿಯ ಪತ್ನಿಯಾದ ವಿಂಧ್ಯಾವಳಿಯು, ತನ್ನಪತಿಯು ವರುಣಪಾಶದಿಂದ ಬಿಗಿಯಲ್ಪಟ್ಟಿರುವುದನ್ನು ನೋಡಿ ಭಯದಿಂದ ಕಣ್ಣೀರನ್ನು, ತುಳುಕಿಸುತ್ತ ಮುಂದೆಬಂದು, ಭಗವಂತನ

ಪಾದಗಳಿಗೆ ನಮಸ್ಕರಿಸಿ, ಬದ್ಧಾಂಜಲಿಯಾಗಿ ನಿಂತು, ಹೀಗೆಂದು ವಿಜ್ಞಾಪಿ
ಸುವಳು "ಓ! ದೇವಾ' ನೀನು ಲೀಲಾರ್ಥವಾಗಿಯೇ ಈ ಜಗತ್ತನ್ನು ಸೃ
ಷ್ಟಿಸಿರುವೆ! ಜಗತ್ತಿನ ವ್ಯಾಪಾರವೆಲ್ಲವೂ ನಿನಗೆ ಮಕ್ಕಳಾಟಿಕೆಯಂತಿರು
ವುದು ನೀನೇ ಸೂತ್ರಧಾರಿಯಂತೆ ಇದನ್ನು ನಡೆಸತಕ್ಕವನಾಗಿದ್ದರೂ ಅ
ಜ್ಞರಾದ ಕೆಲವರು ತಮ್ಮ ವ್ಯಾಪಾರಕ್ಕೆ ತಾವೇ ಸ್ವತಂತ್ರರೆಂದು ವ್ಯ
ರ್ಥಾಭಿಮಾನದಿಂದ ಬೀಗಿ ಬೆರೆಯುವರು ತಾವು ಯಾವ ವಿಷಯದಲ್ಲಿಯೂ
ಅಸ್ವತಂತ್ರರಾಗಿದ್ದರೂ, ನಾಚಿಕೆಯಿಲ್ಲದೆ ತಾವೇ ಸ್ವತಂತ್ರರೆಂದೂ ವಾದಿ
ಸುವರು ಲೋಕದ ಸೃಷ್ಟಿಸ್ಥಿತಿ ಸಂಹಾರಗಳೆಲ್ಲಕ್ಕೂ ನೀನೊಬ್ಬನೇ ಸ್ವತಂ
ತ್ರನಾಗಿರುವಾಗ,ಮತ್ತೊಬ್ಬರು ನಿನಗೆ ಯಾವುದನ್ನು ತಾನೇಕೊಡಬಲ್ಲರು?
ಹೀಗಿದ್ದರೂ ನನ್ನ ಪತಿಯು ಮೂರುಲೋಕವನ್ನೂ ನಿನಗೆ ಕೊಟ್ಟೆನೆಂದೂ,
ಮೂರನೆಯ ಹಜ್ಜೆಗೆ ತನ್ನ ತಲೆಯನ್ನೊಡ್ಡಿರುವೆನೆಂದೂ, ತನ್ನ ವಾಕ್ಯವ
ನ್ನು ತಾನು ಸತ್ಯವಾಗಿ ಮಾಡಿಕೊಳ್ಳುವೆನೆಂದೂ, ನಿನ್ನ ಮುಂದೆಯೇ ಹೇ
ಳುತ್ತಿರುವನು ಅಜ್ಞಾನವು ಯಾರನ್ನೂ ಬಿಟ್ಟುದಲ್ಲ! ನನ್ನ ಪತಿಯಾದ
ಬಲಿಯು, ತತ್ವಜ್ಞನೆಂದೆನಿಸಿಕೊಂಡಿದ್ದರೂಕೂಡ, ನಿನ್ನ ಮಾಯೆಗೆ ಮರು
ಳಾಗಿ, ಲೋಕತ್ರಯವೂ, ತನ್ನ ದೇಹವೂ ಇದುವರೆಗೆ ತನಗೆ ಅಧೀನವಾ
ಗಿದ್ದಂತೆಯೂ, ಈಗ ಅವುಗಳನ್ನು ತಾನಾಗಿ ನಿನಗೆ ಒಪ್ಪಿಸಿದುದಾಗಿಯೂ
ಹೇಳಿದನಲ್ಲವೆ? ಇವನು ಅಜ್ಞತೆಯಿಂದ ಈ ಮಾತನ್ನಾಡಿದುದಕ್ಕಾಗಿ
ನೀನು ಇವನಲ್ಲಿ ಕೋಪಿಸದೆ, ಕ್ಷಮೆಯನ್ನುವಹಿಸಿ, ಇವನನ್ನು ಪಾಶಗಳಿಂದ
ಬಿಡಿಸಬೇಕು" ಎಂದು ಪ್ರಾರ್ಥಿಸಿದಳು

ಆಮೇಲೆ ಬ್ರಹ್ಮದೇವನು ವಿಜ್ಞಾಪಿಸುವನು "ಓ ದೇವಾ! ನೀನೇ
ಈ ಸಮಸ್ತಜಗತ್ತನ್ನೂ ಸೃಷ್ಟಿಸಿದವನು! ಆ ಜಗತ್ತಿಗೆ ಅಂತರ್ಯಾಮಿಯಾಗಿ
ದ್ದು ರಕ್ಷಿಸತಕ್ಕವನೂ ನೀನೇ! ಸಂಹಾರಕರ್ತನಾದ ರುದ್ರನಿಗೂ ಇತರ
ದೇವತೆಗಳಿಗೂ ನೀನೇ ನಿಯಾಮಕನೆನಿಸಿಕೊಂಡಿರುವೆ! ಜಗತ್ತೆಲ್ಲವೂ ನಿನ್ನ ಶ
ರೀರವು! ಹೀಗೆ ಲೋಕಕ್ಕೆ ಸರ್ವವಿಧದಲ್ಲಿಯೂ ನಿರ್ವಾಹಕನಾದ ನೀನು, ತನ್ನ
ಸರ್ವಸ್ವವನ್ನೂ ನಿನಗಾಗಿಯೇ ಒಪ್ಪಿಸಿರತಕ್ಕ ಈ ಬಲಿಯನ್ನು ಹೀಗೆ ಬಂ
ಧಿಸಹುದೆ? ಸರ್ವಥಾ ಇವನು ನಿನ್ನ ನಿಗ್ರಹಕ್ಕೆ ಅರ್ಹನಲ್ಲ. ಇವನು ತನ್ನ

ಆಳ್ವಿಕೆಗೊಳಪಟ್ಟ ಮೂರುಲೋಕಗಳನ್ನೂ ನಿನಗೆ ಕೊಟ್ಟುಬಿಟ್ಟನು. ತಾನು ಕರ್ಮಬಲದಿಂದ ಸಂಪಾದಿಸಿದ ಸ್ವರ್ಗಾದಿಗಳನ್ನೂ ನಿನಗೇ ಒಪ್ಪಿಸಿರುವನು ಹೀಗೆ ತನ್ನ ಸರ್ವಸ್ವವನ್ನೂ ಕಳೆದುಕೊಂಡಮೇಲೆಯೂ, ಅದಕ್ಕಾಗಿ ಸ್ವಲ್ಪವೂ ವಿಚಾರವಿಲ್ಲದೆ, ತನ್ನ ದೇಹವನ್ನೂ ನಿನಗೆ ಒಪ್ಪಿಸಿಬಿಟ್ಟನು ಹೀಗೆ ನಿಷ್ಕಪಟವಾಗಿ ವರ್ತಿಸಿದ ಇವನನ್ನು ನೀನು ನಿಗ್ರಹಕ್ಕೆ ಗುರಿಮಾಡಬಹುದೆ? ಯಾವನಾದರೂ ಒಬ್ಬನು ನಿಷ್ಕಪಟವಾದ ದೃಢಬುದ್ಧಿಯಿಂದ, ನಿನ್ನ ಪಾದಾರವಿಂದಗಳಿಗೆ ಅರ್ಘ್ಯಜಲವನ್ನು ಸಮರ್ಪಿಸಿ, ಕೊನೆಗೆ ಒಂದು ಸಣ್ಣಗರಿಕೆಯ ಹುಲ್ಲನ್ನು ತಂದು ಅರ್ಚನೆಮಾಡಿದರೂ, ಅವನು ನಿನ್ನ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ,ಸರ್ವೋತ್ತಮವಾದ ಮೋಕ್ಷವನ್ನೂ ಹೊಂದುವನು ಹೀಗಿರುವಾಗ ದೃಢಮನಸ್ಸಿನಿಂದ ತ್ರೈಲೋಕ್ಯವನ್ನೇ ನಿನಗೆ ಸಮರ್ಪಿಸಿರುವ ಈ ಬಲಿಯು, ಹೀಗೆ ದುಃಖಕ್ಕೆ ಗುರಿಯಾಗಬಹುದೆ? ಆದುದರಿಂದ ನೀನು ಇವನನ್ನು ಬಂಧನದಿಂದ ಬಿಡಿಸಬೇಕು" ಎಂದನು

ಆಗ ವಾಮನಮೂರ್ತಿಯು ಬ್ರಹ್ಮನನ್ನು ಕುರಿತು. "ಓ ಚತುರ್ಮುಖಾ! ನಾನು ಯಾವನಲ್ಲಿ ಅನುಗ್ರಹವನ್ನು ತೋರಿಸಬೇಕೆಂದು ಬಯಸುವೆನೋ, ಅವನ ಧನವನ್ನು ಮೊದಲು ಅಪಹರಿಸಿಬಿಡುವೆನು ಏಕೆಂದು ಕೇಳುವೆಯಾ? ಮನುಷ್ಯನಿಗೆ ಹಣವಿದ್ದಷ್ಟೂ, ಮದವು ಹೆಚ್ಚುವುದು ಆ ಮದದಿಂದ ವಿವೇಕಹೀನನಾಗಿ, ನನ್ನನ್ನೂ, ಇತರಪ್ರಪಂಚವನ್ನೂ ತಿರಸ್ಕರಿಸಿ ಕೆಟ್ಟುಹೋಗುವನು ಆದುದರಿಂದ ಈ ಅನರ್ಥಕ್ಕೆ ಕಾರಣವಾದ ಧನವನ್ನು ಅಪಹರಿಸಿಬಿಡುವುದೇ ನಾನು ನನ್ನ ಭಕ್ತರಲ್ಲಿ ತೋರಿಸತಕ್ಕ ಮೊದಲನೆಯ ಅನುಗ್ರಹವೆಂದು ತಿಳಿ! ಜೀವಾತ್ಮನು ತನ್ನ ಕ್ರಿಯಾರ ನಡೆಸಿದ ಕರ್ಮಗಳಿಂದಲೇ, ಹಲವುಯೋನಿಗಳಲ್ಲಿ ಹುಟ್ಟುತ್ತಲೂ, ಸಾಯುತ್ತಲೂ ಇರುವನು ಹೀಗಿರುವಾಗ ಯಾವಾಗಲೋ ಒಮ್ಮೆ ತನ್ನ ಸುಕೃತಬಲದಿಂದ ಮನುಷ್ಯಜನ್ಮವನ್ನೆತ್ತುವನು ಹೀಗೆ ಮನುಷ್ಯಜನ್ಮವನ್ನೆತ್ತಿದವನು, ತನ್ನ ಕುಲದಿಂದಾಗಲಿ, ರೂಪದಿಂದಾಗಲಿ, ವಯಸ್ಸಿನಿಂದಾಗಲಿ, ವಿದ್ಯೆಯಿಂದಾಗಲಿ, ಕರ್ಮದಿಂದಾಗಲಿ ಗರ್ವಪಟ್ಟು ಮದಾಂ

ಥನಾಗುವನು ಈ ಸಮೃದ್ಧಿಗಳಿದ್ದಾಗಲೂ ಮನುಷ್ಯನಿಗೆ ಮನಸ್ಸಿನಲ್ಲಿ ಗರ್ವವುಂಟಾಗದಿದ್ದರೆ, ಅದಕ್ಕೂ ನನ್ನ ಅನುಗ್ರಹವೇ ಕಾರಣವೆಂದು ತಿಳಿ! ಉನ್ನತಪದವಿ, ಐಶ್ವರ್ಯ, ಮುಂತಾದುವುಗಳೆಲ್ಲವೂ ಅನರ್ಥಕಾರಿಗಳಾಗಿದ್ದ ಪಕ್ಷದಲ್ಲಿ, ಧ್ರುವಾದಿಗಳಿಗೆ ನೀನಾಗಿಯೇ ಆ ಐಶ್ವರ್ಯವನ್ನು ಕೊಟ್ಟುದೇಕೆ?" ಎಂದು ನೀನು ಕೇಳಬಹುದು ಕುಲ, ರೂಪ, ಐಶ್ವರ್ಯ, ಮುಂತಾದುವುಗಳು, ಗರ್ವವನ್ನೂ, ಅವಿವೇಕವನ್ನೂ ಹೆಚ್ಚಿಸಿ, ಸಮಸ್ತ ಶ್ರೇಯಸ್ಸುಗಳಿಗೂ ಹಾನಿಕರಗಳಾಗಿದ್ದರೂ, ನನ್ನ ಭಕ್ತರುಮಾತ್ರ ಆ ಐಶ್ವರ್ಯಾದಿಗಳಿಂದ ಮೋಹಗೊಳ್ಳಲಾರರು. ನನ್ನ ಭಕ್ತರಿಗೆ ನಾನೇ ಐಶ್ವರ್ಯಾದಿಗಳನ್ನು ಕೊಟ್ಟರೂ ಅದು ಅವರಿಗೆ ಅನರ್ಥಕಾರಿಗಳಾಗಲಾರವು ಹಾಗೆಯೇ ಈ ಬಲಿಚಕ್ರವರ್ತಿಯು, ದೈತ್ಯದಾನವಕುಲದಲ್ಲಿ ತಾನೇ ಮೇಲೆನಿಸಿಕೊಂಡು, ಮಹಾಯಶಸ್ಸಿಗೆ ಭಾಗಿಯಾಗಿ, ತ್ರೈಲೋಕ್ಯವನ್ನೂ ಏಕಾಧಿಪತ್ಯದಿಂದ ಅನುಭವಿಸುತಿದ್ದರೂ, ಮದಾಂಧನಾಗದೆ, ಬೇರೊಬ್ಬರಿಗೆ ದುರ್ಜಯವಾದ ನನ್ನ ಮಾಯೆಯನ್ನು ಜಯಿಸಿರುವನು ಎಂತಹ ಕಷ್ಟದಲ್ಲಿಯೂ ಮನಸ್ಸು ಕಲಗದಿರುವನು ಇವನು! ತನ್ನ ಸರ್ವಸ್ವವನ್ನೂ ಕಳೆದುಕೊಂಡನು! ರಾಜ್ಯಭ್ರಷ್ಟನಾದನು! ಶತ್ರುಗಳಿಂದ ನಾನಾವಿಧವಾಗಿ ನಿಂದಿಸಲ್ಪಟ್ಟನು! ಜ್ಞಾತಿಗಳಿಂದ ತ್ಯಜಿಸಲ್ಪಟ್ಟನು! ಮಹಾವಿಪತ್ತಿಗೆ ಗುರಿಯಾದನು! ತನ್ನ ಗುರುವಾದ ಶುಕ್ರಾಚಾರ್ಯನಿಂದ ಹೆದರಿಸಲ್ಪಟ್ಟನು! ಕೊನೆಗೆ ಆ ಗುರುವಿನ ಶಾಪಕ್ಕೂ ಗುರಿಯಾದನು ಇಷ್ಟಾದರೂ ಯಾವುದಕ್ಕೂ ಹೆದರದೆ, ತನ್ನ ಮನೋನಿಶ್ಚಯವನ್ನು ಬಿಡದೆ ಸತ್ಯವನ್ನು ಕಾಪಾಡಿದನಲ್ಲವ? ಇವನನ್ನು ಪರೀಕ್ಷಿಸುವುದಕ್ಕಾಗಿಯೇ ನಾನು ನನ್ನ ಮಾಯೆಯಿಂದ ಇವನಿಗೆ ಈ ಅನರ್ಥಗಳೆಲ್ಲವನ್ನೂ ತಂದಿಟ್ಟೆನು ಹಾಗಿದ್ದರೂ ಇವನು ತನ್ನ ಧರ್ಮವನ್ನು ಮೀರಲಿಲ್ಲ. ಇವನ ಧೈರ್ಯವು ಲೋಕದಲ್ಲಿ ಬೇರೊಬ್ಬರಿಗೆ ಬರಲಾರದು! ಆದುದರಿಂದ ಇವನು ನನ್ನ ಪೂರ್ಣಾನುಗ್ರಹಕ್ಕೆ ಪಾತ್ರನಾದನೆಂದು ತಿಳಿ! ಇವನಿಗೆ ದೇಹಾವಸಾನದಲ್ಲಿ ದೇವತೆಗಳಿಗೂ ದುರ್ಲಭವಾದ ನನ್ನ ಲೋಕವು ಲಭಿಸುವುದು ಈ ಜನ್ಮದಲ್ಲಿಯೂ ಇವನು ನನ್ನ ಅನುಗ್ರಹದಿಂದ ಸಾವರ್ಣಿಮನ್ವಂತರದಲ್ಲಿ ಇಂದ್ರಪದವಿಯನ್ನು ವಹಿಸುವನು. ಅದುವರೆಗೆ ಈತನು

ವಿಶ್ವಕರ್ಮನಿರ್ಮಿತವಾದ ಸುತಲಲೋಕಕ್ಕೆ ಅಧಿಪತಿಯಾಗಿ, ಅದನ್ನು ಪಾಲಿಸುತ್ತಿರಲಿ! ಅಲ್ಲಿರತಕ್ಕವರಿಗೆ ನನ್ನ ಅನುಗ್ರಹದಿಂದ ಆಧಿವ್ಯಾಧಿಗಳಾಗಲಿ, ದೇಹಶ್ರಮವಾಗಲಿ, ಪ್ರಮಾದವಾಗಲಿ, ಶೀತೋಷ್ಣಾದಿಬಾಧೆಗಳಾಗಲಿ ಯಾವುದೂ ತೋರಲಾರದು" ಎಂದು ವಾಮನಮೂರ್ತಿಯು ಬ್ರಹ್ಮನಿಗೆ ಸಮಾಧಾನವನ್ನು ಹೇಳಿ, ಆಮೇಲೆ ಬಲಿಯನ್ನು ನೋಡಿ "ಇಂದ್ರಸೇನ ಮಹಾರಾಜಾ! ಇನ್ನು ನೀನು ಹೊರಡು! ನಿನಗೆ ಮಂಗಳವಾಗಲಿ! ದೇವತೆಗಳಿಗೂ ಆಸೆಹುಟ್ಟಿಸತಕ್ಕ ಭೋಗಸಮೃದ್ಧಿಯುಳ್ಳ ಸುತಲಲೋಕದಲ್ಲಿ, ನಿನ್ನ ಬಂಧುವರ್ಗದೊಡನೆ ನೀನು ಸುಖದಿಂದಿರು! ಅಲ್ಲಿರುವಾಗ ಲೋಕಪಾಲಕರೂ ನಿನ್ನನ್ನು ಇದಿರಿಸಿ ಜಯಿಸಲಾರರು. ಇತರರ ಮಾತೇನು? ಅಲ್ಲಿ ಯಾರಾದರೂ ನಿನ್ನ ಆಜ್ಞೆಯನ್ನು ಮೀರಿನಡೆದರೆ ಅವರನ್ನು ಆಕ್ಷಣವೇ ನನ್ನ ಸುದರ್ಶನಚಕ್ರವು ಸಂಹರಿಸುವುದು. ಮತ್ತು ಅಲ್ಲಿ ನಾನು ನಿನ್ನನ್ನೂ, ನಿನ್ನ ಅನುಚರರನ್ನೂ, ನಿನ್ನ ಭೋಗಸಾಮಗ್ರಿಗಳನ್ನೂ, ಎಲ್ಲಾ ಅಪಾಯಗಳಿಂದಲೂ ಸರ್ವದಾ ರಕ್ಷಿಸುತ್ತಿರುವೆನು" ಅಲ್ಲಿ ನಾನು ಯಾವಾಗಲೂ ನಿನ್ನ ಮನೆಯ ಬಾಗಿಲಲ್ಲಿಯೇ ಕಾದಿದ್ದು, ಆಗಾಗ ನಿನಗೆ ದರ್ಶನವನ್ನೂ ಕೊಡುವೆನು. ನೀನು ಇಷ್ಟಬಂದಾಗ ನನ್ನನ್ನು ನೋಡುತ್ತಿರಬಹುದು. ಒಂದುವೇಳೆ ಅಲ್ಲಿ ನಿನಗೆ, ನಿನ್ನ ಬಂಧುಗಳಾದ ದೈತ್ಯರ ಸಹವಾಸದಿಂದ ಆಸುರಸ್ವಭಾವವು ತಲೆದೋರುವಂತಾದರೂ, ಅಲ್ಲಿ ನನ್ನನ್ನು ನೋಡಿದೊಡನೆ, ಆ ದುಸ್ಸ್ವಭಾವವು ನಿನ್ನನ್ನು ಕೆಡಿಸಲಾರದೆ ಹಾಗೆಯೇ ನಾಶಹೊಂದುವುದು" ಎಂದನು ಇದು ಇಪ್ಪತ್ತೆರಡನೆಯ ಅಧ್ಯಾಯವು

---

ಪ್ರಹ್ಲಾದನೊಡನೆ ಬಲಿಯು ಸುತಲವನ್ನು ಪ್ರವೇಶಿಸಿದುದು.

ಭಗವಂತನ ಮುಖದಿಂದ ಹೊರಟ ಈ ಪ್ರಿಯವಾಕ್ಯಗಳು ಕಿವಿಗೆ ಬಿದ್ದೊಡನೆ ಮಹಾನುಭಾವನಾಗಿಯೂ, ಸಾಧುಸಮ್ಮತನಾಗಿಯೂ ಇರುವ ಬಲಿಗೆ, ಆನಂದಾತಿಶಯದಿಂದ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕಿತು. ಮೈಯೆಲ್ಲವೂ ಪುಳಕಿತವಾಯಿತು. ಭಕ್ತಿಯಿಂದ ಕಂಠಸ್ವರವು ಕುಗ್ಗಿತು. ಭಗವಂತನ ಮುಂದೆ ಬದ್ಧಾಂಜಲಿಯಾಗಿ ನಿಂತು ಗದ್ಗದಸ್ವರ

ಧಿಂದ ಹೀಗೆಂದು ವಿಜ್ಞಾಪಿಸುವನು.” ಓ ಪರಮಪುರುಷಾ ! ನಿನ್ನ ಆ
ಶ್ರಿತವಾತ್ಸಲ್ಯವನ್ನು ನಾನೇನೆಂದು ಹೇಳಲಿ ! ನಿನ್ನ ಪಾದಾರವಿಂದಗಳನ್ನು
ಒಂದಾವರ್ತಿ ನಮಸ್ಕರಿಸುವುದಕ್ಕೆ ಕೈಯೆತ್ತುವಾಗಲೇ ಆ ಭಕ್ತರ ಕೋರಿ
ಕೆಗಳೆಲ್ಲವೂ ಕೈಗೂಡುವುವು. ಕೇವಲಸತ್ವಗುಣಪ್ರಧಾನರಾದ ಲೋಕ
ಪಾಲಕರಿಗೂ ಹಿಂದೆ ಯಾವಾಗಲೂ ಲಭಿಸದ ಪರಮಾನುಗ್ರಹವನ್ನು ಈಗ
ನೀನು, ನೀಚರಾಕ್ಷಸನಾದ ನನ್ನಲ್ಲಿ ತೋರಿಸಿದೆಯಲ್ಲವೆ? ನನ್ನ ಭಾಗ್ಯಕ್ಕಿಂತ
ಲೂ ಭಾಗ್ಯವುಂಟೆ”? ಎಂದು ಹೇಳಿ ಸಾಷ್ಟಾಂಗಪ್ರಣಾಮವನ್ನು ಮಾಡಿ,
ಬ್ರಹ್ಮರುದ್ರರಿಗೂ ನಮಸ್ಕರಿಸಿದನು. ಒಡನೆಯೇ ಭಗವದನುಗ್ರಹದಿಂದ
ಅವನನ್ನು ಕಟ್ಟಿಹಾಕಿದ್ದ ವರುಣಪಾಶವು ಬಿಟ್ಟುಹೋಯಿತು ಆಮೇಲೆ
ಬಲಿಯು, ತನ್ನ ಅನುಚರರೊಡಗೂಡಿ ಸುತಲವನ್ನು ಪ್ರವೇಶಿಸಿದನು ರಾ
ಜೇಂದ್ರಾ ! ಹೀಗೆ ಭಗವಂತನು ವಾಮನರೂಪದಿಂದ ಬಲಿಯ ವಶವಾ
ಗಿದ್ದ ಸ್ವರ್ಗಾಧಿಪತ್ಯವನ್ನು ಉಪಾಯದಿಂದ ಸ್ವಾಧೀನಪಡಿಸಿಕೊಂಡು, ಇಂ
ದ್ರನಿಗೆ ಕೊಟ್ಟು, ಅದಿತಿದೇವಿಯ ಮನೋರಥವನ್ನೀಡೇರಿಸಿದುದಲ್ಲದೆ,ಇಂ
ದ್ರನಮೂಲಕವಾಗಿ ಸಮಸ್ತಲೋಕವನ್ನೂ ಸುಖವಾಗಿ ಪೋಷಿಸುತ್ತಿದ್ದ
ನು.! ಆಮೇಲೆ ಪ್ರಹ್ಲಾದನು, ವಂಶವರ್ಧನನಾದ ತನ್ನ ಮುಮ್ಮಗನು ಭಗ
ವದನುಗ್ರಹದಿಂದ ಪಾಶವಿಮುಕ್ತನಾದುದನ್ನುನೋಡಿ, ಸಂತೋಷಗೊಂ
ಡು, ಭಕ್ತಿಯುಕ್ತನಾಗಿ ಮುಂದೆಬಂದು, ಪರಮಪುರುಷನಲ್ಲಿ ಹೀಗೆಂದು
ವಿಜ್ಞಾಪಿಸುವನು, “ಓ ದೇವಾ! ಈಗ ನೀನು ಇವನಲ್ಲಿ ತೋರಿಸಿದ ಪರ
ಮಾನುಗ್ರಹಕ್ಕೆ, ಇದುವರೆಗೆ ಬ್ರಹ್ಮನಾಗಲಿ, ರುದ್ರನಾಗಲಿ, ಸಾಕ್ಷಾಲ್ಲ
ಕ್ಷ್ಮೀದೇವಿಯಾಗಲಿ ಪಾತ್ರರಾದುದಿಲ್ಲ. ಇನ್ನು ಇತರರ ಮಾತೇನು? ಕೇ
ವಲಕ್ರೂರಸ್ವಭಾವವುಳ್ಳ ಅಸುರಕುಲದವರಾದ ನಮ್ಮಲ್ಲಿಯೇ ನೀನು ಈ
ವಿಧವಾದ ಅನುಗ್ರಹವನ್ನು ತೋರಿಸಿ, ವಿಪತ್ತಿನಿಂದ ರಕ್ಷಿಸಿರುವಾಗ, ನಿನ್ನ
ಆಶ್ರಿತವಾತ್ಸಲ್ಯವನ್ನು ಎಷ್ಟೆಂದುಕೊಂಡಾಡಬಹುದು?ಲೋಕಪೂಜ್ಯರಾದ
ಬ್ರಹ್ಮಾದಿಗಳಿಂದಲೂ ಸಮಸ್ಕರಿಸಲ್ಪಡತಕ್ಕ ಪಾದಾರವಿಂದವುಳ್ಳ ನೀನೆಲ್ಲಿ?
ಅತಿನೀಚಕುಲದವರಾದ ನಾವೆಲ್ಲಿ ? ಓ ಮಹಾತ್ಮಾ ! ನಿನ್ನ ಪಾದಕಮಲ
ಗಳ ಮಕರಂದಬಿಂದುಗಳನ್ನು ಸೇವಿಸಿದುದರಿಂದಲೇ ಬ್ರಹ್ಮಾದಿಗಳೂ

ಕೂಡ, ಸೃಷ್ಟ್ಯಾದಿಕಾರ್ಯಗಳಲ್ಲಿ ಅಧಿಕಾರವನ್ನು ಪಡೆದಿರುವರು. ನೀಚಕುಲ ದಲ್ಲಿ ಹುಟ್ಟಿ,ಕುತ್ಸಿತಬುದ್ಧಿಯುಳ್ಳ ನಾವು ನಿನ್ನ ಪಾದಸೇವೆಯಲ್ಲಿ ವಿಮುಖ ರಾಗಿದ್ದರೂ, ಬ್ರಹ್ಮಾದಿಗಳಿಗೂ ದುರ್ಲಭವಾದ ನಿನ್ನ ವಿಶೇಷಾನುಗ್ರ ಹಕ್ಕೆ ಪಾತ್ರರಾದೆವು ದೇವಾ! ನೀನು ಲೋಕಕ್ಕೆ ತೋರಿಸತಕ್ಕ ನಿಗ್ರ ಹಾನುಗ್ರಹಗಳು ವಿಚಿತ್ರವಾಗಿರುವುವು ಸಂಕಲ್ಪಮಾತ್ರದಿಂದಲೇ ಸಮಸ್ತ ಜಗತ್ತನ್ನೂ ಸೃಷ್ಟಿಸತಕ್ಕವನಾಗಿಯೂ, ಸರ್ವಜ್ಞನಾಗಿಯೂ, ಸರ್ವಾತ್ಮ ಕನಾಗಿಯೂ, ಸಮಸ್ತಭೂತಗಳಲ್ಲಿಯೂ ಸಮದೃಷ್ಟಿಯುಳ್ಳವನಾಗಿ ಯೂ ಇರುವ ನೀನು, ಹೀಗೆ ಕೆಲಕೆಲವರಲ್ಲಿ ನಿನ್ನ ಪೂರ್ಣಾನುಗ್ರಹವನ್ನು ತೋರಿಸಿದಮಾತ್ರಕ್ಕೆ ನಿನ್ನನ್ನು ಪಕ್ಷಪಾತಿಯೆಂದು ಹೇಳುವುದಕ್ಕಿಲ್ಲ ಇದು ನಿನ್ನ ಭಕ್ತವಾತ್ಸಲ್ಯವನ್ನೇ ಚೆನ್ನಾಗಿ ಪ್ರಕಾಶಗೊಳಿಸುವುದು ಕಲ್ಪವೃಕ್ಷವು ಕೇಳಿದವರಿಗೆ ಕೇಳಿದುದನ್ನು ಕೊಡುವುದು ಉದಾ ಸೀನರಾಗಿದ್ದವರನ್ನು ಉದಾಸೀನವಾಗಿಯೇ ಬಿಟ್ಟು ಬಿಡುವುದು! ಇ ಷ್ಟುಮಾತ್ರಕ್ಕೆ ಅದನ್ನು ವಿಷಮಬುದ್ಧಿಯುಳ್ಳುದೆಂದು ಹೇಳಬಹುದೆ?" ಎಂ ದನು. ಅದನ್ನು ಕೇಳಿ ವಾಮನಮೂರ್ತಿಯು "ವತ್ಸ ಪ್ರಹ್ಲಾದಾ! ನಿನಗೆ ಮಂಗಳವಾಲಿ! ನೀನೂ ಈ ನಿನ್ನ ಮುಮ್ಮಗನಾದ ಬಲಿಯೊಡನೆ ಸುತಲವನ್ನು ಪ್ರವೇಶಿಸಿ, ಅಲ್ಲಿಯೇ ವಾಸಮಾಡುತ್ತ ನಿನ್ನ ಬಂಧುಗಳೆಲ್ಲರ ನ್ನೂ ಸಂತೋಷಗೊಳಿಸುತ್ತಿರು! ಅಲ್ಲಿ ಗದಾಪಾಣಿಯಾಗಿ ಬಲಿಯ ಬಾಗಿಲ ನ್ನು ಕಾಯುತ್ತಿರುವ ನನ್ನನ್ನು ಪ್ರತಿದಿನವೂ ನೀನು ನೋಡುತ್ತಿರಬಹುದು ನನ್ನ ದರ್ಶನದಿಂದ ನಿನ್ನ ಪ್ರಾರಬ್ಧಕರ್ಮಗಳೆಲ್ಲವೂ ನೀಗುವುವು ನೀನು ನಿತ್ಯವೂ ನನ್ನ ದರ್ಶನದಿಂದ ಸಂತೋಷಿಸುತ್ತಿರಬಹುದು" ಎಂದನು ಓ ಪ ರೀಕ್ಷಿದ್ರಾಜಾ! ಈ ಭಗವದಾಜ್ಞೆಯನ್ನು ಪ್ರಹ್ಲಾದನು ಶಿರಸಾವಹಿಸಿ, ಬಲಿಚಕ್ರವರ್ತಿಯೊಡನೆ ಆ ಪರಮಪುರುಷನಿಗೆ ಪ್ರದಕ್ಷಿಣನಮಸ್ಕಾರಗಳ ನ್ನು ಮಾಡಿ, ಅವನ ಅನುಜ್ಞೆಯನ್ನು ಪಡೆದು ಪಾತಾಳವನ್ನು ಪ್ರವೇ ಶಿಸಿದನು ಆಮೇಲೆ ಇತ್ತಲಾಗಿ ಭಗವಂತನು, ಆ ಯಜ್ಞಸಭೆಯಲ್ಲಿ ಬ್ರಹ್ಮ ವಾದಿಗಳಾದ ಅನೇಕಋತ್ವಿಕ್ಕುಗಳೊಡನೆ ಕುಳಿತಿದ್ದ ಶುಕ್ರಾಚಾರ್ಯನನ್ನು ನೋಡಿ "ಓ ಬ್ರಾಹ್ಮಣೋತ್ತಮಾ! ನೀನು ನಿನ್ನ ಶಿಷ್ಯನಾದ ಬಲಿಯಿಂದ




1553. ಮತ್ಸ್ಯಾವತಾರವು.

ಮಾಡಿಸಿ,ತಿಸ್ಥ ಯಜ್ಞವನ್ನು ಇಷ್ಟರಲ್ಲಿಯೇ ನಿಲ್ಲಿಸದೆ ಶಾಸ್ತ್ರೋಕ್ತವಾಗಿ
ಅದನ್ನು ಲೋಪಬಾರದಂತೆ ಪೂರ್ತಿಮಾಡು" ಎಂದನು. ಅದಕ್ಕಾಶುಕ್ರನು,
"ಓ ದೇವಾ! ಯಜ್ಞಪ್ರವರ್ತಕನಾಗಿಯೂ, ಯಜ್ಞಸ್ವರೂಪನಾಗಿಯೂ,
ಯಜ್ಞಾರಾಧ್ಯನಾಗಿಯೂ, ಆ ಯಜ್ಞಗಳಿಗೆ ಫಲವನ್ನು, ಕೊಡತಕ್ಕವನಾಗಿ
ಯೂ ಇರುವ ನೀನೇ ಇಲ್ಲಿ ಸಾಕ್ಷಾತ್ತಾಗಿ ಬಂದು ನಿಂತಿರುವೆ ಈ ಬಲಿ
ಯೂ ಕೂಡ ತ್ರಿಕರಣಶುದ್ಧಿಯಿಂದ ನಿನ್ನನ್ನು ಪೂಜಿಸಿ ಸಂತೋಷಗೊಳಿಸಿ
ರುವನು ಇನ್ನು ಅವನ ಯಜ್ಞಕ್ಕೆ ಲೋಪವೆಂದರೇನು? ಈ ಯಜ್ಞದಲ್ಲಿ
ಮಂತ್ರತಂತ್ರಗಳಲ್ಲಿಯಾಗಲಿ, ದೇಶಕಾಲವಸ್ತುಗಳಲ್ಲಿಯಾಗಲಿ, ಯಾವು
ದಾದರೂ ಲೋಪವಿದ್ದರೂ, ನಿನ್ನ ನಾಮಸ್ಮರಣಮಾತ್ರದಿಂದಲೇ ಅವೆಲ್ಲ
ವೂ ನೀಗುವುವು ಬಲಿಯು ನಿನ್ನ ಪೂರ್ಣಾನುಗ್ರಹಕ್ಕೆ ಪಾತ್ರನಾಗಿರುವು
ದರಿಂದ, ಈ ಯಜ್ಞಕ್ಕೆ ಯಾವವಿಧದಲ್ಲಿಯೂ ಲೋಪವಿಲ್ಲದಂತೆ ಅದು ಪೂ
ರ್ತಿಹೊಂದಿದಂತೆಯೇ ಭಾವಿಸಬೇಕಲ್ಲವೆ? ಹಾಗಿದ್ದರೂ ನಿನ್ನ ಆಜ್ಞೆಯನ್ನು
ಶಿರಸಾವಹಿಸಬೇಕಾದುದು ನಮ್ಮ ಕರ್ತವ್ಯವಾದುದರಿಂದ ಹಾಗೆಯೇ ನಡೆ
ಸುವೆನು" ಎಂದು ಹೇಳಿ, ಅಲ್ಲಿದ್ದ ಬ್ರಾಹ್ಮಣರೊಡನೆ ಆ ಯಜ್ಞವನ್ನು ಸಾಂ
ಗವಾಗಿ ಸಮಾಪ್ತಿಮಾಡಿದನು, ಓ ರಾಜೇಂದ್ರಾ! ಹೀಗೆ ಭಗವಂತನು
ವಾಮನವೇಷದಿಂದ ಬಂದು,ಬಲಿಯಿಂದ ಮೂರಡಿಯನೆಲವನ್ನು ಯಾಚಿಸಿ,ತ
ನ್ನ ಸಹೋದರನಾದ ಇಂದ್ರನಿಗೆ ಕೊಟ್ಟನು. ಆಗ ಬ್ರಹ್ಮನು ದೇವರ್ಷಿಗ
ಳೊಡನೆಯೂ, ಮನುಗಳೊಡನೆಯೂ,ದಕ್ಷ,ಭೃಗು,ಮೊದಲಾದ ಮಹಾಮು
ನಿಗಳೊಡನೆಯೂ, ರುದ್ರನೊಡನೆಯೂ, ಸನತ್ಕುಮಾರನೊಡನೆಯೂ ಸೇರಿ
ಬಂದು, ಅದಿತಿಕಶ್ಯಪರ ಸಂತೋಷಾರ್ಥವಾಗಿ ಸಮಸ್ತಲೋಕಪಾಲರೊಡ
ಗೂಡಿದ ಈ ತ್ರೈಲೋಕ್ಯಕ್ಕೂ ವಾಮನನನ್ನೇ ಪ್ರಭುವನ್ನಾಗಿ ಮಾಡಿ
ದನು ಲೋಕಕ್ಕೆಮಾತ್ರವೇ ಅಲ್ಲದೆ ಸಮಸ್ತವೇದಗಳಿಗೂ ಎಲ್ಲಾ ದೇವ
ತೆಗಳಿಗೂ, ಸ್ವರ್ಗಮೋಕ್ಷಗಳಿಗೂ, ಕ್ಷೇಮನಿಮಿತ್ತವಾಗಿ ಆ ವಾಮನನಿಗೆ
ರಾಜ್ಯಾಭಿಷೇಕವನ್ನು ನಡೆಸಿದರು. ಇದನ್ನು ನೋಡಿ ಸಮಸ್ತಭೂತಗಳೂ
ಸಂತೋಷಗೊಂಡುವು. ಆಮೇಲೆ ದೇವೇಂದ್ರನು ಬ್ರಹ್ಮನ ಆಜ್ಞೆಯಿಂದ
ವಾಮನಮೂರ್ತಿಯನ್ನು ವಿಮಾನದಲ್ಲಿ ಕುಳ್ಳಿರಿಸಿ, ಸಮಸ್ತಲೋಕಪಾಲಕ

ರೊಡಗೂಡಿ ಅವನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋದನು ಅಲ್ಲಿ ದೇ ವೇಂದ್ರನು, ತನ್ನ ಸಹೋದರನಾದ ಆ ಉಪೇಂದ್ರನ ಸಹಾಯದಿಂದ ತ್ರೈ ಲೋಕ್ಯವನ್ನೂ ನಿರ್ಭಯವಾಗಿ ಪಾಲಿಸುತ್ತ ಸಾಮ್ರಾಜ್ಯಭೋಗಗಳಿಂದ ಸುಖಿಸುತಿದ್ದನು ಬ್ರಹ್ಮರುದ್ರಾದಿದೇವತೆಗಳೂ, ಸನಕಾದಿಯೋಗಿಗಳೂ ಭೃಗು ಮೊದಲಾದ ಮಹರ್ಷಿಗಳೂ, ಪಿತೃದೇವತೆಗಳೂ, ಸಿದ್ಧರೂ ತಮ್ಮತಮ್ಮ ವಿಮಾನಗಳನ್ನೇರಿ ಅದಿತಿಯ ಮಹಿಮೆಯನ್ನೂ, ವಾಮನಮೂ ರ್ತಿಯ ಅದ್ಭುತಚರಿತ್ರೆಗಳನ್ನೂ ಗಾನಮಾಡುತ್ತ, ತಮ್ಮತಮ್ಮ ಸ್ಥಾನಗಳ ನ್ನು ಸೇರಿದರು ಓ ಪರೀಕ್ಷಿದ್ರಾಜಾ! ಪಾಪನಿವಾರಕವಾದ ಈ ವಾಮ ನಾವತಾರಚರಿತ್ರವನ್ನು ನನ್ನ ಬುದ್ಧಿಗೆ ತೋರಿದಮಟ್ಟಿಗೆ ನಿನಗೆ ಹೇಳಿದೆನು. ಆ ವಾಮನಮೂರ್ತಿಯ ಗುಣಗಳನ್ನು 'ಇಷ್ಟೆಂದು ನಿರ್ಣಯಿಸುವುದಕ್ಕಿಲ್ಲ ಭೂಮಿಯಲ್ಲಿರುವ ರೇಣುಗಳನ್ನಾದರೂ ಎಣಿಸಬಹುದು. ಆತನ ಗುಣಗ ಳನ್ನೆಣಿಸುವುದು ಸಾಧ್ಯವಲ್ಲ ಅವನ ಗುಣಗಳೆಲ್ಲವನ್ನೂ ಪೂರ್ಣವಾಗಿ ವ ರ್ಣಿಸಬಲ್ಲವನು ಇದುವರೆಗೆ ಹುಟ್ಟಲಿಲ್ಲ. ಮುಂದೆಯೂ ಹುಟ್ಟಲಾರನು ಮಂತ್ರಜ್ಞರಾದ ವಸಿಷ್ಠಾದಿಗಳೆಲ್ಲರೂ ಇದೇ ಅಭಿಪ್ರಾಯವನ್ನು ಸೂಚಿಸಿ ರುವರು ಓ ಪರೀಕ್ಷಿದ್ರಾಜಾ! ಅದ್ಭುತವ್ಯಾಪಾರವುಳ್ಳ ಈ ವಾಮನಚರಿ ತ್ರವನ್ನು ಭಕ್ತಿಯಿಂದ ಕೇಳತಕ್ಕವರು, ತಪ್ಪದೆ ಮುಕ್ತಿಯನ್ನು ಹೊಂದು ವರು ದೇವಕಾರ್ಯಗಳನ್ನಾಗಲಿ, ಪಿತೃಕಾರ್ಯಗಳನ್ನಾಗಲಿ, ಮನುಷ್ಯ ರಿಗೆ ತೃಪ್ತಿಕರವಾದ ಇತರದಾನಧರ್ಮಗಳನ್ನಾಗಲಿ ನಡೆಸುವಾಗ, ಎಲ್ಲೆಲ್ಲಿ ಈ ವಾಮನಚರಿತ್ರವು ಕೊಂಡಾಡಲ್ಪಡುವುದೋ, ಆ ಕರ್ಮಗಳಲ್ಲಿ ಯಾವ ವಿಧವಾದ, ಲೋಪವಿದ್ದರೂ ತಪ್ಪದೆ ಫಲಪ್ರದವಾಗುವುವೆಂದು ಹಿರಿ ಯರು ಹೇಳುವರು" ಎಂದನು ಇದು ಇಪ್ಪತ್ತುಮೂರನೆಯ ಅಧ್ಯಾಯವು.

---

## ಮತ್ಸ್ಯಾವತಾರಚರಿತ್ರವು.

ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು, "ಓ ಮುನೀಂದ್ರಾ! ನೀನು ಹೇಳಿದ ಭಗವಂತನ ಚರಿತ್ರವೊಂದೊಂದೂ ಅತ್ಯದ್ಭುತವಾದುದು. ವಾಮನನಾವತಾರಚರಿತ್ರವು ನನ್ನಮನಸ್ಸಿಗೆ ಬಹಳಸಂತೋಷವನ್ನುಂಟು

ಮಾಡಿತು ಆ ಶ್ರೀಹರಿಯು ಮೊದಲನೆಯ ಅವತಾರದಲ್ಲಿ ಮತ್ಸ್ಯರೂಪವನ್ನು ಧರಿಸಿ ಮಾಡಿದ ಕಾರ್ಯವೇನು? ಆ ಈಶ್ವರನಿಗೆ ಇತರ ಜೀವಗಳಂತೆ ಕರ್ಮಮೂಲಕವಾದ ಜನನಮರಣಗಳಿಲ್ಲವಷ್ಟೆ? ಹಾಗಿದ್ದರೂ ಅವನು ಕೇವಲತಮಸ್ಸ್ವಭಾವವುಳ್ಳದಾಗಿಯೂ,ಕೋಪಪ್ರಕೃತಿಯುಳ್ಳದಾಗಿಯೂ, ಲೋಕನಿಂದಿತವಾಗಿಯೂ ಇರುವ ಮೀನಿನ ಆಕಾರವನ್ನು ತಾಳಿದುದೇಕೆ? ಪುಣ್ಯಶ್ಲೋಕನಾದ ಆ ಭಗವಂತನ ಚರಿತ್ರವು ಸರ್ವಪಾಪನಿವಾರಕವಾದುದರಿಂದ, ಅದನ್ನು ನನಗೆ ಯಥಾವತ್ತಾಗಿ ವಿವರಿಸಿ ತಿಳಿಸಬೇಕು" ಎಂದನು. ಅದಕ್ಕಾ ಶುಕಮುನಿಯು ಭಗವಂತನ ಮತ್ಸ್ಯಾವತಾರಚರಿತ್ರವನ್ನು ಪರೀಕ್ಷಿದ್ರಾಜನಿಗೆ ಹೇಳತೊಡಗಿ, "ಓ ರಾಜೇಂದ್ರಾ ಕೇಳು! ಭಗವಂತನಿಗೆ ಇತರಜೀವಗಳಂತೆ ಕರ್ಮಾಧೀನವಾದ ಶರೀರವಿಲ್ಲದಿದ್ದರೂ,ಗೋಬ್ರಾಹ್ಮಣರಿಗೂ, ದೇವತೆಗಳಿಗೂ, ಸಾಧುಗಳಿಗೂ,ವೇದಗಳಿಗೂ, ಧರ್ಮಾರ್ಥಗಳಿಗೂ ಕ್ಷೇಮವನ್ನುಂಟುಮಾಡುವುದಕ್ಕಾಗಿ, ಆಗಾಗ ತನ್ನ ಸ್ವೇಚ್ಛೆಯಿಂದ ಬೇರೆಬೇರೆ ಅವತಾರಗಳನ್ನೆತ್ತುವನು. ಅವನು ಉತ್ತಮಾಧಮಗಳೆನಿಸಿಕೊಂಡ ಸಮಸ್ತಭೂತಗಳಲ್ಲಿಯೂ ವಾಯುವಿನಂತೆ ವ್ಯಾಪಿಸಿರುವನು ಅವನು ಸರ್ವಸ್ವತಂತ್ರನು ಸತ್ವಾದಿಪ್ರಕೃತಿಗುಣಗಳು ಅವನನ್ನು ಬಂಧಿಸಲಾರವು ಅವನು ಸಮಸ್ತಕಲ್ಯಾಣಗುಣಗಳಿಗೂ ಆಶ್ರಯನಾಗಿರುವನು. ಅವನು ಉತ್ತಮಾಧಮಜೀವವರ್ಗಗಳಲ್ಲಿ ಸೇರಿದ್ದರೂ, ಆಯಾ ಭೂತಗಳ ಉಚ್ಚತ್ವನೀಚತ್ವಗಳು ಅವನಿಗೆ ಸಂಭವಿಸಲಾರವು ಕಳೆದ ಕಲ್ಪಾವಸಾನದಲ್ಲಿ, ಬ್ರಹ್ಮನು ತನ್ನ ಸೃಷ್ಟಿವ್ಯಾಪಾರವನ್ನು ಬಿಟ್ಟು ನಿದ್ರಿಸಿದಾಗ ಪ್ರಳಯವು ಸಂಭವಿಸಿತು ಆ ಪ್ರಳಯದಲ್ಲಿ ಮೂರುಲೋಕಗಳೂ ಸಮುದ್ರದಲ್ಲಿ ಮುಳುಗಿಹೋದುವು ಇದನ್ನೇ ಬ್ರಾಹ್ಮವೆಂಬ ಹೆಸರುಳ್ಳ *ನೈಮಿತ್ತಿಕ

* ಇಲ್ಲಿ ಪ್ರಳಯವೆಂದರೆ ಯಾವುದು? ಮಹಾಪ್ರಳಯವೆ? ಅಥವಾ ದೈನಂದಿನಪ್ರಳಯವೆ? ಮಹಾಪ್ರಳಯದಲ್ಲಿ ಬ್ರಹ್ಮಲೋಕವೂ ನಶಿಸಬೇಕಾದ್ದರಿಂದ ಇದು ಮಹಾಪ್ರಳಯವಲ್ಲ. ದೈನಂದಿನಪ್ರಳಯದಲ್ಲಿ ಅನಾವೃಷ್ಟ್ಯಾದಿಗಳಿಂದ ಕ್ರಮಕ್ರಮವಾಗಿ ಲೋಕವು ನಶಿಸಬೇಕು ಅದೊಂದೂ ಇಲ್ಲದೆ ಆಕಸ್ಮಿಕವಾಗಿ ತ್ರೈಲೋಕ್ಯವೂ ಸಮುದ್ರದಲ್ಲಿ ಮುಳುಗಿಹೋಗುವುದಾಗಿ ಹೇಳಿರುವುದರಿಂದ, ಇದನ್ನು ದೈನಂದಿನಪ್ರ

ಪ್ರಳಯವೆಂದು ಹೇಳುವರು ಆಗ ಬ್ರಹ್ಮನಿಗೆ ಒಂದುಹಗಲು ಕಳೆದು ರಾತ್ರಿ ಕಾಲವು ಆರಂಭಿಸಿದುದರಿಂದ, ಅವನು ತನ್ನ ಸರ್ವವ್ಯಾಪಾರವನ್ನೂ ಬಿಟ್ಟು ವಿಶ್ರಾಂತಿಯಿಂದ ಮಲಗುವನು. ಈ ಬ್ರಹ್ಮನು ಮಲಗುವುದಕ್ಕೆ ಯತ್ನಿಸಿದಾಗ, ನಾಲ್ಕುವೇದಗಳೂ ಅವನ ಮುಖದಿಂದ ಹೊರಗೆಬರಲು, ಆಗ ಅವನ ಸಮೀಪದಲ್ಲಿದ್ದ ಹಯಗ್ರೀವನೆಂಬ ರಾಕ್ಷಸನೊಬ್ಬನು, ಆ ವೇದಗಳನ್ನು ಅಪಹರಿಸಿಕೊಂಡು ಹೋದನು. ವೇದಾಪಹಾರಿಯಾದ ಆ ರಾಕ್ಷಸನನ್ನು ಕೊಂದು, ಆ ವೇದಗಳನ್ನು ತಿರುಗಿ ಬ್ರಹ್ಮನಿಗೊಪ್ಪಿಸುವುದಕ್ಕಾಗಿಯೇ ಭಗವಂತನು ಮತ್ಸ್ಯರೂಪವನ್ನು ಧರಿಸಬೇಕಾಯಿತು ಆ ಕಥೆಯನ್ನೇ ಚೆನ್ನಾಗಿ ವಿವರಿಸಿ ತಿಳಿಸುವೆನು ಕೇಳು ಅದಕ್ಕೆ ಹಿಂದಿನ ಕಲ್ಪದಲ್ಲಿ ಸತ್ಯವ್ರತನೆಂಬ ರಾಜರ್ಷಿಯಿದ್ದನು ಅವನು ಸಮಸ್ತಗುಣಗಳಿಂದಲೂ ಮೇಲೆನಿಸಿಕೊಂಡಿದ್ದನು. ಅವನು ಶ್ರೀಹರಿಯಲ್ಲಿಯೇ ನಟ್ಟಮನಸ್ಸುಳ್ಳವನಾಗಿ, ಕೇವಲಜಲಾಹಾರದಿಂದಲೇ ದೇಹಧಾರಣಮಾಡುತ್ತ, ಭಗವಂತನನ್ನು ಕುರಿತು ಘೋರತಪಸ್ಸನ್ನು ಮಾಡಿದನು ಆ ಸತ್ಯವ್ರತರಾಜನೇ ತನ್ನ ತಪೋಬಲದಿಂದ ಭಗವದನುಗ್ರಹಕ್ಕೆ ಪಾತ್ರನಾಗಿ, ಈ ಕಲ್ಪದಲ್ಲಿ ವೈವಸ್ವತನೆಂಬ ಮನುವಾದನು ಆ ವೈವಸ್ವತನಿಗೆ ಶ್ರಾದ್ಧದೇವನೆಂದು ಹೆಸರು ಆ ಸತ್ಯವ್ರತರಾಜನು, ಒಮ್ಮೆ ಕೃತಮಾಲೆಯೆಂಬ ನದಿಯಲ್ಲಿ ಜಲತರ್ಪಣವನ್ನು ಮಾಡುತಿದ್ದನು ಅವನು ತರ್ಪಣವನ್ನು ಬಿಡುವುದಕ್ಕಾಗಿ ಕೈಯಲ್ಲಿ ನೀರನ್ನೆತ್ತಿದಾಗ, ಆ ಜಲದೊಡನೆ ಒಂದಾನೊಂದು ಸಣ್ಣಮೀನು ಅವನ ಕೈಗೆ ಬಂದುಸೇರಿತು ದ್ರವಿಡದೇಶಾಧಿಪತಿಯಾಗಿದ್ದ ಆ ಸತ್ಯವ್ರತನು, ತನ್ನ ಕೈಗೆ ಬಂದ ಆ ಮೀನನ್ನು ನೋಡಿ, ಆ ಜಲವನ್ನು ಹಾಗೆಯೇ ನದಿಯಲ್ಲಿ ಚೆಲ್ಲಬಿಡುವುದಕ್ಕೆ ಯತ್ನಿಸಿದನು ಇಷ್ಟರಲ್ಲಿ ಆ ಸಣ್ಣಮೀನು, ಬಹಳ ದಯಾಸ್ವಭಾವವುಳ್ಳ ಆ ರಾಜನನ್ನು ನೋಡಿ, ದೈನ್ಯದಿಂದ ಹೀಗೆಂದು ಪ್ರಾರ್ಥಿಸುವುದು. “ಓ ರಾಜೇಂದ್ರಾ! ನೀನು ದೀನ

---

ಳಯವೆಂದೂ ಹೇಳುವದಕ್ಕಿಲ್ಲ. ಮೇಲೆ ಹೇಳಿದ ಎರಡು ಪ್ರಳಯಗಳಲ್ಲಿ ಯಾವುದರಲ್ಲಿಯೂ ಭೂಮ್ಯಾದಿಗಳು ಉಳಿಯುವಸಂಭವವಿಲ್ಲ ಆದುದರಿಂದ ಇದನ್ನು ದೈನಂದಿನ ಕಲ್ಪಾಂತದಲ್ಲಿ ಪ್ರವರ್ತಿಸತಕ್ಕ ಆಕಸ್ಮಿಕಪ್ರಳಯವಿಶೇಷವೆಂದುತಿಳಿಯಬೇಕು.

ವತ್ಸಲನೆಂದು ಪ್ರಸಿದ್ಧಿಗೊಂಡವನಲ್ಲವೆ? ಈ ನದಿಯಲ್ಲಿ ನನಗಿಂತಲೂ ಪ್ರಬ ಲವಾದ ದೊಡ್ಡಮೀನುಗಳು ಅನೇಕವಾಗಿರುವುವು. ದೊಡ್ಡಮೀನುಗಳು ಸಣ್ಣಮೀನುಗಳನ್ನು ನುಂಗುವುದು ಸ್ವಭಾವವಾದುದರಿಂದ, ನನ್ನಂತಹ ದುರ್ಬಲಪ್ರಾಣಿಗಳಿಗೆ ಇಲ್ಲಿ ಎಂದಿಗೂ ಕ್ಷೇಮವಿಲ್ಲ. ಈ ಅಪಾಯಕ್ಕೆ ಭಯ ಪಟ್ಟು ನಾನು ನಿನ್ನಲ್ಲಿ ಮರೆಹೊಕ್ಕುಬಂದೆನು ಭಯಾತುರನಾಗಿ ಮರೆಹೊ ಕ್ಕುಬಂದ ನನ್ನನ್ನು ದಯೆಯಿಂದ ರಕ್ಷಿಸದೆ, ತಿರುಗಿ ಈ ನದಿಯಲ್ಲಿಯೇ ಬಿಸಾ ಡುವೆಯಲ್ಲಾ? ಇದು ನಿನಗೆ ನ್ಯಾಯ್ಯವೆ?" ಎಂದಿತು ಈ ಮಾತನ್ನು ಕೇಳಿ ರಾಜನಿಗೆ ಆ ಮೀನಿನಲ್ಲಿ ಕನಿಕರವುಂಟಾಯಿತು. ಓ ಪರೀಕ್ಷಿದ್ರಾಜಾ! ಅದನ್ನು ಸಾಮಾನ್ಯವಾದ ಮೀನಿನ ಮರಿಯೆಂದು ತಿಳಿಯಬೇಡ! ಸಾಕ್ಷಾ ದ್ಭಗವಂತನೇ ಆ ರೂಪದಿಂದ ಕಾಣಿಸಿಕೊಂಡನೆಂದು ತಿಳಿ! ಹೀಗೆ ಅತಿದೈ ನ್ಯದಿಂದ ಪ್ರಾರ್ಥಿಸುತ್ತಿರುವ ಆ ಪ್ರಾಣಿಯನ್ನು ನೋಡಿ ಸತ್ಯವ್ರತನು, ತನ್ನನ್ನನುಗ್ರಹಿಸುವುದಕ್ಕಾಗಿ ಮತ್ಸ್ಯರೂಪದಿಂದ ಬಂದ ಭಗವಂತನೆಂಬು ದನ್ನು ತಿಳಿಯದೆ, ಸಾಮಾನ್ಯಮತ್ಸ್ಯವೆಂದೇ ತಿಳಿದು, ಆ ಮೀನನ್ನು ಹೇಗಾ ದರೂ ಅಪಾಯದಿಂದ ತಪ್ಪಿಸಿ ರಕ್ಷಿಸಬೇಕೆಂದು ನಿಶ್ಚಯಿಸಿಕೊಂಡನು ಅದನ್ನೆತ್ತಿ ತನ್ನ ಕಮಂಡಲುಜಲದಲ್ಲಿಟ್ಟುಕೊಂಡು, ತನ್ನ ಆಶ್ರಮಕ್ಕೆ ತಂದ ನು.ಒಂದು ರಾತ್ರಿಯೊಳಗಾಗಿಯೇ ಆ ಮೀನಿನ ಮರಿಯು ಆ ಕಮಂಡಲುವಿ ನಲ್ಲಿ ಹಿಡಿಯದಷ್ಟು ದೊಡ್ಡದಾಗಿ ಬೆಳೆದು, ಅಲ್ಲಿ ನನಗೆ ತಕ್ಕಷ್ಟು ಅವಕಾಶ ವಿಲ್ಲದುದರಿಂದ, ರಾಜನನ್ನು ಕುರಿತು, "ಓರಾಜೇಂದ್ರಾ!ಈಪಾತ್ರೆಯು ನನಗೆ ಬಹಳ ಇಕ್ಕಟ್ಟಾಗಿರುವುದರಿಂದ,ಇನ್ನು ಮೇಲೆ ನಾನು ಇದರಲ್ಲಿ ವಾಸಮಾಡ ಲಾರೆನು. ಸುಖವಾಗಿ ವಾಸಮಾಡುವುದಕ್ಕೆ ತಕ್ಕಂತೆ ಬೇರೊಂದು ವಿಶಾಲ ವಾದ ಸ್ಥಳವನ್ನು ಕಲ್ಪಿಸು"ಎಂದಿತು. ಇದನ್ನು ಕೇಳಿ ಸತ್ಯವ್ರತನು, ಒಂದು ರಾತ್ರಿಯೊಳಗಾಗಿ ಆಮೀನು ಅಷ್ಟು ದೊಡ್ಡದಾಗಿ ಬೆಳೆದುದಕ್ಕೆ ಆಶ್ಚರ್ಯಪ ಡುತ್ತ, ಆ ಕಮಂಡಲುವಿನಿಂದ ಅದನ್ನು ತಂದು, ಶುದ್ಧಜಲವುಳ್ಳ ಒಂದು ದೊಡ್ಡಕಡಾಯಿಯಲ್ಲಿರಿಸಿದನು.ಆಮೇಲೆ ಒಂದುಮುಹೂರ್ತಕಾಲದೊಳಗಾ ಗಿಯೇ ಆ ಮೀನು ಮೂರು ಮೊಳದುದ್ದಕ್ಕೆ ಬೆಳೆದು,ಆ ಕಡಾಯಿಯಲ್ಲಿಯೂ ಅಡಗದಷ್ಟು ದೊಡ್ಡದಾಗಿ, ತಿರುಗಿ ರಾಜನನ್ನು ಕುರಿತು "ರಾಜೇಂದ್ರಾ! ಈ

ಪಾತ್ರವೂ ನನಗೆಸಾಲದು. ಇದರಲ್ಲಿಯೂ ಸುಖವಾಗಿ ವಾಸಮಾಡಲಾರೆನು. ಇದಕ್ಕಿಂತಲೂ ವಿಶಾಲವಾದ ಬೇರೊಂದುಸ್ಥಳಕ್ಕೆ ನನ್ನನ್ನು ಸಾಗಿಸಿ,ನನ್ನನ್ನು ರಕ್ಷಿಸಬೇಕು" ಎಂದು ಕೂಗಿಕೊಂಡಿತು ಸತ್ಯವ್ರತನಿಗೆ ಮೊದಲಿಗಿಂತಲೂ ಆಶ್ಚರ್ಯವುಂಟಾಯಿತು ಆ ಮೀನನ್ನು ಆ ಕಡಾಯಿಯಿಂದ ತಂದು, ಜಲಪೂರ್ಣವಾದ ಒಂದಾನೊಂದು ಸರೋವರದಲ್ಲಿರಿಸಿದನು ಮುಹೂರ್ತಕಾಲದಲ್ಲಿಯೇ ಆ ಮೀನು ಸರೋವರವೆಲ್ಲವನ್ನೂ ಆಕ್ರಮಿಸುವಂತೆ ದೊಡ್ಡದಾಗಿ ಬೆಳೆಯಿತು ಅದರ ವಾಸಕ್ಕೆ ಸರೋವರವೂ ಸಾಲದಂತಾಯಿತು ತಿರುಗಿ ಆ ಮತ್ಸ್ಯವು "ಓ ರಾಜಾ! ಈ ಸರೋವರದಲ್ಲಿಯೂ ನನಗೆ ಸುಖವಿಲ್ಲ ಇದರಲ್ಲಿ ಮೈಯನ್ನು ಕದಲಿಸುವುದಕ್ಕೂ ನನಗೆ ಅವಕಾಶವಿಲ್ಲ ಆದುದರಿಂದ ನನ್ನನ್ನು ತೆಗೆದುಕೊಂಡುಹೋಗಿ, ಇದಕ್ಕಿಂತಲೂ ವಿಶಾಲವಾದ ಅಕ್ಷಯಜಲವುಳ್ಳ ಬೇರೊಂದು ಮಡುವಿನಲ್ಲಿರಿಸು" ಎಂದಿತು ಈ ಮಾತನ್ನು ಕೇಳಿ ಸತ್ಯವ್ರತನು ಕನಿಕರಗೊಂಡು,ಅದನ್ನು ತಂದು ಒಂದು ದೊಡ್ಡಮಡುವಿನಲ್ಲಿ ಬಿಟ್ಟನು. ಮುಹೂರ್ತದಕಾಲದಲ್ಲಿಯೇ ಆ ಮೀನಿಗೆ ಆ ಮಡುವೂ ಸಾಲದಂತಾಗಲು, ತಿರುಗಿ ಆ ಮತ್ಸ್ಯವು .ರಾಜನಲ್ಲಿ ಮೊರೆಯಿಟ್ಟಿತು. ಸತ್ಯವ್ರತನು ಅದನ್ನು ಅಲ್ಲಿಂದ ಕರೆತಂದು,ಒಂದು ಸಮುದ್ರದಲ್ಲಿಟ್ಟನು ಆಗ ಮತ್ಸ್ಯವು ಸತ್ಯವ್ರತನನ್ನು ಕುರಿತು "ಓ ರಾಜೇಂದ್ರಾ! ಇದೀಗ ಬಹಳ ಚೆನ್ನಾಯಿತು! ಹಿಂದೆ ಆ ಸಣ್ಣನದಿಯಲ್ಲಿರತಕ್ಕ ಮತ್ಸ್ಯಗಳಿಗೆ ಹೆದರಿ ಮರೆಹೊಕ್ಕು ಬಂದ ನನ್ನನ್ನು, ಈಗ ಈ ಮಹಾಸಮುದ್ರದಲ್ಲಿ ತಂದುಬಿಟ್ಟೆಯಲ್ಲಾ! ಇದರಲ್ಲಿ ಮಹಾಭಯಂಕರಗಳಾದ ಮೊಸಳೆಗಳೂ,ಮತ್ಸ್ಯಗಳೂ ಲೆಕ್ಕವಿಲ್ಲದಷ್ಟಿರುವುವು. ಅವು ನನಗಿಂತಲೂ ಎಷ್ಟೋ ಬಲವುಳ್ಳವು. ಅವು ನನ್ನನ್ನು ಭಕ್ಷಿಸದೆ ಬಿಡುವುವೇ! ಇದುವರೆಗೆ ನೀನು ನನ್ನನ್ನು ಕಾಪಾಡಿದುದೂ ವ್ಯರ್ಥವಾಗುವುದಲ್ಲವೆ? ಇದುವರೆಗೆ ನನ್ನನ್ನು ಬೆಳೆಸಿ ಈಗ ನೀನಾಗಿಯೇ ಇಲ್ಲಿನ ಮತ್ಸ್ಯಗಳ ಬಾಯಿಗೆ ತುತ್ತಾಗಿಸುವೆಯಲ್ಲಾ. ಈ ಸಮುದ್ರದಲ್ಲಿ ನನ್ನನ್ನು ಬಿಡಬೇಡ" ! ಎಂದು ಕೂಗಿಕೊಂಡಿತು ಇದನ್ನು ಕೇಳಿ ಸತ್ಯವ್ರತನು, ಅತ್ಯಾಶ್ಚರ್ಯದಿಂದ ಏನೊಂದೂ ತೋರದೆ, ಆ ಮತ್ಸ್ಯವನ್ನು ಕುರಿತು ಹೀಗೆಂದು ಹೇಳುವನು "ಎಲೈ! ಮತ್ಸ್ಯರೂಪದಿಂದ ನನ್ನನ್ನು

ವಂಚಿಸುತ್ತಿರುವ ನೀನು ಯಾರು ? ಇಂತಹ ಆಶ್ಚರ್ಯಶಕ್ತಿಯುಳ್ಳ ಮೀ
ನನ್ನು ಇದುವರೆಗೆ ನಾನು ಕಣ್ಣಿಂದ ನೋಡಿದುದೂ ಇಲ್ಲ! ಕಿವಿಯಿಂದ
ಕೇಳಿದುದೂ ಇಲ್ಲ!ಲೋಕದಲ್ಲಿ ಯಾವ ಜಲಜಂತುವಾದರೂ,ಒಂದು ರಾತ್ರಿ
ಯೊಳಗಾಗಿ ತನ್ನ ದೇಹವನ್ನು ನೂರುಯೋಜನಗಳ ವಿಸ್ತಾರಕ್ಕೆ ಬೆಳೆಸಬ
ಲ್ಲುದೆ ? ನಿಜವಾಗಿಯೂ ನೀನು ಜಲಜಂತುವಲ್ಲ! ಯಾವನೋ ದೇವಾಂಶದ
ವನಾಗಿರಬೇಕು ನಿನ್ನನ್ನು ಸಾಮಾನ್ಯದೇವತೆಗಳಲ್ಲಿ ಒಬ್ಬನೆಂದೂ ಹೇಳು
ವುದಕ್ಕೆ ಸಾಧ್ಯವಿಲ್ಲ!ನಿರ್ವಿಕಾರನಾದ ನಾರಾಯಣಮೂರ್ತಿಯೇ ನೀನೆಂದು
ಹೇಳಬಹುದು! ಭೂತಗಳನ್ನನುಗ್ರಹಿಸಿ ರಕ್ಷಿಸುವುದಕ್ಕಾಗಿ, ನೀನು ಈ ಮ
ತ್ಸ್ಯರೂಪವನ್ನು ಧರಿಸಿರಬೇಕು. ಇದರಲ್ಲಿ ಸಂದೇಹವೇ ಇಲ್ಲ" ಎಂದು
ಹೇಳಿ ಆ ಮೀನನ್ನು ಸಾಕ್ಷಾದ್ಭಗವತ್ಸ್ವರೂಪವೆಂದೇ ನಿಶ್ಚಯಿಸಿಕೊಂಡು
ಕೈಮುಗಿದು ಸ್ತೋತ್ರಮಾಡುವನು “ ಓ ಪುರುಷೋತ್ತಮಾ ! ಲೋ
ಕದ ಸೃಷ್ಟಿಸ್ಥಿತಿಲಯಗಳೆಲ್ಲಕ್ಕೂ ನೀನೇ ಕಾರಣನು ! ಭಕ್ತರಾದ ನ
ಮ್ಮಂತವರಿಗೆ ನೀನೇ ಮುಖ್ಯಗತಿಯು ! ನೀನು ಸಮಸ್ತಜಗತ್ತಿ
ಗೂ ಅಂತರ್ಯಾಮಿಯಾಗಿ ವರ್ತಿಸತಕ್ಕವನು. ದೇವಾ ! ನಿನಗೆ ನಮ
ಸ್ಕಾರವು. ನೀನು ಲೀಲಾರ್ಥವಾಗಿ ಅಂಗೀಕರಿಸತಕ್ಕ ಈವಿಧವಾದ ಅ
ವತಾರಗಳೆಲ್ಲವೂ ಸಮಸ್ತಭೂತಗಳ ಕ್ಷೇಮಾಭಿವೃದ್ಧಿಗಾಗಿಯೇ ಎಂಬು
ದನ್ನುಮಾತ್ರ ನಾನು ಬಲ್ಲೆನು ಆದರೆ ಈಗ ನೀನು ಯಾವ ಕಾರ್ಯವ
ನ್ನು ಸಾಧಿಸುವುದಕ್ಕಾಗಿ ಈ ರೂಪವನ್ನು ಧರಿಸಿರುವೆಯೋ, ಅದನ್ನು ನನಗೆ
ತಿಳಿಸಬೇಕು. ಓ ಪುಂಡರೀಕಾಕ್ಷಾ ! ತಾವೇ ಸ್ವತಂತ್ರರೆಂಬ ಅಭಿಮಾನ
ವುಳ್ಳ ಇತರ ದೇವತೆಗಳ ಪಾದಸೇವೆಯಂತೆ ನಿನ್ನ ಪಾದಸೇವೆಯು ಎಂದಿ
ಗೂ ವ್ಯರ್ಥವಾಗತಕ್ಕುದಲ್ಲ ಸಮಸ್ತಭೂತಗಳಿಗೂ ನೀನು ಪ್ರಿಯನಾಗಿ
ಯೂ, ಹಿತಕರನಾಗಿಯೂ, ಅಂತರ್ಯಾಮಿಯಾಗಿಯೂ ಇರುವೆ! ಇದು
ವರೆಗೆ ನಾನು ನಿನ್ನ ಸೇವೆಯನ್ನು ಮಾಡಿದುದು ಹೇಗೆತಾನೇ ವ್ಯರ್ಥವಾಗು
ವುದು? ನಿನ್ನ ಸೇವಾಪ್ರಭಾವದಿಂದಲೇ ಈಗ ನಿನ್ನ ಈ ಅದ್ಭುತರೂಪವನ್ನು
ನಾನು ಕಣ್ಣಾರೆ ನೋಡುವಂತಾಯಿತು" ಎಂದು ಹೇಳಿ ಸಾಷ್ಟಾಂಗಪ್ರ
ಣಾಮವನ್ನು ಮಾಡಿದನು. ಆಗ ಮತ್ಸ್ಯರೂಪಿಯಾದ ಭಗವಂತನು, ಸತ್ಯ

ವ್ರತನನ್ನು ಕುರಿತು “ಓ ರಾಜಾ! ಕಲ್ಪಾಂತದಲ್ಲಿ ಸಮುದ್ರಗಳು ಮೂರು ಲೋಕವನ್ನೂ ಮುಳುಗಿಸಿಬಿಡುವುವು. ಆ ಸಮಯದಲ್ಲಿ ನಾನು ಆ ಸಮು ದ್ರಜಲದಲ್ಲಿದ್ದು, ನನ್ನ ಭಕ್ತರನ್ನು ಕಾಪಾಡಿ,ಅವರಿಗೆ ಸಂತೋಷವನ್ನುಂಟು ಮಾಡುವುದಕ್ಕಾಗಿಯೇ ಈ ರೂಪವನ್ನು ಕೈಕೊಂಡೆನು ಆ ಪ್ರಳಯವು ಬರುವುದಕ್ಕೆ ಇನ್ನು ಬಹಳಕಾಲವೇನೂ ಇಲ್ಲ! ಇದು ಮೊದಲು ಏಳನೆಯ ದಿನದಲ್ಲಿ ಈ ಲೋಕವೆಲ್ಲವೂ ಸಮುದ್ರದಲ್ಲಿ ಮುಳುಗಿಹೋಗುವುದು. ಆ ಸಮಯದಲ್ಲಿ ನನ್ನ ಸಂಕಲ್ಪದಿಂದ ವಿಶಾಲವಾದ ಒಂದು ಹಡಗು, ನಿನ್ನ ಸ ಮೀಪಕ್ಕೆ ತೇಲಿ ಬರುವುದು ಆಗ ನೀನು, ನಾನಾಬಗೆಯ ಬೀಜಗಳನ್ನೂ, ಓಷಧಿಗಳನ್ನೂ ಆ ಹಡಗಿನಲ್ಲಿ ತುಂಬಿ, ನೀನೂ ಸಪ್ತರ್ಷಿಗಳೊಡನೆ, ಆ ಹಡ ಗಿನಲ್ಲಿ ಕುಳಿತು, ನಿರ್ಭಯನಾಗಿ ಆ ಪ್ರಳಯಜಲದಲ್ಲಿ ಸಂಚರಿಸುತ್ತಿರು! ಆಗ ಸೂರ್ಯಕಿರಣವಿಲ್ಲದೆ ಲೋಕವೆಲ್ಲವೂ ಅಂಧಕಾರಮಯವಾದರೂಕೂಡ, ಸಪ್ತರ್ಷಿಗಳ ದೇಹಕಾಂತಿಯಿಂದ ಬೆಳಕು ಕಾಣಿಸುತ್ತಿರುವುದು ಪ್ರಳಯಕಾ ಲದ ಗಾಳಿಯು ಆ ನಾವೆಯನ್ನು ಬಹಳವಾಗಿ ಕದಲಿಸುತ್ತಿರುವುದು ಹಾಗಿದ್ದ ರೂ ನೀನು ಭಯಪಡಬಾರದು ಸ್ವಲ್ಪಕಾಲದೊಳಗಾಗಿಯೇ ನಾನು ಇದೇ ರೂಪದಿಂದ ನಿನ್ನ ಬಳಿಗೆ ಬರುವೆನು ಆಗ ನೀನು, ಒಂದು ದೊಡ್ಡಸರ್ಪ ದಿಂದ, ಆ ನಾವೆಯನ್ನು ನನ್ನ ಮುಖದಮೇಲಿನ ಈ ಶೃಂಗಕ್ಕೆ ಕಟ್ಟಿಡು! ಆಗ ಆ ಪ್ರಳಯಮಾರುತದ ಅಲೆದಾಟವಿಲ್ಲದೆ ಹಡಗು ಸ್ಥಿರವಾಗಿ ನಿಲ್ಲುವುದು ಆಗ ನಾನು ನಿಮ್ಮೊಡನೆ ಆ ನಾವೆಯನ್ನೂ ಆ ಪ್ರಳಯಸಮುದ್ರದಲ್ಲಿ ಎಳೆ ದುಕೊಂಡು ಹೋಗುತ್ತ, ಬ್ರಹ್ಮನಿಗೆ ನಿದ್ರೆತಿಳಿಯುವವರೆಗೆ ಅಲ್ಲಲ್ಲಿ ವಿಹರಿಸುತ್ತಿರುವೆನು ಆಗ ನಾನೇ ನಿನಗೆ ಪರಬ್ರಹ್ಮತತ್ವವೆಂದು ಹೇ ಳಲ್ಪಡುವ ನನ್ನ ಮಹಿಮೆಯನ್ನು ವಿವರವಾಗಿ ಉಪದೇಶಿಸುವೆನು ಅದರಿಂದ ನೀನು ! ಬ್ರಹ್ಮತತ್ವವನ್ನು ಚೆನ್ನಾಗಿ ತಿಳಿಯಬಹುದು” ಎಂದು ಹೇಳಿ ಭಗವಂತನು,ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು ಇತ್ತಲಾಗಿ ಸತ್ಯವ್ರತನು, ಭಗವಂತನು ಹೇಳಿದ ಕಾಲವನ್ನೇ ನಿರೀಕ್ಷಿಸುತ್ತ, ಪೂರ್ವಾಗ್ರ ವಾಗಿ ದರ್ಭೆಗಳನ್ನು ಹಾಸಿ,ಅದರಮೇಲೆ ಉತ್ತರಾಭಿಮುಖವಾಗಿ ಕುಳಿತು,ಆ ಮತ್ಸ್ಯಮೂರ್ತಿಯ ಪಾದಾರವಿಂದವನ್ನೇ ಹೃದಯದಲ್ಲಿ ಧ್ಯಾನಿಸುತ್ತಿದ್ದ

ನು. ಹೀಗೆ ಏಳುದಿನಗಳು ಕಳೆದುವು. ಭಗವಂತನು ನಿರ್ದೇಶಿಸಿದ್ದ ಕಾಲ ಕ್ಕೆ ಸರಿಯಾಗಿ, ಆಕಾಶದಲ್ಲಿ ಮಹಾಮೇಘಗಳು ಬಂದು ಕವಿದು, ಭಯಂ ಕರವಾಗಿ ವರ್ಷಿಸಲಾರಂಭಿಸಿದುವು ಅದರಿಂದ ಸಮುದ್ರಗಳೆಲ್ಲವೂ ಮೇರೆ ಯನ್ನು ಮೀರಿ ಉಕ್ಕಿಬಂದುವು ಲೋಕವೆಲ್ಲವೂ ಏಕಾರ್ಣವವಾಗುವಂತೆ ನೀರಿನಲ್ಲಿ ಮುಳುಗಿಹೋದುವು ಸತ್ಯವ್ರತನುಮಾತ್ರ ಭಗವಂತನನ್ನೇ ಧ್ಯಾನಿಸುತ್ತ ಕುಳಿತಿದ್ದನು. ಇಷ್ಟರಲ್ಲಿ ಒಂದು ದೊಡ್ಡನಾವೆಯು ಆ ಪ್ರ ಳಯಜಲದಲ್ಲಿ ತೇಲುತ್ತ ಆ ರಾಜನಿದ್ದಕಡೆಗೆ ಬಂದುಸೇರಿತು ಅದನ್ನು ಕಂಡು ಸತ್ಯವ್ರತನು, ಭೂಮಿಯಲ್ಲಿದ್ದ ಬೀಜಗಳನ್ನೂ, ಓಷಧಿಗಳನ್ನೂ ಅದ ರಲ್ಲಿ ತುಂಬಿ,ಸಪ್ತರ್ಷಿಗಳೊಡನೆ ತಾನೂ ಆ ನಾವೆಯನ್ನೇರಿ ಕುಳಿತನು ಆಗ ಆ ಮಹರ್ಷಿಗಳು ಸತ್ಯವ್ರತವನ್ನು ನೋಡಿ "ರಾಜಾ! ನೀನು ಭಯಪಡದೆ ಭಗವಂತನನ್ನೇ ದೃಢಮನಸ್ಸಿನಿಂದ ಧ್ಯಾನಿಸುತ್ತಿರು? ಅವನೇ ನಮ್ಮನ್ನು ಅ ಪಾಯದಿಂದ ತಪ್ಪಿಸಿ ರಕ್ಷಿಸುವನು"ಎಂದು ಧೈರ್ಯವನ್ನುಕೊಟ್ಟು ಪ್ರೋ ತ್ಸಾಹಿಸುತಿದ್ದರು. ಹಾಗೆಯೇ ಸತ್ಯವ್ರತನು ಭಗವಂತನನ್ನು ಏಕಾಗ್ರಚಿ ತ್ತದಿಂದ ಧ್ಯಾನಿಸುತ್ತಿದ್ದನು ಇಷ್ಟರಲ್ಲಿಯೇ ಆ ಮಹಾಸಮುದ್ರದಲ್ಲಿ ಖಡ್ಗಮೃಗದಂತೆ ಮೂತಿಯಮೇಲೆ ಕೊಂಬುಳ್ಳ ಸುವರ್ಣಮಯವಾ ದ ಒಂದಾನೊಂದು ಮಹಾಮತ್ಸ್ಯವು ಆತನ ಕಣ್ಣಿಗೆ ಗೋಚರಿಸಿತು. ಅದರ ದೇಹವು ಲಕ್ಷಯೋಜನದಷ್ಟು ವಿಶಾಲವಾಗಿತ್ತು. ಅದನ್ನು ಕಂಡೊ ಡನೆ ಸತ್ಯವ್ರತನು, ಹಿಂದೆ ತನಗೆ ಭಗವಂತನು ಸೂಚಿಸಿದ್ದಂತೆ ಅದರ ಕೊಂಬಿಗೆ ಒಂದು ಸರ್ಪದಿಂದ ತನ್ನ ನಾವೆಯನ್ನು ಬಿಗಿದುಕಟ್ಟಿ, ಸಂತು ಷ್ಟಚಿತ್ತನಾಗಿ ಭಗವಂತನನ್ನು ಹೀಗೆಂದು ಸ್ತುತಿಸುವನು "ಓ ದೇವಾ! ಅನಾದಿಯಾಗಿ ಬಂದ ದೇಹಾತ್ಮಾಭಿಮಾನರೂಪವಾದ ಅಜ್ಞಾನದಿಂದ, ಆ ತ್ಮಜ್ಞಾನವನ್ನು ಮರೆತು, ತಾಪತ್ರಯಪೀಡಿತರಾಗಿ, ಸಂಸಾರದಲ್ಲಿ ನರಳುವ ವರು, ನಿನ್ನ ಕೃಪೆಗೆ ಪಾತ್ರರಾಗಿ, ಮುಕ್ತಿಯನ್ನು ಹೊಂದುವರು ಅವ ರಿಗೆ ಮುಕ್ತ್ಯುಪಾಯವೂ ನೀನೇ! ಮುಕ್ತಿಯನ್ನು ಕೊಡತಕ್ಕವನೂ ನೀನೇ! ಆದುದರಿಂದ ಈಗ ನೀನು ನನಗೆ ಮುಕ್ತಿಮಾರ್ಗವನ್ನುಪದೇಶಿಸತಕ್ಕ ಪರ ಮಾಚಾರ್ಯನಾಗಿಯೂ, ಮುಕ್ತಿಪ್ರಾಪ್ಯನಾಗಿಯೂ ಇರುವೆ. ಜನನಮ

ರಣರೂಪವಾದ ವಿಪತ್ತಿನಲ್ಲಿ ಸಿಕ್ಕಿಬಿದ್ದ ಜೀವವರ್ಗಗಳು, ಆತ್ಮತತ್ವವನ್ನು ತಿಳಿಯಲಾರದೆ, ಕರ್ಮಗಳಿಗೆ ಕಟ್ಟುಬಿದ್ದು, ಶಬ್ದಾದಿವಿಷಯಸುಖಗಳನ್ನು ಸಂಪಾದಿಸುವುದಕ್ಕಾಗಿ, ಮೇಲೆಮೇಲೆ ದುಃಖಹೇತುಗಳಾದ ಕರ್ಮಗಳನ್ನೇ ನಡೆಸುತ್ತಿರುವುವು ಹಾಗಿದ್ದರೂ ನಿನ್ನನ್ನು ಸೇವಿಸಿದವರು, ಆ ನಿನ್ನ ಸೇವಾಪ್ರಭಾವದಿಂದ, ದೇಹಾತ್ಮಾಭಿಮಾನಬುದ್ಧಿಯನ್ನು ನೀಗಿ, ಉತ್ತಮಗತಿಯನ್ನು ಹೊಂದುವರು ನೀನೇ ಆಚಾರ್ಯರೂಪದಿಂದ ಅವರ ಅಜ್ಞಾನವನ್ನು ನೀಗಿಸಿ ಅವರನ್ನು ಸ್ವೀಕರಿಸುವೆ ಅಂತಹ ದಯಾಳುವಾದ ನೀನೇ ಅಜ್ಞಾನವೆಂಬ ನನ್ನ ಹೃದಯಗ್ರಂಥಿಯನ್ನು ಬಿಡಿಸಿ, ನನ್ನನ್ನುದ್ಧರಿಸಬೇಕು. ಬಂಗಾರವು ಅಗ್ನಿಸಂಪರ್ಕದಿಂದ ನಿಷ್ಕಲ್ಮಷವಾಗಿ, ತನ್ನ ಸಹಜವರ್ಣವನ್ನು ಹೊಂದುವಂತೆ ಮುಮುಕ್ಷುವಾದ ಪುರುಷನು,ನಿನ್ನ ಸೇವೆಯಿಂದ ತನ್ನ ಕರ್ಮಗಳನ್ನು ನೀಗಿ ಶುದ್ಧಸ್ವರೂಪವನ್ನು ಹೊಂದುವನು ಅಂತಹ ಮಹಾಪ್ರಭಾವವುಳ್ಳ ನೀನೇ ಈಗ ನನಗೆ ಆಚಾರ್ಯನಾಗಿ ತತ್ವವನ್ನುಪದೇಶಿಸಬೇಕು ದೇವಾ ! ನೀನು ನಮ್ಮ ಗುರುಗಳಿಗೂ ಗುರುವಾಗಿ,ಪರಮಾಚಾರ್ಯನೆನಿಸಿಕೊಂಡಿರುವೆ ಅಷ್ಟೇಕೆ ! ನಿನ್ನಲ್ಲಿ ವಿಮುಖನಾದ ಪುರುಷನನ್ನು ಬೇರೆ ಯಾವ ಗುರುವಾಗಲಿ, ಯಾವ ದೇವತೆಗಳಾಗಲಿ ಉದ್ಧರಿಸಲಾರರು ಬ್ರಹ್ಮರುದ್ರಾದಿಸಮಸ್ತದೇವತೆಗಳೂ ಏಕೀಭವಿಸಿ, ಆಚಾರ್ಯಪದವಿಯಲ್ಲಿದ್ದು, ಹಿತವನ್ನುಪದೇಶಿಸಿ, ಒಬ್ಬ ಮನುಷ್ಯನನ್ನು ಉದ್ಧರಿಸುವುದಕ್ಕೆ ಪ್ರಯತ್ನಿಸಿದರೂ, ಅವನಿಗೆ ನಿನ್ನ ಸೇವೆಯಿಂದುಂಟಾಗುವ ಫಲದಲ್ಲಿ, ಹತ್ತು ಸಾವಿರಭಾಗದಲ್ಲಿ ಒಂದು ಭಾಗವನ್ನಾದರೂ ಕೈಗೂಡಿಸಲಾರರು. ಅಂತವರನ್ನಾಶ್ರಯಿಸಿ ಲಾಭವೇನು ? ಆ ಸಮಸ್ತದೇವತೆಗಳಿಗೂ ಉದ್ಧಾರಕನಾದ ನಿನ್ನನ್ನೇ ನಾನು ಮರೆಹುಗುವೆನು. ಓ ! ದೇವಾ ! ಬ್ರಹ್ಮನು ಮೊದಲಾಗಿ ಸಮಸ್ತಜೀವರೂ. ನಿನ್ನ ಮಾಯೆಯಿಂದ ಮೋಹಿತರಾಗಿ, ತಮ್ಮ ಶ್ರೇಯಸ್ಸಿಗೆ ತಾವೇ ದಾರಿಯನ್ನು ತಿಳಿಯದೆ ಕಳವಳಿಸುವರು. ನಿನ್ನ ಜ್ಞಾನವಾದರೋ ಸೂರ್ಯತೇಜಸ್ಸಿನಂತೆ ನಿಷ್ಕಲ್ಮಷವಾಗಿ ಬೆಳಗುತ್ತಿರುವುದು ಆದುದರಿಂದ ಕಣ್ಣುಳ್ಳವನು ಕುರುಡನಿಗೆ ದಾರಿಯನ್ನು ತೋರಿಸುವಂತೆ, ನೀನು ಬ್ರಹ್ಮಾದಿಗಳಿಗೂ ಅಜ್ಞಾನವನ್ನು ನೀಗಿಸತಕ್ಕ ಗುರು

ವಾಗಿರುವೆ! ಪ್ರಕಾಶವುಳ್ಳ ವಸ್ತುಗಳಿಗೆ ಆಯಾ ಪ್ರಕಾಶವನ್ನು ಕೊಡತಕ್ಕ ವನೂ ನೀನೇ! ಆದುದರಿಂದ ಮುಕ್ತ್ಯುಪಾಯವನ್ನು ತಿಳಿಯಬೇಕೆಂದಿರುವ ನನಗೆ, ನೀನೇ ಆಚಾರ್ಯನಾಗಿ ಅದನ್ನುಪದೇಶಿಸಬೇಕು. ಜನನಮರಣರೂಪ ವಾದ ಸಂಸಾರದಲ್ಲಿ ಸಿಕ್ಕಿಬಿದ್ದವನು, ತನ್ನನ್ನೇ ತಾನು ಆ ಸಂಸಾರಪಾಶದಿಂ ದ ಬಿಡಿಸಿಕೊಳ್ಳುವ ದಾರಿಯನ್ನು ತಿಳಿಯದಿದ್ದರೂ, ತಾನು ಗುರುವೆಂಬ ಅ ಭಿಮಾನದಿಂದ ತನ್ನಂತಿರುವ ಬೇರೊಬ್ಬ ಸಂಸಾರಿಗೆ ಹಿತವನ್ನುಪದೇಶಿಸು ವುದಕ್ಕೆ ಹೋಗುವನು. ಅರ್ಥಕಾಮಾದಿಗಳನ್ನೇ ಪ್ರಧಾನವಾಗಿ ವಿವರಿಸ ತಕ್ಕ ಆ ಉಪದೇಶಗಳೆಲ್ಲವೂ ಮತ್ತಷ್ಟು ಅಜ್ಞಾನವನ್ನು ಹೆಚ್ಚಿಸತಕ್ಕ ಆ ಭಾಸಧರ್ಮಗಳೇಹೊರತು ಹಿತಕಾರಿಗಳಲ್ಲ ಅವೆಲ್ಲವೂ!ಮೇಲೆಮೇಲೆ ಸಂ ಸಾರಬಂಧಕ್ಕೇ ಕಾರಣಗಳು! ನೀನಾದರೋ, ಎಂದಿಗೂ ನಾಶವಿಲ್ಲದುದಾಗಿ ಯೂ, ಸುಖವಾಗಿ ಮುಕ್ತಿಯನ್ನು ಕೈಗೂಡಿಸತಕ್ಕುದಾಗಿಯೂ ಇರುವ ಜ್ಞಾನವನ್ನೇ ಉಪದೇಶಿಸುವೆ' ದೇವಾ ! ನೀನು ಸಮಸ್ತಲೋಕಕ್ಕೂ ಹಿ ತವನ್ನೇ ಕೋರತಕ್ಕವನು ಸರ್ವಭೂತಗಳಿಗೂ ಪ್ರೇಮಪಾತ್ರನು. ಸಮ ಸ್ತಭೂತಗಳಿಗೂ ಅಂತರ್ಯಾಮಿಯಾಗಿ ನಿಯಮಿಸತಕ್ಕವನು. ಹಿತೋಪ ದೇಶಕನು ಜ್ಞಾನಪ್ರವರ್ತಕನು ಅವರವರ ಅಭೀಷ್ಟಗಳನ್ನು ಈಡೇರಿ ಸಬಲ್ಲವನು ಹೀಗೆ ಸರ್ವವಿಧಸಹಾಯಕನಾದ ನೀನು ಅವರವರ ಹೃದ ಯದಲ್ಲಿಯೇ ನೆಲೆಗೊಂಡಿದ್ದರೂ, ಅರ್ಥಕಾಮಾಸಕ್ತರಾದವರು ವಿಷಯ ಚಿಂತೆಯಿಂದ ತೊಳಲುತ್ತ ನಿನ್ನನ್ನು ಮರೆತುಬಿಡುವರು. ಆದುದರಿಂದ ಈಗ ನಾನು ದೇವದೇವನಾಗಿಯೂ, ಮಹಾತ್ಮನಾಗಿಯೂ ಇರುವ ನಿನ್ನಲ್ಲಿ ಆತ್ಮಪರಮಾತ್ಮತತ್ವವನ್ನು ತಿಳಿಯುವುದಕ್ಕಾಗಿ ಮರೆಹೊಕ್ಕಿರುವೆನು ನೀನು ನಿನ್ನ ವಾಕ್ಯಗಳೆಂಬ ದೀಪಗಳಿಂದ, ನನ್ನ ಹೃದಯದಲ್ಲಿರುವ ಅಜ್ಞಾನಾಂಧ ಕಾರವನ್ನು ನೀಗಿಸಬೇಕು. ನಿನ್ನ ಸ್ವರೂಪವನ್ನು ತಿಳಿಸಬೇಕು" ಎಂದು ಪ್ರಾರ್ಥಿಸಿದನು. ಅದನ್ನು ಕೇಳಿ ಮತ್ಸ್ಯಮೂರ್ತಿಯು, ಪ್ರಳಯಸ ಮುದ್ರದಲ್ಲಿ ತಾನು ವಿಹರಿಸುತ್ತಿರುವಾಗಲೇ, ಸತ್ಯವ್ರತನಿಗೆ ಪ್ರಕೃತಿವಿಲಕ್ಷ ಣವಾಧ ಆತ್ಮಸ್ವರೂಪವನ್ನೂ, ಭಕ್ತಿಯೋಗವನ್ನೂ, ಮತ್ಸ್ಯಪುರಾಣವೆಂ ಬ ಸಂಹಿತೆಯಮೂಲಕವಾಗಿ,ಕರ್ಮಯೋಗವನ್ನೂ ವಿವರಿಸಿ ಹೇಳಿದನು.

ಸತ್ಯವ್ರತರಾಜನೂಕೂಡ, ಆ ಹಡಗಿನಲ್ಲಿ ಕುಳಿತಿದ್ದಹಾಗೆಯೇ ಮಹ ರ್ಷಿಗಳೊಡನೆ, ಸಾಕ್ಷಾದ್ಭಗವಂತನ ಬಾಯಿಂದ ಆತ್ಮತತ್ವವೆಲ್ಲವನ್ನೂ ನಿಸ್ಸಂದೇಹವಾಗಿ ಕೇಳಿ ತಿಳಿದುಕೊಂಡನು. ಪ್ರಳಯಾವಸಾನದಲ್ಲಿ ಚತು ರ್ಮುಖನು ನಿದ್ರೆತಿಳಿದೆದ್ದಮೇಲೆ. ಮತ್ಸ್ಯಮೂರ್ತಿಯು ಹಯಗ್ರೀವನೆಂಬ ರಾಕ್ಷಸನನ್ನು ಕೊಂದು, ಅವನಿಂದ ಅಪಹೃತವಾಗಿದ್ದ ವೇದಗಳನ್ನು ತಂದು ತಿರುಗಿ ಅವನ ವಶಕ್ಕೆ ಕೊಟ್ಟನು ಹೀಗೆ ಶಾಸ್ತ್ರಜನ್ಯಜ್ಞಾನವನ್ನೂ, ವಿವೇ ಕಜನ್ಯಜ್ಞಾನವನ್ನೂ ಪಡೆದ ಸತ್ಯವ್ರತನು, ಆ ಮತ್ಸ್ಯಮೂರ್ತಿಯ ಅನು ಗ್ರಹದಿಂದಲೇ ಈ ಕಲ್ಪದಲ್ಲಿ ವೈವಸ್ವತನೆಂಬ ಮನುವಾದನು ಓ ಪರೀಕ್ಷಿ ದ್ರಾಜಾ! ರಾಜರ್ಷಿಯಾದ ಸತ್ಯವ್ರತನಿಗೂ, ಮತ್ಸ್ಯರೂಪಿಯಾದ ಭಗ ವಂತನಿಗೂ ನಡೆದ ಸಂವಾದರೂಪವಾದ ಈ ಉಪಾಖ್ಯಾನವನ್ನು ಕೇಳಿದ ವನು, ಸಮಸ್ತಪಾಪಗಳಿಂದಲೂ ಮುಕ್ತನಾಗುವನು. ಈ ಮತ್ಸ್ಯಾವತಾ ರಚರಿತ್ರವನ್ನು ಪ್ರತಿದಿನವೂ ಯಾರು ಪಠಿಸುವರೋ, ಅವರಿಗೆ, ಮನ ಸ್ಸಿನಲ್ಲಿ ಕೋರಿದ ಕೋರಿಕೆಗಳೆಲ್ಲವೂ ಆಯಾಕ್ಷಣವೇ ಕೈಗೂಡುವುವು ಅವ ರು ಉತ್ತಮಗತಿಯನ್ನೂ ಹೊಂದುವರು ಯಾವನು ಪ್ರಳಯಸಮುದ್ರ ದಲ್ಲಿ ವಿಹರಿಸುತ್ತ, ಬ್ರಹ್ಮದೇವನು ವಿಶ್ರಾಂತಿಯಿಂದ ಮಲಗಿದ್ದಾಗ, ಅವನ ಮುಖದಿಂದ ವೇದವನ್ನು ಕದ್ದೊಯ್ದ ರಾಕ್ಷಸನನ್ನು ಕೊಂದು, ಆ ವೇದಗಳ ನ್ನು ತಂದು ತಿರುಗಿ ಬ್ರಹ್ಮದೇವನಿಗೊಪ್ಪಿಸಿದನೋ, ಯಾವನು ಸತ್ಯವ್ರತ ರಾಜನಿಗೂ, ಅವನೊಡನೆ ಸೇರಿದ್ದ ಸಪ್ತರ್ಷಿಗಳಿಗೂ, ಬ್ರಹ್ಮಸ್ವರೂಪವ ನ್ನು ತಿಳಿಸತಕ್ಕ ಮಾತ್ಸ್ಯಸಂಹಿತೆಯನ್ನುಪದೇಶಿಸಿದನೋ, ಆ ಮತ್ಸ್ಯಮೂ ರ್ತಿಯನ್ನು ನಮಸ್ಕರಿಸುವೆವು" ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು.

ಅಷ್ಟಮಸ್ಕಂಧವು ಸಮಾಪ್ತವು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ.





ಶ್ರೀಕೃಷ್ಣಾಯ ಪರಬ್ರಹ್ಮಣೇ ನಮ.

# ಶ್ರೀಮದ್ಭಾಗವತವು

## ನವಮಸ್ಕಂಧವು

### ವೈವಸ್ವತಮನುವಿನ ವಂಶಚರಿತ್ರವು

ಪರೀಕ್ಷಿದ್ರಾಜನು ತಿರುಗಿ ಶುಕಮುನಿಯನ್ನು ಕುರಿತು“ಓ ಮಹರ್ಷೀ! ನಿನ್ನಿಂದ ನಾನು ಎಲ್ಲಾ ಮನ್ವಂತರಗಳನ್ನೂ, ಆಯಾ ಮನ್ವಂತರಗಳಲ್ಲಿ ಭಗವಂತನು ಬೇರೆಬೇರೆ ಅವತಾರಗಳನ್ನೆತ್ತಿ ನಡೆಸಿದ ಅದ್ಭುತಕಾರ್ಯಗಳ ನ್ನೂ ಕೇಳಿ ತಿಳಿದೆನು ದ್ರವಿಡದೇಶಾಧಿಪತಿಯಾಗಿದ್ದ ಸತ್ಯವ್ರತನೆಂಬ ರಾಜರ್ಷಿಯು, ಇದರ ಹಿಂದಿನ ಕಲ್ಪಾಂತದಲ್ಲಿ, ಭಗವಂತನಿಂದಲೇ ಜ್ಞಾ ನೋಪದೇಶವನ್ನು ಹೊಂದಿ, ಈ ಕಲ್ಪದಲ್ಲಿ ವೈವಸ್ವತನೆಂಬ ಮನುವಾದನೆಂ ದು ಹೇಳಿದೆಯಷ್ಟೆ ? ಅವನಿಗೆ ಇಕ್ಷ್ವಾಕು ಮೊದಲಾದ ಹತ್ತುಮಂದಿ ಪು ತ್ರರು ಹುಟ್ಟಿ, ತಮ್ಮ ಗುಣಗಳಿಂದ ಲೋಕಪ್ರಸಿದ್ಧರಾದರೆಂದೂ ಕೇಳಿರು ವೆನು. ಆ ಇಕ್ಷ್ವಾಕು ಮೊದಲಾದವರ ಸಂತತಿಕ್ರಮವನ್ನೂ, ಅವರ ಚರಿ ತ್ರಗಳನ್ನೂ ಬೇರೆಬೇರೆಯಾಗಿ ನನಗೆ ವಿವರಿಸಿ ತಿಳಿಸಬೇಕು ಅಂತಹ ಮಹಾ ತ್ಮರ ಚರಿತ್ರವನ್ನು ಎಷ್ಟೆಷ್ಟುಸಾರಿ ಕೇಳಿದರೂ,ನಮಗೆ ಮೇಲೆಮೇಲೆ ಕೇಳ ಬೇಕೆಂಬ ಕುತೂಹಲವುಂಟಾಗುತ್ತಿರುವುದು ಆ ವೈವಸ್ವತಮನ್ವಂತರದಲ್ಲಿಹಿಂ ದೆ ಹುಟ್ಟಿದವರಾರು? ಈಗ ಇರತಕ್ಕವರಾರು? ಮುಂದೆ ಹುಟ್ಟತಕ್ಕವರಾರು? ಅವರಲ್ಲಿ ಯಾರುಯಾರು ಯಾವಯಾವ ಕಾರ್ಯಗಳಿಂದ ಪ್ರಸಿದ್ಧಿಗೊಂಡಿ ರುವರು? ಅವೆಲ್ಲವನ್ನೂ ನನಗೆ ಸವಿಸ್ತರವಾಗಿ ತಿಳಿಸಬೇಕು” ಎಂದನು

ಹೀಗೆ ಪರೀಕ್ಷಿದ್ರಾಜನು, ಬ್ರಹ್ಮವಾದಿಗಳಾದ ಅನೇಕಮಹರ್ಷಿಗಳ ನಡುವೆ ಶುಕಮುನಿಯನ್ನು ಪ್ರಶ್ನೆಮಾಡಲು, ಶುಕನು ಅವನ ಪ್ರಶ್ನೆಗೆ ಸಂತೋಷಪಟ್ಟು ಹೀಗೆಂದು ಹೇಳುವನು "ಓ ರಾಜೇಂದ್ರಾ! ನಿನ್ನ ಕೋರಿಕೆಯಂತೆ ವೈವಸ್ವತಮನುವಿನ ವಂಶಾನುಕ್ರಮವನ್ನು ಸಂಗ್ರಹವಾಗಿ ತಿಳಿಸುವೆನು ಕೇಳು! ಅದನ್ನು ಸಂಪೂರ್ಣವಾಗಿ ವಿಸ್ತರಿಸಿ ಹೇಳಬೇಕೆಂದರೆ, ನೂರಾರುವರ್ಷಗಳಾದರೂ ಸಾಲವು ಲೋಕದಲ್ಲಿ ಉಚ್ಚಾವಚಗಳೆನಿಸಿಕೊಂಡ ಸಮಸ್ತಭೂತಗಳಿಗೂ ಅಂತರಾತ್ಮನಾಗಿಯೂ, ಪ್ರಕೃತಿಗಿಂತಲೂ ವಿಲಕ್ಷಣನಾಗಿಯೂ ಇರುವ ಪರಮೇಶ್ವರನು, ಕಲ್ಪಾಂತದಲ್ಲಿ ಈ ಸಮಸ್ತಪ್ರಪಂಚವನ್ನೂ ತನ್ನಲ್ಲಿಯೇ ಅಡಗಿಸಿಕೊಂಡು, ತಾನೊಬ್ಬನೇ ಒಬ್ಬನಾಗಿದ್ದನು ಆಗ ಅವನ ನಾಭಿಯಿಂದ ಸುವರ್ಣಮಯವಾದ ಒಂದು ಕಮಲವು ಹೊರಟಿತು ಅದರಿಂದ ಚತುರ್ಮುಖನು ಹುಟ್ಟಿದನು ಆ ಚತುರ್ಮುಖನ ಮನಸ್ಸಿನಿಂದ ಮರೀಚಿಪ್ರಜಾಪತಿಯು ಹುಟ್ಟಿದನು ಆ ಮರೀಚಿಗೆ ಕಶ್ಯಪನೆಂಬ ಮಗನಾದನು ಆ ಕಶ್ಯಪನು ದಕ್ಷಕುಮಾರಿಯಾದ ಅದಿತಿದೇವಿಯನ್ನು ಮದಿವೆಯಾಗಿ, ಅವಳಲ್ಲಿ ವಿವಸ್ವಂತನೆಂಬ ಪುತ್ರನನ್ನು ಪಡೆದನು ಆ ವಿವಸ್ವಂತನಿಗೆ ಸಂಜ್ಞಾದೇವಿಯಲ್ಲಿ ವೈವಸ್ವತಮನುವು ಜನಿಸಿದನು ಈ ವೈವಸ್ವತಮನುವಿಗೆ ಶ್ರದ್ಧೆಯೆಂಬ ಭಾರ್ಯೆಯಲ್ಲಿ, ಇಕ್ಷ್ವಾಕು ಶರ್ಯಾತಿ, ನೃಗ, ದಿಷ್ಟ, ಕರೂಶ, ನರಿಷ್ಯಂತ, ಪೃಷಧ್ರ, ನಭಗ, ಕವಿಗಳೆಂಬ ಹತ್ತುಮಂದಿ ಪುತ್ರರು ಹುಟ್ಟಿದರು

ರಾಜಾ! ವೈವಸ್ವತಮನುವು, ಮೊದಲು ಬಹುಕಾಲದವರೆಗೆ ಮಕ್ಕಳಿಲ್ಲದೆ, ತನ್ನ ಗುರುವಾದ ವಸಿಷ್ಠನಲ್ಲಿ ತನ್ನ ದುಃಖವನ್ನು ವಿಜ್ಞಾಪಿಸಿಕೊಳ್ಳಲು. ವಸಿಷ್ಠನು ಸಂತಾನಾರ್ಥವಾಗಿ ಅವನಿಂದ ಮಿತ್ರಾವರುಣವೆಂಬ ಒಂದಾನೊಂದು ಇಷ್ಟಿಯನ್ನು ಮಾಡಿಸತೊಡಗಿದನು. ಈ ಯಾಗಕಾಲದಲ್ಲಿ ಮನುಪತ್ನಿಯಾದ ಶ್ರದ್ಧೆಯೆಂಬವಳು, ಹಾಲನ್ನುಮಾತ್ರ ಕುಡಿಯುತ್ತ ಬಹಳ ನಿಯಮದಿಂದಿದ್ದಳು ಆದರೆ ಅವಳಿಗೆ ತನ್ನ ಹೊಟ್ಟೆಯಲ್ಲಿ ಹೆಣ್ಣುಮಗುವನ್ನು ಪಡೆಯಬೇಕೆಂಬ ಆಸೆಯಿದ್ದುದರಿಂದ, ಆ ಯಾಗವು ನಡೆಯುತಿದ್ದಾಗ, ನಡುವೆ ಆಕೆಯು ಹೋತೃವಿನ ಬಳಿಗೆ ಬಂದು ತನಗೆ

ಕನ್ನಿಯು ಹುಟ್ಟುವಂತೆ ಯಾಗವನ್ನು ನಡೆಸಬೇಕೆಂದು ಯಾಚಿಸಿದಳು.
ಹೋತೃವು ಅದಕ್ಕೆ ಸಮ್ಮತಿಸಿ, ಆಕೆಯ ಉದ್ದೇಶವನ್ನೇ ದೃಢವಾಗಿ ಮನ
ಸ್ಸಿನಲ್ಲಿ ಚಿಂತಿಸುತಿದ್ದನು ಇಷ್ಟರಲ್ಲಿ ಅಧ್ವರ್ಯುವು ಹೋಮಕಾರ್ಯ
ಕ್ಕಾಗಿ ಅವನನ್ನು ಪ್ರೇರಿಸಿದುದರಿಂದ, ಅವನು ಮನುಪತ್ನಿಯ ಪ್ರಾರ್ಥನೆ
ಯನ್ನು ಮನಸ್ಸಿನಲ್ಲಿ ಭಾವಿಸುತಿದ್ದಹಾಗೆಯೇ, ಬಾಯಲ್ಲಿ ವಷಟ್ಕಾರವನ್ನು
ಚ್ಚರಿಸುತ್ತ, ಕೈಯಿಂದ ಹವಿಸ್ಸನ್ನು ತೆಗೆದು ಹೋಮಮಾಡಿದನು ಹೀಗೆ
ಹೋತೃವು ಮನಸ್ಸಿನಲ್ಲಿ ವಿಪರೀತಭಾವನೆಯಿಂದ ಹೋಮವನ್ನು ನಡೆಸಿದು
ದರಿಂದ, ಆ ಯಾಗಕ್ಕೆ ಫಲರೂಪವಾಗಿ ವೈವಸ್ವತನಿಗೆ ಇಳೆಯೆಂಬ ಕನ್ಯೆ
ಯು ಹುಟ್ಟಿದಳು. ಆಗ ಯಜಮಾನನಾದ ವೈವಸ್ವತನು, ತನ್ನ ಉದ್ದೇಶ
ಕ್ಕೆ ವಿರುದ್ಧವಾಗಿ ತನಗೆ ಹೆಣ್ಣುಮಗು ಹುಟ್ಟಿದುದನ್ನು ಕಂಡು, ಮನಸ್ಸಿ
ನಲ್ಲಿ ಅಷ್ಟಾಗಿ ತೃಪ್ತಿಯಿಲ್ಲದೆ, ಗುರುವಾದ ವಸಿಷ್ಠನನ್ನು ಕುರಿತು ಹೀಗೆಂ
ದು ಹೇಳುವನು "ಓ ಗುರುವರ್ಯಾ! ಇದೇನಾಶ್ಚರ್ಯವು! ನೀವೆಲ್ಲರೂ
ಮಂತ್ರಜ್ಞರಲ್ಲಿ ಮೇಲೆನಿಸಿಕೊಂಡವರು. ನೀವು ನಡೆಸತಕ್ಕ ಕರ್ಮಗಳು,
ಉದ್ದೇಶಿಸಿದ ಫಲವನ್ನು ತಪ್ಪದೆ ಕೈಗೂಡಿಸಬೇಕಲ್ಲವೆ? ಹಾಗಿಲ್ಲದೆ ಅದರಿಂ
ದ ವಿಪರೀತಫಲವುಂಟಾದರೆ ಅದು ಬಹಳ ವಿಚಾರಾಸ್ಪದವಲ್ಲವೆ? ನಿಮ್ಮ
ಮಂತ್ರಶಕ್ತಿಯು ಎಂದಿಗೂ ಹೀಗಾಗಬಾರದು ನೀವೆಲ್ಲರೂ ವೇದಮಂತ್ರ
ಗಳನ್ನೂ, ಆ ಮಂತ್ರಾರ್ಥವನ್ನೂ ಚೆನ್ನಾಗಿ ಬಲ್ಲವರು ಆ ಮಂತ್ರಗಳನ್ನು
ಹೇಗೆ ವಿನಿಯೋಗಿಸಬೇಕೆಂಬುದನ್ನೂ ಚೆನ್ನಾಗಿ ತಿಳಿದವರು. ದೃಢತಪಸ್ಸಿ
ನಿಂದ ಸಮಸ್ತಪಾಪಗಳನ್ನೂ ನೀಗಿದ ಮಹಾತ್ಮರು! ವಿದ್ವಾಂಸರ ಬಾ
ಯಿಂದ ಸುಳ್ಳುಹೊರಡದಂತೆ, ನೀವು ಮಂತ್ರಪೂರ್ವಕವಾಗಿ ನಡೆಸಿದ ಕ
ರ್ಮಗಳಿಗೆ ಎಂದಿಗೂ ವಿಪರೀತಫಲವು ಕಾಣಲಾರದು! ಹೀಗಿದ್ದರೂ ಈಗ
ನೀವು ಮಾಡಿಸಿದ ಯಾಗದಿಂದ, ನನ್ನ ಸಂಕಲ್ಪಕ್ಕೆ ವಿರುದ್ಧವಾಗಿ ಕನ್ಯೆಯು
ಹುಟ್ಟಿದುದೇಕೆ?" ಎಂದನು ಇದನ್ನು ಕೇಳಿ ನನ್ನ *ಪ್ರಪಿತಾಮಹನಾದ ವಸಿ

* ವಸಿಷ್ಠನಿಗೆ ಶಕ್ತಿಯೂ, ಆ ಶಕ್ತಿಯಿಂದ ಪರಾಶರನೂ, ಪರಾಶರನಿಂದ ವ್ಯಾ
ಸನೂ, ವ್ಯಾಸನಿಂದ ಶುಕನೂ ಹುಟ್ಟಿದವರಾದುದರಿಂದ ವಸಿಷ್ಠನು ಶುಕನಿಗೆ ಮು
ತ್ತಾತನೆಂದು ತಿಳಿಯಬೇಕು.

ಷ್ಠನು, ತನ್ನ ಧ್ಯಾನದೃಷ್ಟಿಯಿಂದ ಅದರ ಕಾರಣವನ್ನು ತಿಳಿದುಕೊಂಡು, ವೈವಸ್ವತನನ್ನು ಕುರಿತು “ಓ ರಾಜೇಂದ್ರಾ! ನಿನ್ನ ಯಾಗದಲ್ಲಿ ಹೋತೃವಾಗಿದ್ದವನು, ಹೋಮಮಾಡುವಾಗ, ಬೇರೆಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದುದರಿಂದ, ಈ ವಿಪರೀತಫಲವುಂಟಾಯಿತು ಈಗಲೂ ಚಿಂತೆಯಿಲ್ಲ. ನನ್ನ ತಪೋಬಲದಿಂದ ಈಗ ನಿನಗೆ ಹುಟ್ಟಿರುವ ಹೆಣ್ಣುಮಗುವನ್ನೇ ಗಂಡುಮಗುವನ್ನಾಗಿ ಮಾಡುವೆನು” ಎಂದು ಹೇಳಿ,ಆ ಸ್ತ್ರೀಶಿಶುವಿಗೆ ಪುರುಷರೂಪವುಂಟಾಗುವಂತೆ ಭಗವಂತನನ್ನು ಪ್ರಾರ್ಥಿಸಿದನು ಶ್ರೀಹರಿಯು ಹೀಗೆ ಪ್ರಾರ್ಥಿಸುತ್ತಿರುವ ವಸಿಷ್ಠನಲ್ಲಿ ಪ್ರಸನ್ನನಾಗಿ, ಅವನ ಇಷ್ಟದಂತೆಯೇ ಆಗಲೆಂದು ! ಅನುಗ್ರಹಿಸಿದನು ಅದರಿಂದ ಇಳೆಯೆಂಬ ಕನ್ಯೆಯು ಪುರುಷರೂಪವನ್ನು ಹೊಂದಿ, ಸುದ್ಯುಮ್ನನೆಂಬ ಹೆಸರಿನಿಂದ ಪ್ರಖ್ಯಾತಿ ಹೊಂದಿದಳು ಈ ಸುದ್ಯುಮ್ನನು, ಒಮ್ಮೆ ತನ್ನ ಕೆಲವು ಪರಿವಾರಗಳೊಡನೆ ಉತ್ತಮಾಶ್ವವನ್ನೇರಿ, ಧನುರ್ಬಾಣಗಳನ್ನು ಹಿಡಿದು, ಕವಚವನ್ನು ತೊಟ್ಟು, ಬೇಟೆಗಾಗಿ ಕಾಡಿಗೆ ಹೊರಟನು ಆ ಬೇಟೆಯಲ್ಲಿ ಮೃಗಗಳನ್ನು ಬೆನ್ನಟ್ಟುತ್ತ ಉತ್ತರದಿಕ್ಕಿಗೆ ಹೋದನು. ಬಹಳದೂರದವರೆಗೆ ಹೋದಮೇಲೆ, ಮೇರುಪರ್ವತದ ಕೆಳಭಾಗದಲ್ಲಿ ಒಂದಾನೊಂದು ವನವನ್ನು ಪ್ರವೇಶಿಸಿದನು ಆ ವನವು ಪಾರ್ವತೀಪರಮೇಶ್ವರರು ರಹಸ್ಯವಾಗಿ ಕ್ರೀಡಿಸತಕ್ಕ ಸ್ಥಳವಾಗಿದ್ದಿತು ಸುದ್ಯುಮ್ನನು ಆ ವನಕ್ಕೆ ಕಾಲಿಟ್ಟೊಡನೆ, ಅವನಿಗೆ ತಿರುಗಿ ಸ್ತ್ರೀರೂಪವುಂಟಾಯಿತು ಅವನ ಕುದುರೆಯೂ ಹೆಣ್ಣುಕುದುರೆಯಾಯಿತು. ಅವನ ಅನುಚರರೆಲ್ಲರೂ ಸ್ತ್ರೀರೂಪವನ್ನು ಹೊಂದಿದರು ರಾಜನೂ, ರಾಜಸೇವಕರೂ ಒಬ್ಬರಿಗೊಬ್ಬರು ನೋಡಿಕೊಳ್ಳುತ್ತ, ತಮಗೆ ಅಕಸ್ಮಾತ್ತಾಗಿ ಸ್ತ್ರೀರೂಪವುಂಟಾದುದನ್ನು ನೋಡಿ ಚಿಂತಾಕುಲರಾಗಿದ್ದರು” ಎಂದನು. ಈ ನಡುವೆ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು “ಮುನೀಂದ್ರಾ! ಆ ವನಕ್ಕೆ ಆವಿಧವಾದ ಮಹಿಮೆಯುಂಟಾಗಲು ಕಾರಣವೇನು? ಅದನ್ನು ತಿಳಿಸಬೇಕು” ಎಂದನು ಅದಕ್ಕಾ ಶುಕನು “ರಾಜಾ ಕೇಳು ! ಇಳಾವೃತವರ್ಷಕ್ಕೆ ಸೇರಿದ ಆ ವನದಲ್ಲಿ, ರುದ್ರನು ಯಾವಾಗಲೂ ಪಾರ್ವತೀಸಮೇತನಾಗಿ ಕ್ರೀಡಿಸುತ್ತಿರುವನು. ಹೀಗೆ ಪಾರ್ವತೀಪರಮೇಶ್ವರರಿ




1569. ಶಿವನು ಪಾರ್ವತಿಯೊಡನೆ ರಹಸ್ಯವಾಗಿ ಕ್ರೀಡಿಸುತ್ತಿರುವಾಗ, ಸುದ್ಯುಮ್ನನು ಬಂದು ನೋಡಿದುದು.

ಬ್ಬರೂ ರಹಸ್ಯವಾಗಿ ಕ್ರೀಡಿಸುತ್ತಿರುವಾಗ, ಒಮ್ಮೆ ತಪೋನಿಷ್ಠರಾದ ಕೆಲವು ಮಹರ್ಷಿಗಳು ಅಕಸ್ಮಾತ್ತಾಗಿ ಆ ವನವನ್ನು ಪ್ರವೇಶಿಸಿಬಿಟ್ಟರು ಇವರು ಪ್ರವೇಶಿಸುತ್ತಿರುವಾಗಲೇ, ಇವರ ತೇಜಸ್ಸಿನಿಂದ ಆ ವನವೆಲ್ಲವೂ ಪ್ರಕಾಶವಿಶಿಷ್ಟವಾಯಿತು. ಆಗ ಮೈಮೇಲೆ ಬಟ್ಟೆಯಿಲ್ಲದೆ ರುದ್ರನ ತೊಡೆಯಮೇಲೆ ಕುಳಿತಿದ್ದ ಪಾರ್ವತಿಯು, ದೂರದಲ್ಲಿ ಆ ಋಷಿಗಳು ಬರುತ್ತಿರುವುದನ್ನು ಕಂಡು, ನಾಚಿಕೆಯಿಂದ ತಟ್ಟನೆ ಮೇಲೆದ್ದುನಿಂತು, ಮೈಯನ್ನು ಮುಚ್ಚಿಕೊಂಡಳು ಇಷ್ಟರಲ್ಲಿ ಆ ಮಹರ್ಷಿಗಳೂ ಅಲ್ಲಿ ಪಾರ್ವತೀಪರಮೇಶ್ವರರು ರಹಸ್ಯವಾಗಿರುವುದನ್ನು ಕಂಡು, ಅಲ್ಲಿಂದ ಹಿಂತಿರುಗಿ ಬದರಿಕಾಶ್ರಮಕ್ಕೆ ಹೊರಟುಹೋದರು ಆಗ ರುದ್ರನು, ತನ್ನ ಪ್ರಿಯೆಯಾದ ಪಾರ್ವತಿಗೆ ಮನಸ್ಸಿನಲ್ಲಿ ಅಸಮಾಧಾನವುಂಟಾದುದನ್ನು ತಿಳಿದು, ಅವಳಿಗೆ ಪ್ರಿಯವನ್ನುಂಟುಮಾಡಬೇಕೆಂಬ ಉದ್ದೇಶದಿಂದ “ಎಲೆ ಪ್ರಿಯೆ ! ಚಿಂತಿಸಬೇಡ! ಇದು ಮೊದಲು ಯಾವನಾದರೂ ಪುರುಷನು ಈ ವನವನ್ನು ಪ್ರವೇಶಿಸಿದರೆ, ಅವನಿಗೆ ಒಡನೆಯೇ ಸ್ತ್ರೀರೂಪವುಂಟಾಗಲಿ!” ಎಂದನು. ಅದು ಮೊದಲು ಪುರುಷರೊಬ್ಬರೂ ಆ ವನವನ್ನು ಪ್ರವೇಶಿಸದಿದ್ದರು ಸುದ್ಯುಮ್ನನು ಇದನ್ನು ತಿಳಿಯದೆ, ಅಲ್ಲಿಗೆ ಕಾಲಿಟ್ಟುದರಿಂದ, ಅವನಿಗೂ, ಅವನ ಅನುಚರರಿಗೂ ಸ್ತ್ರೀರೂಪವುಂಟಾಯಿತು. ಓ ರಾಜಾ ! ಹೀಗೆ ಸ್ತ್ರೀರೂಪವನ್ನು ಹೊಂದಿದ ಸುದ್ಯುಮ್ನನು, ಆ ವನದಲ್ಲಿ ಸುತ್ತುತ್ತಿರುವಾಗ, ತನ್ನ ಸಖಿಯರೊಡನೆ ಬರುತಿದ್ದ ಆ ಸ್ತ್ರೀವ್ಯಕ್ತಿಯನ್ನು, ಚಂದ್ರನ ಮಗನಾದ ಬುಧನು ಕಂಡನು ಅವನಿಗೆ ಅವಳಲ್ಲಿ ಮೋಹವುಂಟಾಯಿತು ಅವಳಿಗೂ ಬುಧನಲ್ಲಿ ಮೋಹವು ಹುಟ್ಟಿತು ಇಬ್ಬರೂ ದಂಪತಿಗಳಾದರು ಅವರಲ್ಲಿ ಪುರೂರವನೆಂಬ ಪುತ್ರನು ಹುಟ್ಟಿದನು ಆಮೇಲೆ ಸುದ್ಯುಮ್ನನಿಗೆ ತನ್ನ ಪೂರ್ವಸ್ಥಿತಿಯು ನೆನಪಿಗೆ ಬಂದಿತು ತನಗೆ ಸಂಭವಿಸಿದ ದುಸ್ಥಿತಿಗಾಗಿ ಚಿಂತಿಸುತ್ತ, ತನ್ನ ಕುಲಗುರುವಾದ ವಸಿಷ್ಠನನ್ನು ಧ್ಯಾನಿಸಿದನು. ಒಡನೆಯೇ ವಸಿಷ್ಠನು ಅವನಿಗೆ ಪ್ರತ್ಯಕ್ಷನಾಗಿ, ಅವನಿಗುಂಟಾದ ರೂಪಾಂತರವನ್ನು ನೋಡಿ, ಆಶ್ಚರ್ಯಪಡುತ್ತ, ತಿರುಗಿ ಅವನಿಗೆ ಪುರುಷತ್ವವನ್ನುಂಟುಮಾಡುವುದಕ್ಕಾಗಿ ರುದ್ರನನ್ನು ಧ್ಯಾನಿಸಿದನು. ರುದ್ರನು ವಸಿಷ್ಠನ ಸ್ತೋತ್ರಕ್ಕೆ ಸಂತೋಷ

ಪಟ್ಟು, ಅವನಲ್ಲಿ ಪ್ರಸನ್ನನಾಗಿ “ಓ ಮುನೀಂದ್ರಾ! ನಿನ್ನ ತಪೋಬಲದಿಂ ದ ಈತನು ಒಂದು ತಿಂಗಳು ಪುರುಷರೂಪದಿಂದಲೂ,ಮತ್ತೊಂದು ತಿಂಗಳು ಸ್ತ್ರೀರೂಪದಿಂದಲೂ ರಾಜ್ಯವನ್ನು ಪಾಲಿಸುತ್ತಿರಲಿ!” ಎಂದನು ಹೀ ಗೆ ಸುದ್ಯುಮ್ನನು, ವಸಿಷ್ಠಾನುಗ್ರಹದಿಂದ ಪುರುಷತ್ವವನ್ನು ಹೊಂದಿ ರಾ ಜ್ಯವನ್ನು ಪಾಲಿಸುತಿದ್ದನು ಆದರೆ ತಿಂಗಳುತಿಂಗಳಿಗೂ ಸ್ತ್ರೀರೂಪವನ್ನು ಹೊಂದುತ್ತಿರುವ ಆ ರಾಜನ ಆಳ್ವಿಕೆಯಲ್ಲಿ ಪ್ರಜೆಗಳಿಗೆ ಅಷ್ಟಾಗಿ ತೃಪ್ತಿಯಿ ರಲಿಲ್ಲ ಈ ರಾಜನಿಗೆ ಪುರೂರವನೊಬ್ಬನುಮಾತ್ರವಲ್ಲದೆ, ಉತ್ಕಲನೆಂದೂ, ಗಯನೆಂದೂ, ವಿಮಲನೆಂದೂ ಬೇರೆ ಮೂವರು ಮಕ್ಕಳಾದರು ಈ ಮೂ ವರೂ ಧರ್ಮವತ್ಸಲರಾಗಿ ದಕ್ಷಿಣದೇಶಗಳನ್ನಾಳುತಿದ್ದರು ಸುದ್ಯುಮ್ನ ನಿಗೆ ಮುಪ್ಪು ಬಂದೊಡನೆ,ಅವನು ತನ್ನ ಮಗನಾದ ಪುರೂರವನಿಗೆ ರಾಜ್ಯ ವನ್ನೊಪ್ಪಿಸಿ, ಜಿತೇಂದ್ರಿಯನಾಗಿ ತಪೋವನಕ್ಕೆ ಹೋದನು. ಇದು ಮೊ ದಲನೆಯ ಅಧ್ಯಾಯವು

---

## ಪೃಷಧ್ರಾದಿಗಳ ಚರಿತ್ರವು

ಸುದ್ಯುಮ್ನನು ವನಕ್ಕೆ ಹೋದಮೇಲೆ, ಇತ್ತಲಾಗಿ ವೈವಸ್ವತಮ ನುವು,ಯಮುನಾತೀರಕ್ಕೆ ಹೋಗಿ, ಪುತ್ರಾರ್ಥಿಯಾಗಿ ನೂರುವರ್ಷಗಳವರೆಗೆ ತಪಸ್ಸನ್ನು ಮಾಡಿ, ತಾನಾಗಿಯೇ ವಿಷ್ಣುವನ್ನಾರಾಧಿಸಿದನು. ಭಗವಂ ತನ ಅನುಗ್ರಹದಿಂದ ಅವನು ತನಗೆ ಸಮಾನರಾದ ಹತ್ತುಮಂದಿ ಮಕ್ಕ ಳನ್ನು ಪಡೆದನು ಇವರೇ ಇಕ್ಷ್ವಾಕು ಮೊದಲಾದವರು ಈ ಮಕ್ಕಳಲ್ಲಿ ಪೃ ಷಧ್ರನೆಂಬವನನ್ನು ವೈವಸ್ವತಮನುವು ಪಶುಪಾಲನಕಾರ್ಯಕ್ಕಾಗಿ ನಿಯಮಿ ಸಿದನು ಪೃಷಧ್ರನು ತಂದೆಯಾಜ್ಞೆಯನ್ನು ಶಿರಸಾವಹಿಸಿ, ವೀರಾಸನ ವೆಂಬ ದೃಢವ್ರತವನ್ನು ಹಿಡಿದು, ರಾತ್ರಿಕಾಲಗಳಲ್ಲಿ ಖಡ್ಗಪಾಣಿ ಯಾಗಿ, ಹುಲಿಗಳ ಬಾಧೆಗೆ ಅವಕಾಶವಿಲ್ಲದಂತೆ ಗೋವುಗಳನ್ನು ರಕ್ಷಿಸುತಿದ್ದನು ಹೀಗಿರುವಾಗ ಒಂದಾನೊಂದು ರಾತ್ರಿಯಲ್ಲಿ, ದೊಡ್ಡ ಮಳೆಯು ಸುರಿಯುತಿತ್ತು. ಮೇಘಗಳಿಂದ ಲೋಕವೆಲ್ಲವೂ ಕತ್ತಲೆ ಕವಿ ದಂತಾಯಿತು ಆಗ ಒಂದಾನೊಂದು ಹುಲಿಯು, ಗೋಶಾಲೆಯನ್ನು ಪ್ರ

ವೇಶಿಸಿತು, ಅದಕ್ಕೆ ಭಯಪಟ್ಟು ಅಲ್ಲಿದ್ದ ಗೋವುಗಳೆಲ್ಲವೂ ಅತ್ತಿತ್ತ ಓಡ
ಲಾರಂಭಿಸಿದುವು. ಇಷ್ಟರಲ್ಲಿ ಮಹಾಬಲಾಢ್ಯವಾದ ಆ ಹುಲಿಯು, ಒಂದು
ಗೋವನ್ನು ಹಿಡಿಯಲು, ಆ ಹಸುವು ಭಯದಿಂದ ಕೂಗಿಕೊಂಡಿತು. ಈ
ಧ್ವನಿಯನ್ನು ಕೇಳಿ ಪೃಷಧ್ರನು, ತಟ್ಟನೆ ಆಯುಧಧಾರಿಯಾಗಿ ಅಲ್ಲಿಗೆ ಬಂ
ದನು ಆಗಿನ ಗಾಢಾಂಧಕಾರದಿಂದ, ಅವನಿಗೆ ಯಾವುದೂ ಕಾಣದೆ
ಹೋಯಿತು ಇದರಿಂದ ಅವನು ಹುಲಿಯನ್ನು ಕೊಲ್ಲುವುದಕ್ಕಾಗಿ ಬೀ
ಸಿದ ಕತ್ತಿಯು, ಅಲ್ಲಿದ್ದ ಒಂದಾನೊಂದು ಗೋವಿಗೆ ತಗುಲಿ, ಅದು ಕತ್ತ
ರಿಸಿಬಿದ್ದಿತು ಆ ಕತ್ತಿಯ ಕೊನೆಯು ಸಮೀಪದಲ್ಲಿದ್ದ ಹುಲಿಯ ಕಿವಿಗೂ ತ
ಗುಲಿದುದರಿಂದ, ಆ ಹುಲಿಯು ಭಯಪಟ್ಟು,ಹರಿದ ಕಿವಿಯೊಡನೆ ದಾ
ರಿಯುದ್ದಕ್ಕೂ ರಕ್ತವನ್ನು ಸುರಿಸುತ್ತ, ಆ ಗೋಶಾಲೆಯನ್ನು ಬಿಟ್ಟು ಓಡಿ
ಹೋಯಿತು ಪೃಷಧ್ರನು ಹುಲಿಯು ಸತ್ತಿತೆಂದೇ ನಿಶ್ಚಯಿಸಿಕೊಂಡಿದ್ದ
ನು ಬೆಳಗಾದಮೇಲೆ ನೋಡುವಾಗ, ಅಲ್ಲಿ ಹುಲಿಗೆ ಬದಲಾಗಿ ಹಸುವು
ಸತ್ತುಬಿದ್ದಿರುವುದನ್ನುಕಂಡು, ಪಾಪಭಯದಿಂದ ದುಃಖಿಸುತಿದ್ದನು. ಇ
ಷ್ಟರಲ್ಲಿ ಕುಲಗುರುವಾದ ವಸಿಷ್ಠನಿಗೂ ಈ ವೃತ್ತಾಂತವು ತಿಳಿದು, ಅವ
ನಿಗೆ ಸಹಿಸಲಾರದ ಕೋಪವುಂಟಾಯಿತು ಪೃಷಧ್ರನು ಈ ತಪ್ಪನ್ನು ಬು
ದ್ಧಿಪೂರ್ವಕವಾಗಿ ಮಾಡದಿದ್ದರೂ, ವಸಿಷ್ಠನು ಅದನ್ನು ಯೋಚಿಸದೆ,
ಕೋಪದಿಂದ ಆ ರಾಜನನ್ನು ಕುರಿತು “ಎಲೆ ದುರಾತ್ಮಾ ! ನೀನು
ಕ್ಷತ್ರಿಯನಾಗಿರುವದಕ್ಕೆ ಯೋಗ್ಯನಲ್ಲ! ಈ ಗೋಹತ್ಯಾಪಾಪಕ್ಕೆ ಫಲ
ವಾಗಿ, ಶೂದ್ರತ್ವವನ್ನು ಹೊಂದು” ಎಂದು ಶಪಿಸಿದನು, ಧೀರನಾದ ಪೃಷ
ಧ್ರನಾದರೋ ಆ ಗುರುಶಾಪಕ್ಕೆ ಹೆದರದೆ ಕೈಮುಗಿದು ತಲೆಯೊಡ್ಡಿ ಸ್ವೀಕ
ರಿಸಿದನು ಒಡನೆಯೇ ಅತನು ಇಂದ್ರಿಯಗಳನ್ನು ಜಯಿಸಿ, ಭಗವದುಪಾಸನ
ವೆಂಬ ವೀರವ್ರತವನ್ನು ಹಿಡಿದು, ಕೆಲವು ದಿನಗಳಲ್ಲಿಯೇ ಸರ್ವಾಂತರಾ
ತ್ಮನಾಗಿಯೂ,ದೋಷರಹಿತನಾಗಿಯೂ ಇರುವ ಪರಮಾತ್ಮನಲ್ಲಿ ಫಲಾಪೇ
ಕ್ಷೆಯಿಲ್ಲದ ಭಕ್ತಿಯನ್ನು ಸಾಧಿಸಿದನು.ಸರ್ವಭೂತದಯಾಪರನಾಗಿ, ಸುಖದುಃ
ಖಗಳನ್ನು ಸಮವಾಗಿ ಭಾವಿಸುತ್ತ,ಇಹಲೋಕಸುಖದಲ್ಲಿಯೂ, ಸ್ವರ್ಗಾದಿ
ಭೋಗಗಳಲ್ಲಿಯೂ ಆಸೆಯನ್ನು ತೊರೆದು, ರಾಗದ್ವೇಷಾದಿಗಳನ್ನು ನೀಗಿ

ದೇಹದಲ್ಲಿಯೂ, ದೇಹಾನುಬಂಧಿಗಳಲ್ಲಿಯೂ ಮೋಹವನ್ನು ಬಿಟ್ಟು, ಸ ನ್ಯಾಸಿಯಂತೆ ಹೊರಟುಬಿಟ್ಟನು. ದೈವಿಕವಾಗಿ ಲಭಿಸಿದ ಆಹಾರದಿಂದಲೇ ದೇಹಧಾರಣೆಯನ್ನು ಮಾಡುತಿದ್ದನು ಪರಮಾತ್ಮನಲ್ಲಿ ನಟ್ಟ ಮನ ಸುಳ್ಳವನಾಗಿ, ನಿರತಿಶಯಾನಂದರೂಪವಾದ ಜ್ಞಾನದಿಂದಲೇ ತೃಪ್ತನಾ ಗಿದ್ದನು ಹುಚ್ಚನಂತೆ ಬೀದಿಬೀದಿಯಲ್ಲಿ ತಿರುಗುತ್ತಿದ್ದನು. ಕುರುಡನಂತೆ ಯಾವುದನ್ನೂ ಕಣ್ಣೆತ್ತಿನೋಡದೆ, ಕಿವುಡನಂತೆ ಯಾವುದಕ್ಕೂ ಕಿವಿಗು ಡದೆ, ಜಡನಂತೆ ಯಾವುದಕ್ಕೂ ಗಮನಕೊಡದೆ, ಪರಮಾತ್ಮಧ್ಯಾನಪರನಾ ಗಿ ಭೂಮಿಯನ್ನು ಸುತ್ತುತಿದ್ದನು ತನ್ನ ಪ್ರಾರಬ್ಧಕರ್ಮವು ಕಳೆಯುವ ವರೆಗೆ ಹೀಗೆಯೇ ಸುತ್ತುತಿದ್ದು, ಕೊನೆಗೆ ಒಮ್ಮೆ ಕಾಡಿಗೆ ಹೋಗಿ, ಅಲ್ಲಿ ಉರಿಯುತ್ತಿರುವ ಕಾಡುಗಿಚ್ಚನ್ನು ಪ್ರವೇಶಿಸಿ, ಬ್ರಹ್ಮಸಾಯುಜ್ಯವನ್ನು ಹೊಂದಿದನು.

ಹೀಗೆಯೇ ವೈವಸ್ವತನ ಮಕ್ಕಳಲ್ಲಿ ಕೊನೆಯವನಾದ ಕವಿಯೂಕೂ ಡ, ವಿಷಯಾಭಿಲಾಷೆಯನ್ನು ಬಿಟ್ಟು, ರಾಜ್ಯಕೋಶಾದಿಗಳನ್ನೂ, ಬಂಧುಗ ಳನ್ನೂ ತೊರೆದು, ಪರಮಾತ್ಮಧ್ಯಾನದಲ್ಲಿದ್ದು, ಬಾಲ್ಯದಲ್ಲಿಯೇ ಮುಕ್ತಿಯ ನ್ನು ಹೊಂದಿದನು

ಕರೂಶಕನಿಗೆ ಮೂವರು ಕುಮಾರರು ಹುಟ್ಟಿ, ಆ ಮೂವರೂ ಉ ತ್ತರದೇಶಕ್ಕೆ ಪ್ರಭುಗಳಾಗಿ, ಬ್ರಾಹ್ಮಣ ಪ್ರಿಯರೆನಿಸಿಕೊಂಡು, ಧರ್ಮದಿಂದ ರಾಜ್ಯವನ್ನಾಳುತಿದ್ದರು.

ಧೃಷ್ಟನಿಗೂ ಹೀಗೆಯೇ ಕೆಲವು ಮಕ್ಕಳು ಹುಟ್ಟಿದರು. ಆದರೆ ಆ ವರು ಕ್ಷತ್ರಿಯಧರ್ಮವನ್ನು ಬಿಟ್ಟು, ಭಗವಂತನನ್ನುಪಾಸಿಸುತ್ತ, ಆ ಭಗವದ ನುಗ್ರಹದಿಂದ ಬ್ರಾಹ್ಮಣರಾದರು.

ನೃಗನಿಗೆ ಸುಮತಿಯೆಂಬ ಮಗನಾದನು ಅವನಿಂದ ಭೂತಜ್ಯೋ ತಿಯೂ,ಅವನಿಂದ ವಸುವೂ,ವಸುವಿನಿಂದ ಪ್ರತೀಕನೂ ಹುಟ್ಟಿದರು. ಪ್ರತೀ ಕನಿಗೆ ಓಘದಂತನೆಂಬ ಒಬ್ಬಕುಮಾರನೂ,ಓಘವತಿಯೆಂಬ ಕುಮಾರಿಯೂ ಹುಟ್ಟಿದರು. ಓಘವತಿಯನ್ನು ಸುದರ್ಶನನೆಂಬವನು ವಿವಾಹಮಾಡಿ ಕೊಂಡನು.

ನರಿಷ್ಯಂತನೆಂಬ ಮನುಪುತ್ರನಿಗೆ, ಚಿತ್ರಸೇನನೆಂಬ ಮಗನಾದನು. ಅವನಲ್ಲಿ ಪುತ್ರಪರಂಪರೆಯಿಂದ ಕ್ರಮವಾಗಿ ಋಷಿ, ಮೀಢ್ವ, ಕೂರ್ಚ, ಇಂದ್ರಸೇನ, ವೀತಿಹೋತ್ರ, ಸತ್ಯಶ್ರವ, ಉರುಶ್ರವ, ದೇವದತ್ತರೆಂಬವರು ಹುಟ್ಟಿದರು ಆ ದೇವದತ್ತನಿಗೆ ಅಗ್ನಿದೇವನೇ ಕುಮಾರನಾಗಿ, ಅವತರಿಸಿ ಕಾನೀನನೆಂಬ ಋಷಿಯಾದನು. ಇವನಿಗೆ ಜಾತುಕರ್ಣಿಯೆಂದೂ ಹೆಸರುಂಟು ಇವನಿಂದಲೇ ಅಗ್ನಿವೇಶ್ಯಗೋತ್ರವೆಂಬ ಬ್ರಾಹ್ಮಣಸಂತತಿಯು ಮೊದಲಾಯಿತು

ದಿಷ್ಟನಿಗೆ ನಾಭಾಗನೆಂಬ ಕುಮಾರನು ಹುಟ್ಟಿದನು- ಅವನು ವೈಶ್ಯಜಾತಿಗೆ ವಿಹಿತವಾದ ಗೋರಕ್ಷಣಾದಿಗಳನ್ನು ನಡೆಸುತ್ತ, ವೈಶ್ಯನಾದನು ಆ ನಾಭಾಗನಿಗೆ ಹಲಂಥರನೆಂಬ ಮಗನಾದನು ಹಾಗೆಯೇ ಅವನಿಂದ, ವತ್ಸಪ್ರೀತಿ, ಪ್ರಾಂಶು, ಪ್ರಮಿತಿ, ಖಮಿತ್ರ, ಚಕ್ಷುಷ, ವಿವಿಂಶತಿ, ರಂಭ, ಖನಿನೇತ್ರ, ಕರಂಧಮ, ಅವಿಕ್ಷಿತ್ತು, ಮರುತ್ತನೆಂಬವರು ಪುತ್ರ ಪೌತ್ರಕ್ರಮವಾಗಿ ಜನಿಸಿದರು ಆ ಮರುತ್ತನು, ಸಮಸ್ತಭೂಮಂಡಲವನ್ನೂ ಸ್ವಾಧೀನಮಾಡಿಕೊಂಡು ಚಕ್ರವರ್ತಿಯೆನಿಸಿದನು ಆತನು ಅಂಗಿರಸ್ಸಿನ ಮಗನಾದ ಸಂವರ್ತನೆಂಬ ಯೋಗೀಶ್ವರನನ್ನು ಆಚಾರ್ಯನನ್ನಾಗಿ ವರಿಸಿ, ಅನೇಕಯಜ್ಞಗಳನ್ನು ನಡೆಸಿದನು ಲೋಕದಲ್ಲಿ ಇವನಂತೆ ಯಜ್ಞಗಳನ್ನು ನಡೆಸಿದವರು ಬೇರೊಬ್ಬರಿಲ್ಲ ಅವನ ಯಜ್ಞಸಾಧನಗಳೆಲ್ಲವೂ ಸುವರ್ಣಮಯಗಳಾಗಿಯೇ ಇದ್ದುವು ಅವನು ಸೋಮರಸದಿಂದ ಇಂದ್ರನನ್ನೂ, ದಕ್ಷಿಣೆಗಳಿಂದ ಬ್ರಾಹ್ಮಣರನ್ನೂ ವಿಶೇಷವಾಗಿ ತೃಪ್ತಿಪಡಿಸಿದನು ಆ ಯಜ್ಞದಲ್ಲಿ ದೇವತೆಗಳೇ ಅಡಿಗೆಯವರು! ವಿಶ್ವೇದೇವತೆಗಳೇ ಸಭಾಸದರು ! ಇನ್ನು ಆ ಯಜ್ಞವೈಭವವನ್ನು ಕೇಳಬೇಕೆ ? ಆ ಮರುತ್ತನಿಗೆ ದಮನೂ, ದಮನಿಗೆ ರಾಜವರ್ಧನನೂ, ಅವನಿಗೆ ಸುಧೃತಿಯೂ, ಸುಧೃತಿಗೆ ನರನೂ, ನರನಿಗೆ ಕೇವಲನೂ, ಅವನಿಗೆ ಬಂಧುಮಂತನೂ, ಆತನಿಗೆ ವೇಗವಂತನೂ, ಅವನಿಗೆ ಬಿಂದುವೂ, ಬಿಂದುವಿಗೆ ತೃಣಬಿಂದುವೂ, ಪುತ್ರರಾಗಿ ಹುಟ್ಟಿದರು. ಈ ತೃಣಬಿಂದುವು ರಾಜಶ್ರೇಷ್ಠನೆನಿಸಿ, ಬಹಳ ಗುಣಾಢ್ಯನಾಗಿದ್ದನು ಇವನ ಗುಣಕ್ಕೆ ಮೆಚ್ಚಿ ಅಲಂಬುಸೆಯೆಂಬ ಅಪ್ಸರಸಿಯು, ತಾ

ನಾಗಿ ಬಂದು ಅವನನ್ನು ಕಾಮಿಸಿದಳು. ಇವಳಲ್ಲಿ ಕೆಲವು ಪುತ್ರರೂ, ಇಲಬಿಲೆ ಯೆಂಬ ಕನ್ಯೆಯೂ ಹುಟ್ಟಿದರು. ಇಲಬಿಲೆಯು ವಿಶ್ರವಸ್ಸನ್ನು ಮದುವೆ ಯಾಗಿ ಒಬ್ಬ ಮಗನನ್ನು ಹಡೆದಳು. ಆ ಮಗನೇ ಕುಬೇರನೆಂದು ಪ್ರಸಿದ್ಧಿ ಹೊಂದಿ, ಉತ್ತರದಿಕ್ಪಾಲಕನಾಗಿರುವನು. ಈತನು ಯೋಗೀಶ್ವರನೆನಿಸಿ ಕೊಂಡ ತನ್ನ ತಂದೆಯಾದ ವಿಶ್ರವಸ್ಸಿನಿಂದ, ಅಂತರ್ಧಾನವಿದ್ಯೆಯನ್ನು ಪಡೆದನು. ಆ ತೃಣಬಿಂದುವಿಗೆ ವಿಶಾಲ, ಶೂನ್ಯಬಿಂದು, ಧೂಮ್ರಕೇತು ವೆಂಬ ಮೂವರು ಬೇರೆ ಮಕ್ಕಳಾದರು. ಅವರಲ್ಲಿ ವಿಶಾಲನು ವಂಶೋದ್ಧಾ ರಕನಾಗಿ, ವೈಶಾಲಿಯೆಂಬ ಪಟ್ಟಣವನ್ನು ನಿರ್ಮಿಸಿದನು. ಆ ವಿಶಾಲನಿಂದ ಪುತ್ರಪರಂಪರೆಯಾಗಿ, ಹೇಮಚಂದ್ರ, ಧೂಮ್ರಾಕ್ಷ, ಸಹದೇವ, ಕೃಶಾಶ್ವ, ಸೋಮದತ್ತರೆಂಬವರು ಜನಿಸಿದರು. ಆ ಸೋಮದತ್ತನು ಅನೇಕಾಶ್ವ ಮೇಧಗಳಿಂದ ಪರಮಪುರುಷನನ್ನಾರಾಧಿಸಿ ಮುಕ್ತಿಹೊಂದಿದನು. ಅವ ನಿಗೆ ಸುಮತಿಯೆಂದೂ, ಜನಮೇಜಯನೆಂದೂ ಇಬ್ಬರು ಮಕ್ಕಳಿದ್ದರು. ಈ ವಂಶದ ರಾಜರೆಲ್ಲರೂ, ತಮ್ಮ ಕೂಟಸ್ಥನಾದ ತೃಣಬಿಂದುವಿನ ಕೀರ್ತಿ ಯನ್ನು ಹೆಚ್ಚಿಸಿ, ವೈಶಾಲರೆಂದೇ ಪ್ರಸಿದ್ಧರಾದರು. ಇದು ಎರಡನೆಯ ಅಧ್ಯಾಯವು.

---

### ಚ್ಯವನೋಪಾಖ್ಯಾನವು. ಚ್ಯವನನು ಸುಕನ್ಯೆಯನ್ನು ಪರಿಗ್ರಹಿಸಿ, ಅಶ್ವಿನೀದೇವತೆಗಳಿಗೆ ಸೋಮಪಾನವ ನ್ನು ಮಾಡಿಸಿದುದು.

ಮನುಪುತ್ರನಾದ ಶರ್ಯಾತಿಯು, ವಿಶೇಷವೇದಾರ್ಥಜ್ಞಾನವುಳ್ಳ ನಾಗಿದ್ದನು. ಆದುದರಿಂದಲೇ ಅಂಗಿರಸಮುನಿಯು ನಡೆಸುತಿದ್ದ ಸತ್ರ ಯಾಗದಲ್ಲಿ ಎರಡನೆಯ ದಿನದಲ್ಲಿ ನಡೆಯಬೇಕಾದ ಕಾರ್ಯವಿಧಾನಗಳನ್ನು ತಾನೇ ಅವನಿಗೆ ಉಪದೇಶಿಸಿದನು. ಈ ಶರ್ಯಾತಿಗೆ ಸುಕನ್ಯೆಯೆಂಬ ಕನ್ಯೆ ಯೊಬ್ಬಳಿದ್ದಳು. ಒಮ್ಮೆ ಆ ಶರ್ಯಾತಿಯು, ಸುಕನ್ಯೆಯೊಡನೆ ವನವಿಹಾ ರಾರ್ಥವಾಗಿ ಕಾಡಿಗೆ ಹೋಗಿ, ಅದರ ಸಮೀಪದಲ್ಲಿದ್ದ ಚ್ಯವನಮಹರ್ಷಿಯ ಆಶ್ರಮವನ್ನು ಪ್ರವೇಶಿಸಿದನು. ಅಲ್ಲಿ ಸುಕನ್ಯೆಯು, ತನ್ನ ಸಖಿಯರೊಡನೆ

ವಿನೋದದಿಂದ ಅಲ್ಲಲ್ಲಿರುವ ವೃಕ್ಷಗಳ ಸೊಗಸನ್ನು ನೋಡುತ್ತ ಬರುತಿದ್ದಳು. ಈನಡುವೆ ಅವಳ ಕಣ್ಣಿಗೆ ಒಂದಾನೊಂದು ದೊಡ್ಡ ಹುತ್ತವು ಕಾಣಿಸಿತು. ಅದರ ರಂಧ್ರಗಳಲ್ಲಿ ಸೂರ್ಯನಂತೆ ಎರಡು ಕಾಂತಿಗಳು ಮಿನುಗು ತಿದ್ದುವು. ಆ ಬಾಲಿಕೆಯು ದುಷ್ಕಾಲವಶದಿಂದ ವಿವೇಕಹೀನಳಾಗಿ, ಒಂದು ಮುಳ್ಳನ್ನು ತೆಗೆದು, ಆ ರಂಧ್ರಗಳನ್ನು ಚುಚ್ಚಿದಳು. ಒಡನೆಯೇ ಆ ರಂಧ್ರ ಗಳಿಂದ ರಕ್ತಪ್ರವಾಹವು ಹೊರಡಲಾರಂಭಿಸಿತು. ಇಷ್ಟರಲ್ಲಿಯೇ ಇತ್ತಲಾಗಿ ಶರ್ಯಾತಿಯ ಸೈನಿಕರೆಲ್ಲರಿಗೂ ಆಕಸ್ಮಿಕವಾಗಿ ಮಲಮೂತ್ರಗಳು ಬಂಧಿಸಿ ಹೋದುವು ಈ ಅನರ್ಥವನ್ನು ನೋಡಿ ಶರ್ಯಾತಿಯು, ಅದರ ಕಾರಣ ವೇನೆಂದು ತಿಳಿಯದೆ, ಆಶ್ಚರ್ಯಪಡುತ್ತ, ತನ್ನ ಸೈನಿಕರನ್ನು ಕುರಿತು "ಎಲೈ, ಸೈನಿಕರೆ! ನಮಗೆ ಆಕಸ್ಮಿಕವಾದ ಈ ಅನರ್ಥವು ತಲೆದೋರಿರು ವುದು! ಇದಾದರೋ ಮಹಾತ್ಮನಾದ ಚ್ಯವನಮಹರ್ಷಿಯ ಆಶ್ರಮವು. ನಿಮ್ಮಲ್ಲಿ ಯಾರಾದರೂ ಆ ಮಹರ್ಷಿಗೆ ಅಪಕಾರವನ್ನು ಮಾಡಿದಿರೇನು? ಈ ಆಶ್ರಮಕ್ಕೆ ನಿಮ್ಮಿಂದ ಹಾನಿಯೇನಾದರೂ ಉಂಟಾಯಿತೇನು? ನಮ್ಮಿಂ ದ ಏನೋ ಅಪರಾಧವು ನಡೆದಿರಬೇಕು ಇಲ್ಲದಪಕ್ಷದಲ್ಲಿ ಈ ಅನರ್ಥ ವುಂಟಾಗಲಾರದು," ಎಂದು ಒಬ್ಬೊಬ್ಬರನ್ನೂ ಪ್ರಶ್ನೆಮಾಡುತ್ತ ಬರುವಾ ಗ, ಸುಕನ್ಯೆಯು ಭಯದಿಂದ ತಂದೆಯ ಮುಂದೆನಿಂತು, "ಓ ಜನಕಾ! ನಾ ನು ಅಜ್ಞತೆಯಿಂದ ಒಂದು ತಪ್ಪನ್ನು ಮಾಡಿದೆನು ಒಂದು ಹುತ್ತದ ರಂ ಧ್ರಗಳಲ್ಲಿ, ಎರಡು ದಿವ್ಯತೇಜಸ್ಸು ಮಿನುಗುತಿದ್ದುವು ಅದೇನೆಂದು ತಿಳಿ ಯದೆ, ನಾನು ಮುಳ್ಳಿನಿಂದ ಅದನ್ನು ಚುಚ್ಚಿಬಿಟ್ಟೆನು ನನಗೆ ಆಶ್ಚರ್ಯವುಂ ಟಾಗುವಂತೆ ಅದರಿಂದ ರಕ್ತವು ಹೊರಡಲಾರಂಭಿಸಿತು. ಒಂದುವೇಳೆ ಆ ಕಾಂತಿವಿಶೇಷಗಳೇ ಹುತ್ತದಲ್ಲಿ ತಪಸ್ಸುಮಾಡುತಲಿದ್ದ ಚ್ಯವನಮ ಹಾಮುನಿಯ ಶರೀರಸಂಬಂಧಿಗಳಾಗಿರಬಹುದೆ?" ಎಂದಳು ಈ ಮಾತನ್ನು ಕೇಳಿ ಶರ್ಯಾತಿಗೆ ಮನಸ್ಸಿನಲ್ಲಿ ಮಹಾಭೀತಿಯುಂಟಾಯಿತು. ಒಡನೆಯೇ ಆ ರಾಜನು ಸಪರಿವಾರನಾಗಿ ಆ ಹುತ್ತದ ಬಳಿಗೆ ಬಂದು, ಅಲ್ಲಿ ಚ್ಯವನಮಹಾಮುನಿಯು ತಪಸ್ಸನ್ನು ಮಾಡುತ್ತಿರುವುದನ್ನು ಕಂಡು, ಸಾಷ್ಟಾಂ ಗಪ್ರಣಾಮವನ್ನು ಮಾಡಿ ಕೈಮುಗಿದು ಸ್ತುತಿಸುತ್ತ, ಅವನನ್ನು ಪ್ರಸನ್ನ

ನಾಗಿ ಮಾಡಿಕೊಂಡನು ಅವರಿಬ್ಬರೂ ಪರಸ್ಪರಸಂಭಾಷಣಗಳನ್ನು ಮಾ
ಡುತ್ತಿರುವಾಗ, ಚ್ಯವನನಿಗೆ ಸುಕನ್ಯೆಯನ್ನು ವರಿಸಬೇಕೆಂಬ ಆಶೆಯಿರುವಂ
ತೆ ತೋರಿತು. ಒಡನೆಯೇ ಶರ್ಯಾತಿಯು, ತನ್ನ ಮಗಳಾದ ಸುಕನ್ಯೆಯ
ನ್ನು ಅವನಿಗೆ ವಿವಾಹಮಾಡಿಕೊಟ್ಟನು ತನ್ನ ಮಗಳನ್ನು ಬಿಟ್ಟುಹೋಗಲಾ
ರದೆ ಸಂಕಟಪಡುತ್ತ, ಬಹಳ ಪ್ರಯಾಸದಿಂದ ಆ ದುಃಖವನ್ನೂ ಸಹಿಸಿ
ಕೊಂಡು, ಅವನ ಅನುಮತಿಯನ್ನು ಪಡೆದು ಸೈನಿಕರೊಡನೆ ತನ್ನ ಪಟ್ಟಣಕ್ಕೆ
ಹಿಂತಿರುಗಿದನು. ಆ ಚ್ಯವನನಾದರೋ ಬಹಳ ಮುಂಗೋಪವುಳ್ಳವನು! ಮು
ದುಕನು! ಹಾಗಿದ್ದರೂ ಸುಕನ್ಯೆಯು ಆಪತಿಯನ್ನೇ ಪರದೈವವೆಂದು ಭಾವಿಸಿ,
ಅವನ ಮನೋಭಿಪ್ರಾಯವನ್ನು ತಿಳಿದು, ಬೇಕುಬೇಕಾದ ಶುಶ್ರೂಷೆಗಳನ್ನು
ಮಾಡುತ್ತ, ತನ್ನ ಗುಣಗಳಿಂದಲೂ, ಪತಿಭಕ್ತಿಯಿಂದಲೂ ಅವನನ್ನು ಸಂ
ತೋಷಪಡಿಸಿದಳು. ಹೀಗಿರುವಾಗ ಒಂದಾನೊಂದುದಿನದಲ್ಲಿ ಅಶ್ವಿನೀದೇವ
ತೆಗಳಿಬ್ಬರೂ ಚ್ಯವನಾಶ್ರಮಕ್ಕೆ ಬಂದರು ಚ್ಯವನನು ಅವರನ್ನು ಅತ್ಯಾ
ದರದಿಂದ ಪೂಜಿಸಿ, ಅವರು ಸಂತೋಷಗೊಂಡಿರುವ ಸಮಯದಲ್ಲಿ, ಆ ದೇವ
ತೆಗಳನ್ನು ಕುರಿತು, "ಎಲೈ ಮಹಾತ್ಮರೆ! ನೀವು ನನ್ನಲ್ಲಿ ಕೃಪೆಯಿಟ್ಟು, ನನ
ಗೆ ಸ್ತ್ರೀಯರ ಮನಸ್ಸನ್ನು ಆಕರ್ಷಿಸತಕ್ಕ ಸೌಂದರ್ಯವನ್ನೂ, ಯೌವನ
ವನ್ನೂ ಅನುಗ್ರಹಿಸಬೇಕು ನೀವು ಈ ಅನುಗ್ರಹವನ್ನು ತೋರಿಸುವುದಾ
ದರೆ, ಇದುವರೆಗೆ ಯಾಗಗಳಲ್ಲಿ ಸೋಮಪಾನವಿಲ್ಲದ ನಿಮಗೂ,
ನಾನು ಅದರ ಭಾಗವು ಸಲ್ಲುವಂತೆ ಮಾಡುವೆನು" ಎಂದನು ವೈದ್ಯ
ಶ್ರೇಷ್ಠರಾದ ಅಶ್ವಿನೀದೇವತೆಗಳು, ಸಂತೋಷದಿಂದ ಅದಕ್ಕೆ ಸಮ್ಮತಿ
ಸಿ, "ಓ ಮಹರ್ಷೀ! ಹಾಗಿದ್ದರೆ ನೀನು ಸಿದ್ಧರಸದಿಂದ ಪೂರಿತ
ವಾದ ಈ ಮಡುವಿನಲ್ಲಿ ಮುಳುಗು! ಆಗ ನಿನ್ನ ಕೋರಿಕೆಯು
ಕೈಗೂಡುವುದು", ಎಂದು ಹೇಳಿ ಮುಪ್ಪಿನಿಂದಲೂ, ನರತ ಕೂದಲುಗಳಿಂ
ದಲೂ, ಸುಕ್ಕುಬಿದ್ದ ದೇಹದಿಂದಲೂ, ಉಬ್ಬಿದ ನರಗಳಿಂದಲೂ, ವಿಕಾರ
ರೂಪವುಳ್ಳ ಆ ಚ್ಯವನನನ್ನು ತಮ್ಮ ಹಿಂದೆ ಕರೆದುಕೊಂಡು ಬಂದು, ಒಂ
ದಾನೊಂದು ಸಿದ್ಧರಸದ ಮಡುವಿನಲ್ಲಿ ಮುಳುಗಿಸಿ, ತಾವೂ ಅವನೊಡನೆ ಅ
ದರಲ್ಲಿ ಮುಳುಗಿದರು ಒಡನೆಯೇ ಸ್ವಲ್ಪಕಾಲದೊಳಗಾಗಿ ಆ ಮಡುವಿನಿಂದ

ಅತಿಮನೋಹರಗಳಾದ ಮೂರು ಪುರುಷಾಕೃತಿಗಳು ಮೇಲೆದ್ದು ಬಂದುವು ಈ ಮೂವರೂ ಒಂದೇವಿಧವಾದ ರೂಪಸಂಪತ್ತಿಯುಳ್ಳವರಾಗಿ, ಒಂದೇ ವಿಧವಾದ ಬಟ್ಟೆಯನ್ನುಟ್ಟು, ಒಂದೇವಿಧವಾದ ಕುಂಡಲಾದ್ಯಲಂಕಾರಗಳಿಂ ದ ಶೋಭಿಸುತ್ತಿದ್ದರು. ಆ ಮೂವರ ಕಂಠದಲ್ಲಿಯೂ ಒಂದೇವಿಧವಾದ ಪದ್ಮಮಾಲಿಕೆಯು ಪ್ರಕಾಶಿಸುತ್ತಲಿತ್ತು ಅವರಲ್ಲಿ ಪರಸ್ಪರಭೇದವನ್ನು ಕಂಡು ಹಿಡಿಯುವದಕ್ಕೆ ಸ್ವಲ್ಪಮಾತ್ರವೂ ಅವಕಾಶವಿಲ್ಲದಂತಾಯಿತು. ಹೀಗೆ ಸಮಾನರೂಪವುಳ್ಳವರಾಗಿ ಸೂರ್ಯತೇಜಸ್ಸಿನಿಂದ ಹೊಳೆಯುತ್ತ ಮಡುವಿನಿಂದ ಮೇಲೆದ್ದುಬಂದ ಆ ಪುರುಷರನ್ನು ನೋಡಿ ಸುಕನ್ಯೆಯು, ಅವರಲ್ಲಿ ತನ್ನ ಪತಿಯಾರೆಂಬುದನ್ನು ತಿಳಿಯಲಾರದೆ ಕಳವಳಿಸುತಿದ್ದು,ಕೊನೆಗೆ ಅಶ್ವಿನೀದೇವತೆಗಳನ್ನೇ ಧ್ಯಾನಿಸಿ, ತನಗೆ ಪತಿಭಿಕ್ಷೆಯನ್ನು ಕೊಡ ಬೇಕೆಂದು ದೈನ್ಯದಿಂದ ಬೇಡಿಕೊಂಡಳು ಆಗ ಅಶ್ವಿನೀದೇವತೆ ಗಳು, ಅವಳ ಪಾತಿವ್ರತ್ಯಕ್ಕೆ ಸಂತೋಷಪಟ್ಟು, ಅವಳಿಗೆ ಪತಿಯನ್ನು ತೋ ರಿಸಿ, ಆ ಮಹರ್ಷಿಯ ಅನುಜ್ಞೆಯನ್ನುಪಡೆದು, ತಮ್ಮ ಸ್ಥಾನಕ್ಕೆ ಹಿಂತಿರುಗಿ ದರು. ಕೆಲವು ಕಾಲದಮೇಲೆ ಇತ್ತಲಾಗಿ ಶರ್ಯಾತಿಯು, ಒಂದು ಯಾಗವ ನ್ನು ಮಾಡಬೇಕೆಂದುದ್ದೇಶಿಸಿ, ಆ ಯಾಗಕ್ಕಾಗಿ ತನ್ನ ಮಗಳನ್ನೂ, ಅಳಿ ಯನನ್ನೂ ಕರೆಯಬೇಕೆಂದು ಚ್ಯವನಾಶ್ರಮಕ್ಕೆ ಬಂದನು ಅಲ್ಲಿ ತನ್ನ ಮ ಗಳಾದ ಸುಕನ್ಯೆಯನ್ನೂ, ಅವಳ ಪಕ್ಕದಲ್ಲಿ ನಿಂತು ಸಂತೋಷದಿಂದ ಸರಸಸ ಲ್ಲಾಪಗಳನ್ನು ನಡೆಸುತಿದ್ದ ತೇಜಸ್ವಿಯಾದ ಒಬ್ಬ ತರುಣನನ್ನೂ ಕಂಡನು. ಇವರನ್ನು ನೋಡಿದೊಡನೆ, ಅವನ ಮನಸ್ಸಿನಲ್ಲಿ ಆಶ್ಚರ್ಯವೂ, ತನ್ನ ಮಗ ಳಮೇಲೆ ಕೋಪವೂ ಉಕ್ಕಿಬರುತಿತ್ತು. ತನ್ನ ಮಗಳು ಮುದಿಗಂಡನನ್ನು ಬಿಟ್ಟು ಬೇರೊಬ್ಬ ತರುಣನನ್ನು ಮೋಹಿಸಿ, ದುಷ್ಕಾರ್ಯವನ್ನು ನಡೆ ಸಿರಬೇಕೆಂಬ ನಿಶ್ಚಯವು ಹುಟ್ಟಿತು. ಇದಕ್ಕಾಗಿ ತನ್ನಲ್ಲಿ ತಾನೇ ದುಃ ಖಿಸುತ್ತಿದ್ದನು ಇಷ್ಟರಲ್ಲಿ ಸುಕನ್ಯೆಯು, ಸಂತೋಷದಿಂದ ಮುಂದೆ ಬಂ ದು, ತನ್ನ ತಂದೆಯ ಪಾದವನ್ನು ಹಿಡಿದು ನಮಸ್ಕರಿಸಿದಳು. ಶರ್ಯಾ ತಿಯು ಕೋಪದಿಂದ ಅವಳನ್ನು ಕಣ್ಣೆತ್ತಿನೋಡದೆ, ನಮಸ್ಕಾರ ಮಾಡಿದ ಆ ಮಗಳಿಗೆ ಶುಭಾಶೀರ್ವಾದವನ್ನೂಮಾಡದೆ, ಕೋಪದಿಂದ ಅವಳನ್ನು

ಕುರಿತು, “ಎಲೆ ದುಷ್ಟೆ! ಛೀ! ಎಂತಹ ಕೆಟ್ಟಕೆಲಸವನ್ನು ಮಾಡಿದೆ! ಲೋಕಪೂಜ್ಯನಾದ ಪತಿಯನ್ನೇ ವಂಚಿಸಿದೆಯಾ? ಇದು ನಿನ ಗೆ ತರವೇ? ಕೈಹಿಡಿದ ಪತಿಯನ್ನು ಮುದುಕನೆಂದೂ, ಕುರೂಪಿಯೆಂದೂ ನಿರಾಕರಿಸಿ, ಬೇರೊಬ್ಬ ವಿಟನನ್ನು ಮೋಹಿಸಿದೆಯಾ? ಲೋಕಪ್ರಸಿದ್ಧವಾದ ಕುಲದಲ್ಲಿ ಹುಟ್ಟಿದ ನೀನು,ಹೀಗೆ ವಿಪರೀತಕಾರ್ಯಕ್ಕೆ ಪ್ರವರ್ತಿಸಬಹುದೆ? ನಿನ್ನ ಮನಸ್ಸು ಹೀಗೆ ಕೆಟ್ಟುಹೋಗಬಹುದೆ? ಛೀ! ನೀನು ಮಾಡಿದ ಕಾ ರ್ಯವು ನಮ್ಮ ಕುಲಕ್ಕೇ ಅಪವಾದನನ್ನು ತರುವುದಲ್ಲಾ! ನೀನು ನಾಚಿಕೆ ಯಿಲ್ಲದೆ ಈ ಜಾರನನ್ನು ವರಿಸಿದುದರಿಂದ, ನಿನ್ನ ತಂದೆ ತಾಯಿಗಳ ವಂಶ ವೆರಡೂ ದುಷ್ಕೀರ್ತಿಗೆ ಗುರಿಯಾಗಿ, ಆ ಎರಡು ಕುಲಗಳೂ ಅಧೋಗತಿಗೂ ಈಡಾಯಿತಲ್ಲವೆ?” ಎಂದನು ಈ ಮಾತನ್ನು ಕೇಳಿ ಸುಕನ್ಯೆಯು ಮಂದಹಾ ಸದಿಂದ ನಗುತ್ತ, ತಂದೆಯನ್ನು ಕುರಿತು, “ಓ ಜನಕಾ! ಇವನೇ ನಿನ್ನ ಅಳಿ ಯನು! ಭೃಗುಪುತ್ರನಾದ ಚ್ಯವನಮಹರ್ಷಿಯೇ ಇವನು! ಅಶ್ವಿನೀದೇವತೆ ಗಳಅನುಗ್ರಹದಿಂದ ಇವನಿಗೆಈಯೌವನವೂ,ಸೌಂದರ್ಯವೂಲಭಿಸಿದುವು. ಇವನೇ ನನ್ನ ಪತಿಯು! ಈತನು ಜಾರನಲ್ಲ!”ಎಂದು ಹೇಳಿ ಹಿಂದಿನವೃತ್ತಾಂ ತಗಳೆಲ್ಲವನ್ನೂ ಯಥಾವತ್ತಾಗಿ ತಿಳಿಸಿದಳು. ಅದನ್ನು ಕೇಳಿ ಶರ್ಯಾತಿಯು ಅತ್ಯಾಶ್ಚರ್ಯಭರಿತನಾಗಿ, ಸಂತೋಷದಿಂದ ತನ್ನ ಮಗಳನ್ನೂ, ಅಳಿಯನ ನ್ನೂ ಮನೆಗೆ ಕರೆತಂದು,ಯಾಗವನ್ನಾರಂಭಿಸಿದನು ಚ್ಯವನನೇ ಪುರೋಹಿತ ನಾಗಿದ್ದು ಶರ್ಯಾತಿಯಿಂದ ಆ ಯಾಗವನ್ನು ಮಾಡಿಸಿ, ಅದರಲ್ಲಿ ತನ್ನ ತ ಪೋಬಲದಿಂದ,ಅಶ್ವಿನೀದೇವತೆಗಳಿಗೆ ಹಿಂದೆಯಾವಾಗಲೂಇಲ್ಲದಿದ್ದ ಸೋಮ ರಸವನ್ನು ಕೊಡಿಸಿದನು. ಅಶ್ವಿನೀದೇವತೆಗಳಿಗೆ ಹಿಂದೆ ಯಾವಾಗಲೂ ಇಲ್ಲ ದ ಯಜ್ಞಭಾಗವನ್ನು ಕೊಡಿಸಿದುದಕ್ಕಾಗಿ ಇಂದ್ರನಿಗೆ ಮನಸ್ಸಿನಲ್ಲಿ ಕೋ ಪವುಂಟಾಯಿತು ಚ್ಯವನನನ್ನು ಕೊಂದುಬಿಡಬೇಕೆಂದು ವಜ್ರಾಯುಧ ವನ್ನು ಕೈಗೆತ್ತಿಕೊಂಡನು ಇದನ್ನು ನೋಡಿ ಚ್ಯವನನು, ತನ್ನ ತಪಃಪ್ರಭಾ ವದಿಂದ,ವಜ್ರಸಹಿತವಾದ ಆ ಇಂದ್ರನ ಕೈಯನ್ನು ಹಾಗೆಯೇ ಸ್ತಬ್ಧವಾಗಿ ನಿಲ್ಲುವಂತೆ ಮಾಡಿಬಿಟ್ಟನು ಇಂದ್ರನ ತೋಳು ಹಾಗೆಯೇ ನಿಂತುಹೋಯಿ ತು ವೈದ್ಯವೃತ್ತಿಯಲ್ಲಿರುವ ಅಶ್ವಿನೀದೇವತೆಗಳಿಗೆ ಸೋಮಪಾನದಲ್ಲಿ

ಅಧಿಕಾರವಿಲ್ಲವೆಂದು ಇದಕ್ಕೆಮೊದಲು ನಿರಾಕರಿಸುತಿದ್ದ ದೇವತೆಗಳೆಲ್ಲರೂ, ಅವರಿಗೆ ಯಾಗದಲ್ಲಿ ಸೋಮವನ್ನು ಕೊಡಬಹುದೆಂದು ಅಂಗೀಕರಿಸಿದರು. ರಾಜೇಂದ್ರಾ! ಇದೇ ಸುಕನ್ಯೆಯ ಚರಿತ್ರವು ಶರ್ಯಾತಿಗೆ ಈ ಕನ್ಯೆಯು ಹೊರತು, ಉತ್ತಾನಬರ್ಹಿಯೆಂದೂ, ಆನರ್ತನೆಂದೂ, ಭೂರಿಷೇಣನೆಂದೂ ಮೂವರು ಕುಮಾರರಾದರು ಅವರಲ್ಲಿ ಆನರ್ತನಿಗೆ ರೈವತನೆಂಬ ಪುತ್ರನು ಜನಿಸಿದನು ಇವನು ಸಮುದ್ರಮಧ್ಯದಲ್ಲಿ ಕುಶಸ್ಥಲೀನಗರವನ್ನು ನಿರ್ಮಿಸಿ, ಅದರಲ್ಲಿ ತಾನಿದ್ದು, ಆನರ್ತದೇಶವನ್ನು ಪಾಲಿಸುತಿದ್ದನು ಆ ಕುಶಸ್ಥಲಿಯೇ ಆಮೇಲೆ ದ್ವಾರಕಾಪುರಿಯೆಂದು ಪ್ರಸಿದ್ಧಿಹೊಂದಿತು ಆ ರೈವತನಿಗೆಕಕುದ್ಮಿ ಮೊದಲಾದ ನೂರುಮಂದಿ ಮಕ್ಕಳೂ, ರೇವತಿಯೆಂಬ ಮಗಳೂ ಹುಟ್ಟಿದರು ರೈವತನು ತನ್ನ ಮಗಳಿಗೆ ಏರ್ಪಟ್ಟಿರುವ ವರನಾವನೆಂಬುದನ್ನು ಬ್ರಹ್ಮನಿಂದಲೇ ತಿಳಿದುಬರುವುದಕ್ಕಾಗಿ, ಆ ಕನ್ಯೆಯನ್ನೂ ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋದನು. ಆಗ ಬ್ರಹ್ಮಸಭೆಯಲ್ಲಿ ಗಂಧರ್ವರ ಗಾನವು ನಡೆಯುತಿದ್ದುದರಿಂದ, ಬ್ರಹ್ಮನೊಡನೆ ಮಾತಾಡುವುದಕ್ಕೆ ಅವಕಾಶವಿಲ್ಲದೆ, ರಾಜನು ಕ್ಷಣಮಾತ್ರದವರೆಗೆ ಅಲ್ಲಿ ನಿರೀಕ್ಷಿಸಬೇಕಾಯಿತು ಗಾನಸಭೆಯು ಮುಗಿದಮೇಲೆ,ರೈವತನು ಬ್ರಹ್ಮನಿಗೆ ನಮಸ್ಕರಿಸಿ, "ಭೂಮಿಯಲ್ಲಿ ತನ್ನಮಗಳಿಗೆ ತಕ್ಕ ವರನಾರೆಂದು ಕೇಳಿದನು ಅವನ ಮಾತಿಗೆ ಬ್ರಹ್ಮನು ನಗುತ್ತ ತಿ ", ಓ ರಾಜಾ! ಇಲ್ಲಿ ನೀನು ನನಗಾಗಿ ಕ್ಷಣಕಾಲದವರೆಗೆ ನಿರೀಕ್ಷಿಸಬೇಕಾಯಿತಲ್ಲವೆ? ಆ ಒಂದು ಕ್ಷಣಕಾಲವು ಕಳೆಯುವಷ್ಟರಲ್ಲಿ, ಭೂಲೋಕದಲ್ಲಿ ಎಷ್ಟೋ ಸಹಸ್ರವರ್ಷಗಳು ಕಳೆದುಹೋಗಿರಬೇಕು ಅಷ್ಟೇಕೆ?ನೀನು ಇಲ್ಲಿ ನನಗಾಗಿ ನಿರೀಕ್ಷಿಸುತಿದ್ದ ಒಂದು ಕ್ಷಣಮಾತ್ರದೊಳಗಾಗಿ, ಭೂಲೋಕದಲ್ಲಿ ಮನುಷ್ಯರಿಗೆ ಚತುರ್ಯುಗಗಳೂ ಇಪ್ಪತ್ತೇಳಾವರ್ತಿ ಕಳೆದುಹೋಗಿರುವುವು ನೀನು ಇಲ್ಲಿಗೆ ಬರುವಾಗ, ಭೂಲೋಕದಲ್ಲಿ ನಿನ್ನ ಮಗಳಿಗೆ ಯಾವಯಾವ ವರನನ್ನು ನೋಡಿದ್ದೆಯೋ, ಅದರಲ್ಲಿ ಯಾರೂ ಈಗ ನಿನಗೆ ಕಾಣಿಸಲಾರರು ಭೂಲೋಕದಲ್ಲಿ ನಿನಗೆ ಪರಿಚಿತರೊಬ್ಬರನ್ನೂ ಈಗ ನೀನು ನೋಡಲಾರೆ! ಅವರೆಲ್ಲರೂ ಕಾಲಾಧೀನರಾಗಿರುವರು ನಿನ್ನ ಪರಿಚಿತರುಮಾತ್ರವೇ ಅಲ್ಲದೆ,ಅವರ ಮಕ್ಕಳನ್ನಾಗಲಿ,ಮುಮ್ಮಕ್ಕಳನ್ನಾಗಲಿ,ಮರಿಮಕ್ಕಳನ್ನಾಗಲಿ,

ಆ ಕುಲದವರನ್ನಾಗಲಿ ನೀನು ನೋಡಲಾರೆ! ಇಷ್ಟರೊಳಗಾಗಿ ಅವರ ಹೆಸರೇ ಅಳಿಸಿ ಹೋಗಿರಬಹುದು! ಆದರೆ ಈಗ ನೀನು ಭೂಲೋಕಕ್ಕೆ ಹೋದರೆ, ಅಲ್ಲಿ ಭಗವದಂಶಸಂಭೂತನಾದ ಬಲರಾಮನೆಂಬ ಯಾದವನೊಬ್ಬನಿರುವನು ಅವನಿಗೆ ನಿನ್ನ ಮಗಳನ್ನು ಕೊಟ್ಟು ವಿವಾಹಮಾಡು! ಅವನನ್ನು ಸಾಮಾನ್ಯನೆಂದೆಣಿಸಬೇಡ! ಭೂಭಾರಪರಿಹಾರಾರ್ಥವಾಗಿ ನಿಜಾಂಶದಿಂದವತರಿಸಿದ ಸಾಕ್ಷಾನ್ನಾರಾಯಣನೇ ಆತನೆಂದು ತಿಳಿ! ಅವನ ಕೀರ್ತಿಯು ಲೋಕಪಾವನವಾದುದು" ಎಂದನು. ರೈವತನು ಇದನ್ನು ಕೇಳಿ ಸಂತೋಷದಿಂದ ಬ್ರಹ್ಮನಿಗೆ ನಮಸ್ಕರಿಸಿ, ತನ್ನ ಪಟ್ಟಣಕ್ಕೆ ಹಿಂತಿರುಗಿದನು ಕಕುದ್ಮಿ ಮೊದಲಾದ ಅವನ ಸಹೋದರರೆಲ್ಲರೂ, ಯಕ್ಷರ ಭಯದಿಂದ ಇದಕ್ಕೆ ಮೊದಲು ಯಾವಾಗಲೋ ಆ ಪುರವನ್ನು ಬಿಟ್ಟು, ದಿಕ್ಕುಗೆಟ್ಟು ಹೊರಟುಹೋಗಿದ್ದುದರಿಂದ, ಯಾದವರು ಅದನ್ನು ಪರಿಪಾಲಿಸುತಿದ್ದರು ರೈವತನು ಸುಂದರಾಂಗಿಯಾದ ತನ್ನ ಮಗಳನ್ನು ಬ್ರಹ್ಮಾಜ್ಞೆಯಂತೆ ಅಲ್ಲಿದ್ದ ಬಲರಾಮನಿಗೆಕೊಟ್ಟು ವಿವಾಹಮಾಡಿ, ತಪಸ್ಸಿಗಾಗಿ ಬದರಿಕಾವನಕ್ಕೆ ಹೋದನು. ಇದು ಮೂರನೆಯ ಅಧ್ಯಾಯವು.

---

### ನಾಭಾಗನ ಚರಿತ್ರವು. ಅಂಬರೀಷೋಪಾಖ್ಯಾನವು.

ರಾಜಾ ಕೇಳು! ನಭಗನೆಂಬ ಮನುಪುತ್ರನಿಗೆ ಕೆಲವು ಮಕ್ಕಳಾದರು ಅವರಲ್ಲಿ ನಾಭಾಗನೇ ಕಿರಿಯನು. ಇವನು ಬ್ರಹ್ಮಚಾರಿಯಾಗಿ ಬಹುಕಾಲದವರೆಗೆ ಗುರುಕುಲದಲ್ಲಿ ವಾಸಮಾಡುತಿದ್ದನು ಇದರಿಂದ ಅವನು ಜ್ಞಾನಮಾರ್ಗವನ್ನು ಹಿಡಿಯತಕ್ಕವನೇಹೊರತು, ರಾಜ್ಯಕ್ಕೆ ಆಸೆಪಡತಕ್ಕವನಲ್ಲವೆಂದು ತಿಳಿದು, ಅವನ ಸಹೋದರರೆಲ್ಲರೂ,ಅವನಿಗೆ ತಂದೆಯ ರಾಜ್ಯದಲ್ಲಿ ಭಾಗವನ್ನು ಹಂಚದೆ, ಅವನು ಗುರುಕುಲದಿಂದ ಬರುವುದಕ್ಕೆ ಮೊದಲು,ತಮ್ಮೊಳಗೆ ತಾವೇ ರಾಜ್ಯವನ್ನು ಹಂಚಿಕೊಂಡರು ಆಮೇಲೆ ನಾಭಾಗನು ಬಂದು, ತನ್ನ ಭಾಗವನ್ನನು ಕೊಡಬೇಕೆಂದು ಕೇಳಿದನು ಅದಕ್ಕಾ ಸಹೋದರರು,ತಂದೆಯು ಜೀವಿಸಿರುವಾಗ ರಾಜ್ಯವನ್ನು ಹಂಚಿಕೊಡುವುದಕ್ಕೆ ತಮಗೆ ಅಧಿಕಾರವಿಲ್ಲವೆಂದೂ, ಈಗಲೂ ಅವನು ಕೊಡಬೇಕೆಂದರೆ,ತಾವು ಭಾಗವನ್ನು ಕೊಡುವೆವೆಂ

ದೂ ಹೇಳಿದರು. ನಾಭಾಗನು ಅದಕ್ಕೆ ಸಮ್ಮತಿಸಿ ತಂದೆಯಬಳಿಗೆ ಬಂದು, “ಜನಕಾ! ನನ್ನ ಅಣ್ಣಂದಿರು ನನ್ನನ್ನು ಬಿಟ್ಟು ತಾವುತಾವೇ ರಾಜ್ಯವನ್ನು ಹಂಚಿಕೊಂಡಿರುವರು ಇದರ ಕಾರಣವೇನು?” ಎಂದನು ಅದಕ್ಕಾ ತಂದೆಯು “ಕುಮಾರಾ! ಅವರು ನಿನ್ನನ್ನು ವಂಚಿಸಿ ತೆಗೆದುಕೊಂಡ ಭಾಗಕ್ಕಾಗಿ, ನೀನು ಇನ್ನುಮೇಲೆ ಆಸೆಪಡಲೇಬಾರದು “ಅದನ್ನು ಬಿಟ್ಟರೆ ಜೀವನಮಾಡುವುದು ಹೇಗೆ” ಎಂದು ಕೇಳುವೆಯಾ? ಇದೋ! ಈ ಸಮೀಪದಲ್ಲಿಯೇ ಆಂಗಿರಸರೆಂಬ ಮಹರ್ಷಿಗಳು, ಹನ್ನೆರಡುದಿನಗಳವರೆಗೆ ನಡೆಸತಕ್ಕ ಸತ್ರಯಾಗವೆಂಬ ಕರ್ಮವನ್ನಾರಂಭಿಸಿರುವರು ಆಮಹರ್ಷಿಗಳು ಬಹಳ ಧೀಮಂತರಾಗಿದ್ದರೂ, ಆರನೆಯ ದಿನದಲ್ಲಿ ನಡೆಸಬೇಕಾದ ಕ್ರಿಯಾಕಲಾಪವನ್ನು ತಿಳಿಯದೆ ಕಷ್ಟಪಡುವರು ಅದರಲ್ಲಿ ಎರಡುಮಂತ್ರಸೂಕ್ತಗಳನ್ನು ಹೇಳಬೇಕು ವೈಶ್ವದೇವಕರ್ಮಗಳಲ್ಲಿ ಹೇಳತಕ್ಕ ಆ ಸೂಕ್ತಗಳೆರಡೂ ಅವರಿಗೆ ತಿಳಿಯದು. ನೀನು ಈಗಲೇ ಆ ಯಜ್ಞಶಾಲೆಗೆ! ಹೋಗಿ ಕಾದಿರು! ಸಮಯವು ಬಂದಾಗ ಧೈರ್ಯದಿಂದ ಮುಂದೆ ಬಿದ್ದು, ಅವರಿಗೆ ಆ ಸೂಕ್ತಗಳನ್ನುಪದೇಶಿಸು! ಇದರಿಂದ ಅವರು ಬಹಳ ಸಂತೋಷಪಟ್ಟು, ಯಜ್ಞಸಮಾಪ್ತಿಯಲ್ಲಿ ಅವಶಿಷ್ಟವಾದ ಧನವೆಲ್ಲವನ್ನೂ ನಿನಗೆ ಕೊಟ್ಟುಬಿಡುವರು ಅದು ನಿನ್ನ ಸುಖಜೀವನಕ್ಕೆ ಸಾಕಾಗುವುದು ಈಗಲೇ ನೀನು ಅಲ್ಲಿಗೆ ಹೊರಡು” ಎಂದನು ಅದರಂತೆಯೇ ನಾಭಾಗನು, ಆ ಯಾಗಶಾಲೆಗೆ ಹೋಗಿ,ಅವರಿಗೆ ಆ ಸೂಕ್ತಗಳನ್ನು ಹೇಳಿಕೊಟ್ಟನು. ಆಂಗಿರಸರೂಕೂಡ, ಅವನ ಕಾಲೋಚಿತವಾದ ಸಹಾಯಕ್ಕೆ ಸಂತೋಷಪಟ್ಟು, ಆ ಸತ್ರಯಾಗಸಮಾಪ್ತಿಯಲ್ಲಿ ಉಳಿದ ಯಾಗಧನವೆಲ್ಲವನ್ನೂ ಅವರಿಗೆ ಕೊಟ್ಟು, ಸ್ವರ್ಗಕ್ಕೆ ಹೋದರು ನಾಭಾಗನು ಧನವನ್ನು ಸಾಗಿಸುವಷ್ಟರಲ್ಲಿ, ಕಪ್ಪುಬಣ್ಣವುಳ್ಳ ಒಬ್ಬಾನೊಬ್ಬ ಪುರುಷನು ಅಲ್ಲಿಗೆ ಬಂದು, ಆತನನ್ನು ತಡೆದು, ಆ ಯಾಗಶೇಷವೆಲ್ಲವೂ ತನಗೆ ಸೇರಬೇಕೆಂದು ಹೇಳಿದನು. ಅದಕ್ಕೆ ನಾಭಾಗನು ಯಜ್ಞವನ್ನು ನಡೆಸಿದ ಮಹರ್ಷಿಗಳೇ ಅದನ್ನು ತನ್ನಭಾಗಕ್ಕೆ ಬಿಟ್ಟಿರುವುದರಿಂದ, ಆ ಧನವು ತನಗೇ ಸೇರಬೇಕೆಂದು ವಾದಿಸಿದನು ಇಬ್ಬರೂ ಸ್ವಲ್ಪಹೊತ್ತಿನವರೆಗೆ “ನನ್ನದು ತನ್ನ” ದೆಂದು ವಿವಾದಮಾಡುತಿದ್ದರು. ಕೊನೆಗೆ ರುದ್ರನು “ಎಲೆ ರಾಜಕು

ಮಾರಾ! ಇದಕ್ಕಾಗಿ ನಮನಮಗೆ ವಿವಾದವೇಕೆ? ನಿನ್ನ ತಂದೆಯಬಳಿಗೆಹೋಗಿ ಈ ವಿವಾದಾಂಶವನ್ನು ತಿಳಿಸುವೆವು. ಅವನ ತೀರ್ಮಾನದಂತೆ ನಾವಿಬ್ಬರೂ ನಡೆದುಕೊಳ್ಳುವೆವು" ಎಂದನು ನಾಭಾಗನು ಸಂತೋಷದಿಂದ ಅದಕ್ಕೆ ಸಮ್ಮತಿಸಿ, ತಂದೆಯಬಳಿಗೆ ಬಂದು ಆ ವಿಚಾರವನ್ನು ತಿಳಿಸಿದನು ರಾಜನು ಸ್ವಲ್ಪಹೊತ್ತಿನವರೆಗೆ ತನ್ನಲ್ಲಿ ತಾನೇ ಆಲೋಚಿಸಿ ತನ್ನ ಮಗನನ್ನು ನೋಡಿ "ಕುಮಾರಾ! ಅಲ್ಲಿಗೆ ಬಂದವನು ರುದ್ರನು ಹಿಂದೊಮ್ಮೆ ದಕ್ಷಯಾಗದಲ್ಲಿ ಋಷಿಗಳೆಲ್ಲರೂ ಏಕೀಭವಿಸಿ, ಯಾಗಾವಶಿಷ್ಟವಾದ ದ್ರವ್ಯವೆಲ್ಲವೂ ರುದ್ರನ ಭಾಗವೆಂದೂ, ಅವೆಲ್ಲವೂ ಆ ಶಂಕರನಿಗೇ ಸೇರತಕ್ಕುದೆಂದು ನಿರ್ಣಯಿಸಿರುವರು. ಆದುದರಿಂದ ಆ ಹಣವು ಅವನಿಗೆ ಸೇರಬೇಕಾದುದೇ ಯುಕ್ತವು" ಎಂದು ತೀರ್ಮಾನಿಸಿದನು ನಾಭಾಗನು ಒಡನೆಯೇ ರುದ್ರನಬಳಿಗೆ ಬಂದು ನಮಸ್ಕರಿಸಿ "ಓ ಶಂಕರಾ! ಈ ಯಾಗಶೇಷವೆಲ್ಲವೂ ನಿನಗೇ ಸೇರಬೇಕೆಂದು ನನ್ನ ತಂದೆಯು ಹೇಳಿರುವನು ಇವೆಲ್ಲವೂ ನಿನ್ನದೇಹೊರತು ನನಗೇನೂ ಬಾಧ್ಯತೆಯಿಲ್ಲ ನಾನು ತಿಳಿಯದೆ ಮಾಡಿದ ತಪ್ಪಿಗಾಗಿ ತಲೆಬಗ್ಗಿ ನಿನ್ನ ಕ್ಷಮೆಯನ್ನು ಬೇಡುವೆನು ನನ್ನ ಅಪರಾಧವನ್ನು ಮನ್ನಿಸಿ, ಇದನ್ನು ನೀನೇ ಸ್ವೀಕರಿಸಬೇಕು" ಎಂದನು. ರುದ್ರನು ಅವನ ಗುಣಕ್ಕೆ ಮೆಚ್ಚಿ "ಓ ನಾಭಾಗಾ! ನಿನ್ನ ಸತ್ಯಕ್ಕೂ, ನಿನ್ನ ತಂದೆಯ ಧರ್ಮಯುಕ್ತವಾದ ತೀರ್ಮಾನಕ್ಕೂ ನಾನು ಬಹಳ ಸಂತೋಷಪಟ್ಟೆನು ಇದಕ್ಕಾಗಿ ನಾನು ಮಂತ್ರಜ್ಞನಾದ ನಿನಗೆ ಬ್ರಹ್ಮಜ್ಞಾನವನ್ನುಪದೇಶಿಸುವೆನು. ಅದನ್ನು ನೀನು ಸ್ವೀಕರಿಸು! ಹೀಗೆಯೇ, ನೀನು ಎಂತಹ ವಿಪತ್ತಿನಲ್ಲಿಯೂ ಅಸತ್ಯವನ್ನು ನುಡಿಯದೆ ಸತ್ಯವನ್ನೇ ನುಡಿ! ಸತ್ಯದಿಂದಲೇ ನಾನು ಸಂತೋಷಪಡುವೆನು. ಸತ್ಯವಾದಿಯೇ ನನಗೆ ಬಹಳ ಪ್ರಿಯತಮನು! ಇದೋ! ಈ ದ್ರವ್ಯವೆಲ್ಲವನ್ನೂ ನಾನಾಗಿಯೇ ನಿನಗೆ ಕೊಡುವೆನು. ಸ್ವೀಕರಿಸು" ಎಂದು ಹೇಳಿ, ತನಗೆ ಸೇರಬೇಕಾದ ಆ ದ್ರವ್ಯವೆಲ್ಲವನ್ನೂ ಅವನಿಗೇ ಕೊಟ್ಟು, ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು ಓ ಪರೀಕ್ಷಿದ್ರಾಜಾ! ಈ ನಾಭಾಗಚರಿತ್ರವನ್ನು ಪ್ರಾತಸ್ಸಾಯಂಕಾಲಗಳಲ್ಲಿ ಸ್ಮರಿಸತಕ್ಕವನು ಮಂತ್ರಜ್ಞರಲ್ಲಿಯೂ, ಆತ್ಮಜ್ಞರಲ್ಲಿಯೂ, ಮೇಲೆನಿಸಿಕೊಳ್ಳುವನು

ರಾಜೇಂದ್ರಾ! ನಾಭಾಗನಿಗೆ ಅಂಬರೀಷನೆಂಬ ಮಗಸಾದನು. ಈ ಅಂಬರೀಷನ ಚರಿತ್ರವು ಲೋಕಪ್ರಸಿದ್ಧವಾದುದು. ಆತನು ಪರಮ ಭಾಗವತೋತ್ತಮನು! ಪುಣ್ಯಾತ್ಮನು! ಎಂತವರಲ್ಲಿಯೂ ವ್ಯರ್ಥವಾಗದ ಮಹರ್ಷಿಶಾಪವೂಕೂಡ, ಇವನಮೇಲೆ ಸಾಗದೆಹೋಯಿತು” ಎಂದನು ಆಗ ಪರೀಕ್ಷಿದ್ರಾಜನು ಶುಕನನ್ನು ಕುರಿತು, “ಓ ಮುನೀಂದ್ರಾ! ರಾಜರ್ಷಿಯಾದ ಆ ಅಂಬರೀಷನ ಚರಿತ್ರವನ್ನು ವಿವರವಾಗಿ ಕೇಳಬೇಕೆಂದು ನನಗೆ ಬಹಳ ಕುತೂಹಲವಿರುವುದು ಬ್ರಾಹ್ಮಣಶಾಪವೂ ಅವನನ್ನು ಬಾಧಿಸಲಾರದೆ ಹೋಯಿತೆಂದು ಹೇಳಿದೆಯಲ್ಲವೆ? ಇದು ಆಶ್ಚರ್ಯಕರವಾಗಿರುವುದು. ಆ ಕಥೆಯನ್ನು ತಿಳಿಸಬೇಕು” ಎಂದನು ಅದಕ್ಕಾ ಶುಕನು “ರಾಜಾ! ಕೇಳು! ಮಹಾತ್ಮನಾದ ಅಂಬರೀಷರಾಜನಿಗೆ, ಸಪ್ತದ್ವೀಪಪರಿಮಿತವಾದ ಸಮಸ್ತಭೂಮಿಯೂ ಕೈವಶವಾಗಿದ್ದಿತು ಅಕ್ಷಯವಾದ ಐಶ್ವರ್ಯವೂ, ಎಣೆಯಿಲ್ಲದ ಭೋಗಸಾಮಗ್ರಿಗಳೂ ಅವನ ಸ್ವಾಧೀನವಾಗಿದ್ದುವು ಹಾಗಿದ್ದರೂ ಅವನು, ಅವೆಲ್ಲವೂ ಸ್ವಪ್ನಪದಾರ್ಥಗಳಂತೆ ನಶ್ವರಗಳೆಂದೂ, ನರಕ ಕಾರಣಗಳೆಂದೂ ನಿಶ್ಚಯಿಸಿ, ಕೇವಲವಿರಕ್ತನಾಗಿ, ಭಗವಂತನಲ್ಲಿಯೂ, ಭಗವದ್ಭಕ್ತರಾದ ಸಾಧುಗಳಲ್ಲಿಯೂ ವಿಶೇಷ ಭಕ್ತಿಯುಳ್ಳವನಾಗಿದ್ದನು. ಈ ಭಕ್ತಿವೈರಾಗ್ಯಗಳಿಂದ ಅವನಿಗೆ ಈ ಪ್ರಪಂಚವೆಲ್ಲವೂ ಕೆಲಸಕ್ಕೆ ಬಾರದ ಮಣ್ಣುಹಿಂಟೆಗೆ ಸಮಾನವೆಂಬ ಭಾವವು ಹುಟ್ಟಿತು. ಅವನ ಮನಸ್ಸು ಯಾವಾಗಲೂ ಶ್ರೀಕೃಷ್ಣನ ಪಾದಾರವಿಂದಗಳನ್ನೇ ಧ್ಯಾನಿಸುತಿತ್ತು ಅವನ ವಾಕ್ಕು ಯಾವಾಗಲೂ ಭಗವದ್ಗುಣಗಳನ್ನೇ ನುಡಿಯುತಿದ್ದುವು. ಅವನ ಕೈಗಳು ಯಾವಾಗಲೂ ಭಗವನ್ಮಂದಿರಗಳನ್ನು ಸಾರಿಸಿ, ಗುಡಿಸಿ, ಶುದ್ಧ ಮಾಡುವುದರಲ್ಲಿಯೇ ಪ್ರವರ್ತಿಸುತಿದ್ದುವು ಅವನ ಕಿವಿಗಳು ಅನವರತವೂ ಭಗವದ್ಗುಣಗಳನ್ನು ಕೇಳುವುದರಲ್ಲಿಯೇ ನಿರತವಾಗಿದ್ದುವು ಅವನ ಕಣ್ಣುಗಳು ಯಾವಾಗಲೂ ಭಗವನ್ಮೂರ್ತಿಗಳನ್ನೂ, ಭಗವದಾಲಯಗಳನ್ನೂ ದರ್ಶನಮಾಡುವುದರಲ್ಲಿಹೊರತು, ಇತರವಿಷಯಗಳಲ್ಲಿ ಪ್ರವರ್ತಿಸುತ್ತಿರಲಿಲ್ಲ ಅವನ ತ್ವಗಿಂದ್ರಿಯವು, ಸರ್ವದಾ ಹರಿಭಕ್ತರ ಶರೀರವನ್ನು ಹೊರತು ಬೇರೊಂದನ್ನು ಸ್ಪರ್ಶಿಸುತ್ತಿರಲಿಲ್ಲ ಅವನ ಘ್ರಾಣೇಂದ್ರಿಯವು

ಯಾವಾಗಲೂ, ಭಗವಂತನ ಪಾದಾರವಿಂದಸಂಬಂಧವುಳ್ಳ ತುಲಸೀದಳಗಳ ವಾಸನೆಯನ್ನೇ ಅನುಭವಿಸುತಿತ್ತು ಅವನ ನಾಲಗೆಯು ಭಗವನ್ನಿವೇದಿತ ವಾದ ಪದಾರ್ಥಗಳು ಹೊರತು, ಬೇರೊಂದರ ರುಚಿಯನ್ನೇ ಕಾಣದು ಅವನ ಪಾದಗಳು ಯಾವಾಗಲೂ ಪುಣ್ಯಕ್ಷೇತ್ರಗಳ ದಾರಿಯಲ್ಲಿಯೇ ಸಂಚರಿ ಸುತಿದ್ದುವು ಅವನ ಶಿರಸ್ಸಿಗೆ ಶ್ರೀಹರಿಯ ಪಾದಾಭಿವಂದನವೇ ನಿತ್ಯ ಕಾರ್ಯವಾಗಿದ್ದಿತು. ಅವನು ಭಗವನ್ನಿವೇದಿತಗಳಾದ ಪುಷ್ಪಾದಿಗಳನ್ನು ಅನವರತವೂ ತಲೆಯಲ್ಲಿ ಧರಿಸುತಿದ್ದರೂ, ಅವೆಲ್ಲವೂ ಭಕ್ತಿಗಾಗಿಯೇ ಹೊ ರತು ಭೋಗಾಪೇಕ್ಷೆಯಿಂದಲ್ಲ ಅವನು ಭಗವದ್ಭಕ್ತರಲ್ಲಿಯೂ ಇದೇವಿಧ ವಾದ ಭಕ್ತಿಯನ್ನು ತೋರಿಸುತಿದ್ದನು. ಹೀಗೆ ಅಂಬರೀಷನು, ತನ್ನ ಅವಯ ವಗಳನ್ನೂ, ಇಂದ್ರಿಯಗಳನ್ನೂ, ಕಾಲವನ್ನೂ ಭಗವದ್ವಿಷಯವಾಗಿಯೇ ವಿನಿಯೋಗಿಸುತಿದ್ದನು. ಮತ್ತು ತನ್ನ ತ್ರಿಕರಣಗಳಿಂದ ನಡೆಸತಕ್ಕ! ಕರ್ಮ ಗಳೆಲ್ಲವನ್ನೂ, ಭಗವದರ್ಪಣರೂಪವಾಗಿಯೇ ನಡೆಸುತ್ತ,ತನ್ನಂತೆಯೇ ಭಗ ವದ್ಭಕ್ತರಾದ ವಸಿಷ್ಠಾದಿಮಹರ್ಷಿಗಳ ಆಲೋಚನೆಯನ್ನನುಸರಿಸಿ, ಭೂಮಿ ಯನ್ನು ಧರ್ಮದಿಂದ ಪಾಲಿಸುತಿದ್ದನು ಮತ್ತು ಅವನು, ಅಸಿತ, ವಸಿ ಷ್ಠ.ಗೌತಮರೇ ಮೊದಲಾದ ಮಹರ್ಷಿಗಳ ಸಹಾಯದಿಂದ,ತನ್ನ ಐಶ್ವರ್ಯ ಸಮೃದ್ಧಿಗೆ ತಕ್ಕಂತೆ ಭೂರಿದಕ್ಷಿಣೆಗಳುಳ್ಳ ಅನೇಕಾಶ್ವಮೇಧಗಳನ್ನು ನಡೆಸಿ, ಭಗವಂತನನ್ನು ಸಂತೋಷಪಡಿಸಿ, ಆ ಯಾಗಗಳನ್ನು ಪುಣ್ಯನದೀಪ್ರವಾಹ ಕ್ಕಿದಿರಾಗಿ ನಡೆಸಬೇಕೆಂಬ ಕೋರಿಕೆಯಿಂದ ದೇಶವನ್ನು ಬಿಟ್ಟು ಸರಸ್ವತೀ ನದಿಯ ಬಳಿಗೆ ಹೋಗುತಿದ್ದನು ರಾಜಾ! ಆತನ ಯಾಗದಲ್ಲಿ ಇಂದ್ರಾದಿದೇ ವತೆಗಳು ಶುಭ್ರವಾದ ಉಡಿಗೆ ತೊಡಿಗೆಗಳಿಂದಲಂಕೃತರಾಗಿ ಪ್ರತ್ಯಕ್ಷವಾ ಗಿಯೇ ಬಂದು, ತಮ್ಮತಮ್ಮ ಹವಿರ್ಭಾಗಗಳನ್ನು ಸ್ವೀಕರಿಸುತಿದ್ದರು. ಅ ವನ ಯಾಗದಲ್ಲಿ, ಋತ್ವಿಕ್ಕುಗಳೂ, ಸಭ್ಯರೂ, ಅದನ್ನು ನೋಡುವುದಕ್ಕಾ ಗಿ ಬಂದ ಇತರಜನರೂ, ಆಭರಣಾದ್ಯಲಂಕಾರಗಳಿಂದ ಅಲಂಕೃತರಾಗಿ ಆ ದೇವತೆಗಳೊಡನೆ ಸಮಾನರೂಪವುಳ್ಳವರಾಗಿ ಕಾಣುತ್ತಿದ್ದರು ಅಂ ಬರೀಷನು ತಾನುಮಾತ್ರ ಹರಿಭಕ್ತಿಪರಾಯಣನಾಗಿದ್ದುದು ಹಾಗಿರಲಿ! ತನ್ನ ದೇಶದಲ್ಲಿ ಒಂದೊಂದು ಭಾಗದಲ್ಲಿಯೂ ಹರಿಕಥೆಗಳನ್ನು ಗಾನಮಾಡಿಸಿ,

ಆ ಕಥೆಗಳನ್ನು ಒಬ್ಬೊಬ್ಬರೂ ಭಕ್ತಿಯಿಂದ ಕೇಳಬೇಕೆಂದು ನಿಯಮಿ ಸುತ್ತಿದ್ದನು. ಅವನು ತನ್ನ ಪ್ರಜೆಗಳಿಗೆ ಭೂಲೋಕದಲ್ಲಿಯೇ ಸ್ವರ್ಗಸುಖ ಕ್ಕಿಂತಲೂ ಮೇಲಾದ ಸುಖವನ್ನುಂಟುಮಾಡುತ್ತಿದ್ದನು ಇದರಿಂದ ಅ ವನ ದೇಶದ ಜನರೆಲ್ಲರೂ ಸ್ವರ್ಗಾದಿಭೋಗಗಳನ್ನು ತೃಣಪ್ರಾಯವಾಗಿ ಭಾವಿಸಿ, ಕೇವಲ ಭಗವದಾರಾಧನದಲ್ಲಿಯೇ ನಿರತರಾಗಿದ್ದರು ಆತನ ಪ್ರಜೆ ಗಳೇ ಹೀಗಿರುವಾಗ, ಅವನ ವಿಷಯವನ್ನು ಕೇಳಬೇಕೆ? ಹೀಗೆ ಆ ರಾಜನು, ವಸ್ತ್ರಾಭರಣಾದಿಭಾಗ್ಯಸಮೃದ್ಧಿಯಲ್ಲಿಯೂ, ಸೌಖ್ಯದಲ್ಲಿಯೂ ತನ್ನ ಪ್ರಜೆ ಗಳನ್ನು ದೇವತೆಗಳಿಗಿಂತಲೂ ಉತ್ತಮಸ್ಥಿತಿಯಲ್ಲಿರಿಸಿದ್ದನು ಸಮ ಸ್ತವೂ ಬ್ರಹ್ಮಾತ್ಮಕವೆಂದೇ ತಿಳಿದು ಆತ್ಮಾನಂದವನ್ನನುಭವಿಸುತ್ತ, ಯಾ ವಾಗಲೂ ತಮ್ಮ ಹೃದಯದಲ್ಲಿಯೇ ಶ್ರೀಹರಿಯನ್ನು ಸಾಕ್ಷಾತ್ಕರಿಸುತಿದ್ದ ಅಲ್ಲಿನ ಜನರನ್ನು, ಯೋಗೀಶ್ವರರಿಗೂ ದುರ್ಲಭವಾದ ಅಣಿಮಾದಿಸಿದ್ಧಿಗಳೂ ಸಂತೋಷಗೊಳಿಸಲಾರದಿದ್ದುವು ಆ ಅಂಬರೀಷಮಹಾರಾಜನು, ತನ್ನ ಕು ಲಧರ್ಮಕ್ಕೆ ಅನುಗುಣಗಳಾಗಿಯೂ, ಫಲಾಪೇಕ್ಷೆಯಿಲ್ಲದವುಗಳಾಗಿಯೂ ಇರುವ ಕರ್ಮಗಳನ್ನೇ ನಡೆಸುತ್ತ, ಭಕ್ತಿಯೋಗದಿಂದ ಭಗವಂತನನ್ನು ಸಂ ತೋಷಪಡಿಸುತ್ತಿದ್ದನು ಕ್ರಮಕ್ರಮವಾಗಿ ಸಮಸ್ತಸಂಗಗಳನ್ನೂ ಬಿಡು ತ್ತಬಂದನು. ಅಂದವಾದ ಅರಮನೆಗಳನ್ನೂ, ಸುಂದರಿಯರಾದ ಪತ್ನಿಯರ ನ್ನೂ, ಮುದ್ದುಮಕ್ಕಳನ್ನೂ, ಪ್ರಿಯಬಂಧುಗಳನ್ನೂ ಅನಾದರಿಸಿದನು. ಆನೆ, ಕುದುರೆ, ರಥ, ಪದಾತಿಗಳೆಂಬ ಚತುರಂಗಸೈನ್ಯದಲ್ಲಿಯೂ ಅಭಿಮಾ ನವನ್ನು ಬಿಟ್ಟನು. ರಾಜಯೋಗ್ಯಗಳಾದ ಅಮೂಲ್ಯವಸ್ತ್ರಾಭರಣಗಳಲ್ಲಿ ಯೂ ಆಸೆಯನ್ನು ತೊರೆದನು. ಆಯುಧಗಳಲ್ಲಿಯೂ ಅಭಿಮಾನವನ್ನು ಬಿಟ್ಟನು. ಇವೆಲ್ಲವೂ ಹೇಯವೆಂದೂ, ನಶ್ವರವೆಂದೂ, ತಿಳಿದು, ಹರಿಭ ಕ್ತಿಯೊಂದನ್ನೇ ಸಾಧಿಸುತ್ತಿದ್ದನು ಇವನ ದೃಢಭಕ್ತಿಗೆ ಮೆಚ್ಚಿ ಭಗವಂ ತನು, ಶತ್ರುಭಯಂಕರವಾಗಿಯೂ,ಆಶ್ರಿತರ ಭಯವನ್ನು ನೀಗಿಸತಕ್ಕುದಾಗಿ ಯೂ ಇರುವ ತನ್ನ ಸುದರ್ಶನಚಕ್ರವನ್ನೇ ಅವನಿಗೆ ಅನುಗ್ರಹಿಸಿಕೊಟ್ಟನು ಒಮ್ಮೆ ಆ ಅಂಬರೀಷನು ಭಗವಂತನನ್ನಾರಾಧಿಸಬೇಕೆಂದು ಬಯಸಿ, ತನಗೆ ಸಹಧರ್ಮಿಣಿಯಾದ ಭಾರ್ಯೆಯೊಡಗೂಡಿ ಒಂದು ಸಂವತ್ಸರದವರೆಗೆ

ನಡೆಸತಕ್ಕ ದ್ವಾದಶೀವ್ರತವನ್ನು ನಡೆಸಿದನು. ಆ ವ್ರತವು ಪೂರ್ತಿ[illegible]ವಾಗ, ಕಾರ್ತಿಕಮಾಸದಲ್ಲಿ ಮೂರುದಿನಗಳು ಉಪವಾಸವಿದ್ದು, ಸಾಲ್ಕನೆಯದಿನದ ದ್ವಾದಶಿ[illegible]ಲ್ಲಿ ಯಮುನಾನದಿಯಲ್ಲಿ ಸ್ನಾನವನ್ನು ಮಾಡಿ[illegible]ವನ್ನು ಪ್ರವೇಶಿಸಿ, ಗಂಧಪುಷ್ಪಧೂಪಗಳೇ ಮೊದಲಾದ ಸಮಸ್ತಪೂ[illegible] ಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು, ಶ್ರೀಹರಿಯನ್ನು ಪ್ರತಿಷ್ಠಿಸಿ, ಷೋಡಶೋಪಚಾರ ಪೂರ್ವಕವಾಗಿ ಸಹಸ್ರಕುಂಭಾಭಿಷೇಕವನ್ನು ಮಾಡಿ ಭಕ್ತಿಯಿಂದ ಪೂಜಿಸಿದನು ಆ ಶ್ರೀಹರಿಯನ್ನು ತನ್ನ ಮನಸ್ಸಿನಲ್ಲಿ ಧ್ಯಾನಿಸುತ್ತ ಮಹಾತ್ಮರಾದ ಬ್ರಾಹ್ಮಣರನ್ನೂ ಸಿದ್ಧರನ್ನೂ ಆರಾಧಿಸಿದನು ಸುವರ್ಣಶೃಂಗಗಳಿಂದಲೂ, ಬೆಳ್ಳಿಯ ಗಗ್ಗರಗಳಿಂದಲೂ, ಅಮೂಲ್ಯವಸ್ತ್ರಗಳಿಂದಲೂ ಅಲಂಕೃತವಾಗಿಯೂ, ಆಗಲೇ ಕರುಹಾಕಿ ಸಮೃದ್ಧಿಯಾಗಿ ಹಾಲನ್ನು ಕರೆಯತಕ್ಕವುಗಳಾಗಿಯೂ, ಸಾಧುಗಳಾಗಿಯೂ, ಸುಲಕ್ಷಣಗಳಾಗಿಯೂ ಇರುವ ಅರುವತ್ತುಕೋಟಿಗೋವುಗಳನ್ನು, ಅವುಗಳ ಕರುಗಳ ಸಮೇತವಾಗಿ, ಹಾಲು ಕರೆಯುವ ಪಾತ್ರಸಹಿತವಾಗಿ, ಬ್ರಾಹ್ಮಣೋತ್ತಮರಿಗೆ ದಾನ ಮಾಡಿದನು. ಬ್ರಾಹ್ಮಣರಿಗೆ ಷಡ್ರಸೋಪೇತವಾದ ಭೋಜನವನ್ನು ಮಾಡಿಸಿ, ದಕ್ಷಿಣೆಯನ್ನು ಕೊಟ್ಟು, ಅವರ ಅನುಮತಿಯನ್ನು ಹೊಂದಿ, ತಾನೂ ಪಾರಣೆ (ಊಟ) ಮಾಡುವುದಕ್ಕೆ ಸಿದ್ಧನಾದನು ಅಷ್ಟರಲ್ಲಿ ದೈವವಶದಿಂದ ಮಹಾತ್ಮನಾದ ದೂರ್ವಾಸಮುನಿಯು ಅಲ್ಲಿಗೆ ಬರಲು, ಮಹಾರಾಜನು, ಇದಿರೆದ್ದು ಬಂದು, ಅವನ ಶುಭಾಗಮನವನ್ನು ಕೇಳಿ, ಅರ್ಘ್ಯಪಾದ್ಯಾದಿ ಸತ್ಕಾರಗಳನ್ನುಮಾಡಿ, ತನ್ನ ಮನೆಯಲ್ಲಿ ಭೋಜನಕ್ಕೆ ಬರಬೇಕೆಂದು ಪ್ರಣಾಮಪೂರ್ವಕವಾಗಿ ವಿಜ್ಞಾಪಿಸಿಕೊಂಡನು ದೂರ್ವಾಸಮಹರ್ಷಿಯು ಆತನ ಪ್ರಾರ್ಥನೆಯನ್ನಂಗೀಕರಿಸಿ, ಮಾಧ್ಯಾಹ್ನಿಕಕರ್ಮಗಳನ್ನು ತೀರಿಸಿಕೊಂಡು ಬರುವುದಾಗಿ ಹೇಳಿ, ಯಮುನಾನದಿಗೆ ಹೋಗಿ ಅಲ್ಲಿ ಪರಬ್ರಹ್ಮನನ್ನು ಧ್ಯಾನಿಸುತ್ತಾ, ಸ್ನಾನಾದಿಕಾರ್ಯಗಳಲ್ಲಿದ್ದುಬಿಟ್ಟನು ಆಗ ದ್ವಾದಶೀತಿಥಿಯು ಅರ್ಧಘಳಿಗೆಮಾತ್ರವೇ ಉಳಿದಿದ್ದುದರಿಂದ, ಅಷ್ಟರಲ್ಲಿ ಪಾರಣೆಮಾಡದಿದ್ದಪಕ್ಷದಲ್ಲಿ ತನಗೆ ವ್ರತಭಂಗವಾಗುವುದೆಂದೂ, ಅತಿಥಿಯಾದ ದೂರ್ವಾಸಮಹರ್ಷಿಗಳನ್ನು ಬಿಟ್ಟು ತಾನುಮಾತ್ರ ಊಟಮಾಡುವುದು ಧರ್ಮವಿರು

ಷ್ಟವೆಂದೂ ಅಂಬರೀಷನು ಸ್ವಲ್ಪಹೊತ್ತು ಆಲೋಚಿಸಿ ಈ ಧರ್ಮಸಂಕಟ ದಲ್ಲಿ ಹೇಗೆ ನಡೆಯಬೇಕೆಂದು ತೋರದೆ, ಕೊನೆಗೆ ಬ್ರಾಹ್ಮಣರನ್ನು ಕರೆದು “ಎಲೈ ಬ್ರಾಹ್ಮಣಶ್ರೇಷ್ಠರೆ! ಈಗಿನ ವ್ರತಸಮಾಪ್ತಿಗಾಗಿ ಕೇವಲಜಲ ಪಾನದಿಂದಲಾದರೂ ಸಕಾಲಕ್ಕೆ ಪಾರಣೆಯನ್ನು ನಡೆಸಬೇಕು. ಇದ ರಿಂದ ಊಟವಿಲ್ಲದೆಯೇ ಪಾರಣೆಯನ್ನು ಪೂರ್ತಿಮಾಡಿದಂತಾಗುವುದರಿಂ ದ ವ್ರತಭಂಗಕ್ಕಾಗಲಿ ಅತಿಥಿತಿರಸ್ಕಾರಕ್ಕಾಗಲಿ ಅವಕಾಶವಿಲ್ಲ” ಎಂದು ಹೇಳಿ ಪರಮಾತ್ಮಧ್ಯಾನಪೂರ್ವಕವಾಗಿ ಜಲಪಾನವನ್ನುಮಾಡಿ, ದೂರ್ವಾ ಸಮಹರ್ಷಿಗಳ ಆಗಮನವನ್ನು ನಿರೀಕ್ಷಿಸುತಿದ್ದನು

ಅತ್ತಲಾಗಿ ದೂರ್ವಾಸಮಹರ್ಷಿಯು ತನ್ನ ಮಾಧ್ಯಾಹ್ನಿಕಕೃತ್ಯಗ ಳನ್ನು ಪೂರೈಸಿಕೊಂಡಮೇಲೆ, ಅಂಬರೀಷನಿರುವ ಸ್ಥಳಕ್ಕೆ ಬಂದು, ತನ್ನ ದಿವ್ಯಜ್ಞಾನದಿಂದ ಆ ರಾಜನು ನಡೆಸಿದ ಕಾರ್ಯವನ್ನು ತಿಳಿದು ಕೋಪಾವಿ ಷ್ಟನಾದನು ಆ ರೋಷದಿಂದ ಅವನ ಶರೀರವೆಲ್ಲವೂ ಕಂಪಿಸುತಿತ್ತು, ಹಸಿವಿನ ಬಾಧೆಯು ಆ ಕೋಪಕ್ಕೆ ಮತ್ತಷ್ಟು ಉದ್ರೇಕಮಾಡಿತು ದೈನ್ಯ ದಿಂದಲೂ, ಭೀತಿಯಿಂದಲೂ ಕಂಪಿಸುತ್ತ ಬದ್ಧಾಂಜಲಿಯಾಗಿ ಮುಂದೆ ನಿಂ ತಿರುವ ಅಂಬರೀಷಮಹಾರಾಜನನ್ನು ಭಯಂಕರವಾದ ಹುಬ್ಬುಗಂಟಿನಿಂದ ನೋಡಿ, “ಎಲೈ ಬ್ರಾಹ್ಮಣರೇ! ಈರಾಜನ ಕ್ರೂರಸ್ವಭಾವವನ್ನು ನೋ ಡಿದಿರಾ! ತಾನೇ ವಿಷ್ಣುಭಕ್ತನೆಂಬ ಅಹಂಕಾರವೂ, ಐಶ್ವರ್ಯಮದವೂ, ಇವನಲ್ಲಿ ವಿಶೇಷವಾಗಿರುವುದು ಆಹಾ! ಎಂತಹ ದುಷ್ಕಾರ್ಯವನ್ನು ಮಾ ಡಿರುವನು? ಅತಿಥಿಯಾದ ನನ್ನನ್ನು ಬಿಟ್ಟು ತಾನು ಮಾತ್ರಊಟಮಾಡಿರು ವನಲ್ಲಾ! ಇಂತಹ ಅಧರ್ಮಕಾರ್ಯಕ್ಕೆ ಪ್ರತಿಫಲವನ್ನು ಇದೋ ಈಗಲೇ ತೋ ರಿಸುವೆನು.” ಎಂದು ಅತ್ಯಂತರೋಷದಿಂದ ಜ್ವಲಿಸುವ ತನ್ನ ಜಟೆಯನ್ನು ಕಿದರಿ,ಅದರಿಂದ ಅಂಬರೀಷನನ್ನು ಸಂಹಾರಮಾಡುವುದಕ್ಕಾಗಿ ಒಂದಾನೊಂ ದು ಶಕ್ತಿದೇವತೆಯನ್ನು ನಿರ್ಮಾಣಮಾಡಿದನು ಆ ಶಕ್ತಿಯು ಖಡ್ಗಪಾ ಣಿಯಾಗಿ ಅಂಬರೀಷಮಹಾರಾಜನ ಇದಿರಿಗೆ ನಿಂತು, ತನ್ನ ಪದಾಹತಿಯಿಂದ ನೆಲವನ್ನು ನಡುಗಿಸುವಂತೆ ಭಯಂಕರವಾಗಿ ಮುಂದೆ ಬಂದಿತು. ಆಗಲೂ ಅಂಬರೀಷನು ಸ್ವಲ್ಪವೂ ಭಯಪಡದೆ, ಶ್ರೀಹರಿಯನ್ನು ಧ್ಯಾನಮಾಡುತ್ತಾ

ನಿಶ್ಚಲನಾಗಿ ನಿಂತಿದ್ದನು ಈ ಸಮಯದಲ್ಲಿ ಭಕ್ತವತ್ಸಲನಾದ ಶ್ರೀಮನ್ನಾರಾಯಣನು, ಅಂಬರೀಷನನ್ನು ರಕ್ಷಿಸುವುದಕ್ಕಾಗಿ, ತನ್ನ ಚಕ್ರವನ್ನು ಪ್ರೇರಿಸಿದನು ಆ ಚಕ್ರವು, ಕೋಪೋದ್ದೀಪಿತವಾದ ಸರ್ಪವನ್ನು ದಾವಾಗ್ನಿಯು ಹೇಗೋ ಹಾಗೆ, ಆ ಶಕ್ತಿದೇವತೆಯನ್ನು ನಾಶಮಾಡಿ, ದೂರ್ವಾಸಮಹರ್ಷಿಯನ್ನೂ ಬೆನ್ನಟ್ಟಿತು ಅದನ್ನು ಕಂಡು ಆ ಮುನಿಯು, ತನ್ನಕಾರ್ಯವು ವ್ಯರ್ಥವಾಯಿತೆಂಬ ವ್ಯಸನದಿಂದ ಬೆಯಭ್ರಾಂತನಾಗಿ ಪ್ರಾಣಸನ್ನಾದರೂ ರಕ್ಷಿಸಿಕೊಳ್ಳಬೇಕೆಂದು ಓಡಲಾರಂಭಿಸಿದನು. ಆದರೆ ದಾವಾಗ್ನಿಯಂತೆ ಜಾಜ್ವಲ್ಯಮಾನವಾಗಿ ಪ್ರಕಾಶಿಸುವ ಆಚಕ್ರವು ಆತನನ್ನು ಬಿಡದೆ ಹಿಂದೆಯೇ ಬೆನ್ನಟ್ಟಲಾರಂಭಿಸಿತು ಈ ರೀತಿಯಲ್ಲಿ ಚಕ್ರವು ಹಿಂಬಾಲಿಸಿ ಬರುವುದನ್ನು ನೋಡಿ, ಆ ಮುನೀಶ್ವರನು ಭಯದಿಂದ ಮೇರುಪರ್ವತದ ಗುಹೆಯಲ್ಲಿ ಅಡಗಿಕೊಳ್ಳುವುದಕ್ಕಾಗಿ ಓಡಿಹೋದನು ಚಕ್ರವು ಅವನನ್ನು ಅಲ್ಲಿಗೂ ಹಿಂಬಾಲಿಸಿತು ದೂರ್ವಾಸಮುನಿಯು ಅಲ್ಲಿಯೂ ಇರಲಾರದೆ ದಿಕ್ಕುದಿಕ್ಕಿಗೆ ಓಡಲಾರಂಭಿಸಿದನು! ಅಂತರಿಕ್ಷಕ್ಕೆ ಹಾರಿದನು! ಅತಲವಿತಲಾದಿಸಮಸ್ತಲೋಕಗಳಿಗೂ ಓಡಿಹೋದನು ! ಸಮುದ್ರದಲ್ಲಿ ಧುಮುಕಿದನು! ಸ್ವರ್ಗಲೋಕಕ್ಕ ಹಾರಿದನು! ಸಾಪಿರಮಾತಿನಿಂದೇನು ! ಆತ್ಮರಕ್ಷಣೆಗಾಗಿ ಆ ಮುನಿಯು, ಸ್ವರ್ಗಮರ್ತ್ಯಪಾತಾಳಾದಿ ಮೂರು ಲೋಕಗಳಲ್ಲಿಯೂ ಓಡಾಡಿದನು ಆದರೂ ಚಕ್ರವು ಅವನನ್ನು ಬಿಡದೆ. ಅವನಹಿಂದೆಯೇ ತನ್ನ ದುಸ್ಸಹವಾದ ತೇಜಸ್ಸಿನಿಂದ ಬೆನ್ನಟ್ಟಿಹೋಯಿತು ದೂರ್ವಾಸಮುನಿಗೆ ರಕ್ಷಣೋಪಾಯವೇನೂ ತಿಳಿಯದೆ,ಭಯವು ಹೆಚ್ಚಿ,ಕೊನೆಗೆ ತನ್ನನ್ನು ರಕ್ಷಿಸುವರು ಯಾರೆಂದು ಹುಡುಕುತ್ತಾ ಸತ್ಯಲೋಕವನ್ನು ಸೇರಿ, ಅಲ್ಲಿ ಬ್ರಹ್ಮನನ್ನುನೋಡಿ "ಎಲೈ ಬ್ರಹ್ಮನೆ! ಈ ಭಗವಂತನ ಚಕ್ರದಿಂದ ನನ್ನನ್ನು ತಪ್ಪಿಸಿ ಕಾಪಾಡು" ಎಂದು ಮೊರೆಯಿಟ್ಟನು ಇವನ ಮೊರೆಯನ್ನು ಕೇಳಿ ಬ್ರಹ್ಮನು "ಎಲೈ! ಈ ಜಗತ್ತೆಲ್ಲವೂ ಭಗವಂತನಿಗೆ ಆಟದ ಸಾಮಗ್ರಿಯಂತಿರುವುದು ಆಟವು ಮುಗಿದಮೇಲೆ ಮಕ್ಕಳು ತಮ್ಮ ಆಟದ ಸಾಮಾನುಗಳನ್ನು ಕದಲಿಸುವಂತೆ ಭಗವಂತನೂ ತನ್ನ ಕ್ರೀಡಾಸಾಮಾಗ್ರಿಯಾದ ಈ ಜಗತ್ತನ್ನು ಕೊನೆಗಾಲಕ್ಕೆ ನಾಶಹೊಂದಿಸುವನು ಆದರಂತೆಯೇ ನನ್ನ

ಸ್ಥಾನವೂಕೂಡ ಎರಡು ಪರಾರ್ಧಕಾಲಕ್ಕೆಮೇಲೆ ಕ್ಷಣಮಾತ್ರವೂ ಉಳಿಯ ಲಾರದು ಆ ಭಗವಂತನು ತನ್ನ ಹುಬ್ಬುಗಂಟಿನಿಂದಲೇ ಇವೆಲ್ಲವನ್ನೂ ನಾ ಶಹೊಂದಿಸಬಲ್ಲನು. ಹೀಗಿರುವಾಗ ಕಾಲಸ್ವರೂಪಿಯಾದ ಆ ಭಗವಂ ತನ ಚಕ್ರವನ್ನು ತಡೆಯಬೇಕೆಂದರೆ ನನ್ನಿಂದ ಸಾಧ್ಯವೆ? ನನ್ನಿಂದಮಾ ತ್ರವೇ ಅಲ್ಲ! ಶಂಕರನಿಂದಾಗಲಿ, ದಕ್ಷ, ಭೃಗು, ಮೊದಲಾದ ಪ್ರಜಾಧಿಪತಿ ಗಳಿಂದಾಗಲಿ ಆ ತೇಜಸ್ಸನ್ನು ಹಿಂತಿರುಗಿಸಲು ಸಾಧ್ಯವಿಲ್ಲ ಏಕಾದ ಶರುದ್ರರಾಗಲಿ, ಇಂದ್ರಾದಿದೇವತೆಗಳಾಗಲಿ ಈ ಕಾರ್ಯವನ್ನು ಮಾಡಲು ಸಮರ್ಥರಲ್ಲ! ನಾವೆಲ್ಲರೂ ಆ ಭಗವಂತನ ಆಜ್ಞಾಬದ್ಧರಾಗಿಯೇ, ನಮ್ಮ ನಮ್ಮ ಕಾರ್ಯಗಳನ್ನು ನಡೆಸುತ್ತಲಿರುವೆವು ನಾವೆಲ್ಲರೂ ಅವನ ಸೇವ ಕರು. ನಿನ್ನನ್ನು ರಕ್ಷಿಸಲು ನಮ್ಮಿಂದ ಸಾಧ್ಯವೆ? ಆ ಪರಮೇಶ್ವರನಲ್ಲಿಯೇ ಮೊರೆಯಿಡು! ಹೋಗು!" ಎಂದು ನಿರಾಕರಿಸಿದನು ಆಮೇಲೆ ಮುನಿಯು. ಆಚಕ್ರದ ತಾಪವನ್ನು ಸಹಿಸಲಾರದೆ, ಕೈಲಾಸದಲ್ಲಿದ್ದ ರುದ್ರನ ಬಳಿಗೆ ಬಂದು ಮರೆಹೊಕ್ಕನು ರುದ್ರನು ಇವನ ದುರವಸ್ಥೆಯನ್ನು ನೋಡಿ ಕನಿಕರ ಗೊಂಡು, "ವತ್ಸ ದೂರ್ವಾಸಾ! ಆ ಚಕ್ರವನ್ನು ತಡೆಯುವುದು ನನ್ನಿಂ ದಲೂ ಸಾಧ್ಯವಲ್ಲ! ನಾವೆಲ್ಲರೂ ಆ ಭಗವಂತನ ಪಾದಸೇವಕರು. ಅವನ ಶರೀರದಲ್ಲಿಯೇ ಅಡಗಿದವರು. ನಾವು ಹೆಸರುಮಾತ್ರಕ್ಕೆ ಲೋ ಕಪಾಲಕರೆನಿಸಿಕೊಂಡಿದ್ದರೂ, ಆ ಭಗವಂತನ ಮಹಾವಿಭೂತಿಯಲ್ಲಿ ಕ್ರಿಮಿಪ್ರಾಯರಾಗಿರುವೆವು ಆ ಭಗವಂತನು ಸೃಷ್ಟಿಸಬೇಕೆಂದು ಸಂಕಲ್ಪಿ ಸಿದಾಗ, ಬ್ರಹ್ಮಾದಿ ಸಮಸ್ತಜೀವಿಗಳೂ ಉದ್ಭವಿಸುವವು. ಅವನು ಸಂಹರಿ ಸಬೇಕೆಂದು ಸಂಕಲ್ಪಿಸಿದಕಾಲಕ್ಕೆ ಎಲ್ಲವೂ ನಾಶಹೊಂದುವುವು ಹೀಗೆ ನಮ್ಮ ಉತ್ಪತ್ತಿವಿನಾಶಗಳೆಲ್ಲವೂ ಅವನ ಸಂಕಲ್ಪಾಧೀನವಾಗಿವೆ ನಾನಾ ಗಲಿ, ಸನತ್ಕುಮಾರನಾಗಲಿ, ನಾರದನಾಗಲಿ, ಕಪಿಲ, ದೇವಲ, ಧರ್ಮಾದಿ ಗಳಾಗಲಿ, ಆಸುರಿ, ಮರೀಚಿ ಮೊದಲಾದವರಾಗಲಿ, ಸರ್ವಜ್ಞರಾದ ಇತರ ಸಿದ್ಧರಾಗಲಿ, ನಾವೆಲ್ಲರೂ ಆ ಭಗವಂತನ ಮಾಯೆಯಿಂದ ಮುಚ್ಚಲ್ಪಟ್ಟು ಅವನ ಶಕ್ತಿಯನ್ನು ತಿಳಿಯಲಾರದಿರುವೆವು. ಆ ಮಹಾತ್ಮನ ಸುದರ್ಶನಚ ಕ್ರವೇ ಇದು! ಇದರ ತೇಜಸ್ಸನ್ನು ನಾವೂ ಸಹಿಸಲಾರೆವು ಈಗ ನೀನು ಆ ಭಗವಂತನನ್ನೇ ಮರೆಹೊಕ್ಕರೆ ನಿನಗೆ ಕ್ಷೇಮವುಂಟು" ಎಂದನು

ಇದನ್ನು ಕೇಳಿ ದೂರ್ವಾಸನು, ನಿರಾಶನಾಗಿ, ಲಕ್ಷ್ಮೀನಾರಾಯಣರಿಗೆ ನಿತ್ಯನಿವಾಸವಾದ ವೈಕುಂಠಕ್ಕೆ ಹೋದನು. ಚಕ್ರಾಗ್ನಿಯಿಂದ ಬೆಂದ ಮೈಯ್ಯುಳ್ಳ ಆ ಮಹರ್ಷಿಯು, ಅಲ್ಲಿ ಭಗವಂತನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ, ಭಯದಿಂದ ನಡುಗುತ್ತ ಹೀಗೆಂದು ವಿಜ್ಞಾಪಿಸುವನು "ಓ ಭಗವಂತಾ! ನೀನು ಆಶ್ರಿತರನ್ನು ಕೈಬಿಡದವನು ನಿನ್ನ ಮಾಹಾತ್ಮ್ಯವು ಅಪಾರವಾದುದು ನೀನು ಭಕ್ತಪ್ರಿಯನು. ಓ ಜಗತ್ಕಾರಣಾ! ನನ್ನಲ್ಲಿ ಕರುಣೆಯಿಡು! ನನ್ನ ಅಪರಾಧವನ್ನು ಕ್ಷಮಿಸು! ದೇವಾ! ನಿನ್ನ ಮಾಹಾತ್ಮ್ಯವನ್ನು ತಿಳಿಯದೆ ನಾನು ನಿನ್ನ ಭಕ್ತನಾದ ಅಂಬರೀಷನಿಗೆ ಕೇಡನ್ನು ಯೋಚಿಸಿದೆನು ನನ್ನ ಅಪರಾಧವನ್ನು ಕ್ಷಮಿಸಿ ನನ್ನನ್ನು ಕಾಪಾಡಬೇಕು ನಿನ್ನ ನಾಮೋಚ್ಚಾರಣಮಾತ್ರದಿಂದಲೇ ನರಕಕಾರಣಗಳಾದ ಮಹಾಪಾಪಗಳೂ ನೀಗುವಾಗ, ನೀನು ಸಾಕ್ಷಾತ್ತಾಗಿ ಅನುಗ್ರಹಿಸುವಪಕ್ಷದಲ್ಲಿ, ಅತ್ಯಲ್ಪವಾದ ಈ ನನ್ನ ಪಾಪವು ನೀಗುವುದೇನು ದೊಡ್ಡದು? ಆದುದರಿಂದ ನನ್ನ ಅಪರಾಧವನ್ನು ಮನ್ನಿಸಬೇಕು!" ಎಂದನು.

ಅದಕ್ಕಾ ಭಗವಂತನು "ಓ ದೂರ್ವಾಸಾ! ಅಸ್ವತಂತ್ರನಾದ ರಾಜಸೇವಕನಂತೆ ನಾನು ನನ್ನ ಭಕ್ತರಿಗೆ ಅಧೀನನು ನನ್ನ ಮನಸ್ಸೂ ಸಾಧುಗಳಾದ ಭಕ್ತರ ಅಧೀನವಾಗಿರುವುದು. ಆದರೆ "ರಾಜಸೇವಕನು ಕರ್ಮವಶನಾದುದರಿಂದ, ರಾಜನನ್ನು ಸೇವಿಸುತ್ತ, ಅಸ್ವತಂತ್ರನಾಗಿರುವುದೇನೋ ಸಹಜವು! ಕರ್ಮವಶನಲ್ಲದ ನೀನು ಮತ್ತೊಬ್ಬರಿಗೆ ಅಧೀನನಾಗಿರಬೇಕಾದುದೇನು?" ಎಂದು ನೀನು ಶಂಕಿಸಬಾರದು: ಆಶ್ರಿತವಾತ್ಸಲ್ಯಕ್ಕೆ ಪರವಶನಾದ ನಾನು, ನನ್ನ ಭಕ್ತರಿಗೆ ಅಧೀನನಾಗಿ ನಡೆಯುವುದೇನೂ ಹೇಯಕಾರ್ಯವಲ್ಲ ನನ್ನ ಭಕ್ತರು ಸಮಸ್ತವಿಧದಲ್ಲಿಯೂ ನನಗೆ ಉಪಕಾರವನ್ನು ಮಾಡುತ್ತಾ, ನನ್ನ ಹೃದಯವನ್ನೇ ಅವರ ಸ್ವಾಧೀನಪಡಿಸಿಕೊಂಡಿರುವರು ಲೋಕದಲ್ಲಿ ಯಾವ ಪುರುಷನೂ, ತನ್ನ ಮನಸ್ಸನ್ನು ಅನುಸರಿಸಿ ನಡೆಯದಿರಲಾರನು ಅದರಂತೆ ನನಗೆ ಹೃದಯಭೂತರಾದ ಭಕ್ತರನ್ನು ಅನುಸರಿಸಬೇಕಾದುದೇ ನನಗೆ ವಿಧಿಯು! ಆದುದರಿಂದ ನಾನು ನನ್ನ ಭಕ್ತರ ಇಷ್ಟಪ್ರಕಾರವೇ ನಡೆಯತಕ್ಕವನು. ನನ್ನಲ್ಲಿ ಭಕ್ತರಿಗೆ ಹೇಗೋ, ಹಾಗೆಯೇ

ನನಗೂ ಭಕ್ತರಲ್ಲಿ ಅನುರಾಗವಿರುವುದು ಎಲೈ ಬ್ರಾಹ್ಮಣಶ್ರೇಷ್ಠನೆ! ನನಗೆ ನನ್ನ ಶರೀರವಾಗಲಿ, ಅನವರತವೂ ನನ್ನ ದೇಹದಲ್ಲಿ ವಾಸಮಾಡುತ್ತಿರುವ ಲಕ್ಷ್ಮಿಯಾಗಲಿ ಆ ಭಕ್ತರಿಗಿಂತಲೂ ಹೆಚ್ಚಲ್ಲ ನನ್ನ ಶರೀರವನ್ನಾಗಲಿ. ಲಕ್ಷ್ಮಿಯನ್ನಾಗಲಿ ಬಿಟ್ಟರೂ ಬಿಡುವೆನೇಹೊರತು, ನನ್ನ ಭಕ್ತರನ್ನು ಮಾತ್ರ ಬಿಡಲಾರೆನು ಓ ಮಹರ್ಷೀ! ಹೆಂಡಿರುಮಕ್ಕಳನ್ನೂ, ಮನೆಮಠಗಳನ್ನೂ, ಇಷ್ಟಬಂಧುಗಳನ್ನೂ, ಧನವನ್ನೂ, ಇಹಪರಲೋಕಗಳನ್ನೂ, ಕೊನೆಗೆ ತಮ್ಮ ಪ್ರಾಣವನ್ನೂ ತ್ಯಜಿಸಿ, ನನ್ನನ್ನೇ ನಂಬಿ ಬಂದ ಭಕ್ತರನ್ನು ನಾನು ಹೇಗೆ ತಾನೇ ಉಪೇಕ್ಷಿಸಲಿ? ಭಕ್ತರಾದವರು ತಮ್ಮ ಮನಸ್ಸನ್ನು ನನ್ನಲ್ಲಿ ನಿಶ್ಚಲವಾಗಿ ನಿಲ್ಲಿಸಿ, ಸಮಸ್ತವನ್ನೂ ನಾನಾಗಿಯೇ ಭಾವಿಸಿ, ಪತಿವ್ರತಾಸ್ತ್ರೀಯರು ಪತಿಯನ್ನು ಹೇಗೋ ಹಾಗೆ ನನ್ನನ್ನು ವಶಮಾಡಿಕೊಳ್ಳುವರು, ನನ್ನಲ್ಲಿ ಭಕ್ತಿಪರವಶರಾದವರು, ಸಾಯುಜ್ಯಾದಿಚತುರ್ವಿಧಮೋಕ್ಷಫಲವನ್ನೂ ಅನಾದರಿಸುವರು ಹೀಗಿರುವಲ್ಲಿ, ಅಶಾಶ್ವತವಾದ ಐಹಿಕಫಲದಲ್ಲಿ ದೃಷ್ಟಿಯಿಡುವರೆ? ಹೆಚ್ಚೇಕೆ? ಸಾಧುಜನರೇ ನನ್ನ ಮನಸ್ಸು! ನಾನೇ ಸಾಧುಗಳ ಮನಸ್ಸು! ಅವರಿಗೆ ನನಗಿಂತಲೂ ಪ್ರಿಯವಾದ ವಸ್ತುವಿಲ್ಲ! ನನಗೂ ಭಕ್ತರಿಗಿಂತಲೂ ಪ್ರಿಯವಾದ ವಸ್ತುವೊಂದಿಲ್ಲ ನಾನು ಯಾವುದನ್ನಾದರೂ ಸಹಿಸಬಲ್ಲೆನು! ಭಕ್ತರಿಗೆ ಮಾಡಿದ ಅಪರಾಧವನ್ನು ಮಾತ್ರ ಸಹಿಸಲಾರೆನು. ಆದರೆ ಈಗ ನೀನೂ ನನ್ನಲ್ಲಿಯೇ ಶರಣಾಗತನಾಗಿ ಬಂದಿರುವುದರಿಂದ, ನಿನಗೆ ರಕ್ಷಣೋಪಾಯವನ್ನು ಹೇಳುವೆನು ನೀನು ಯಾರಲ್ಲಿ ಅಪರಾಧಮಾಡಿದೆಯೋ ಆ ಅಂಬರೀಷನಲ್ಲಿಯೇ ಕ್ಷಮೆಯನ್ನು ಬೇಡು! ಲೋಕದಲ್ಲಿ ಸಾಧುಗಳಿಗೆ ಕೇಡನ್ನೆಣಿಸುವುದರಿಂದ ತಮಗೇ ಕೇಡುಂಟಾಗುವುದು ನೀನು ಅಂಬರೀಷನನ್ನು ಸಂಹರಿಸಬೇಕೆಂದು ಮಾಡಿದ ಕಾರ್ಯವು ನಿನಗೇ ಕೇಡನ್ನುಂಟುಮಾಡಿತು. ತಪಸ್ಸು, ವಿದ್ಯೆ, ಇವೆರಡೂ ಸಾಧುವಾದ ಬ್ರಾಹ್ಮಣರಲ್ಲಿ ಸಫಲವಾಗುವವು ಅಹಂಕಾರಿಗಳಿಗೆ ಇವೇ ಕೇಡನ್ನುಂಟು ಮಾಡುವುವು ನಿನ್ನ ತಪಃಫಲವು ಈರೀತಿಯಾಗಿ ಪರಿಣಮಿಸಿದುದಕ್ಕಾಗಿ ನಾನು ಬಹಳ ವ್ಯಸನಪಡುವೆನು ಇನ್ನು ನೀನು ಹೊರಡು! ಕಳೆದುಹೋದ ಕಾರ್ಯಕ್ಕಾಗಿ ವಿಚಾರಪಡಬೇಡ! ಅಂಬರೀಷನ ಸಮೀಪವನ್ನು ಸೇರಿ,

ಅವನಲ್ಲಿಯೇ ಪ್ರಾರ್ಥಿಸು! ಅವನಿಂದ ನಿನಗೆ ತಪ್ಪದೆ ಕ್ಷೇಮವುಂಟಾಗುವುದು ವತ್ಸ! ಹೋಗಿ ಬಾ” ಎಂದನು. ಇದು ನಾಲ್ಕನೆಯ ಅಧ್ಯಾಯವು.

---

### ದೂರ್ವಾಸನು ಅಂಬರೀಷನಲ್ಲಿ ಶರಣಾಗತನಾದುದು

ದೂರ್ವಾಸಮಹರ್ಷಿಯು, ಚಕ್ರಾಗ್ನಿಯ ಬೇಗೆಯನ್ನು ತಡೆಯಲಾರದೆ ದುಃಖಿತನಾಗಿ, ಬೇರೆವಿಧಿಯಿಲ್ಲದೆ, ಭಗವದಾಜ್ಞೆಯನ್ನನುಸರಿಸಿ, ಕ್ಷಿಪ್ರದಲ್ಲಿಯೇ ಅಂಬರೀಷನಿದ್ದ ಸ್ಥಳಕ್ಕೆ ಬಂದು, ಅವನ ಪಾದಗಳನ್ನು ಹಿಡಿದು ತನ್ನನ್ನು ಕಾಪಾಡಬೇಕೆಂದು ಬೇಡಿಕೊಂಡನು. ಹೀಗೆ ಬ್ರಾಹ್ಮಣೋತ್ತಮನು ತನ್ನ ಪಾದಗಳನ್ನು ಹಿಡಿದುದಕ್ಕಾಗಿ ಅಂಬರೀಷನು ಅತ್ಯಂತ ಲಜ್ಜಾಕ್ರಾಂತನಾಗಿ, ಆ ಮಹರ್ಷಿಯ ಸಂಕಟವನ್ನು ನೋಡಲಾರದೆ, ವಿಷ್ಣುಚಕ್ರವನ್ನು ಸ್ತುತಿಸಲಾರಂಭಿಸಿದನು “ಓ ಆಯುಧರಾಜಾ! ನೀನೇ ಅಗ್ನಿಯು! ಭಗವಂತನಾದ ಸೂರ್ಯನೂ ನೀನೇ! ನಕ್ಷತ್ರಗಳಿಗೆ ಅಧಿಪತಿಯಾದ ಚಂದ್ರನೂ ನೀನೇ! ಪೃಥಿವ್ಯಪ್ತೇಜೋವಾಯುಗಳೂ ನೀನೇ! ಗಂಧಾದಿತನ್ಮಾತ್ರಗಳೂ, ಇಂದ್ರಿಯಗಳೂ ನೀನೇ! ಸುದರ್ಶನಾ! ಸಹಸ್ರಧಾರೆಗಳುಳ್ಳವನಾಗಿಯೂ, ಹರಿಪ್ರಿಯನಾಗಿಯೂ ಇರುವ ನಿನಗೆ ನಮಸ್ಕಾರವು! ನೀನು ಬೇರೆ ಎಲ್ಲಾ ಶಸ್ತ್ರಾಸ್ತ್ರಗಳನ್ನೂ ನಿಗ್ರಹಿಸತಕ್ಕವನು ಜಗತ್ಪಾಲಕನಾದ ನಿನಗೆ ಶರಣಾಗತರಕ್ಷಣವೇ ಮುಖ್ಯವ್ರತವು. ನಿನ್ನಲ್ಲಿ ಮರೆಹೊಕ್ಕು ಬಂದಿರುವ ಈ ಬ್ರಾಹ್ಮಣನನ್ನು ಕಾಪಾಡು! ನೀನೇ ಧರ್ಮವು! ನೀನೇ ಧೈರ್ಯವು! ನೀನು ನಿತ್ಯನು. ಯಜ್ಞಾದಿಗಳಿಗೆ ಅಧಿಪತಿಯೂ, ಯಜ್ಞನಿರ್ವಾಹಕನೂ ನೀನೇ! ನೀನು ಸರ್ವಾತ್ಮನು! ಲೋಕರಕ್ಷಕನು! ಪರಮಪುರುಷನ ತೇಜಸ್ಸ್ವರೂಪನು! ಓ ಸುನಾಭಾ! ನೀನು ಸಮಸ್ತಧರ್ಮಗಳಿಗೂ ಸೇತುಪ್ರಾಯನು! ಅಧರ್ಮಶೀಲರಾದ ರಾಕ್ಷಸರಿಗೆ ಧೂಮಕೇತುವಂತೆ ನಾಶೋತ್ಪಾದಕನು. ಮೂರುಲೋಕಗಳನ್ನೂ ರಕ್ಷಿಸತಕ್ಕವನು ಶುದ್ಧವಾದ ತೇಜಸ್ಸುಳ್ಳವನು ಮನೋವೇಗವುಳ್ಳವನು. ನಿನ್ನ ಕಾರ್ಯಗಳು ಲೋಕಾದ್ಭುತವಾಗಿರುವುವು. ಅಂತಹ ನಿನಗೆ ನಮಸ್ಕಾರವು ಧರ್ಮಮಯವಾದ ತೇಜಸ್ಸಿನಿಂದ ಅಜ್ಞಾನವೆಂಬ ಕತ್ತಲೆಯನ್ನು ನೀಗಿಸಿ



1592. ದೂರ್ವಾಸಮುನಿಯು ಅಂಬರೀಷನ ಕಾಲಿಗೆ ಬಿದ್ದು
ಕ್ಷಮೆಯನ್ನು ಬೇಡಿದುದು.

ಮಹಾತ್ಮರ ದೃಷ್ಟಿಗೆ ಪ್ರಕಾಶವನ್ನು ಕೊಡುತ್ತಿರುವ ನಿನ್ನ ಮಹಿಮೆಯು ಅಗೋಚರವಾದುದು ಸ್ಥೂಲಸೂಕ್ಷ್ಮಗಳೆನಿಸಿಕೊಂಡ ಚಿದಚಿತ್ತುಗಳಿಂದ ತುಂಬಿದ ಈ ಜಗತ್ತು, ನಿನಗಿಂತಲೂ ಬೇರೆಯಾದುದಲ್ಲ ನೀನು ನಿರಂಜನನಾದ ಶ್ರೀಪರಮಪುರುಷನ ಆಜ್ಞಾನುಸಾರವಾಗಿ, ಬಲಶಾಲಿಗಳಾದ ದೈತ್ಯದಾನವಸೈನ್ಯವನ್ನು ಸುಲಭವಾಗಿ ಹೊಕ್ಕು, ಅವರ ತೋಳು, ತೊಡೆ, ಕೈ, ಕಾಲು, ಕಂಠ, ಜಠರ ಮುಂತಾದ ಒಂದೊಂದವಯವನ್ನೂ ಭಿನ್ನಭಿನ್ನವಾಗಿ ಕತ್ತರಿಸಿ, ನಿಜತೇಜಸ್ಸಿನಿಂದ ಪ್ರಕಾಶಿಸುತ್ತಿರುವೆ. ಸಾಕ್ಷಾತ್ಪರಮಪುರುಷನು ದುಷ್ಟನಿಗ್ರಹಣ ಶಿಷ್ಟರಕ್ಷಣಾರ್ಥವಾಗಿಯೇ ನಿನ್ನನ್ನು ಸೃಷ್ಟಿಸಿರುವನು ಅತ್ರಿತರ ಕಷ್ಟವನ್ನು ನೀನು ಕ್ಷಣಮಾತ್ರವೂ ಸಹಿಸತಕ್ಕವನಲ್ಲ. ಮರೆಹೊಕ್ಕುಬಂದವರಲ್ಲಿ ಅಪರಾಧವಿದ್ದರೂ ಸಹಿಸತಕ್ಕವನು. ಆದುದರಿಂದ ಮೊದಲು ಅಪರಾಧಿಯಾಗಿದ್ದರೂ, ಈಗ ಶರಣಾಗತನಾಗಿ ಬಂದಿರುವ ಈ ಬ್ರಾಹ್ಮಣನನ್ನು ರಕ್ಷಿಸಿ, ನನ್ನ ವಂಶವನ್ನುಳಿಸಬೇಕು ! ಹಾಗಿಲ್ಲದಪಕ್ಷದಲ್ಲಿ ಈ ಬ್ರಹ್ಮಹತ್ಯಾದೋಷದಿಂದ ನನ್ನ ವಂಶವೇ ನಾಶವಾಗುವುದು ಈಗ ನೀನು ಈ ಬ್ರಾಹ್ಮಣನನ್ನು ಕಾಪಾಡುವುದರಿಂದ ನನ್ನನ್ನೇ ಕಾಪಾಡಿದಂತಾಗುವುದು ಇದುವರೆಗೆ ನಾನು ಮಾಡಿದ ದಾನಗಳು ! ನಾನು ನಡೆಸಿದ ಯಜ್ಞಯಾಗಾದಿಕರ್ಮಗಳು ! ಈಗ ನಾನು ನಡೆಸುತ್ತಿರುವ ವರ್ಣಾಶ್ರಮಧರ್ಮಗಳು ! ಇವುಗಳಲ್ಲಿ ಯಾವುದಾದರೂ ಪರಮಾತ್ಮನಿಗೆ ಸಂತೋಷವನ್ನುಂಟುಮಾಡಬಲ್ಲುವಾಗಿದ್ದರೆ, ಅದರಿಂದ ಈ ಬ್ರಾಹ್ಮಣನಿಗೆ ಕ್ಷೇಮವುಂಟಾಗಲಿ! ನನ್ನ ವಂಶವು ಬ್ರಾಹ್ಮಣಕುಲವನ್ನೇ ಪರದೈವವನ್ನಾಗಿ ಎಣಿಸುವುದು ನಿಜವಾಗಿದ್ದರೆ, ಅದರಿಂದ ಈ ಬ್ರಾಹ್ಮಣನಿಗೆ ಬಾಧೆಯಿಲ್ಲದೆ ಸುಖವುಂಟಾಗಲಿ ! ನಾನು ಮಾಡುವ ಬ್ರಹ್ಮೋಪಾಸನದಿಂದ, ಸಮಸ್ತಕಲ್ಯಾಣಗುಣನಿಲಯನಾದ ಪರಮೇಶ್ವರನು ತೃಪ್ತಿಹೊಂದಿದ್ದರೆ, ಈ ಬ್ರಾಹ್ಮಣನಿಗೆ ಬಂದಿರತಕ್ಕ ದುಃಖವು ನಿವೃತ್ತವಾಗಲಿ! ಎಂದನು.

ಹೀಗೆ ಅಂಬರೀಷನು ಸ್ತೋತ್ರಮಾಡುತ್ತಿರುವಾಗಲೇ, ಆ ಸುದರ್ಶನಚಕ್ರವು ಶಾಂತಿಯನ್ನು ವಹಿಸಿ. ಅವನಲ್ಲಿ ಪ್ರಸನ್ನವಾಗಿ, ಮತ್ತೊಮ್ಮೆ ಆ ಅಂಬರೀಷನ ಅನುಮತಿಯನ್ನು ಪಡೆದು,ಆ ಬ್ರಾಹ್ಮಣನನ್ನು ಬಿಟ್ಟಿತು. ದೂ

ರ್ವಾಸಮಹರ್ಷಿಯೂ ಚಕ್ರತಾಪದಿಂದ ಪರಿಹೃತನಾಗಿ, ಅಂಬರೀಷಮ ಹಾರಾಜನಿಗೆ ಆಶೀರ್ವದಿಸಿ, ಅವನನ್ನು ಸ್ತೋತ್ರಮಾಡುವನು "ಆಹಾ! ರಾಜೇಂದ್ರಾ? ವಿಷ್ಣು ಭಕ್ತರ ಪ್ರಭಾವವೇನೆಂಬುದನ್ನು ಈಗ ಕಂಡೆನು ನಾನು ನಿನಗೆ ಕೇಡನ್ನು ಬಯಸಿದವನಾಗಿದ್ದರೂ, ನೀನು ನನಗೆ ಉಪಕಾರವನ್ನೇ ಮಾಡಿ, ನಿನ್ನ ಅಸಾಧಾರಣವಾದ ಔದಾರ್ಯಗುಣವನ್ನು ಪ್ರಕಾಶಗೊಳಿಸಿರುವೆ! ಭಕ್ತವತ್ಸಲನೂ, ಶರಣಾಗತರಕ್ಷಕನೂ ಆದ ಆ ಭಗವಂತನನ್ನೇ ಸ್ವಾಧೀನಪಡಿಸಿಕೊಂಡಿರುವ ನಿನ್ನಂತಹ ಮಹಾತ್ಮರಿಗೆ, ದುರ್ಲಭವಾದ ಕಾರ್ಯವೇನುಂಟು? ಯಾವನ ನಾಮಸ್ಮರಣಮಾತ್ರದಿಂದಲೇ ಮನುಷ್ಯನಿಗೆ ಸಮಸ್ತಪಾಪವೂ ನೀಗುವುವೋ, ಯಾವ ಭಗವಂತನ ಪಾದಗಳೇ ಲೋಕಪಾವನೆಯಾದ ಗಂಗಾನದಿಗೂ ಉತ್ಪತ್ತಿಸ್ಥಾನವೋ, ಅಂತಹ ಪರಮಪುರುಷನ ಭಕ್ತರಾದ ನಿಮಗೆ ಯಾವುದುತಾನೇ ದುರ್ಲಭವು? ಓ ರಾಜಾ! ನೀನು ಅಸಾಧಾರಣಕರುಣೆಯಿಂದ ನನ್ನನ್ನು ಪರಿಗ್ರಹಿಸಿದೆ! ನನ್ನ ಅಪರಾಧವನ್ನೂ ಎಣಿಸದೆ ನನಗೆ ಪ್ರಾಣದಾನವನ್ನು ಮಾಡಿ ಕಾಪಾಡಿದೆ!" ಎಂದನು ಹೀಗೆ ಸ್ತೋತ್ರಮಾಡುವ ದುರ್ವಾಸಮಹರ್ಷಿಯನ್ನು ನೋಡಿ ಅಂಬರೀಷ ಮಹಾರಾಜನು, ಸಂತೋಷದಿಂದ ಆತನ ಪಾದಕಮಲದಲ್ಲಿ ಬಿದ್ದು, ಅವನನ್ನು! ಪ್ರಸನ್ನನನ್ನಾಗಿ ಮಾಡಿಕೊಂಡು, ಅವನಿಗೆ ಭೋಜನವನ್ನು ಮಾಡಿಸಿದನು ದುರ್ವಾಸನು ಅತ್ಯಾದರಪೂರ್ವಕವಾಗಿ ಷಡ್ರಸೋಪೇತವಾದ ಆ ಆಹಾರವನ್ನು ಭುಜಿಸಿ, ಸಂತುಷ್ಟಹೃದಯನಾಗಿ, ರಾಜನಿಗೆ ಆಶೀರ್ವಾದವನ್ನು ಮಾಡಿ "ಓ ಮಹಾರಾಜಾ? ಭಗವದ್ಭಕ್ತನಾದ ನಿನ್ನಿಂದ ನಾನು ತೃಪ್ತನಾದೆನು. ನಿನ್ನಿಂದ ಅನುಗ್ರಹಿಸಲ್ಪಟ್ಟೆನು ನಿನ್ನ ದರ್ಶನದಿಂದಲೂ, ಸ್ಪರ್ಶನದಿಂದಲೂ, ನಿನ್ನ ಮಧುರಾಲಾಪದಿಂದಲೂ ಕೃತಾರ್ಥನಾದೆನು ನಿನ್ನ ಆತಿಥ್ಯದಿಂದ ಸಂತುಷ್ಟನಾಗಿರುವೆನು ನೀನು ಮಾಡಿದ ಈ ಪುಣ್ಯಕಾರ್ಯವನ್ನು ಸ್ವರ್ಗಲೋಕದಲ್ಲಿ ದೇವತಾಸ್ತ್ರೀಯರೂ ಗಾನಮಾಡುವರು. ಭೂಲೋಕನಿವಾಸಿಗಳೆಲ್ಲರೂ ಸರ್ವದಾ ನಿನ್ನ ಕೀರ್ತಿಯನ್ನು ಕೊಂಡಾಡುವರು" ಎಂದು ಸ್ತೋತ್ರಮಾಡಿ ರಾಜನ ಅನುಮತಿಯನ್ನು ಪಡೆದು, ಆಕಾಶಮಾರ್ಗವಾಗಿ ಬ್ರಹ್ಮಲೋಕಕ್ಕೆ ತೆರಳಿದನು. ಆ ಮಹರ್ಷಿಯು ಅಂ

ಬರೀಷನ ಬಳಿಗೆ ಬಂದುದು ಮೊದಲು, ಸುದರ್ಶನಚಕ್ರದ ಭಯದಿಂ
ದ ಲೋಕವೆಲ್ಲವನ್ನೂ ಸುತ್ತಿ ಹಿಂತಿರುಗಿ ಬರುವವರೆಗೆ, ಒಂದು ಸಂವತ್ಸರ
ಕಾಲವು ಕಳೆದುಹೋಯಿತು ಅದುವರೆಗೂ ಅಂಬರೀಷನು ಆ ಬ್ರಾಹ್ಮಣ
ನನ್ನು ಬಿಟ್ಟು ಭುಜಿಸಬಾರದೆಂಬ ನಿಯಮದಿಂದ, ಕೇವಲಜಲಾಹಾರನಾಗಿ,
ಆತನ ಆಗಮನವನ್ನೇ ನಿರೀಕ್ಷಿಸುತಿದ್ದನು ದೂರ್ವಾಸನು ಚಕ್ರಬಾಧೆ
ಯಿಂದ ಮುಕ್ತನಾಗಿ ತನ್ನ ಮನೆಯಲ್ಲಿ ಭೋಜನಮಾಡಿದಮೇಲೆ,
ಆ ಭುಕ್ತಶೇಷವನ್ನೇ ತಾನು ಭುಜಿಸಿ, ತನಗೆ ದೂರ್ವಾಸಮಹರ್ಷಿಯನ್ನು
ಚಕ್ರಬಾಧೆಯಿಂದ ಬಿಡಿಸತಕ್ಕ ಶಕ್ತಿಯುಂಟಾದುದು ಪರಮಾತ್ಮನ ಮಹಿ
ಮೆಯಿಂದೇ ತಿಳಿದು ಆಶ್ಚರ್ಯಪಡುತಿದ್ದನು

ಓ ರಾಜೇಂದ್ರಾ! ಸದ್ಗುಣನಿಧಿಯೆನಿಸಿಕೊಂಡ ಆ ಅಂಬರೀಷನು,
ತಾನು ಹಿಡಿದಿದ್ದ ದೃಢವಾದ ಭಗವದ್ಭಕ್ತಿಯಿಂದ, ಬ್ರಹ್ಮಲೋಕದವರೆಗಿ
ನ ಸುಖಗಳೆಲ್ಲವನ್ನೂ ನರಕದಂತೆ ಹೇಯವಾಗಿ ಭಾವಿಸುತ್ತಿದ್ದು, ಕೊನೆಗೆ
ತನಗೆ ಸಮಾನಗುಣವುಳ್ಳ ತನ್ನ ಪುತ್ರರಿಗೆ ರಾಜ್ಯವನ್ನೊಪ್ಪಿಸಿ, ಜಿತೇಂದ್ರಿ
ಯನಾಗಿ, ಸಮಸ್ತದಲ್ಲಿಯೂ ಆಶೆಯನ್ನು ತೊರೆದು, ತಪೋವನಕ್ಕೆ
ಹೋಗಿ, ಭಗವಂತನ ದೃಢಧ್ಯಾನದಿಂದ, ಸಂಸಾರವಿಮುಕ್ತನಾದನು. ಈ
ಅಂಬರೀಷೋಪಾಖ್ಯಾನವನ್ನು, ಕಿವಿಯಿಂದ ಕೇಳಿದವರೂ, ಬಾಯಿಂದ
ಹೇಳಿದವರೂ, ಮನಸ್ಸಿನಿಂದ ಸ್ಮರಿಸಿದವರೂ ಅವನಂತೆಯೇ ಭಕ್ತೋತ್ತ
ಮರೆನಿಸಿಕೊಳ್ಳುವರು ಇದು ಐದನೆಯ ಅಧ್ಯಾಯವು.

---

## ಅಂಬರೀಷವಂಶಾನುವರ್ಣನವು. ಸೌಭರಿಯ ಚರಿತ್ರೆ.

ಎಲೈ ರಾಜನೆ! ಅಂಬರೀಷನಿಗೆ ವಿರೂಪ, ಕೇತುಮಂತ, ಶಂಭುವೆಂಬ
ಮೂವರು ಮಕ್ಕಳಾದರು ಅವರಲ್ಲಿ ವಿರೂಪನಿಗೆ ಪೃಷದಶ್ವನೂ, ಅವನಿಗೆ
ರಥೀತರನೂ ಹುಟ್ಟಿದರು. ಇವನಿಗೆ ಬಹುಕಾಲದವರೆಗೆ ಸಂತಾನವಾಗ
ಲಿಲ್ಲ ಇದಕ್ಕಾಗಿ ಆ ರಾಜನು ದುಃಖಿಸುತ್ತಾ ಅಂಗಿರಸ್ಸೆಂಬ ಮುನಿಯನ್ನು
ಪ್ರಾರ್ಥಿಸಲು, ಆ ಮುನಿಯು, ವಂಶಾಭಿವೃದ್ಧಿಗಾಗಿ ರಥೀತರನ ಭಾ

ರ್ಯೆಯಲ್ಲಿ, ತನ್ನ ವೀರ್ಯದಿಂದ ಬ್ರಹ್ಮತೇಜಸ್ಸುಳ್ಳ ಕೆಲವು ಮಕ್ಕಳ
ನ್ನು ಹುಟ್ಟಿಸಿದನು ಆ ಮಕ್ಕಳು ರಥೀತರನ ಕ್ಷೇತ್ರದಲ್ಲಿ ಜನಿಸಿದುದರಿಂ
ದ ರಥೀತರಗೋತ್ರದವರೆಂದೂ, ಅಂಗೀರಸಮುನಿಯ ಬೀಜದಿಂದ ಜನಿಸಿ
ದುದರಿಂದ ಆಂಗೀರಸರೆಂದೂ ಹೆಸರನ್ನು ಪಡೆದರು ಆದುದರಿಂದಲೇ ರಥೀ
ತರನ ಸಂತತಿಯವರು, ಬ್ರಾಹ್ಮಣಕ್ಷತ್ರಿಯಜಾತಿಗಳಿಂದ ಕಲೆತಿದ್ದರು ಎಲೈ
ರಾಜಶ್ರೇಷ್ಠನೆ! ಇನ್ನು ಇಕ್ಷ್ವಾಕುವಿನ ವಂಶವನ್ನು ವರ್ಣಿಸುವೆನು ಕೇಳು
ವೈವಸ್ವತನು ಒಮ್ಮೆ ಸೀನುತ್ತಿರುವಾಗ, ಅವನ ಮೂಗಿನ ರಂಧ್ರದಿಂದ
ಇಕ್ಷ್ವಾಕುವೆಂಬ ಪ್ರಸಿದ್ಧಪುರುಷನು ಜನಿಸಿದನು ಅವನಿಗೆ ನೂರುಮಂದಿ
ಪುತ್ರರಾದರು. ಅವರಲ್ಲಿ ವಿಕುಕ್ಷಿ, ನಿಮಿ, ದಂಡಕರೆಂಬ ಹಿರಿಯಮಕ್ಕಳು
ಮೂವರೂ, ಆರ್ಯಾವರ್ತಕ್ಕೆ ಪೂರ್ವಭಾಗದಲ್ಲಿ ಸಮುದ್ರಪರ್ಯಂತವಾದ
ರಾಜ್ಯಕ್ಕೆ ಅಧಿಪತಿಗಳಾದರು. ಬೇರೆ ಇಪ್ಪತ್ತೈದುಮಂದಿ ಪುತ್ರರು ಆರ್ಯಾ
ವರ್ತದ ಪಶ್ಚಿಮಭೂಭಾಗಕ್ಕೆ ರಾಜರಾದರು ಉಳಿದ ಮಕ್ಕಳು ದಕ್ಷಿಣೋ
ತ್ತರಭಾಗಗಳಿಗೆ ರಾಜರಾದರು ಇವರೆಲ್ಲರಿಗೂ ಹಿರಿಯನಾದ ವಿಕುಕ್ಷಿಯು.
ತನ್ನ ತಂದೆಯು ನಡೆಸತಕ್ಕ, ಅಷ್ಟಕವೆಂಬ ಶ್ರಾದ್ಧಕ್ಕಾಗಿ ಮೃಗಮಾಂಸ
ವನ್ನು ಸಂಪಾದಿಸಲು ಅರಣ್ಯಕ್ಕೆ ಹೊರಟನು ಅಲ್ಲಿ ಮೃಗಗಳನ್ನು ಸಂಹರಿಸು
ತ್ತಿರುವಾಗ, ಶ್ರಮದಿಂದಲೂ, ಹಸಿವಿನಿಂದಲೂ ವಿಶೇಷವಾಗಿ ಬಳಲಿ,
ಶ್ರಾದ್ಧಾರ್ಹವಾದ ಪದಾರ್ಥವನ್ನು ತಾನು ತಿನ್ನಬಾರದೆಂಬ ಜ್ಞಾನವಿಲ್ಲದೆ,
ಆ ಮೃಗಗಳಲ್ಲಿಯೇ ಒಂದು ಮೊಲವನ್ನು ತಾನು ತಿಂದು ಉಳಿದುದನ್ನು
ತನ್ನ ತಂದೆಗೆ ತಂದೊಪ್ಪಿಸಿದನು ಇಕ್ಷ್ವಾಕುರಾಜನು ಮಾಂಸವನ್ನು
ಪ್ರೋಕ್ಷಣದಿಂದ ಪರಿಶುದ್ಧಿಮಾಡುವುದಕ್ಕಾಗಿ ವಸಿಷ್ಠನ ಮುಂದಿಡಲು, ಆ
ಮುನಿಯು ಅದನ್ನುನೋಡಿ ಸ್ವಲ್ಪಹೊತ್ತು ಯೋಚಿಸಿ, ಅದು ಉಚ್ಛಿಷ್ಟ
ವೆಂದೂ, ಶ್ರಾದ್ಧಯೋಗ್ಯವಲ್ಲವೆಂದೂ ಹೇಳಿದನು ಇಕ್ಷ್ವಾಕುವು ತನ್ನ
ಮಗನ ದುಷ್ಕಾರ್ಯವನ್ನು ತಿಳಿದು, ಕೋಪದಿಂದ ವಿಕುಕ್ಷಿಯನ್ನು ದೇಶ
ದಿಂದೋಡಿಸಿಬಿಟ್ಟನು.

ಕೊನೆಗೆ ಇಕ್ಷ್ವಾಕುವು ವಿರಕ್ತನಾಗಿ ತಪಸ್ಸನ್ನು ಮಾಡುತ್ತಾ
ಯಾವಾಗಲೂ ತನ್ನ ಗುರುವಿನೊಡನೆ ಭಗವದ್ಗುಣಗಳನ್ನು ಕೀರ್ತಿಸುತ್ತ,

ದೇಹವನ್ನು ನೀಗಿ ಮುಕ್ತಿಯನ್ನೂ ಹೊಂದಿದನು ತಂದೆಯ ಮರಣ ವಾರ್ತೆಯನ್ನು ಕೇಳಿದೊಡನೆ ವಿಕುಕ್ಷಿಯು, ತಿರುಗಿ ತನ್ನ ರಾಜ್ಯಕ್ಕೆ ಬಂದು ಧರ್ಮದಿಂದ ಭೂಮಿಯನ್ನು ಪಾಲಿಸುತ್ತ ಪರಮೇಶ್ವರಪ್ರೀತಿಗಾಗಿ ಅನೇಕಯಜ್ಞಗಳನ್ನು ನಡೆಸಿದನು ಶ್ರಾದ್ಧಕಾರ್ಯಕ್ಕಾಗಿ ತಂದ ಮೊಲವನ್ನು ತಿಂದುದರಿಂದ ಇವನಿಗೆ ಶಶಾದನೆಂದೂ ಹೆಸರಾಯಿತು ಈ ವಿಕುಕ್ಷಿಗೆ ಪುರಂಜಯನೆಂಬ ಮಗನಾದನು ಈತನು ಬಹಳ ಕೀರ್ತಿವಂತನು ಪೂರ್ವದಲ್ಲಿ ಒಮ್ಮೆ ದೇವಾಸುರರಿಗೆ ಪ್ರಬಲಯುದ್ಧವು ಸಂಭವಿಸಿತು ಆಗ ರಾಕ್ಷಸರ ಕೈ ಮೇಲಾಗಿ, ದೇವತೆಗಳು ಪರಾಜಿತರಾಗಿ ಓಡಿಹೋದರು ಅದನ್ನು ನೋಡಿ ಶ್ರೀಮಹಾವಿಷ್ಣುವು, ದೇವತೆಗಳ ಸಾಹಾಯ್ಯಕ್ಕಾಗಿ ಈ ಪುರಂಜಯನನ್ನೇ ಕಳುಹಿಸಿದನು ಪುರಂಜಯನು ಯುದ್ಧಕವಚವನ್ನು ಧರಿಸಿ ಧನುರ್ಬಾಣಗಳನ್ನು ಹಿಡಿದು ವಿಷ್ಣುತೇಜೋವಿಶಿಷ್ಟನಾಗಿ ವೃಷಭರೂಪವನ್ನು ತಾಳಿದ ಇಂದ್ರನಮೇಲೆ ಕುಳಿತು ಅನೇಕ ದೇವಸೈನ್ಯಗಳೊಡನೆ ಪಶ್ಚಿಮದಿಕ್ಕಿಗೆ ಹೊರಟು,ದೈತ್ಯರಾಜಧಾನಿಯನ್ನು ಮುತ್ತಿದನು ಅಲ್ಲಿ ದೈತ್ಯರಿಗೂ ಪುರಂಜಯನಿಗೂ ಭಯಂಕರವಾದ ಯುದ್ಧವು ನಡೆಯಿತು ಪುರಂಜಯನು ಕೊನೆಗೆ ತನ್ನ ಶೌರ್ಯೋದ್ರೇಕದಿಂದ ಅನೇಕದೈತ್ಯರನ್ನು ಕೊಂದನು ಸತ್ತುಳಿದ ಕೆಲವು ದೈತ್ಯರು, ಕಾಲಾಗ್ನಿಯಂತೆ ಕ್ರೂರವಾದ ಅವನ ಬಾಣಾಘಾತಿಗ ತಡೆಯಲಾರದೆ, ಭಯದಿಂದೋಡಿ ಪಾತಾಳವನ್ನು ಹೊಕ್ಕರು. ಹೀಗೆ ದೈತ್ಯಪುರವನ್ನು ಜಯಿಸಿದುದರಿಂದಲೇ ಇವನಿಗೆ ಪುರಂಜಯನೆಂದೂ, ಇಂದ್ರನನ್ನು ವಾಹನವಾಗಿ ಮಾಡಿಕೊಂಡಿದ್ದುದರಿಂದ ಇಂದ್ರವಾಹನನೆಂದೂ, ಎತ್ತಿನ ಹಿರೆಣಿನಮೇಲೆ ಕುಳಿತುದರಿಂದ ಕಕುತ್ಸ್ಥನೆಂದೂ ಪ್ರಸಿದ್ಧಿಯುಂಟಾಯಿತು.

ಈ ಪುರಂಜಯನಿಗೆ ಅನೇನಸ್ಸೆಂಬ ಕುಮಾರನು ಹುಟ್ಟಿದನು. ಆ ಅನೇನಸ್ಸಿಗೆ ಪೃಥುವೂ, ಪೃಥುವಿಗೆ ವಿಶ್ವಗಂಧನೂ, ವಿಶ್ವಗಂಧನಿಗೆ ಚಂದ್ರನೂ, ಚಂದ್ರನಿಗೆ ಯೌವನಾಶ್ವನೂ, ಅವನಿಗೆ ಶಾಬಸ್ತಿಯೂ ಪುತ್ರರಾಗಿ ಜನಿಸಿದರು ಈ ಶಾಬಸ್ತಿಯು, ತನ್ನ ಹೆಸರಿನಿಂದಲೇ ಒಂದು ಪಟ್ಟಣವನ್ನು ನಿರ್ಮಿಸಿ ಪ್ರಸಿದ್ಧಿಯನ್ನು ಹೊಂದಿದನು ಇವನಿಂದ ಬೃಹದಶ್ವನೂ,

ಬೃಹದಶ್ವನಿಂದ ಕುವಲಯಾಶ್ವನೂ ಹುಟ್ಟಿದರು ಮಹಾಬಲಾಢ್ಯನಾದ ಈ ಕುವಲಯಾಶ್ವನು, ತನ್ನ ಇಪ್ಪತ್ತೊಂದುಸಾವಿರಮಂದಿ ಮಕ್ಕಳುಗಳೊಡಗೂಡಿ, ಉಪಂಕಮುನಿಯ ಪ್ರೀತ್ಯರ್ಥವಾಗಿ ಧುಂಧುವೆಂಬ ದೈತ್ಯನೊಡನೆ ಯುದ್ಧಮಾಡಿ ಅವನನ್ನು ಕೊಂದನು. ಇದರಿಂದ ಇವನಿಗೆ ಧುಂಧುಮಾರನೆಂಬ ನಾಮಾಂತರವುಂಟಾಯಿತು ಆ ಯುದ್ಧದಲ್ಲಿ,ಇವನ ಮೂವರು ಮಕ್ಕಳು ಹೊರತು ಉಳಿದ ಪುತ್ರರೆಲ್ಲರೂ ಧುಂಧುವಿನ ಮುಖಾಗ್ನಿಗೆ ಆಹುತಿಯಾದರು ಆ ಮೂವರು ಮಕ್ಕಳಿಗೂ ಧೃತಾಶ್ವ, ಕಪಿಲಾಶ್ವ, ಭದ್ರಾಶ್ವರೆಂದು ಹೆಸರು ಅವರಲ್ಲಿ ಧೃತಾಶ್ವನಿಂದ ಹರ್ಯಶ್ವನೂ, ಅವನಿಂದ ಕುಂಭನೂ, ಅವನಿಂದ ಬರ್ಹಿಣಾಶ್ವನೂ, ಅವನಿಂದ ಕೃಶಾಶ್ವನೂ, ಕೃಶಾಶ್ವನಿಂದ ಸೇನಜಿತ್ತೂ, ಅವನಿಂದ ಯುವನಾಶ್ವನೂ ಹುಟ್ಟಿದರು. ಈ ಯುವನಾಶ್ವನಿಗೆ ಸಂತಾನವಿಲ್ಲದೆ ಹೋದುದರಿಂದ, ಅವನು ದುಃಖಿತನಾಗಿ, ತನ್ನ ನೂರುಮಂದಿ ಭಾರ್ಯೆಯರೊಡನೆ ವಿರಕ್ತಿಯಿಂದ ಕಾಡಿಗೆ ಹೊರಟುಹೋದನು ಅಲ್ಲಿದ್ದ ಕೆಲವು ಮಹರ್ಷಿಗಳು ಇವನ ದುಃಖಕಾರಣವನ್ನು ತಿಳಿದು ಕನಿಕರಗೊಂಡು, ಇಂದ್ರದೇವತಾತ್ಮಕವಾದ ಪುತ್ರಕಾಮೇಷ್ಟಿಯೆಂಬ ಯಾಗವನ್ನು ಅವನ ಕೈಯ್ಯಿಂದ ಮಾಡಿಸತೊಡಗಿದರು ಈ ಯಾಗವು ನಡೆಯುತ್ತಿರುವಾಗ, ಒಂದು ದಿನದ ರಾತ್ರಿಯಲ್ಲಿ, ರಾಜನು ಬಹಳ ದಾಹಪೀಡಿತನಾಗಿ, ಅಲ್ಲಲ್ಲಿ ನೀರನ್ನು ಹುಡುಕುತ್ತ, ಯಜ್ಞಶಾಲೆಗೆ ಪ್ರವೇಶಿಸಿದನು ಅಲ್ಲಿ ಬ್ರಾಹ್ಮಣರೆಲ್ಲರೂ ನಿದ್ರೆಯಿಂದ ಮೈಮರೆತು ಮಲಗಿದ್ದರು ರಾಜನು ಆ ಯಜ್ಞಶಾಲೆಯಲ್ಲಿ ಜಲಪೂರ್ಣವಾಗಿದ್ದ ಒಂದು ಕಲಶವನ್ನು ಕಂಡು, ದಾಹಾತುರದಿಂದ ಅದನ್ನು ತೆಗೆದು ಕುಡಿದುಬಿಟ್ಟನು. ಆ ಕುಂಭದಲ್ಲಿದ್ದ ಜಲವು, ಗರ್ಭೋತ್ಪತ್ತಿಗಾಗಿ ರಾಜಪತ್ನಿಯರಿಗೆ ಕುಡಿಸಬೇಕಾದ ಮಂತ್ರತೀರ್ಥವಾಗಿದ್ದಿತು. ಬೆಳಗಾದ ಮೇಲೆ ಬ್ರಾಹ್ಮಣರೆಲ್ಲರೂ ಎಂದಿನಂತೆ ಯಜ್ಞಕಾರ್ಯವನ್ನು ಪೂರೈಸುವುದಕ್ಕಾಗಿ ಬಂದು ನೋಡುವಾಗ, ತಾವು ಮಂತ್ರಜಲದಿಂದ ತುಂಬಿದ ಕಲಶವು ಬರಿದಾಗಿರುವುದನ್ನು ಕಂಡು ಬೆಜ್ಜರಬಿದ್ದು, ಅದನ್ನು ಕುಡಿದವರಾರೆಂದು ತಿಳಿಯದೆ ಚಿಂತಾಕುಲರಾಗಿ, ರಾಜನಬಳಿಗೆ ಬಂದು “ಓ ರಾಜೇಂದ್ರಾ! ಇ

ದೇಸಿದು ! ಪುತ್ರೋತ್ಪತ್ತಿಗಾಗಿ ಮಂತ್ರಿಸಿಟ್ಟ ತೀರ್ಥವನ್ನು ಕುಡಿದವರಾರು! ಈ ಕ್ಷಣವೇ ನೀನು ಅದರ ನಿಜಸ್ಥಿತಿಯನ್ನು ವಿಚಾರಿಸಿ ತಿಳಿಯಬೇಕು" ಎಂದರು. ಕೊನೆಗೆ ರಾಜನೇ ಆ ಕಾರ್ಯವನ್ನು ಮಾಡಿರುವುದಾಗಿ ತಿಳಿದುಬಂದಿತು. ಆಗ ಬ್ರಾಹ್ಮಣರೆಲ್ಲರೂ ತಮ್ಮಲ್ಲಿ ತಾವು "ಆಹಾ ! ಪುರುಷನು 'ಯಾವ ಪ್ರಯತ್ನವನ್ನು ಮಾಡಿದರೆತಾನೇ ಫಲವೇನು ?" ದೈವ ಬಲವೇ ಬಲವು ! ಎಂದು ಭಗವಂತನ ವಿಚಿತ್ರವ್ಯಾಪಾರವನ್ನು ಕುರಿತು, ವಿಸ್ಮಯಪಡುತ್ತಾ ಮುಂದಿನ ಉಪಾಯವೇನೂ ತೋರದೆ ಸುಮ್ಮನಿದ್ದರು. ಜನನಕಾಲವು ಸಮೀಪಿಸಿದೊಡನೆ ಮಹಾಪುರುಷಲಕ್ಷಣವುಳ್ಳ ಒಂದಾನೊಂದು ಶಿಶುವು ಆ ಯುವನಾಶ್ವನ ಹೊಟ್ಟೆಯ ಬಲಭಾಗವನ್ನು ಭೇದಿಸಿಕೊಂಡು ಹೊರಕ್ಕೆ ಬಂದಿತು ! ಹುಟ್ಟಿದೊಡನೆ ಆ ಶಿಶುವು ಹಸಿವಿನಿಂದ ಅಳಲಾರಂಭಿಸಿತು ಆಗ ಮಹರ್ಷಿಗಳು ಅದರ ದುಸ್ಥಿತಿಯನ್ನು ನೋಡಿ "ಅಯ್ಯೋ ಇನ್ನೇನು ಗತಿ ! ಈ ಶಿಶುವು ಸ್ತನ್ಯವಿಲ್ಲದೆ ಹಸಿವಿನಿಂದ ಗೋಳಿಡುತ್ತಿರುವುದಲ್ಲಾ ! ಇದಕ್ಕೆ ಮೊಲೆಯೂಡಿಸುವವರಾರು ! ಇದು ಯಾವುದನ್ನು ಕುಡಿದು ಬದುಕಲಿ !" ಎಂದು ಒಬ್ಬರಿಗೊಬ್ಬರು ಆಲೋಚಿಸುತಿದ್ದರು. ಇಷ್ಟರಲ್ಲಿ. ಆ ಪುತ್ರಕಾಮೇಷ್ಟಿಯಾಗಕ್ಕೆ ಅಧಿದೇವತೆಯಾದ ಇಂದ್ರನೇ ಸಾಕ್ಷಾತ್ತಾಗಿ ಬಂದು "ಎಲೆ ವತ್ಸ ! ಅಳಬೇಡ? ನನ್ನನ್ನು ಪಾನಮಾಡು. (ಮಾಂ ಧಾತಾ)" ಎಂದು ಹೇಳುತ್ತಾ ಅಮೃತವನ್ನು ತೊಟ್ಟಿಕ್ಕುತಿದ್ದ ತನ್ನ ತೋರುಬೆರಳನ್ನು ಆ ಶಿಶುವಿನ ಬಾಯಲ್ಲಿಟ್ಟನು ಇದರಿಂದ ಆ ಶಿಶುವಿಗೆ ಮಾಂಧಾತೃವೆಂದೇ ಹೆಸರಾಯಿತು.

ಇತ್ತಲಾಗಿ ಯವನಾಶ್ವನ ಜಠರವು ಸೀಳಿ ಹೋಗಿದ್ದರೂ, ಅಲ್ಲಿದ್ದ ಮಹರ್ಷಿಗಳ ಅನುಗ್ರಹದಿಂದಲೂ, ದೈವಾನುಗ್ರಹದಿಂದಲೂ ಅವನು ಸಾಯದೆ ಬದುಕಿಕೊಂಡನು. ಮತ್ತು ಆ ರಾಜನು ಆಗಿನಿಂದ ದೃಢತಪಸ್ಸನ್ನು ಹಿಡಿದು ಕೊನೆಗೆ ಮುಕ್ತಿಯನ್ನು ಹೊಂದಿದನು.

ಈ ಯುವನಾಶ್ವನ ಪುತ್ರನಾದ ಮಾಂಧಾತನು, ರಾವಣಾಸುರನೇ ಮೊದಲಾದ ಅನೇಕ ಶತ್ರುಗಳನ್ನು ಭಯಪಡಿಸಿದವನಾದುದರಿಂದ, ದೇವೇಂದ್ರನು ಅವನಿಗೆ ತ್ರಸದ್ದಸ್ಯುವೆಂಬ ಬಿರುದನ್ನು ಕೊಟ್ಟನು ಈತನು ದೊ

ಡ್ಡ ಚಕ್ರವರ್ತಿಯೆನಿಸಿ ಸಪ್ತದ್ವೀಪಾತ್ಮಕವಾದ ಸಮಸ್ತಭೂಮಿಯನ್ನೂ ತನ್ನ ನಿರಂಕುಶವಾದ ಪರಾಕ್ರಮದಿಂದ ಸ್ವಾಧೀನಪಡಿಸಿಕೊಂಡು, ಧರ್ಮ ದಿಂದ ಪಾಲಿಸಿದನು ಆತ್ಮಜ್ಞಾನವುಳ್ಳವನಾಗಿ, ಬಹುದಕ್ಷಿಣೆಗಳುಳ್ಳ ಅ ನೇಕಯಜ್ಞಗಳನ್ನೂ ನಡೆಸಿದನು ಹೀಗೆ ಕರ್ಮಜ್ಞಾನಗಳೆರಡರಿಂದಲೂ ಸ ರ್ವಾಂತರಾತ್ಮನಾದ ಶ್ರೀಮನ್ನಾರಾಯಣನನ್ನು ಸಂತೋಷಪಡಿಸು ತಿದ್ದನು ಮತ್ತು ಯಾಗದಲ್ಲಿ ಉಪಯೋಗಿಸಲ್ಪಡುವ ಪುರೋಡಾಶಾದಿ ದ್ರವ್ಯಗಳೂ, ವೇದಮಂತ್ರಗಳೂ, ಯಜ್ಞಕಲ್ಪಗಳೂ, ಯಜಮಾನನೂ, ಋತ್ವಿಕ್ಕುಗಳೂ,ಧರ್ಮಗಳೂ ದೇಶಕಾಲಗಳೂ ಇವೆಲ್ಲವೂ ಯಾವನ ಸ್ವರೂ ಪವೆನಿಸಿಕೊಂಡಿರುವುವೋ ಅಂತಹ ಪರಮೇಶ್ವರನನ್ನು, ತನ್ನ ಸಮಸ್ತ ವ್ಯಾಪಾರಗಳಿಂದಲೂ ಸಂತೋಷಪಡಿಸುತಿದ್ದನು ಈ ಭೂಮಿಯಲ್ಲಿ ಸೂ ರ್ಯಗತಿಯು ಎಲ್ಲಿಂದ ಎಲ್ಲಿಯವರೆಗೆ ನಡೆಯುವುದೋ, ಅವೆಲ್ಲವೂ ಮಾಂ ಧಾತೃವಿನ ರಾಜ್ಯವೆನಿಸಿಕೊಂಡಿದ್ದಿತು. ಈ ಮಾಂಧಾತೃಚಕ್ರವರ್ತಿಗೆ, ಶತ ಬಿಂದುವಿನ ಮಗಳಾದ ಬಿಂದುಮತಿಯೆಂಬ ಪತ್ನಿಯಲ್ಲಿ, ಪುರುಕುತ್ಸ, ಅಂಬ ರೀಷ, ಮುಚುಕುಂದರೆಂಬ ಮೂವರು ಪುತ್ರರೂ, ಐವತ್ತುಮಂದಿ ಕನ್ಯೆಯ ರೂ ಹುಟ್ಟಿದರು ಈ ಕನ್ಯೆಯರೆಲ್ಲರೂ ಸೌಭರಿಯೆಂಬ ಮಹರ್ಷಿಯನ್ನು ವಿವಾಹಮಾಡಿಕೊಂಡರು ಈ ವೃತ್ತಾಂತವನ್ನ ವಿವರಿಸುವೆನು ಕೇಳು.

ಸೌಭರಿಯೆಂಬ ಒಬ್ಬಾನೊಬ್ಬ ಮಹರ್ಷಿಯಿದ್ದನು ಮಹಾತಪಸ್ವಿಯಾ ದ ಈ ಮುನಿಯು, ಒಮ್ಮೆ ಯಮುನಾನದಿಯಲ್ಲಿ ಮುಳುಗಿ ಆ ನೀರಿನೊಳಗೆ ಕುಳಿತು ತಪಸ್ಸುಮಾಡುತಿದ್ದನು. ಈ ಸಮಯದಲ್ಲಿ ಒಂದು ದೊಡ್ಡಮತ್ಸ್ಯ ವು ಹೆಣ್ಣುಮೀನಿನೊಡನೆ ಸೇರಿ ಸಂಭೋಗಸುಖವನ್ನನುಭವಿಸುತಿತ್ತು ಅದ ನ್ನು ನೋಡಿ ಸೌಭರಿಯ ಮನಸ್ಸು ಕದಲಿತು. ತಾನೂ ಕೆಲವುಕಾಲದವರೆಗೆ ಆ ವಿಧವಾದ ಸ್ತ್ರೀಸಂಭೋಗಸುಖವನ್ನನುಭವಿಸಬೇಕೆಂದು ಬಯಸಿ, ಆ ಕ್ಷಣವೇ ತನ್ನ ತಪಸ್ಸನ್ನು ಬಿಟ್ಟು, ಮಾಂಧಾತೃವಿನ ಬಳಿಗೆ ಬಂದು. “ ರಾ ಜಾ ! ನಿನಗೆ ಐವತ್ತುಮಂದಿ ಕುಮಾರಿಯರುಂಟಲ್ಲವೆ ?. ಅವರಲ್ಲಿ ಒಬ್ಬ ಕು ಮಾರಿಯನ್ನಾದರೂ ನನಗೆ ವಿವಾಹಮಾಡಿ ಕೊಡು.” ಎಂದು ಯಾಚಿಸಿ ದನು. ಮುಪ್ಪಿನಿಂದ ಕುರೂಪಿಯಾದ ಆ ವೈದಿಕಬ್ರಾಹ್ಮಣನ ವೇಷವನ್ನು

ನೋಡಿದಾಗಲೇ ಮನಸ್ಸಿಗೆ ಅಸಹ್ಯವುಂಟಾಗವಂತಿದ್ದರೂ, ಧಾರ್ಮಿಕಶಿ ರೋಮಣಿಯಾದ ಆ ಚಕ್ರವರ್ತಿಯು, ಆ ಮಹರ್ಷಿಯನ್ನು ತಿರಸ್ಕರಿಸಲಾರದೆ ವಿನಯದಿಂದ ಹೀಗೆಂದು ಹೇಳುವನು. “ಓ ಮುನೀಂದ್ರಾ! ನನ್ನ ಐವತ್ತುಕುಮಾರಿಯರನ್ನೂ ನಿನ್ನ ಮುಂದೆ ತಂದು ನಿಲ್ಲಿಸುವೆನು ಅವರಲ್ಲಿ ಯಾರು ಮನಃಪೂರ್ವಕವಾಗಿ ನಿನ್ನನ್ನು ವರಿಸಬೇಕೆಂದು ಕೋರುವರೋ ಅವರನ್ನು ನೀನು ಪರಿಗ್ರಹಿಸಬಹುದು ಈ ವಿಷಯದಲ್ಲಿ ನನ್ನದೇನೂ ಅಡ್ಡಿಯಿಲ್ಲ” ಎಂದನು. ಈ ಮಾತನ್ನು ಕೇಳಿದಾಗ ಸೌಭರಿಯು ಮನಸ್ಸಿನಲ್ಲಿ ಸಂದೇಹದಿಂದ ತನ್ನಲ್ಲಿ ತಾನು, “ಈ ರಾಜನು ಸ್ತ್ರೀಯರಿಗೆ ಅಸಹ್ಯಕರವಾದ ನನ್ನ ರೂಪವನ್ನು ನೋಡಿ ಕನ್ಯಾದಾನಮಾಡುವುದಕ್ಕೆ ಹಿಂಜರಿಯುವಂತಿದೆ! ಸುಕ್ಕುಬಿದ್ದ ದೇಹದಿಂದಲೂ, ನರೆತ ಕೂದಲುಗಳಿಂದಲೂ ವಿಕಾರರೂಪವುಳ್ಳ ವೃದ್ಧನಾದ ನನ್ನನ್ನು ತನ್ನ ಕನ್ಯೆಯರಲ್ಲಿ ಯಾರೂ ವರಿಸಲಾರರೆಂಬ ನಿಶ್ಚಯದಿಂದಲೇ, ಈ ರಾಜನು ತನ್ನಮೇಲಿನ ತಪ್ಪನ್ನು ಕಳೆದುಕೊಳ್ಳುವುದಕ್ಕಾಗಿ, ಈ ಸ್ವಯಂವರವೆಂಬ ನೆವವನ್ನು ಹೇಳಿ ನನ್ನನ್ನು ನಿರಾಕರಿಸಿರುವನು. ಆದರೇನು ? ಇರಲಿ! ಈಗ ನಾನು ನನ್ನ ತಪಃಪ್ರಭಾವದಿಂದ ದೇವಸ್ತ್ರೀಯರನ್ನೂ ಮೋಹಗೊಗೊಳಿಸತಕ್ಕ ಸುಂದರರೂಪವನ್ನು ಧರಿಸಬಲ್ಲೆನು. ಹೀಗಿರುವಾಗ ಸಾಮಾನ್ಯರಾದ ಈ ಮನುಷ್ಯಸ್ತ್ರೀಯರನ್ನು ಮೋಹಗೊಳಿಸುವುದೇನಸಾಧ್ಯವು?” ಎಂದು ನಿಶ್ಚಯಿಸಿಕೊಂಡು ರಾಜನ ಅಭಿಪ್ರಾಯಕ್ಕೆ ಸಮ್ಮತಿಸಿ, ಅವನೊಡನೆ ರಾಜಕನ್ಯೆಯರಿರತಕ್ಕ ಅಂತಃಪುರಕ್ಕೆ ಪ್ರವೇಶಿಸಿದನು ಅಂತಃಪುರದ ಬಾಗಿಲಿಗೆ ಬರುವಷ್ಟರಲ್ಲಿಯೇ ಅವನ ದೇಹಕ್ಕೆ ಅದ್ಭುತಸೌಂದರ್ಯವು ಜನಿಸಿತು ಅಲ್ಲಿದ್ದ ರಾಜಕನ್ಯೆಯರೆಲ್ಲರೂ ಇವನ ರೂಪಾತಿಶಯಕ್ಕೂ, ಎಳಯೌವನಕ್ಕೂ ಮೋಹಿತರಾಗಿ, ಸುತ್ತಲೂ ನೆರೆದು ಅವನನ್ನೇ ನಟ್ಟಕಣ್ಣಿಂದ ನೋಡುತಿದ್ದರು. ಆ ತರುಣನು ಕನ್ಯಾರ್ಥಿಯಾಗಿ ಬಂದವನೆಂಬುದನ್ನು ತಿಳಿದು, ಒಬ್ಬೊಬ್ಬರೂ ಅವನನ್ನು ವರಿಸಬೇಕೆಂಬ ಆತುರದಿಂದ,ನಾನು ತಾನೆಂದು ಮೇಲೆಬಿದ್ದು ಬರುತಿದ್ದರು. “ಇವನು ನನಗೆ ತಕ್ಕ ಪತಿಯೇ ಹೊರತು ನಿಮಗಲ್ಲ” ವೆಂದು ಪ್ರತಿಯೊಬ್ಬರೂ, ಸಹೋದರಸ್ನೇ

ಹವನ್ನೂ ಮರೆತು, ಮೇಲೆಬಿದ್ದು ಬರುತ್ತ ಕಲಹವನ್ನಾರಂಭಿಸಿದರು ಕೊನೆಗೆ ಆ ಐವತ್ತುಮಂದಿ ರಾಜಕನ್ಯೆಯರೂ ಹಟದಿಂದ ಅವನನ್ನೇ ವರಿಸಿಬಿಟ್ಟರು. ಆಮೇಲೆ ಸೌಭರಿಯು ಆ ಐವತ್ತುಮಂದಿ ರಾಜಕುಮಾರಿಯರನ್ನೂ ತನ್ನ ಆಶ್ರಮಕ್ಕೆ ಕರೆತಂದು, ಅಲ್ಲಿ ಅವರ ವಾಸಕ್ಕಾಗಿ ತನ್ನ ತಪೋಮಹಿಮೆಯಿಂದ ಐವತ್ತು ಅರಮನೆಗಳನ್ನು ನಿರ್ಮಿಸಿ, ಒಬ್ಬೊಬ್ಬರನ್ನೂ ಪ್ರತ್ಯೇಕವಾಗಿ ಒಂದೊಂದು ಮನೆಯಲ್ಲಿರಿಸಿದನು. ಅಲ್ಲಿನ ಭೋಗಸಾಮಗ್ರಿಗಳನ್ನು ಕೇಳಬೇಕೆ ? ಒಂದೊಂದು ಮನೆಯ ಸುತ್ತಲೂ ಅಂದವಾದ ವಿಹಾರೋದ್ಯಾನಗಳು ! ಒಂದೊಂದು ಉದ್ಯಾನವನದಲ್ಲಿಯೂ ಸ್ವಚ್ಛಜಲವುಳ್ಳ ಕಮಲಸರೋವರಗಳು ! ಆ ಸರೋವರದ ನಾನಾಭಾಗಗಳಲ್ಲಿಯೂ ಕಿವಿಗಿಂಪಾಗಿ ಕೂಗುತ್ತಿರುವ ಪಕ್ಷಿಮಿಥುನಗಳು ! ಎಲ್ಲಿ ನೋಡಿದರೂ ಭ್ರಮರಝಂಕಾರಗಳು ! ಒಂದೊಂದು ಮನೆಯಲ್ಲಿಯೂ ಮನಸ್ಸಿಗೆ ಬೇಕಾದ ವಸ್ತ್ರಾಭರಣಗಳು ! ಬೇಕುಬೇಕಾದ ಅನುಲೇಪನದ್ರವ್ಯಗಳು ! ಚಿತ್ರವಿಚಿತ್ರಗಳಾದ ಪುಷ್ಪಮಾಲಿಕೆಗಳು ! ಯಥೇಷ್ಟವಾದ ಆಹಾರಸಾಮಗ್ರಿಗಳು ! ಅಮೂಲ್ಯವಾದ ಶಯನಾಸನಗಳು ! ಎಲ್ಲಿ ನೋಡಿದರೂ, ಸರ್ವಾಲಂಕಾರಭೂಷಿತರಾಗಿ ಹೇಳಿದ ಕೆಲಸವನ್ನು ಮಾಡುವುದಕ್ಕೆ ಕೈಕಟ್ಟಿ ಸಿದ್ಧರಾಗಿ ನಿಂತಿರುವ ಸ್ತ್ರೀಪುರುಷರು ! ಮನೆಮನೆಯ ಬಾಗಿಲಲ್ಲಿಯೂ ಜಯಘೋಷದಿಂದ ಗಾನಮಾಡುತ್ತಿರುವ ಸ್ತುತಿಪಾಠಕರು! ಹೀಗೆ ಸರ್ವಸೌಭಾಗ್ಯಸಮೃದ್ಧವಾದ ಆ ಅರಮನೆಗಳಲ್ಲಿ ಸೌಭರಿಯು ತನ್ನ ಸ್ತ್ರೀಯರೊಡಗೂಡಿ, ಮನಸ್ಸಿಗೆ ಬೇಕಾದ ಭೋಗಗಳನ್ನನುಭವಿಸುತ್ತ ಸುಖದಿಂದಿದ್ದನು. ಸಪ್ತದ್ವೀಪಾವೃತವಾದ ಸಮಸ್ತಭೂಮಿಯನ್ನೂ ಏಕಾಧಿಪತ್ಯದಿಂದಾಳುತಿದ್ದ ಮಾಂಧಾತನೂಕೂಡ ಸಾರ್ವಭೌಮಪದವಿಯಲ್ಲಿದ್ದವರಿಗೂ ದುರ್ಲಭಗಳಾದ ಭೋಗಸಾಮಗ್ರಿಗಳಿಂದ ತುಂಬಿದ ತನ್ನ ಕುಮಾರಿಯರ ಅರಮನೆಯನ್ನು ನೋಡಿದಾಗ, ಇದರಮುಂದೆ ತನ್ನ ಸಾಮ್ರಾಜ್ಯಭೋಗವೂ ಅತ್ಯಲ್ಪವೆಂದು ತಿಳಿದು, ತನ್ನ ಹೆಮ್ಮೆಯನ್ನು ಬಿಟ್ಟು ಆಶ್ಚರ್ಯಭರಿತನಾಗುತಿದ್ದನು ಹೀಗೆ ಸೌಭರಿಯು ಗೃಹಸ್ಥಾಶ್ರಮವನ್ನು ಹಿಡಿದು, ಸರ್ವತೋಮುಖವಾಗಿ ಇಂದ್ರಿಯಸುಖಗಳನ್ನನುಭವಿಸುತ್ತಿದ್ದನು.

ತುಪ್ಪವನ್ನು ಸುರಿದಷ್ಟೂ ಅಗ್ನಿಯು ಮೇಲೆಮೇಲೆ ಉರಿಯುವಂತೆ, ಎಷ್ಟೆರಿ ಷ್ಟುವಿಧದಿಂದ ಭೋಗಗಳನ್ನನುಭವಿಸುತಿದ್ದರೂ ಸೌಭರಿಗೆ ಮೇಲೆಮೇಲೆ ಭೋಗದಾಸೆಯೇ ಹೆಚ್ಚುತ್ತಬಂದಿತು. ಹೀಗೆ ಬಹುಕಾಲವು ಕಳೆದಮೇಲೆ, ಆ ಮಹರ್ಷಿಯು ಒಂದಾನೊಂದುದಿನದಲ್ಲಿ ಸುಖಾಸೀನನಾಗಿ ಕುಳಿತಿದ್ದಾಗ ಅವನಿಗೆ ತನ್ನ ಪೂರ್ವಸ್ಥಿತಿಯು ಸ್ಮರಣೆಗೆ ಬಂದಿತು. ಹಿಂದೆ ತಾನು ಯ ಮುನಾನದಿಯಲ್ಲಿ ಮುಳುಗಿ ತಪಸ್ಸುಮಾಡುತಿದ್ದಾಗ ಗಂಡುಹೆಣ್ಣು ಮೀ ನುಗಳೆರಡೂ ಸೇರಿದ್ದುದನ್ನು ನೋಡಿ, ತನಗೆ ಬುದ್ಧಿಚಾಂಚಲ್ಯವುಂಟಾದು ದನ್ನು ತಿಳಿದು ತನ್ನಲ್ಲಿ ತಾನು “ಆಹಾ! ಏನಿದು! ನನ್ನಸ್ಥಿತಿಯೇನು? ನಾನು ಈಗ ಮಾಡುತ್ತಿರುವ ಕಾರ್ಯವೇನು? ಅಯ್ಯೋ! ಮಹಾತಪಸ್ವಿಯೆನಿಸಿ ಕೊಂಡಿದ್ದ ನಾನು ಸ್ವಬುದ್ಧಿಪೂರ್ವಕವಾಗಿಯೇ ಹೀಗೆ ಆತ್ಮನಾಶವನ್ನುಂ ಟುಮಾಡಿಕೊಂಡೆನಲ್ಲಾ! ನಾನು ಕೇವಲಬುದ್ಧಿಹೀನನು! ಹಾಗಿಲ್ಲದಪಕ್ಷ ದಲ್ಲಿ ನೀರಿನಲ್ಲಿ ವಿಹರಿಸುತಿದ್ದ ಮತ್ಸ್ಯದಂಪತಿಗಳನ್ನು ನೋಡಿದಮಾತ್ರಕ್ಕೆ ಇಂದ್ರಿಯಚಾಪಲ್ಯಕ್ಕೊಳಗಾಗಿ, ಅತ್ಯಲ್ಪವಾದ ವಿಷಯಸುಖಕ್ಕಾಸೆಪಟ್ಟು, ಬಹುಕಾಲದಿಂದ ನಾನು ಮನಸ್ಸಿನಲ್ಲಿ ಹಿಡಿದಿದ್ದ ಆ ಪರಬ್ರಹ್ಮವ ನ್ನು ಬಿಟ್ಟುಬರುತಿದ್ದೆನೆ? ನಾನು ವಿವೇಕಿಯಾಗಿದ್ದರೆ ಹೀಗೆ ಪ್ರವರ್ತಿಸು ತ್ತಿರಲಿಲ್ಲ! ಮುಖ್ಯವಾಗಿ ಮೋಕ್ಷಾಪೇಕ್ಷೆಯುಳ್ಳವನು ಕುಟುಂಬಿಗಳನ್ನು ಕಣ್ಣೆತ್ತಿಯೂ ನೋಡಬಾರದು ಕ್ಷಣಮಾತ್ರವೂ ಅವರ ಸಂಗಡ ಸೇರಬಾರ ದು ತನ್ನ ಇಂದ್ರಿಯಗಳನ್ನು ಶಬ್ದಾದಿವಿಷಯಗಳಕಡೆಗೆ ಹೋಗದಂತೆ ಸರ್ವಪ್ರಯತ್ನದಿಂದಲೂ ತಡೆದಿಡಬೇಕು. ವಿವಿಕ್ತವಾದ ರಹಸ್ಯಸ್ಥಳದಲ್ಲಿ ದ್ದೇ ಆ ಪರಮಾತ್ಮನ ಸ್ವರೂಪವನ್ನು ಮನಸ್ಸಿನಲ್ಲಿ ಸಾಕ್ಷಾತ್ಕರಿಸಬೇಕು. ಇತರಪ್ರಾಣಿಗಳ ಸಂಗವನ್ನೇ ತ್ಯಜಿಸಬೇಕು. ಒಂದುವೇಳೆ ಸಹವಾಸವ ನ್ನು ಮಾಡಬೇಕಾದರೂ ಸಾಧುಗಳೊಡನೆಯೂ,ಜಿತೇಂದ್ರಿಯರಾದ ತಪಸ್ವಿ ಗಳೊಡನೆಯೂ, ಭಗವದ್ಭಕ್ತರೊಡನೆಯೂ ಸಂಗವನ್ನು ಮಾಡಬಹುದು. ಅಯ್ಯೋ! ನನ್ನ ದುರವಸ್ಥೆಯನ್ನು ನೋಡಿರಿ! ಮೊದಲು ಬಹುಕಾಲದವರೆಗೆ ನಾನು ಒಂಟಿಯಾಗಿಯೇ ತಪಸ್ಸುಮಾಡುತಿದ್ದರೂ, ಕೊನೆಗೆ ನನ್ನ ದುರ ದೃಷ್ಟದಿಂದ, ನೀರಿನಲ್ಲಿದ್ದ ಮತ್ಸ್ಯದಂಪತಿಗಳನ್ನು ನೋಡಬೇಕಾಗಿ ಬಂದಿ

ತು ಇದರಿಂದ ವಿಷಯಾಭಿಲಾಷೆಗೊಳಪಟ್ಟು, ಐವತ್ತುಮಂದಿ ಹೆಂಡತಿ ಯರನ್ನು ಕಟ್ಟಿಕೊಳ್ಳುವಂತಾಯಿತು ಅವರಲ್ಲಿ ಐವತ್ತುಸಾವಿರಮಕ್ಕಳ ನ್ನೂ ಪಡೆದೆನು. ಇಷ್ಟಾದರೂ ನನ್ನ ಮನಸ್ಸು ವಿಷಯಸುಖದಲ್ಲಿ ತೃಪ್ತಿ ಯಿಲ್ಲದೆ, ಮೋಹಾಕುಲಿತವಾಗಿ ಯಾವಾಗಲೂ ಮಿಥುನಸುಖದಲ್ಲಿಯೇ ಆ ಸಕ್ತವಾಗಿರುವುದು ಶಬ್ದಾದಿವಿಷಯಗಳನ್ನೇ ಪುರುಷಾರ್ಥವೆಂದು ತಿಳಿಯು ತ್ತಿರುವುದು! ಆಹಾ! ಎಂತಹ ಅನರ್ಥಕ್ಕೆ ಗುರಿಯಾದೆನು? ಈಗ ಎಷ್ಟು ಪರಿತಪಿಸಿದರೇನು? ಮುಖ್ಯವಾಗಿ ಮುಮುಕ್ಷುವಾದವನು ಮೊದಲು ಸಂಗ ವನ್ನು ತ್ಯಜಿಸಬೇಕು" ಎಂದು ನಿಶ್ಚಯಿಸಿಕೊಂಡನು ಹೀಗೆ ಸೌಭರಿಯು ಕೆಲವುಕಾಲದವರೆಗೆ ಗೃಹಧರ್ಮದಲ್ಲಿದ್ದು, ಕೊನೆಗೆ ವಿರಕ್ತನಾಗಿ, ಕಾಮ್ಯ ಕರ್ಮಗಳೆಲ್ಲವನ್ನೂ ಬಿಟ್ಟು, ತಪೋವನಕ್ಕೆ ಹೋದನು ಪತಿವ್ರತೆಯರಾದ ಅವನ ಭಾರ್ಯೆಯರೂ ಅವನನ್ನೇ ಹಿಂಬಾಲಿಸಿಹೋದರು. ಅಲ್ಲಿ ಸೌಭರಿ ಯು ಮನಸ್ಸನ್ನು ಪರಬ್ರಹ್ಮದಲ್ಲಿ ದೃಢವಾಗಿ ನೆಲೆಗೊಳಿಸಿ, ಉಗ್ರತಪ ಸ್ಸನ್ನು ಹಿಡಿದು ದೇಹವನ್ನು ದಂಡಿಸುತ್ತ, ಕೊನೆಗೆ ಆಹವನೀಯಾದ್ಯ ಗ್ನಿಗಳೊಡನೆ ತನ್ನ ಆತ್ಮನನ್ನು ಪರಮಾತ್ಮನಲ್ಲಿ ಸೇರಿಸಿದಂತೆ ಅನುಸಂ ಧಾನಮಾಡಿ ದೇಹವನ್ನು ನೀಗಿದನು ಅವನ ಪತ್ನಿಯರೂ ಹಾಗೆಯೇ ಬ್ರಹ್ಮೋಪಾಸನವನ್ನು ಮಾಡುತ್ತ, ತಮ್ಮ ಪತಿಯ ಅನುಗ್ರಹಬಲದಿಂದ ಲೂ, ಪರಮಾತ್ಮಧ್ಯಾನಬಲದಿಂದಲೂ, ಕರ್ಮಶೇಷವನ್ನು ಕಳೆದು ನಂದಿ ಹೋದ ಅಗ್ನಿಯನ್ನು ಅಗ್ನಿಜ್ವಾಲೆಗಳು ಹಿಂಬಾಲಿಸಿ ಹೋಗುವಂತೆ ತಮ್ಮ ಪತಿಯೊಡನೆ ಮುಕ್ತಿಯನ್ನು ಹೊಂದಿದರು ಇದು ಆರನೆಯ ಅಧ್ಯಾಯವು.

---

### ಮಾಂಧಾತೃವಂಶಾನುಕ್ರಮವು.
### ತ್ರಿಶಂಕು ಹರಿಶ್ಚಂದ್ರರ ವೃತ್ತಾಂತವು

ಓ ರಾಜೇಂದ್ರಾ! ಮಾಂಧಾತೃವಿಗೆ ಮೂವರು ಗಂಡುಮಕ್ಕಳಾದ ರಷ್ಟೆ? ಅವರಲ್ಲಿ ಅಂಬರೀಷನೆಂಬವನನ್ನು ಅವನ ಪಿತಾಮಹನಾದ ಯುವ ನಾಶ್ವನೇ ಪುತ್ರಭಾವದಿಂದ ಸ್ವೀಕರಿಸಿದನು ಈ ಕಾರಣದಿಂದ ಅಂಬರೀಷ ನಿಗೆ ಹುಟ್ಟಿದ ಮಗನೂ, ತಾತನ ಹೆಸರಿನಿಂದ ಯುವನಾಶ್ವನೆಂದೇ ಕರೆಯ

ಲ್ಪಟ್ಟನು ಈ ಯುವನಾಶ್ವನಿಗೆ ಹರಿತನೆಂಬ ಮಗನಾದನು. ಆದರೆ ಅಂಬರೀಷ, ಯುವನಾಶ್ವ, ಹರಿತರೆಂಬ ಈ ಮೂವರೂ ಮಾಂಧಾತೃವಿನ ಪ್ರವರಕ್ಕೇ ಸೇರಿದವರು. ಪುರುಕುತ್ಸನು ನಾಗಕನ್ನಿಕೆಯಾದ ನರ್ಮದೆಯೆಂಬವಳನ್ನು ವಿವಾಹಮಾಡಿಕೊಂಡನು ಈ ನರ್ಮದೆಯು ಪತಿಪ್ರೇಮವನ್ನು ಸಂಪಾದಿಸಿಕೊಂಡು, ತನ್ನ ಸಹೋದರನಾದ ಸರ್ಪರಾಜನ ಕೋರಿಕೆಯಮೇಲೆ ಅವನನ್ನು ಪಾತಾಳಕ್ಕೆ ಕರೆದುಕೊಂಡುಹೋದಳು ವಿಷ್ಣುಶಕ್ತಿಸಂಪನ್ನನಾಗಿದ್ದ ಆ ಪುರುಕುತ್ಸನು, ಅಲ್ಲಿದ್ದಾಗ ನಾಗಲೋಕಕ್ಕೆ ಬಾಧೆಯನ್ನು ಕೊಡುತಿದ್ದ ದುರ್ಜಯರಾದ ಕೆಲವು ಗಂಧರ್ವರನ್ನು ಕೊಂದನು ಇದರಿಂದ ನಾಗರು ಇವನಲ್ಲಿ ಪ್ರಸನ್ನರಾಗಿ, ಇವನಿಗೆ ಎಂತಹ ವಿಷಸರ್ಪಗಳಿಂದಲೂ ಭಯವಿಲ್ಲದಂತೆ ವರವನ್ನು ಕೊಟ್ಟರು ಓ ರಾಜೇಂದ್ರಾ! ಈಗಲೂ ಈ ಕಥೆಯನ್ನು ಕೇಳಿದವರಿಗೂ, ಹೇಳಿದವರಿಗೂ, ಎಷ್ಟುಮಾತ್ರವೂ ಸರ್ಪಭಯವಿರದು ಆ ಪುರುಕುತ್ಸನಿಂದ ತ್ರಸದಸ್ಯುವೂ, ತ್ರಸದ್ದಸ್ಯುವಿನಿಂದ ಅನರಣ್ಯನೂ, ಅವನಿಂದ ಹರ್ಯಶ್ವನೂ, ಅತನಿಂದ ತ್ರ್ಯರುಣನೂ ಹುಟ್ಟಿದರು ಆ ತ್ರ್ಯರುಣನಿಂದ ತ್ರಿಬಂಧುರನೂ, ಅವನಿಂದ ಸತ್ಯವ್ರತನೂ, ಸತ್ಯವ್ರತನಿಂದ ತ್ರಿಶಂಕುವೂ ಜನಿಸಿದರು ಈ ತ್ರಿಶಂಕುವೇ ತನ್ನ ಕುಲಗುರುವಾದ ವಸಿಷ್ಠನ ಶಾಪದಿಂದ ಚಂಡಾಲತ್ವವನ್ನು ಹೊಂದಿ, ವಿಶ್ವಾಮಿತ್ರನ ತಪಃಪ್ರಭಾದಿಂದ ಮನುಷ್ಯಶರೀರದೊಡನೆಯೇ ಸ್ವರ್ಗಕ್ಕೆ ಹೊರಟು, ಈಗಲೂ ನಕ್ಷತ್ರರೂಪದಿಂದ ಕಾಣಿಸುತ್ತಿರುವನು ಈ ತ್ರಿಶಂಕುವನ್ನು ವಿಶ್ವಾಮಿತ್ರನು ಸ್ವರ್ಗಕ್ಕೇರಿಸಿದಾಗ, ಚಂಡಾಲನಾಗಿದ್ದ ಆತನಿಗೆ ಸ್ವರ್ಗಪ್ರವೇಶವು ಯೋಗ್ಯವಲ್ಲವೆಂದು ದೇವತೆಗಳು ಅವನನ್ನು ಕೆಳಕ್ಕೆ ನೂಕಿದರು ಆಗ ತ್ರಿಶಂಕುವು ತಲೆಕೆಳಗಾಗಿ ಬೀಳುತ್ತ "ತ್ರಾಹಿ! ತ್ರಾಹಿ!" ಎಂದು ವಿಶ್ವಾಮಿತ್ರನನ್ನು ಕುರಿತು ಮೊರೆಯಿಟ್ಟನು. ಆಗ ವಿಶ್ವಾಮಿತ್ರನು ಅವನಲ್ಲಿ ಕನಿಕರಗೊಂಡು, ತನ್ನ ತಪೋಮಹಿಮೆಯಿಂದ ಅವನಿಗಾಗಿಯೇ ಬೇರೊಂದು ಸ್ವರ್ಗವನ್ನು ಸೃಷ್ಟಿಸಿ, ಅದಕ್ಕೆ ತ್ರಿಶಂಕುವನ್ನೇ ಇಂದ್ರನನ್ನಾಗಿ ಮಾಡಿ, ಅವನನ್ನು ಕೆಳಗೆ ಬೀಳದಂತೆ ಅಲ್ಲಿಯೇ ನಿಲ್ಲಿಸಿದನು ಈ ತ್ರಿಶಂಕುವಿನ ಮಗನೇ ಪ್ರಸಿದ್ಧನಾದ ಹರಿಶ್ಚಂದ್ರ

ನು. ಈತನ ನಿಮಿತ್ತವಾಗಿಯೇ ವಸಿಷ್ಠವಿಶ್ವಾಮಿತ್ರರಿಗೆ ವಿವಾದವುಂಟಾಗಿ, ಅವರಿಬ್ಬರೂ ಪಕ್ಷಿರೂಪದಿಂದ ಅನೇಕಸಂವತ್ಸರಗಳವರೆಗೆ ಹೋರಾಡಿದರು. ವಿಶ್ವಾಮಿತ್ರನು ಹರಿಶ್ಚಂದ್ರನ ಸತ್ಯಕ್ಕೆ ಭಂಗವನ್ನುಂಟುಮಾಡುವುದಾಗಿ ಇಂದ್ರಸಭೆಯಲ್ಲಿ ಪ್ರತಿಜ್ಞೆಮಾಡಿದನು. ಆ ಪ್ರತಿಜ್ಞೆಯನ್ನು ಪೂರೈಸುವದಕ್ಕಾಗಿ ಹರಿಶ್ಚಂದ್ರನಬಳಿಗೆ ಬಂದು, ಯಾಗದಕ್ಷಿಣೆಯನ್ನು ತೆಗೆದುಕೊಳ್ಳುವ ನೆವದಿಂದ ಅವನ ಸರ್ವಸ್ವವನ್ನೂ ಕಿತ್ತುಕೊಂಡು, ಅವನಿಗೆ ಮೇಲೆಮೇಲೆ ಬಾಧೆಯನ್ನೂ ಕೊಡುತ್ತಿದ್ದನು ವಸಿಷ್ಠನು ಇದನ್ನು ಸಹಿಸಲಾರದೆ, ವಿಶ್ವಾಮಿತ್ರನಿಗೆ ಪಕ್ಷಿಜನ್ಮವುಂಟಾಗುವಂತೆ ಶಾಪವನ್ನು ಕೊಟ್ಟನು ವಿಶ್ವಾಮಿತ್ರನೂ ಅದೇರೀತಿಯಾಗಿ ವಸಿಷ್ಠನಿಗೆ ಪ್ರತಿಶಾಪವನ್ನು ಕೊಟ್ಟನು ಆದರಿಂದ ಅವರಿಬ್ಬರೂ ಪಕ್ಷಿರೂಪದಿಂದಲೇ ಹೋರಾಡುತಿದ್ದರೆಂದು ಕೇಳಿಬಲ್ಲೆವು ಇದು ಹಾಗಿರಲಿ! ಆ ಹರಿಶ್ಚಂದ್ರನ ಬೇರೆ ಕೆಲವು ವೃತ್ತಾಂತಗಳನ್ನು ತಿಳಿಸುವೆನು ಕೇಳು ಬಹುಕಾಲದವರೆಗೆ ಹರಿಶ್ಚಂದ್ರನಿಗೆ ಸಂತಾನವಿಲ್ಲದೆಹೋಯಿತು. ಇದರಿಂದ ಅವನು ದುಃಖಿತನಾಗಿ, ಕೊನೆಗೆ ನಾರದನ ಉಪದೇಶದಿಂದ ವರುಣದೇವನಲ್ಲಿ ಮರೆಹೊಕ್ಕು, ತನಗೆ ವೀರನಾದ ಪುತ್ರನೊಬ್ಬನು ಹುಟ್ಟಿದಪಕ್ಷದಲ್ಲಿ, ಆ ಪುತ್ರನನ್ನೇ ನರಪಶುಳನ್ನಾಗಿ ಮಾಡಿ ಆ ವರುಣನ ಪ್ರೀತ್ಯರ್ಥವಾಗಿ ಒಂದು ಯಾಗವನ್ನು ನಡೆಸುವುದಾಗಿ ಹರಕೆಮಾಡಿಕೊಂಡನು ವರುಣನು ಅದಕ್ಕೆ ಸಮ್ಮತಿಸಿ, ಪುತ್ರೋತ್ಪತ್ತಿಯಾಗುವಂತೆ ಅನುಗ್ರಹಿಸಿದನು ಆದರಿಂದ ಹರಿಶ್ಚಂದ್ರನಿಗೆ ರೋಹಿತನೆಂಬ ಕುಮಾರನು ಹುಟ್ಟಿದನು ಶಿಶುವು ಹುಟ್ಟಿದೊಡನೆ ವರುಣನು ಹರಿಶ್ಚಂದ್ರನ ಬಳಿಗೆ ಬಂದು "ಓ ರಾಜೇಂದ್ರಾ! ನಿನಗೆ ಪುತ್ರನು ಹಟ್ಟಿದನಲ್ಲವೆ? ಹಿಂದೆ ನೀನು ವಾಗ್ದಾನಮಾಡಿದಂತೆ ಆ ಮಗುವನ್ನು ಪಶುವಾಗಿ ಮಾಡಿ, ನನ್ನ ಪ್ರೀತಿಗಾಗಿ ಯಾಗವನ್ನು ನಡೆಸು," ಎಂದನು. ಅದಕ್ಕಾ ಹರಿಶ್ಚಂದ್ರನು ತನ್ನ ಮಗನನ್ನು ಬಲಿಕೊಡಲಾರದೆ ವರುಣನನ್ನುಕುರಿತು, 'ಓ ದೇವಾ! ಹತ್ತುದಿನಗಳು ಕಳೆಯುವುದಕ್ಕೆ ಮೊದಲು ಈ ಶಿಶುವು ಯಾಗಯೋಗ್ಯವಲ್ಲ. ಆ ಹತ್ತುದಿನಗಳು ಕಳೆದಮೇಲೆ ನಿನ್ನ ಇಷ್ಟದಂತೆಯೇ ನಡೆಸುವೆನು." ಎಂದನು. ವರುಣನು ಅದಕ್ಕೆ ಸಮ್ಮ

ಶಿಸಿ ಹಿಂತಿರುಗಿ ಹೋಗಿ, ಹತ್ತುದಿನಗಳಾದಮೇಲೆ ತಿರುಗಿ ಬಂದು, ಯಜ್ಞ
ವನ್ನು ತೊಡಗುವಂತೆ ಹರಿಶ್ಚಂದ್ರನನ್ನು ನಿರ್ಬಂಧಿಸಿದನು. ಅದಕ್ಕಾ ಹರಿ
ಶ್ಚಂದ್ರನು, “ಸ್ವಾಮೀ! ಈ ಬಾಲನಿಗೆ ಹಲ್ಲುಹುಟ್ಟಿದಹೊರತು ಇವನು
ಯಾಗಯೋಗ್ಯನಲ್ಲ” ಎಂದನು. ವರುಣನು ಅದಕ್ಕೂ ಸಮ್ಮತಿಸಿ, ಆ
ಶಿಶುವಿಗೆ ಹಲ್ಲುಹುಟ್ಟಿದಮೇಲೆ ಬಂದು ತಿರುಗಿ ರಾಜನನ್ನು ನಿರ್ಬಂಧಿಸಿದನು.
ಅದಕ್ಕಾ ರಾಜನು, “ಓ ದೇವಾ! ಇವನಿಗೆ ಈಗ ಹುಟ್ಟಿರುವ ಹಲ್ಲು ಬಿ
ದ್ದು ಹೋಗುವವರೆಗೆ ಇವನು ಯಾಗಯೋಗ್ಯನಲ್ಲ. ಈ ಹಲ್ಲು ಬಿದ್ದಮೇಲೆ
ಅವಶ್ಯವಾಗಿ ನಾನು ಕೊಟ್ಟಮಾತನ್ನು ನಡೆಸುವೆನು” ಎಂದನು ವರುಣ
ನು ಅದಕ್ಕೂ ಸಮ್ಮತಿಸಿ, ಕೆಲವುಕಾಲವಾದಮೇಲೆ ತಿರುಗಿ ಬಂದು
“ರಾಜಾ! ನಿನ್ನ ಕುಮಾರನಿಗೆ ಹಲ್ಲುಗಳು ಬಿದ್ದು ಹೋದುವಷ್ಟೆ? ಈಗ
ಲಾದರೂ ಯಾಗವನ್ನಾರಂಭಿಸಬಹುದಲ್ಲವೆ?” ಎಂದನು. ಅದಕ್ಕಾ ರಾ
ಜನು, “ಸ್ವಾಮೀ! ಅಂಗಹೀನನಾದ ಈ ಬಾಲನು ಹೇಗೆತಾನೇ ಯಾಗ
ಯೋಗ್ಯನಾಗುವನು? ಇವನಿಗೆ ಹೊಸಹಲ್ಲುಗಳು ಹುಟ್ಟಿದಮೇಲೆ ಸತ್ಯ
ವಾಗಿ ನಾನು ಯಾಗವನ್ನಾರಂಭಿಸುವೆನು.” ಎಂದನು ವರುಣನು ಅದ
ಕ್ಕೂ ಸಮ್ಮತಿಸಿ, ಆ ಬಾಲನಿಗೆ ಹೊಸಹಲ್ಲುಗಳು ಹುಟ್ಟಿದಮೇಲೆ ಬಂದು
ಹರಿಶ್ಚಂದ್ರನನ್ನು ಯಾಗಕ್ಕಾಗಿ ನಿರ್ಬಂಧಿಸಿದನು. ಆಗಲೂ ರಾಜನು, ತನ್ನ
ಮಗನು ಯುದ್ಧಯೋಗ್ಯನಾದಹೊರತು ಯಾಗಕ್ಕೆ ಅರ್ಹನಲ್ಲವೆಂದನು.
ಓ! ಪರೀಕ್ಷಿದ್ರಾಜಾ! ಹೀಗೆ ಹರಿಶ್ಚಂದ್ರನು ತನ್ನ ಪುತ್ರನಲ್ಲಿರುವ
ಮೋಹದಿಂದ, ಬೇರೆಬೇರೆ ನೆವಗಳನ್ನೆತ್ತಿ ಕಾಲವನ್ನು ತಳ್ಳುತ್ತಿದ್ದನು.
ವರುಣನೂ ಬೇಸರಗೊಳ್ಳದೆ ಅವನು ಹೇಳಿದ ಮಾತಿಗೆಲ್ಲಾ ಸಮ್ಮತಿ
ಸುತ್ತ ಕಾಲವನ್ನು ನಿರೀಕ್ಷಿಸುತ್ತಿದ್ದನು. ಇಷ್ಟರಲ್ಲಿ ರೋಹಿತನಿಗೆ ತನ್ನ
ತಂದೆಯು ಮಾಡಿರುವ ಪ್ರತಿಜ್ಞೆಯು ತಿಳಿದುಬಂದಿತು. ಹೇಗಿದ್ದರೂ ತನ್ನ
ತಂದೆಯು, ತನ್ನನ್ನು ಯಾಗಪಶುವನ್ನಾಗಿ ಮಾಡದೆ ಬಿಡಲಾರನೆಂದು ತಿಳಿ
ದು, ತನ್ನ ಪ್ರಾಣವನ್ನು ಕಾಪಾಡಿಕೊಳ್ಳಬೇಕೆಂಬ ಉದ್ದೇಶದಿಂದ, ಅರಮನೆ
ಯಲ್ಲಿ ಯಾರಿಗೂ ತಿಳಿಯದಂತೆ ಧನುರ್ಬಾಣಗಳನ್ನು ತೆಗೆದುಕೊಂಡು ಅರ
ಣ್ಯಕ್ಕೆ ಓಡಿಹೋದನು. ಇದರಿಂದ ವರುಣನಿಗೆ ಮಹತ್ತಾದ ಆಕ್ರೋ

ಶವುಂಟಾಯಿತು. ಈ ಕೋಪದಿಂದ ವರುಣನು, ಹರಿಶ್ಚಂದ್ರನಿಗೆ ಮಹೋ ದರವೆಂಬ ವ್ಯಾಧಿಯನ್ನು ಹುಟ್ಟಿಸಿ, ಅವನನ್ನು ಬಹಳವಾಗಿ ಬಾಧಿಸತೊಡ ಗಿದನು. ಹರಿಶ್ಚಂದ್ರನಿಗೆ ಹೊಟ್ಟೆಯು ಬಹಳವಾಗಿ ಊದಿಕೊಂ ಡು ಆದರಿಂದ ಸಂಕಟಪಡುತಿದ್ದನು ತಂದೆಗೆ ಸಂಭವಿಸಿದ ಈ ಕಷ್ಟವ ನ್ನು ಕೇಳಿ ರೋಹಿತನು, ಅವನನ್ನು ನೋಡಬೇಕೆಂಬ ಉದ್ದೇಶದಿಂದ ತನ್ನ ಪಟ್ಟಣಕ್ಕೆ ಹಿಂತಿರುಗಿ ಬರುತ್ತಿರುವಾಗ, ದಾರಿಯಲ್ಲಿ ದೇವೇಂದ್ರನು ಇವ ನಿಗೆ ಕಾಣಿಸಿಕೊಂಡು, “ ಓ ರಾಜಕುಮಾರಾ ! ಈಗ ನೀನು ನಿನ್ನ ಪಟ್ಟ ಣಕ್ಕೆ ಹೋಗುವುದು ಉಚಿತವಲ್ಲ ಹೋದರೂ ನಿನ್ನ ತಂದೆಯ ಕಷ್ಟ ವನ್ನು ನೀಗಿಸಲಾರೆ ನಿನ್ನ ತಂದೆಯು ಸುಳ್ಳಾಡಿದುದರಿಂದ ಅವನಿಗೆ ಈ ರೋಗವುಂಟಾಗಿರುವುದು ಈಗ ನೀನು ಪುಣ್ಯಕ್ಷೇತ್ರಯಾತ್ರೆಯನ್ನು ಮಾಡಿ ಬಂದರೆ, ಅದರ ಫಲದಿಂದ ನಿನ್ನ ತಂದೆಯ ರೋಗವು ನಿವೃತ್ತವಾಗುವುದು. ಅದುಹೊರತು ಬೇರೆ ಉಪಾಯವಿಲ್ಲ ಆದುದರಿಂದ ನೀನು ಹೀಗೆಯೇ ಭೂ ಸಂಚಾರಕ್ಕಾಗಿ ಹೊರಡು.” ಎಂದು ಬೋಧಿಸಿದನು. ರೋಹಿತನು ಇಂದ್ರನ ಮಾತಿಗೆ ಸಮ್ಮತಿಸಿ, ಕೆಲವು ಸಂವತ್ಸರಗಳವರೆಗೆ ಭೂಪ್ರದಕ್ಷಿಣವನ್ನು ಮಾ ಡುತ್ತ, ಅನೇಕಪುಣ್ಯಕ್ಷೇತ್ರಗಳನ್ನು ಸೇವಿಸುತ್ತಬಂದನು ಆದರೇನು? ಒಂ ದೊಂದುವರ್ಷವೂ ಅವನು ತನ್ನ ತಂದೆಯನ್ನು ನೋಡಬೇಕೆಂಬ ಆತುರದಿಂ ದ, ತನ್ನ ಪಟ್ಟಣದಕಡೆಗೆ ಹೊರಡುತ್ತಿರುವಾಗ, ಇಂದ್ರನು ವೃದ್ಧಬ್ರಾಹ್ಮ ಣವೇಷದಿಂದ ಬಂದು ಅವನನ್ನು ನಿರ್ಬಂಧಿಸಿ ಹಿಂತಿರುಗಿಸುತ್ತಿದ್ದನು ಹೀಗೆ ಐದುವರ್ಷಗಳು ಕಳೆದುವು ಐದಾವರ್ತಿಯೂ ಇಂದ್ರನ ಬೋಧನೆಯಿಂದ ರೋಹಿತನು ತನ್ನ ಪಟ್ಟಣಕ್ಕೆ ಹೋಗಲಾರದೆ, ಹಿಂತಿರುಗಬೇಕಾಯಿತು. ಕೊನೆಗೆ ಆರನೆಯ ಸಂವತ್ಸರದಲ್ಲಿ ರೋಹಿತನು, ತೀರ್ಥಯಾತ್ರೆಯನ್ನು ಮು ಗಿಸಿಕೊಂಡು ಬರುವಾಗ, ದಾರಿಯಲ್ಲಿ ಭೃಗುವಂಶಸಂಭೂತನಾದ ಒಬ್ಬ ಬ್ರಾಹ್ಮಣಕುಮಾರನನ್ನು ಕ್ರಯಕ್ಕೆ ಕೊಂಡುಕೊಂಡು, ತನ್ನ ಪಟ್ಟಣಕ್ಕೆ ಬಂದು, ಆ ಬಾಲಕನನ್ನು ತನ್ನ ತಂದೆಯ ವಶಕ್ಕೊಪ್ಪಿಸಿ, ತನಗೆ ಬದಲಾಗಿ ಆ ಬ್ರಾಹ್ಮಣಕುಮಾರನನು ಯಜ್ಞಪಶುವನ್ನಾಗಿ ಮಾಡಿ ಯಾಗವನ್ನು ನಡೆ ಸುವಂತೆ ಹೇಳಿದನು. ಅದರಂತೆಯೇ ಹರಿಶ್ಚಂದ್ರನು ವರುಣಪ್ರೀತಿಗಾಗಿ

ಪುರುಷಮೇಧವೆಂಬ ಯಜ್ಞವನ್ನು ಮಾಡಿ ರೋಗವಿಮುಕ್ತನಾದನು ಆ ಯಜ್ಞದಲ್ಲಿ ವಿಶ್ವಾಮಿತ್ರನೇ ಹೋತೃವಾಗಿಯೂ, ಜಮದಗ್ನಿಯೇ ಅಧ್ವರ್ಯುವಾಗಿಯೂ, ಆಯಾಸ್ಯನು ಸಾಮಗಾನವನ್ನು ಮಾಡತಕ್ಕ ಉದ್ಗಾತೃವಾಗಿಯೂ, ವಸಿಷ್ಠನೇ ಬ್ರಹ್ಮನಾಗಿಯೂ ಇದ್ದು, ಕಾರ್ಯಗಳನ್ನು ನಡೆಸಿದರು ಹೀಗೆ ಮಹಾತ್ಮರಾದ ಋಷಿಗಳನ್ನು ಮುಂದಿಟ್ಟುಕೊಂಡು ನಡೆಸಿದ ಈ ಯಾಗದಿಂದ, ಇಂದ್ರನು ಬಹಳವಾಗಿ ಸಂತೋಷಿಸಿ, ಹರಿಶ್ಚಂದ್ರನಿಗೆ ಸುವರ್ಣಮಯವಾದ ಒಂದಾನೊಂದು ದಿವ್ಯರಥವನ್ನು ಕೊಟ್ಟನು. ಓ! ಪರೀಕ್ಷಿದ್ರಾಜಾ! ಈ ಯಾಗದಲ್ಲಿ ಪಶುವಾಗಿದ್ದ ಬ್ರಾಹ್ಮಣಬಾಲಕನಿಗೆ ಶುನಶ್ಶೇಫನೆಂದು ಹೆಸರು ಈ ಮುನಿಕುಮಾರನ ವೃತ್ತಾಂತವನ್ನು! ನಿನಗೆ ಮುಂದೆ ಹೇಳುವೆನು ಇತ್ತಲಾಗಿ ಈ ಹರಿಶ್ಚಂದ್ರನ ಮತ್ತು ಅವನ ಭಾರ್ಯೆಯ ಸತ್ಯಕ್ಕೂ, ಧೈರ್ಯಕ್ಕೂ ವಿಶ್ವಾಮಿತ್ರನು ಬಹಳವಾಗಿ ಸಂತೋಷಪಟ್ಟು, ಅವನಿಗೆ ಆತ್ಮಜ್ಞಾನವನ್ನುಪದೇಶಿಸಿದನು ಈ ಜ್ಞಾನಬಲದಿಂದ ಹರಿಶ್ಚಂದ್ರನು ಮನಸ್ಸನ್ನು ಪೃಥ್ವಿಯಲ್ಲಿಯೂ, ಪೃಥ್ವಿಯನ್ನು ಜಲದಲ್ಲಿಯೂ, ಜಲವನ್ನು ತೇಜಸ್ಸಿನಲ್ಲಿಯೂ, ತೇಜಸ್ಸನ್ನು ವಾಯುವಿನಲ್ಲಿಯೂ, ವಾಯುವನ್ನು ಅಕಾಶದಲ್ಲಿಯೂ, ಆಕಾಶವನ್ನು ತಾಮಸಾಹಂಕಾರದಲ್ಲಿಯೂ, ಆ ಅಹಂಕಾರವನ್ನು ಮಹತ್ತತ್ವದಲ್ಲಿಯೂ, ಆ ಮಹತ್ತತ್ವವೆಂಬ ಪ್ರಧಾನವನ್ನು ಪ್ರಕೃತಿಯಲ್ಲಿಯೂ ಐಕ್ಯಹೊಂದಿಸಿ, ಅದರಲ್ಲಿದ್ದ ಜೀವಕಲೆಯೆಂಬ ವಿದ್ಯೆಯನ್ನು ಧ್ಯಾನಿಸಿ, ಅದರಿಂದ ಅಜ್ಞಾನವನ್ನೂ, ತನ್ನ ಸಮಸ್ತಕರ್ಮಬಂಧಗಳನ್ನೂ ನೀಗಿ, ನಾಮರೂಪಗಳಿಂದ ನಿರ್ದೇಶಿಸುವುದಕ್ಕಾಗದ ಶುದ್ಧಾತ್ಮಸ್ವರೂಪವನ್ನು ಹೊಂದಿದನು ಇದು ಏಳನೆಯ ಅಧ್ಯಾಯವು.

---

## ಸಗರ ವೃತ್ತಾಂತವು

ರಾಜಾ! ಕೇಳು! ಈ ರೋಹಿತನ ಮಗನು ಹರಿತನು. ಅವನ ಮಗನು ಚಂಪನು. ಈತನು ತನ್ನ ಹೆಸರಿನಿಂದಲೇ ಚಂಪಾಪುರಿಯೆಂಬ ಒಂದು ದೊಡ್ಡ ಪಟ್ಟಣವನ್ನು ನಿರ್ಮಿಸಿದನು ಈ ಚಂಪನಿಗೆ ಸುದೇವನೆಂಬ ಮಗನಾದನು. ಅವನ ಮಗನು ವಿಜಯನು. ವಿಜಯನಿಗೆ ಭೇರುಕನೆಂಬ ಪುತ್ರ

ನಾದನು. ಅವನ ಮಗನು ವೃಕನು ವೃಕನ ಮಗನು ಬಾಹುಕನು ಈ ಬಾಹುಕನು ಶತ್ರುಗಳಿಂದ ಪರಾಜಿತನಾಗಿ, ರಾಜ್ಯವನ್ನು ಬಿಟ್ಟು ತನ್ನ ಭಾರ್ಯೆಯೊಡನೆ ಕಾಡಿಗೆ ಓಡಿಹೋದನು. ಇವನು ವಯಸ್ಸು ಕಳೆದು ವೃದ್ಧನಾಗಿ ಮೃತನಾದಮೇಲೆ, ಅವನ ಹೆಂಡತಿಯೂ ಅವನೊಡನೆ ಸಹಗಮನಮಾಡುವುದಕ್ಕೆ ಯತ್ನಿಸಿದಳು ಆಗ ಅಲ್ಲಿದ್ದ ಔರ್ವನೆಂಬ ಮಹರ್ಷಿಯು ಅವಳು ಗರ್ಭವತಿಯಾಗಿರುವುದನ್ನು ತಿಳಿದು, ಸಂತಾನಾಭಿವೃದ್ಧಿಗಾಗಿ ಅವಳನ್ನು ಸಹಗಮನಮಾಡದಂತೆ ತಡೆದನು ಇವಳು ಗರ್ಭಿಣಿಯಾಗಿರುವುದನ್ನು ಕೇಳಿ, ಅವಳ ಸವತಿಯರು ಹೊಟ್ಟೇಗಿಚ್ಚಿನಿಂದ ಅವಳಿಗೆ ಅನ್ನದಲ್ಲಿ ವಿಷವನ್ನು ಕಲೆಸಿಕೊಟ್ಟರು. ಹಾಗಿದ್ದರೂ ಅವಳು ಔರ್ವಮಹರ್ಷಿಯ ಅನುಗ್ರಹದಿಂದ ಸಾಯದೆ ಬದುಕಿಕೊಂಡಳು ಅವಳಿಗೆ ಶಿಶುವು ಜನಿಸಿದಾಗ ಆ ಶಿಶುವಿನೊಡನೆ ವಿಷವೂ ಹೊರಕ್ಕೆ ಬಿದ್ದಿತು. ರಾಜೇಂದ್ರಾ! ವಿಷದೊಡನೆ ಹುಟ್ಟಿದುದರಿಂದಲೇ ಆ ಶಿಶುವಿಗೆ “ಸಗರ”ನೆಂಬ ಹೆಸರಾಯಿತು ಇವನ ಹೆಸರು ಲೋಕಪ್ರಸಿದ್ಧವಾಗಿರುವುದು ಇವನು ದೊಡ್ಡಚಕ್ರವರ್ತಿಯೆನಿಸಿಕೊಂಡನು ಇವನ ಮಕ್ಕಳೇ ನೆಲವನ್ನು ತೋಡಿ ಸಮುದ್ರಗಳನ್ನು ನಿರ್ಮಿಸಿದರು. ಇದರಿಂದಲೇ ಸಮುದ್ರಗಳಿಗೆ “ಸಾಗರ” ಗಳೆಂಬ ಹೆಸರಾಯಿತು. ಈ ಸಗರಚಕ್ರವರ್ತಿಯು ತಾಳಜಂಘರೆಂದೂ, ಶಕರೆಂದೂ, ಯವನರೆಂದೂ, ಬರ್ಬರರೆಂದೂ ಕರೆಯಲ್ಪಡುವ ಕೆಲವು ದುಷ್ಟರನ್ನು ತನ್ನ ಪರಾಕ್ರಮದಿಂದ ನಿಗ್ರಹಿಸಿದನು. ಅವರು ಲೋಕಕ್ಕೆ ಬಹಳವಾಗಿ ಬಾಧೆಯನ್ನು ಕೊಡುತಿದ್ದರೂ, ತನ್ನ ಗುರುವಾದ ಔರ್ವಮಹರ್ಷಿಯ ಆಜ್ಞೆಯಿಂದ, ಅವರನ್ನು ಕೊಲ್ಲದೆ ವಿರೂಪಮಾಡಿ ಓಡಿಸಿದನು. ಅವರಲ್ಲಿ ಕೆಲವರಿಗೆ ಸಂಪೂರ್ಣವಾಗಿ ಮುಂಡನಮಾಡಿ ಕಳುಹಿಸಿದನು. ಕೆಲವರಿಗೆ ಜುಟ್ಟನ್ನು ಬೋಳಿಸಿ, ಗಡ್ಡಮೀಸೆಗಳನ್ನು ಮಾತ್ರ ಉಳಿಸಿದನು. ಕೆಲವರಿಗೆ ಅರ್ಧತಲೆಯನ್ನು ಬೋಳಿಸಿದನು. ಕೆಲವರಿಗೆ ಮೇಲಿನ ವಸ್ತ್ರವನ್ನು ಕಿತ್ತುಕೊಂಡು, ಉಟ್ಟಬಟ್ಟೆಯನ್ನು ಮಾತ್ರವೇ ಉಳಿಸಿ ಕಳುಹಿಸಿದನು. ಕೆಲವರ ಉಟ್ಟಬಟ್ಟೆಯನ್ನೂ ಕಿತ್ತುಕೊಂಡು, ಉತ್ತರೀಯಮಾತ್ರವನ್ನೇ ಉಳಿಸಿದನು. ಈ ಸಗರನು ಔರ್ವಮಹರ್ಷಿಯ ಅಜ್ಞಾನುಸಾರವಾಗಿ ಸ

ರ್ವದೇವತಾತ್ಮಕನಾಗಿಯೂ, ಸಕಲ ವೇದಸ್ವರೂಪನಾಗಿಯೂ ಇರುವ ಶ್ರೀಹರಿಯನ್ನಾರಾಧಿಸುವುದಕ್ಕಾಗಿ, ಶತಾಶ್ವಮೇಧಗಳನ್ನು ಮಾಡತೊಡಗಿ, ತೊಂಭತ್ತೊಂಭತ್ತು ಯಾಗಗಳನ್ನು ನಿರ್ವಿಘ್ನವಾಗಿ ಮುಗಿಸಿದನು. ನೂರನೆಯ ಯಾಗವನ್ನು ನಡೆಸುತ್ತಿರುವಾಗ, ದೇವೇಂದ್ರನು ತನ್ನ ಪದವಿಗೆ ಮೋಸಬರುವುದೆಂಬ ಭಯದಿಂದ, ಅವನ ಯಜ್ಞಾಶ್ವವನ್ನು ಕದ್ದುಯ್ದು, ರಸಾತಲದಲ್ಲಿ ತಪಸ್ಸುಮಾಡುತಿದ್ದ ಕಪಿಲಮಹಾಮುನಿಯ ಹಿಂದೆ ಬಚ್ಚಿಟ್ಟು ಹೊರಟುಹೋದನು ಸಗರನಿಗೆ ಸುಮತಿಯೆಂದೂ, ಕೇಶಿನಿಯೆಂದೂ ಇಬ್ಬರು ಪತ್ನಿಯರಿದ್ದರು. ಅವರಿಬ್ಬರಲ್ಲಿ ಸುಮತಿಗೆ ಅರುವತ್ತುಸಾವಿರ ಮಂದಿ ಮಕ್ಕಳಾದರು. ಸಗರನು ತನ್ನ ಯಜ್ಞಾಶ್ವವನ್ನು ಹುಡುಕುವುದಕ್ಕಾಗಿ ಈ ಅರುವತ್ತುಸಾವಿರಮಂದಿ ಮಕ್ಕಳನ್ನೂ ಕಳುಹಿಸಿದನು. ಬಲಗರ್ವಿತರಾದ ಆ ಕುಮಾರರೆಲ್ಲರೂ, ತಂದೆಯಾಜ್ಞೆಯನ್ನು ಶಿರಸಾವಹಿಸಿ, ಕುದುರೆಯನ್ನು ಹುಡುಕುತ್ತ, ಎಲ್ಲಿಯೂ ಅ ಕುದುರೆಯನ್ನು ಕಾಣದೆ, ನೆಲವನ್ನು ತೋಡಿ ರಸಾತಲವನ್ನು ಪ್ರವೇಶಿಸಿದರು. ಅಲ್ಲಿ ನಾನಾದಿಕ್ಕುಗಳಲ್ಲಿ ಹುಡುಕುತ್ತ ಬರುವಾಗ, ಈಶಾನ್ಯಭಾಗದಲ್ಲಿ ನಿಶ್ಚಲನಾಗಿ ತಪಸ್ಸುಮಾಡುತ್ತ ಕುಳಿತಿದ್ದ ಕಪಿಲಮಹರ್ಷಿಯನ್ನೂ, ಅವನ ಪಕ್ಕದಲ್ಲಿ ತಮ್ಮ ತಂದೆಯ ಯಜ್ಞಾಶ್ವವನ್ನೂ ಕಂಡರು. ಆಗ ಅವರ ಮಹೋತ್ಸಾಹವನ್ನು ಕೇಳಬೇಕೆ! ಒಬ್ಬೊಬ್ಬರಿಗೂ ಆ ಮಹರ್ಷಿಯಮೇಲೆಯೇ ಸಂದೇಹವು ಹುಟ್ಟಿತು ಈ ಸಂದೇಹದಿಂದ ತಮ್ಮಲ್ಲಿ ಒಬ್ಬರಿಗೊಬ್ಬರು “ಇದೋ! ಇವನೇ ನಮ್ಮ ಕುದುರೆಯನ್ನು ಕದ್ದವನು! ಇದರಲ್ಲಿ ಸಂದೇಹವಿಲ್ಲ. ನಮ್ಮ ಭಯಕ್ಕಾಗಿಯೇ ಇವನು ಈ ವಿವಿಕ್ತವಾದ ಸ್ಥಳದಲ್ಲಿ ಅವಿತುಕೊಂಡಿರುವನು ನಾವು ಇಲ್ಲಿಗೆ ಬರುವುದನ್ನು ಹೇಗೋ ತಿಳಿದು, ಏನೂ ತಿಳಿಯದವನಂತೆ ಕಪಟವೇಷದಿಂದ ಕಣ್ಣುಗಳನ್ನು ಮುಚ್ಚಿ ಮಹಾತಪಸ್ವಿಯಂತೆ ನಟಿಸುತ್ತಿರುವನು ಈ ಪಾಪಿಯನ್ನು ಕೊಲ್ಲಿರಿ! ಕೊಲ್ಲಿರಿ!” ಎಂದು ಅತ್ಯಾಕ್ರೋಶದಿಂದಾರ್ಭಟಿಸಿ ಕೂಗುತ್ತ, ಆಯುಧಪಾಣಿಗಳಾಗಿ ಅವನಮೇಲೆ ಬೀಳುವುದಕ್ಕೆ ಯತ್ನಿಸಿ ಮುಂದೆ ಬಂದರು ಈ ಗದ್ದಲವನ್ನು ಕೇಳಿ ತಪಸ್ಸಿನಲ್ಲಿದ್ದ ಕಪಿಲಮುನಿಯು, ಥಟ್ಟನೆ ಕಣ್ಣನ್ನು ತೆರೆದು ನೋಡಿ

ದನು. ಹೀಗೆ ಸಗರಪುತ್ರರೆಲ್ಲರೂ ಇಂದ್ರನ ಮೋಸವನ್ನು ತಿಳಿಯದೆ, ಮಹಾತ್ಮನಾದ ಕಪಿಲಮಹಾಮುನಿಯವಿಷಯದಲ್ಲಿ ನಿಷ್ಕಾರಣವಾಗಿ ಕ್ರೋಧವನ್ನಿಟ್ಟು ಅತಿಕ್ರಮಿಸಿ ಹೋದುದರಿಂದ, ಅವನ ದೃಷ್ಟಿಯು ಬಿದ್ದೊಡನೆ, ತಮ್ಮತಮ್ಮ ಶರೀರದೊಳಗಣ ಅಗ್ನಿಯಿಂದಲೇ ಉರಿದು ಭಸ್ಮೀಭೂತರಾದರು. ಈ ಸಗರಪುತ್ರರು ಕಪಿಲನ ಕೋಪಾಗ್ನಿಯಿಂದ ಭಸ್ಮೀಭೂತರಾದುದಾಗಿ ಕೆಲವರು ಹೇಳುವುದುಂಟು ಇದು ಯುಕ್ತವಲ್ಲ! ಏಕೆಂದರೆ, ಕೇವಲಸತ್ವಮೂರ್ತಿಯಾಗಿ, ಲೋಕವನ್ನು ಪವಿತ್ರೀಕರಿಸುವುದಕ್ಕಾಗಿಯೇ ಅವತರಿಸಿರುವ ಕಪಿಲರೂಪಿಯಾದ ಆ ಭಗವಂತನಲ್ಲಿ, ಕೋಪರೂಪವಾದ ತಮೋಗುಣವು ಹುಟ್ಟುವುದೆಂದರೇನು? ನೆಲದಲ್ಲಿರತಕ್ಕ ಧೂಳು ಆಕಾಶದಲ್ಲಿ ಅಂಟುವುದುಂಟೆ ? ಎಂದಿಗೂ ಇಲ್ಲ. ಯಾವಾಗಲೂ ನಿರ್ಮಲವಾಗಿರುವುದೇ ಆಕಾಶದ ಗುಣವಲ್ಲವೆ? ಮತ್ತು ಯಾವನ ಮುಖದಿಂದ ಜನಿಸಿದ ಸಾಂಖ್ಯಶಾಸ್ತ್ರವೆಂಬ ಮಹಾನಾವೆಯು. ಮುಮುಕ್ಷುಗಳನ್ನು ಸಂಸಾರವೆಂಬ ಮಹಾಸಮುದ್ರದಿಂದ ದಾಟಿಸುತ್ತಿರುವುದೋ, ಅಂತಹ ಮಹಾತ್ಮನಾದ, ಸರ್ವಜ್ಞನಾದ, ಕಪಿಲಮಹರ್ಷಿಯಲ್ಲಿ ಶತ್ರುಭಾವವು ಹುಟ್ಟುವುದೆಂದರೇನು ? ಆದುದರಿಂದ ಕಪಿಲನು ಆ ಸಗರಪುತ್ರರಲ್ಲಿ ಕೋಪಿಸಿದನೆಂಬ ಮಾತು ಸುಳ್ಳು ! ರಾಜೇಂದ್ರಾ ! ಅದು ಹಾಗಿರಲಿ ! ಮುಂದಿನ ಕಥೆಯನ್ನು ಹೇಳುವೆನು ಕೇಳು ! ಸಗರನಿಗೆ ಕೇಶಿನಿಯೆಂಬ ಭಾರ್ಯೆಯಲ್ಲಿ ಅಸಮಂಜಸನೆಂಬ ಕುಮಾರನು ಹುಟ್ಟಿದನು. ಅವನಿಗೆ ಅಂಶುಮಂತನೆಂಬ ಮಗನಾದನು ಆ ಅಸಮಂಜಸನು ಪೂರ್ವಜನ್ಮದಲ್ಲಿ, ಮಹಾಯೋಗಿಯೆನಿಸಿಕೊಂಡು, ಬಹುಕಾಲಶವರೆಗೆ ಯೋಗನಿಷ್ಠನಾಗಿಯೇ ಇದ್ದನು ಕೊನೆಗೆ ಸಹವಾಸದೋಷದಿಂದ ಯೋಗಭ್ರಷ್ಟನಾಗಿ ಈ ಜನ್ಮವನ್ನು ಹೊಂದಿದನು ಆದರೆ ಹಿಂದೆ ನಡೆಸಿದ ಯೋಗಾಭ್ಯಾಸದ ಮಹಿಮೆಯಿಂದ ಅವನಿಗೆ ಜನ್ಮಾಂತರಸ್ಮೃತಿಯುಂಟಾಯಿತು ಇದರಿಂದ ಈ ಜನ್ಮದಲ್ಲಿಯಾದರೂ ತನಗೆ ಸಂಗದೋಷವು ಸಂಭವಿಸದಂತೆ ಮಾಡಿಕೊಳ್ಳಬೇಕೆಂದುದ್ದೇಶಿಸಿ, ತಾನು ಸಹವಾಸಯೋಗ್ಯನಲ್ಲವೆಂದು ಲೋಕಕ್ಕೆ ತೋರಿಸುವುದಕ್ಕಾಗಿ, ತನ್ನ ಜ್ಞಾತಿಗಳಿಗೂ, ಇತರಜನಗಳಿಗೂ ಹಿಂಸೆಯನ್ನು ಕೊಡುತ್ತಿದ್ದನು ಬೀದಿ

ಯಲ್ಲಿ ಆಡುತಿದ್ದ ಮಕ್ಕಳನ್ನು ಹಿಡಿದು ಸರಯೂನದಿಯಲ್ಲಿ ನೂಕುತಿದ್ದನು. ಇದನ್ನು ಕೇಳಿ ಅವನ ತಂದೆಯಾದ ಸಗರನು, ಅವನಲ್ಲಿ ಪುತ್ರವಾತ್ಸಲ್ಯವನ್ನು ತೊರೆದು ಅವನನ್ನು ದೇಶದಿಂದ ಹೊರಡಿಸಿಬಿಟ್ಟನು. ತನ್ನ ಉದ್ದೇಶವು ಕೈಗೂಡಿದುದಕ್ಕಾಗಿ ಅಸಮಂಜಸನು, ಮನಸ್ಸಿನಲ್ಲಿ ಸಂತೋಷಪಡುತ್ತ, ಹಿಂದೆ ತಾನು ಸರಯೂನದಿಯಲ್ಲಿ ತಂದು ಹಾಕಿದ ಮಕ್ಕಳೆಲ್ಲರನ್ನೂ ತನ್ನ ಯೋಗಪ್ರಭಾವದಿಂದ ಬದುಕಿಸಿ, ಅವರವರ ತಂದೆತಾಯಿಗಳ ವಶಕ್ಕೆ ಕೊಟ್ಟು, ತಾನು ಪುರವನ್ನು ಬಿಟ್ಟು ಹೊರಟುಹೋದನು. ಅಯೋಧ್ಯಾವಾಸಿಗಳೆಲ್ಲರೂ, ಬಹುಕಾಲದಮೇಲೆ ಬದುಕಿಬಂದ ಬಾಲರನ್ನು ನೋಡಿ ಆಶ್ಚರ್ಯಪಟ್ಟರು ಸಗರನೂಕೂಡ ತನ್ನ ಮಗನಾದ ಅಸಮಂಜಸನ ಪ್ರಭಾವವನ್ನು ಕಂಡು ಆಶ್ಚರ್ಯಪಡುತ್ತ, ಅವನನ್ನು ಮನೆಯಿಂದ ಹೊರಡಿಸಿದುದಕ್ಕಾಗಿ ಪಶ್ಚಾತ್ತಾಪಪಡುತಿದ್ದನು ಇತ್ತಲಾಗಿ ಅಸಮಂಜಸನ ಮಗನಾದ ಅಂಶುಮಂತನು, ತನ್ನ ಅಜ್ಜನಾದ ಸಗರನ ಆಜ್ಞಾನುಸಾರವಾಗಿ ಯಜ್ಞಾಶ್ವವನ್ನು ಹುಡುಕುತ್ತ ಹೊರಟು, ತನ್ನ ಚಿಕ್ಕಪ್ಪಂದಿರು ಹೋದ ದಾರಿಯನ್ನೇ ಹಿಡಿದು, ಪಾತಾಲವನ್ನು ಪ್ರವೇಶಿಸಿದನು. ಅಲ್ಲಿ ದೊಡ್ಡ ಭಸ್ಮರಾಶಿಯು ಬಿದ್ದಿರುವುದನ್ನೂ, ಅದರ ಸಮೀಪದಲ್ಲಿ ತನ್ನ ಯಜ್ಞಾಶ್ವವನ್ನೂ, ಅದರ ಪಕ್ಕದಲ್ಲಿ ತಪಸ್ಸುಮಾಡುತ್ತ ಕುಳಿತಿದ್ದ ಕಪಿಲಮಹರ್ಷಿಯನ್ನೂ ಕಂಡನು. ಆ ಕಪಿಲಮಹಾಮುನಿಯು ಭಗವದಂಶಭೂತನೆಂಬುದನ್ನು ಇವನು ಕೇಳಿಬಲ್ಲವನಾದುದರಿಂದ, ಮುಂದೆ ಹೋಗಿ, ಆ ಮಹರ್ಷಿಯ ಮುಂದೆ ಬದ್ಧಾಂಜಲಿಯಾಗಿ ನಿಂತು ಹೀಗೆಂದು ಸ್ತುತಿಸುವನು "ಓ ದೇವಾ! ಅನೇಕಯೋಗೀಶ್ವರರು ಸಮಾಧಿ ಮೊದಲಾದ ಉಪಾಯಗಳನ್ನು ಹಿಡಿದು ನಿನ್ನನ್ನು ಹುಡುಕುತ್ತಿದ್ದರೂ ಪರಮಾತ್ಮನಾದ ನಿನ್ನ ತತ್ವವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಲಾರರು! ಹೀಗಿರುವಾಗ ನಮ್ಮಂತಹ ಮೂಢಜನರು ಹೇಗೆ ತಾನೇ ತಿಳಿಯಬಲ್ಲೆವು ? ಇಷ್ಟೇ ಅಲ್ಲದೆ, ನಿನ್ನಿಂದ ಸಾಕ್ಷಾತ್ತಾಗಿ ಸೃಷ್ಟಿಸಲ್ಪಟ್ಟ ಬ್ರಹ್ಮಾದಿಗಳೇ ನಿನ್ನ ತತ್ವವನ್ನು ಕಾಣಲಾರರು. ಇನ್ನು ಇತರರ ಪಾಡೇನು? ಸಾಮಾನ್ಯವಾಗಿ ಶರೀರವುಳ್ಳ ಪ್ರಾಣಿಗಳೆಲ್ಲವೂ ನಿನ್ನ ಮಾಯೆಯಿಂದ ಮೋಹಿತವಾಗಿ, ಪ್ರಪಂಚದಲ್ಲಿ ಇಂದ್ರಿಯಗೋಚರವಾದ ಶಬ್ದಾದಿವಿಷ.

ಯಗಳನ್ನೂ, ಅವುಗಳನ್ನನುಭವಿಸತಕ್ಕ ತಮ್ಮ ಶರೀರವನ್ನೂ ತಿಳಿಯಬಲ್ಲುವೇ ಹೊರತು, ನಿಜವಾದ ಆತ್ಮತತ್ವವನ್ನು ತಿಳಿಯಲಾರವು ಹೀಗೆ ಅನಂತಮಹಿಮೆಯುಳ್ಳವನಾಗಿ, ಆನಂದಾತ್ಮಕವಾದ ಜ್ಞಾನಕ್ಕೆ ನಿಧಿಯಾಗಿ, ಮಾಯಾಗುಣಗಳ ಸಂಬಂಧವಿಲ್ಲದೆ, ಸನಕಾದಿಗಳಿಗೂ ಅಗೋಚರನಾದ ನಿನ್ನನ್ನು ಮೂಢನಾದ ನಾನು ಹೇಗೆ ತಾನೇ ಭಾವಿಸಬಲ್ಲೆನು? ಆದುದರಿಂದ ನಿನ್ನ ತತ್ವವನ್ನು ತಿಳಿಯುವುದಕ್ಕಾಗಲಿ, ನಿನ್ನನ್ನು ಭಾವಿಸಿ ಸಾಕ್ಷಾತ್ಕರಿಸುವದಕ್ಕಾಗಲಿ ಅಸಮರ್ಥನಾದ ನಾನು, ಇದೋ ಈ ನಮಸ್ಕಾರಮಾತ್ರದಿಂದ ನಿನ್ನನ್ನು ಆರಾಧಿಸುವೆನು ಮಾಯಾಗುಣಗಳನ್ನು ನಿರಾಕರಿಸಿ, ಕರ್ಮಾಧೀನವಾದ ದೇಹವನ್ನು ಪಡೆಯದೆ, ನಾಮರೂಪಭೇದಗಳಿಲ್ಲದೆ, ಚೇತನಾಚೇತನಧರ್ಮಗಳನ್ನೂ ತನ್ನಲ್ಲಿ ಅಂಟಿಸಿಕೊಳ್ಳದೆ, ಸ್ವೇಚ್ಛೆಯಿಂದಲೇ ಈ ಶರೀರವನ್ನು ತಾಳಿ, ಜ್ಞಾನೋಪದೇಶದಿಂದ ಲೋಕವನ್ನುದ್ಧರಿಸುತ್ತಿರುವ ಪುರಾಣಪುರುಷನಾದ ನಿನಗೆ ನಮಸ್ಕಾರವು. ಲೋಕದಲ್ಲಿ ಪ್ರಜೆಗಳು ಕಾಮ, ಲೋಭ, ಅಸಹನ, ಮುಂತಾದ ಚಿತ್ತವಿಕಾರಕ್ಕೊಳಗಾಗಿ, ಮನೆಮಂದಿಮಕ್ಕಳನ್ನೇ ಭೋಗ್ಯವಸ್ತುಗಳೆಂದು ತಿಳಿದು, ಅವನ್ನು ರಕ್ಷಿಸುವದಕ್ಕಾಗಿ ತೊಳಲುತ್ತಿರುವುದೆಲ್ಲವೂ ನಿನ್ನ ಮಾಯೆಯ ಪ್ರಭಾವವಲ್ಲದೆ ಬೇರೆಯಲ್ಲ. ಹೀಗೆ ಮಾಯೆಯಿಂದ ಪ್ರಪಂಚವನ್ನು ಮೋಹಗೊಳಿಸುತ್ತಿರುವ ನಿನಗೆ ನಮಸ್ಕಾರವು ಓ! ದೇವಾ! ಸರ್ವಾಂತರಾತ್ಮನಾದ ನಿನ್ನ ದರ್ಶನಮಾತ್ರದಿಂದಲೇ ಈಗ ನನಗೆ ಮೊದಲಿದ್ದ ವಿಷಯಾಭಿಲಾಷೆಯು ಬಿಟ್ಟುಹೋಯಿತು ನನ್ನ ಪ್ರಾರಬ್ಧಕರ್ಮಗಳೂ ನೀಗಿದುವು ದೇಹಾತ್ಮಭ್ರಮರೂಪವಾದ ಮೋಹವೂ ಬಿಟ್ಟುಹೋಯಿತು ದೃಢವಾದ ಮೋಹಪಾಶವೂ ಛಿನ್ನವಾಯಿತು ಈಗ ನಾನು ಕೃತಾರ್ಥನಾದೆನು" ಎಂದನು. ಹೀಗೆ ಭಕ್ತಿಯಿಂದ ಸ್ತುತಿಸುತ್ತಿರುವ ಅಂಶುಮಂತನನ್ನು ಕಪಿಲಾಚಾರ್ಯನು ಅನುಗ್ರಹಪೂರ್ವಕವಾಗಿ ದೃಷ್ಟಿಸಿನೋಡಿ, "ಓ ವತ್ಸಾ! ನಿನ್ನ ಪಿತಾಮಹನ ಯಾಗದ ಕುದುರೆಯೇ ಇದು! ಇದನ್ನು ನೀನು ನಿನ್ನೊಡನೆ ಕರದುಕೊಂಡು ಹೋಗಬಹುದು ನಿನ್ನ ತಂದೆಯ ಸಹೋದರರೆಲ್ಲರೂ ಇಲ್ಲಿ ಭಸ್ಮವಾಗಿ ಬಿದ್ದಿರುವರು ಇವರಿಗೆ ಸದ್ಗತಿಹೊಂದಿಸ

ಬೇಕಾದರೆ, ಆಕಾಶಗಂಗೆಯನ್ನು ತಂದು, ಆ ಗಂಗೋದಕದಿಂದ. ಈ ಬೂದಿ ಯನ್ನು ಕೊಚ್ಚಿಸಬೇಕಾದುದೊಂದುಹೊರತು ಬೇರೆ ಉಪಾಯವಿಲ್ಲ" ಎಂದನು ಅಂಶುಮಂತನು ಈ ಕಪಿಲಾಜ್ಞೆಯನ್ನು ಶ್ರದ್ಧೆಯಿಂದ ಕೇಳಿ, ಅವನಿಗೆ ಪ್ರದಕ್ಷಿಣನಮಸ್ಕಾರಗಳನ್ನುಮಾಡಿ,ಯಜ್ಞಾಶ್ವವನ್ನು ತಂದು ತನ್ನ ತಾತನ ವಶಕ್ಕೆ ಒಪ್ಪಿಸಿದನು ಸಗರನ ಯಾಗವು ಪೂರ್ತಿಹೊಂದಿತು. ಆ ಮೇಲೆ ಸಗರನು, ತನ್ನ ರಾಜ್ಯವನ್ನು, ಅಂಶುಮಂತನ ವಶದಲ್ಲಿರಿಸಿ, ದೇಹದಲ್ಲಿ ಯೂ, ದೇಹಾನುಬಂಧಿಗಳಲ್ಲಿಯೂ ಮೋಹವನ್ನು ಬಿಟ್ಟು ಸಂಸಾರದಲ್ಲಿ ವಿರ ಕ್ತನಾಗಿ, ಔರ್ವಮಹರ್ಷಿಯು ಉಪದೇಶಿಸಿದ ಜ್ಞಾನಮಾರ್ಗವನ್ನು ಹಿಡಿ ದು ಮುಕ್ತಿಯನ್ನೂ ಹೊಂದಿದನು. ಇದು ಎಂಟನೆಯ ಅಧ್ಯಾಯವು

---

### ಗಂಗಾವತರಣವೃತ್ತಾಂತವು ಕಲ್ಮಾಷಪಾದ ಖಟ್ವಾಂಗಚರಿತ್ರವು.

ರಾಜಾ ಕೇಳು! ಕಪಿಲಾಜ್ಞೆಯಂತೆ ಅಂಶುಮಂತನು ಆಕಾಶಗಂಗೆ ಯನ್ನು ತರುವುದಕ್ಕಾಗಿ ಬಹುಕಾಲದವರೆಗೆ ತಪಸ್ಸುಮಾಡಿದನು. ಕೊ ನೆಗೆ ಅವನಿಂದ ಸಾಧ್ಯವಿಲ್ಲದೆ, ಅವನು ಹಾಗೆಯೇ ಕಾಲಾಧೀನನಾ ದನು. ಅವನ ಮಗನಾದ ದಿಲೀಪನೂ ತಾನು ಬದುಕಿರುವವರೆಗೂ ಅದೇ ಪ್ರಯತ್ನದಲ್ಲಿದ್ದು, ಕೊನೆಗೆ ಅವನೂ, ವಿಫಲಪ್ರಯತ್ನನಾಗಿಯೇ ಸತ್ತನು. ಆಮೇಲೆ ಇವನ ಮಗನಾದ ಭಗೀರಥನೆಂಬವನು, ಹೇಗಾದರೂ ಆ ಕಾರ್ಯ ವನ್ನು ಕೊನೆಗಾಣಿಸಬೇಕೆಂದು, ತನ್ನ ತಂದೆತಾತಂದಿರಿಗಿಂತಲೂ ಉಗ್ರತ ಪಸ್ಸನ್ನು ಮಾಡುತ್ತಿದ್ದನು. ಕೊನೆಗೆ ಗಂಗಾದೇವಿಯು ಇವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷಳಾಗಿ "ಓ ಭಗೀರಥಾ! ನಿನ್ನ ಕೋರಿಕೆಯನ್ನು ತಿಳಿಸು. ನಡೆಸಿಕೊಡುವೆನು" ಎಂದಳು ಭಗೀರಥನು ತನ್ನ ಉದ್ದೇಶವನ್ನು ತಿಳಿಸಿ ಪ್ರಾರ್ಥಿಸಲು, ಗಂಗಾದೇವಿಯು ಅವನನ್ನು ಕುರಿತು "ಓ ರಾಜಕುಮಾ ರಾ! ನಿನ್ನ ಕೋರಿಕೆಯಂತೆ ನಾನು ಭೂಮಿಗಾಗಲಿ, ಪಾತಾಳಕ್ಕಾಗಲಿ ಬ ರುವುದರಲ್ಲಿ ಅಡ್ಡಿಯಿಲ್ಲ. ಆದರೆ ನಾನು ಆಕಾಶದಿಂದ ಕೆಳಕ್ಕೆ ಬೀಳುವಾಗ ನನ್ನ ವೇಗವನ್ನು ತಡೆಯಬಲ್ಲವರಾರು? ಈ ಭೂಮಿಯೇನೋ ತಡೆಯಲಾರದು.

ಬೇರೆ ಯಾರೂ ತಡೆದುಕೊಳ್ಳತಕ್ಕವರಿಲ್ಲದಿದ್ದರೆ,ನಾನು ಈ ಭೂಮಿಯನ್ನು ಭೇದಿಸಿಕೊಂಡು ಪಾತಾಳಕ್ಕೆ ಪ್ರವೇಶಿಸಬೇಕಾಗುವುದು. ಇದಲ್ಲದೆ ಭೂಮಿ ಯಲ್ಲಿ ಪ್ರವಹಿಸುವುದಕ್ಕೆ ನನಗೆ ಸ್ವಲ್ಪಮಾತ್ರವೂ ಇಷ್ಟವಿಲ್ಲ. ಏಕೆಂದು ಕೇಳುವೆಯಾ! ಆ ಭೂಲೋಕದಲ್ಲಿ ಪಾಪಿಗಳೆಷ್ಟೋ ಮಂದಿಯುಂಟು. ಅ ವರು ತಮ್ಮ ಪಾಪವನ್ನು ಕಳೆಯುವುದಕ್ಕಾಗಿ ನನ್ನಲ್ಲಿ ಸ್ನಾನಮಾಡುವರು ಅವರು ನನಗೆ ಅಂಟಿಸಿಹೋದ ಪಾಪವನ್ನು ನಾನು ಯಾವವಿಧದಿಂದ ಕಳೆ ದುಕೊಳ್ಳಲಿ! ಈ ವಿಷಯಗಳಿಗೆ ನೀನು ತಕ್ಕ ಪ್ರತೀಕಾರವನ್ನು ಮೊದಲು ಯೋಚಿಸಬೇಕು" ಎಂದಳು ಅದಕ್ಕಾ ಭಗೀರಥನು, "ಅಮ್ಮಾ! ಭೂಮಿ ಯಲ್ಲಿ ಕೇವಲಪಾಪಿಗಳುಮಾತ್ರವೇ ಅಲ್ಲದೆ, ಪುಣ್ಯಾತ್ಮರೂ ಎಷ್ಟೋಮಂದಿ ಯುಂಟಲ್ಲವೆ? ಕಾಮ್ಯಕರ್ಮಗಳನ್ನು ಬಿಟ್ಟು, ಜಿತೇಂದ್ರಿಯರಾಗಿ, ಬ್ರ ಹ್ಮೋಪಾಸನದಿಂದ ಸಿದ್ಧಿಯನ್ನು ಪಡೆದ ಮಹರ್ಷಿಗಳೆಷ್ಟೋಮಂದಿಯಿ ರುವರು. ಅವರು ತಮ್ಮ ಸಂಬಂಧದಿಂದ ಲೋಕವನ್ನೇ ಪಾವನಮಾಡು ವರು. ಅವರೂ ನಿನ್ನಲ್ಲಿ ಸ್ನಾನಮಾಡುವರಲ್ಲವೆ? ಪಾಪಿಗಳ ಸಂಬಂಧದಿಂದ ನಿನ್ನಲ್ಲಿ ಸೇರಿದ ಪಾಪವು,ಅಂತಹ ಪುಣ್ಯಾತ್ಮರ ಸ್ಪರ್ಶದಿಂದ ಕಳೆದುಹೋಗು ವುದು, ಭಗವಂತನು ಸರ್ವಾತ್ಮಕನಾದುದರಿಂದ, ಅಂತಹ ಪುಣ್ಯಾತ್ಮರಲ್ಲಿ ದ್ದು, ಆ ಪಾಪಗಳನ್ನು ನೀಗಿಸುವನು ಇದಕ್ಕಾಗಿ ನೀನು ವಿಚಾರಿಸಬೇಕಾ ದುದಿಲ್ಲ ಭೂಮಿಯಲ್ಲಿ ನಿನ್ನ ವೇಗವನ್ನು ತಡೆದು ನಿಲ್ಲುವರಾರೆಂದು ಕೇಳಿದೆ ಯಲ್ಲವೆ? ವಸ್ತ್ರದಲ್ಲಿ ನೂಲೆಳೆಗಳಂತೆ, ಯಾವನು ಈ ಸಮಸ್ತಪ್ರಪಂಚದ ಲ್ಲಿಯೂ ವ್ಯಾಪಿಸಿರುವನೋ, ಬ್ರಹ್ಮನು ಮೊದಲಾಗಿ ಹುಲ್ಲುಕಡ್ಡಿಯವರೆಗಿನ ಸಮಸ್ತಶರೀರಗಳಲ್ಲಿಯೂ ಯಾವನು ಅಂತರಾತ್ಮನಾಗಿರುವನೋ, ರುದ್ರಶ ರೀರಕನಾದ ಆ ಪರಮಾತ್ಮನೇ ನಿನ್ನ ವೇಗವನ್ನು ಧರಿಸಬಲ್ಲನು" ಎಂದನು. ಅದಕ್ಕಾಗಂಗೆಯು "ವತ್ಸಾ! ಹಾಗಿದ್ದರೆ ನೀನು ಆ ಪರಮಶಿವನನ್ನೇಪ್ರಾ ರ್ಥಿಸಿ, ನನ್ನ ಪ್ರವಾಹವೇಗವನ್ನು ತಡೆದುಕೊಳ್ಳುವಂತೆ ಮಾಡು!"ಎಂದಳು ಇದರಮೇಲೆ ಭಗೀರಥನು ರುದ್ರನನ್ನುಕುರಿತು ತಪಸ್ಸುಮಾಡಿ, ಸ್ವಲ್ಪಕಾಲ ದೊಳಗಾಗಿಯೇ ಅವನನ್ನು ಪ್ರಸನ್ನನನ್ನಾಗಿ ಮಾಡಿಕೊಂಡಳು. ಸರ್ವ ಜ್ಞನಾದ ರುದ್ರನೂ ಈ ಕಾರ್ಯವನ್ನು ತಾನು ನಡೆಸಬೇಕೆಂದು ಮೊದಲೇ

ಸಂಕಲ್ಪಿಸಿದವನಾಗಿದ್ದುದರಿಂದ, ಭಗೀರಥನ ಪ್ರಾರ್ಥನೆಗೆ ಅಡ್ಡಮಾತಾಡ
ದೆ, ವಿಷ್ಣುಪಾದೋದ್ಭವೆಯಾದುದರಿಂದ ಪರಮಪಾವನೆಯೆನಿಸಿಕೊಂಡ
ಗಂಗಾನದಿಯನ್ನು ಶಿರಸ್ಸಿನಲ್ಲಿ ಧರಿಸುವುದಕ್ಕೆ ಸಂತೋಷದಿಂದ ಸಮ್ಮತಿಸಿ
ದನು ಆಮೇಲೆ ಭಗೀರಥನ ಪ್ರಾರ್ಥನೆಯಿಂದ ಗಂಗೆಯು, ಆಕಾಶದಿಂದಿಳಿ
ದು, ಶಿವನ ಜಟಾಜೂಟದಲ್ಲಿ ಬಿದ್ದಳು ಭಗೀರಥನು, ಆ ಗಂಗೆಯ
ನ್ನು ತನ್ನ ಪಿತೃಗಳ ಭಸ್ಮರಾಶಿಯು ಬಿದ್ದಿದ್ದ ಸ್ಥಳಕ್ಕೆ ಕರೆದುಕೊಂಡು ಹೋ
ಗಬೇಕೆಂದುದ್ದೇಶಿಸಿ, ತನ್ನ ರಥವನ್ನೇರಿ ವಾಯುವೇಗದಿಂದ ಹೊರಟನು.
ಗಂಗೆಯೂ ಆ ರಥದ ದಾರಿಯನ್ನೇ ಅನುಸರಿಸಿಹೋಗುತ್ತ,ದಾರಿಯಲ್ಲಿ ಅನೇ
ಕದೇಶಗಳನ್ನು ತನ್ನ ಸಂಬಂಧದಿಂದ ಪಾವನಮಾಡುತ್ತ, ಕೊನೆಗೆ ದಗ್ಧರಾ
ದ ಸಗರಕುಮಾರರ ಭಸ್ಮರಾಶಿಯನ್ನು ತನ್ನ ಪ್ರವಾಹಜಲದಿಂದ ತೊಳೆದ
ಳು. ರಾಜಾ! ಅತಿಕ್ರೂರವಾದ ಬ್ರಾಹ್ಮಣಶಾಪದಿಂದ ದಗ್ಧರಾದ ಸಗರಪುತ್ರ
ರೂಕೂಡ ಗಂಗಾಜಲಸಂಬಂಧದಿಂದ ಸ್ವರ್ಗವನ್ನು ಹೊಂದಿದರು ಹೀಗೆ
ಭಸ್ಮೀಭೂತವಾದ ತಮ್ಮ ಶರೀರದಿಂದಲೇ ಸಗರಪುತ್ರರು ಗಂಗೆಯನ್ನು
ಸ್ಪರ್ಶಿಸಿ ಸದ್ಗತಿಯನ್ನು ಹೊಂದಿರುವಾಗ, ದೃಢನಿಯಮದಿಂದ ಗಂಗಾ
ಸ್ನಾನವನ್ನು ಮಾಡತಕ್ಕವರಿಗೆ ಸದ್ಗತಿಯುಂಟಾಗುವುದೇನಾಶ್ಚರ್ಯವು?
ಸಂಸಾರತಾರಕನಾದ ಶ್ರೀಹರಿಯ ಪಾದತೀರ್ಥವೆನಿಸಿಕೊಂಡ ಗಂಗಾನದಿಗೆ
ಈ ಪ್ರಭಾವವಿರುವುದೇನೂ ಅತಿಶಯವಲ್ಲ ಆ ಭಗವಂತನ ಪಾದಕಮಲವ
ನ್ನು ತಮ್ಮ ಹೃದಯದಲ್ಲಿ ಶ್ರದ್ಧೆಯಿಂದ ನಿಲ್ಲಿಸಿದ ಮಹಾಯೋಗಿಗಳು, ರಾ
ಗಾದಿದೋಷಗಳನ್ನು ನೀಗಿ, ದುರ್ನಿವಾರವಾದ ಪ್ರಕೃತಿಸಂಬಂಧವನ್ನು
ಬಿಟ್ಟು. ಆ ಕ್ಷಣವೇ ಮುಕ್ತಿಯನ್ನು ಹೊಂದುವರು ಇನ್ನು ಆ ಭಗವಂತನ
ಪಾದತೀರ್ಥಸ್ಪರ್ಶದಿಂದ ಸದ್ಗತಿಯುಂಟಾಗುವುದರಲ್ಲಿ ಆಶ್ಚರ್ಯವೇನುಂಟು?

ಓ ರಾಜಾ! ಇನ್ನು ಭಗೀರಥನ ಮುಂದಿನ ಸಂತತಿಯನ್ನು ಹೇ
ಳುವೆನು ಕೇಳು! ಆ ಭಗೀರಥನಿಗೆ ಶುಕ್ರನೆಂಬ ಕುಮಾರನು ಹುಟ್ಟಿದನು.
ಶುಕ್ರನಿಂದ ನಾಭಾವರನೂ, ಅವನಿಂದ ಸಿಂಧುದ್ವೀಪನೂ, ಅವನಿಂದ ಅ
ಮಿತಾಯುವೂ ಜನಿಸಿದರು. ಈ ಅಮಿತಾಯುವಿನ ಮಗನು ಋತುಪರ್ಣನು
ಈತನೇ ಪ್ರಸಿದ್ಧನಾದ ನಳಚಕ್ರವರ್ತಿಗೆ ಮಿತ್ರನಾಗಿ, ಅವನಿಂದ ಅಶ್ವವಿ

ದ್ಯೆಯನ್ನು ತಾನು ತಿಳಿದುಕೊಂಡು, ಅವನಿಗೆ ತನ್ನಲ್ಲಿದ್ದ ಅಕ್ಷಹೃದಯವನ್ನು ಪದೇಶಿಸಿದನು ಈ ಋತುಪರ್ಣನಿಗೆ ಸರ್ವಕಾಮನೆಂಬ ಮಗನಾದನು. ಆತನ ಮಗನು ಸುದಾಸನು. ಸುದಾಸನ ಮಗನು ಮಿತ್ರಸಹನು ಇವನು ಮದಯಂತಿಯೆಂಬವಳನ್ನು ವರಿಸಿದನು. ಈ ಮಿತ್ರಸಹನನ್ನೇ ಕಲ್ಮಾಷಪಾದನೆಂದೂ ಹೇಳುವರು. ಈತನು ಒಮ್ಮೆ ವಸಿಷ್ಠಮಹರ್ಷಿಯ ಶಾಪದಿಂದ ರಾಕ್ಷಸನಾದನು ಇವನಿಗೆ ಔರಸಸಂತಾನವೂ. ಇಲ್ಲದೆಹೋಯಿತು" ಎಂದನು. ಆಗ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು, "ಓ ಮಹರ್ಷೀ! ಈ ಮಿತ್ರಸಹನು ಗುರುವಾದ ವಸಿಷ್ಠನ ಶಾಪಕ್ಕೆ ಗುರಿಯಾದುದೇಕೆ? ಈ ವೃತ್ತಾಂತವನ್ನು ನನಗೆ ತಿಳಿಸಬಹುದಾಗಿದ್ದರೆ, ವಿವರಿಸಿ ಹೇಳಬೇಕು" ಎಂದನು ಅದಕ್ಕಾ ಶುಕನು "ರಾಜಾ ಕೇಳು! ಆ ಮಿತ್ರಸಹನು, ಒಮ್ಮೆ ಬೇಟೆಗಾಗಿ ಕಾಡಿನಲ್ಲಿ ಸಂಚರಿಸುತ್ತ, ಒಬ್ಬಾನೊಬ್ಬ ರಾಕ್ಷಸನನ್ನು ಸಂಹರಿಸಿ, ಈ ರಾಕ್ಷಸನಿಗೆ ಸಹೋದರನಾಗಿದ್ದ ಮತ್ತೊಬ್ಬ ರಾಕ್ಷಸನನ್ನು ಕೊಲ್ಲದೆ ಅಲಕ್ಷ್ಯವಾಗಿ ಬಿಟ್ಟುಬಿಟ್ಟನು. ಹೀಗೆ ತಲೆತಪ್ಪಿಸಿಕೊಂಡುಹೋದ ರಾಕ್ಷಸನು, ತನ್ನಣ್ಣನನ್ನು ಕೊಂದ ರಾಜನಿಗೆ ತಕ್ಕ ಪ್ರತೀಕಾರವನ್ನು ಮಾಡಬೇಕೆಂದು ಯೋಚಿಸಿ, ವೇಷಧಾರಿಯಾಗಿ ಬಂದು, ಆ ರಾಜನ ಮನೆಯಲ್ಲಿಯೇ ಅಡಿಗೆಯವನಾಗಿ ಸೇರಿಕೊಂಡನು ಒಮ್ಮೆ ಕುಲಗುರುವಾದ ವಸಿಷ್ಠನು ರಾಜನ ಮನೆಯಲ್ಲಿ ಭೋಜನಾರ್ಥಿಯಾಗಿ ಬಂದಾಗ, ಇವನು ಮನುಷ್ಯಮಾಂಸವನ್ನು ಪಕ್ವಮಾಡಿ ಅವನ ಎಲೆಗೆ ಬಡಿಸಿದನು. ಎಲೆಗೆ ಬಡಿಸುತ್ತಿರುವಾಗಲೇ ವಸಿಷ್ಠನು,ಅದರ ದುರ್ಗಂಧದಿಂದ, ಅದು ಅಭಕ್ಷ್ಯವಾದ ನರಮಾಂಸವೆಂಬುದನ್ನು ತಿಳಿದು, ಕೋಪದಿಂದ ಹಿಂದುಮುಂದುಯೋಚಿಸದೆ, ಮುಂದಿದ್ದ ರಾಜನನ್ನು ಕುರಿತು "ದುರಾತ್ಮಾ! ನನ್ನ ಭೋಜನಕ್ಕಾಗಿ ನರಮಾಂಸವನ್ನಿಕ್ಕಿಸುವೆಯಾ? ನೀನು ರಾಕ್ಷಸಜನ್ಮವನ್ನು ಹೊಂದು!" ಎಂದು ಶಪಿಸಿಬಿಟ್ಟನು ಕೊನೆಗೆ ಅದು ರಾಕ್ಷಸನ ಕೃತ್ಯವೇಹೊರತು ರಾಜನ ತಪ್ಪಲ್ಲವೆಂದು ವಸಿಷ್ಠನಿಗೆ ತಿಳಿದುಬಂದುದರಿಂದ, ತಾನು ಕೊಟ್ಟ ಶಾಪಕ್ಕೆ ಹನ್ನೆರಡುವರ್ಷದವರೆಗೆಮಾತ್ರ ಕಾಲಾವಧಿಯನ್ನು ನಿರ್ಣಯಿಸಿ, ಅದರಮೇಲೆ ಆ ರಾಜನಿಗೆ ರಾಕ್ಷಸಜನ್ಮವು

ಬಿಟ್ಟುಹೋಗುವಂತೆ ಅನುಗ್ರಹಿಸಿದನು. ಆದರೇನು ? ಇಷ್ಟರಲ್ಲಿ ನಿರಪರಾ
ಧಿಯಾದ ತನ್ನನ್ನು ಶಪಿಸಿದುದಕ್ಕಾಗಿ ರಾಜನಿಗೆ, ವಸಿಷ್ಠನಮೇಲೆ ಅತ್ಯಾ
ಕ್ರೋಶವು ಹುಟ್ಟಿತು. ಆ ಗುರುವಿಗೆ ಪ್ರತಿಶಾಪವನ್ನು ಕೊಡುವುದಕ್ಕಾಗಿ,
ಕೈಗೆ ನೀರನ್ನು ತೆಗೆದುಕೊಂಡು, ಅದನ್ನು ಅಭಿಮಂತ್ರಿಸಿದನು ಆ ಶಾಪಜ
ಲವನ್ನು ವಸಿಷ್ಠನಮೇಲೆ ಪ್ರಯೊಗಿಸುವಷ್ಟರಲ್ಲಿ, ಅವನ ಪತ್ನಿಯಾದ ಮ
ದಯಂತಿಯು ಥಟ್ಟನೆ ಬಂದು, ಪತಿಯ ಕೈಯನ್ನು ಹಿಡಿದು "ನಾಥಾ! ನ
ಮಗೆ ಪರಮಪೂಜ್ಯರಾದ ಗುರುಗಳಮೇಲೆ ಕೋಪಿಸುವುದು ಯುಕ್ತವಲ್ಲ !
ಈ ಶಾಪಜಲವನ್ನು ಕೆಳಗೆ ಚಲ್ಲಿಬಿಡು" ಎಂದು ಪ್ರಾರ್ಥಿಸಿದಳು ಅತಿ
ತೀವ್ರವಾದ ಆ ಶಾಪಜಲವನ್ನು ಎಲ್ಲಿ ಬಿಡಬೇಕೆಂದು ರಾಜನು ಸುತ್ತಲೂ
ನೋಡಿದನು. ಭೂಮಿ, ಆಕಾಶ, ದಿಕ್ಕು, ವಿದಿಕ್ಕುಗಳೆಲ್ಲವೂ ಅನೇಕಪ್ರಾಣಿ
ಗಳಿಗೆ ನೆಲೆಯಾಗಿರುವುದನ್ನು ನೋಡಿ, ಆ ಜಲವನ್ನು ಯಾವಕಡೆಗೆ ಚಲ್ಲಿದ
ರೂ ಅಲ್ಲಲ್ಲಿನ ಪ್ರಾಣಿಗಳಿಗೆ ಅಪಾಯವುಂಟಾಗುವುದೆಂಬ ಶಂಕೆಯಿಂದ
ರಾಜನು ಆ ಶಾಪಜಲವನ್ನು ತನ್ನ ಪಾದಗಳಮೇಲೆಯೇ ಬಿಟ್ಟುಕೊಂಡನು.
ಅದರ ವೇಗದಿಂದ ಅವನ ಪಾದಗಳು ಸುಟ್ಟು, ಇದ್ದಲಿನಂತೆ ಕಪ್ಪಾದುವು.
ರಾಜೇಂದ್ರಾ ! ಈ ಕಾರಣದಿಂದಲೇ ಅವನಿಗೆ ಕಲ್ಮಾಷಪಾದನೆಂಬ ಹೆಸರಾ
ಯಿತು ಇವನು ಆಕ್ಷಣವೇ ವಸಿಷ್ಠಶಾಪದಂತೆ ರಾಕ್ಷಸರೂಪವನ್ನು
ಹೊಂದಿ, ಕಾಡುಕಾಡಾಗಿ ತಿರುಗಿ, ಮೃಗಗಳನ್ನು ಹಿಡಿದು ಭಕ್ಷಿಸುತಿದ್ದ
ನು. ಹೀಗೆ ಆ ರಾಜನು ರಾಕ್ಷಸರೂಪದಿಂದ ಅರಣ್ಯದಲ್ಲಿ ಸುತ್ತುತ್ತಿರುವಾ
ಗ, ಒಂದಾನೊಂದುಕಡೆಯಲ್ಲಿ ವನವಾಸಿಗಳಾದ ಇಬ್ಬರು ಮುನಿದಂಪತಿಗ
ಳು, ರಹಸ್ಯವಾಗಿ ಸಂಭೋಗಸುಖವನ್ನನುಭವಿಸುತಿದ್ದರು. ಕ್ಷುಧಾರ್ತನಾ
ಗಿ ಬರುತಿದ್ದ ಆ ರಾಕ್ಷಸನು, ಅಕಸ್ಮಾತ್ತಾಗಿ ಆ ಮುನಿದಂಪತಿಗಳನ್ನು ಕಂ
ಡು, ಅವರಲ್ಲಿ ಪುರುಷನನ್ನು ಹಿಡಿದು ಭಕ್ಷಿಸುವುದಕ್ಕಾಗಿ ಯತ್ನಿಸಿದನು. ಇ
ಷ್ಟರಲ್ಲಿ ಬ್ರಾಹ್ಮಣಪತ್ನಿಯು ಭಯದಿಂದ ಜೆಜ್ಜರಬಿದ್ದು, ಆ ರಾಕ್ಷಸನನ್ನು
ದೈನ್ಯದಿಂದ ಪ್ರಾರ್ಥಿಸುವಳು "ಎಲೈ ! ನೀನು ನಿಜವಾಗಿ ರಾಕ್ಷ
ಸನಲ್ಲ ! ಇಕ್ಷ್ವಾಕುವಂಶಶ್ರೇಷ್ಠನು ! ಮಹಾತ್ಮಳಾದ ಮದಯಂತಿಯ ಪತಿ
ಇಯು ! ವೀರಾಗ್ರೇಸರನೆನಿಕೆಸಿಕೊಂಡ ನೀನು, ಬ್ರಾಹ್ಮಣವಧರೂಪವಾದ ಈ

ಪಾಪಕಾರ್ಯಕ್ಕೆ ಕೈಯಿಕ್ಕುವುದು ಯುಕ್ತವೆ? ಪುತ್ರಾರ್ಥಿನಿಯಾಗಿ ನಾನು ಪತಿಸೇವೆಯನ್ನು ಮಾಡುತ್ತಿರುವೆನು ನನ್ನಲ್ಲಿ ಕೃಪೆಯಿಟ್ಟು ನನಗೆ ಪತಿಭಿಕ್ಷೆ ವನ್ನು ಕೊಟ್ಟು ಕಾಪಾಡಬೇಕು! ಈತನಾದರೋ ಬ್ರಾಹ್ಮಣನು! ಇನ್ನೂ ಈತನು ನನ್ನಲ್ಲಿ ರತಿಸುಖದಿಂದ ತೃಪ್ತನಾಗಿಲ್ಲ! ಈ ಸ್ಥಿತಿಯಲ್ಲಿ ಇವನನ್ನು ನೀನು ಭಕ್ಷಿಸಬಹುದೆ? ಇದು ಮಹಾಪಾತಕವಲ್ಲವೆ? ಇದಲ್ಲದೆ ಮನುಷ್ಯ ದೇಹವೇ ಜೀವನಿಗೆ ಸರ್ವವಿಧಪುರುಷಾರ್ಥಗಳನ್ನೂ ಕೈಕೂಡಿಸತಕ್ಕುದು. ಅಂತಹ ಮನುಷ್ಯರನ್ನು ಕೊಲ್ಲುವುದರಿಂದ, ಅವನ ಶರೀರವನ್ನು ಮಾತ್ರವೇ ಅಲ್ಲದೆ, ಆ ಜೀವನಿಗೆ ಅದರಿಂದ ಲಭಿಸಬಹುದಾದ ಇಹಪರಲೋಕಗಳ ಪು ರುಷಾರ್ಥಗಳೆಲ್ಲವನ್ನೂ ನಿರ್ಮೂಲವಾಗಿ ಕೆಡಿಸಿದಂತಾಗುವುದು ಆದುದರಿಂ ದಲೇ ಮನುಷ್ಯವಧವನ್ನು ಲೋಕದಲ್ಲಿ ಮಹಾಪಾಪಹೇತುವೆಂದು ಹೇಳು ವರು ಇದರಮೇಲೆ ಈತನು ಶುದ್ಧವಾದ ಬ್ರಹ್ಮಕುಲದಲ್ಲಿ ಹುಟ್ಟಿದವನು. ವೇದಾಧ್ಯಯನಸಂಪನ್ನನು ತಪಸ್ಸಿನಿಂದಲೂ, ಶೀಲದಿಂದಲೂ, ಗುಣದಿಂದ ಲೂ ಮೇಲೆನಿಸಿದವನು ಸರ್ವಾಂತರಾತ್ಮನಾಗಿ, ಸಮಸ್ತಗುಣಾಕರನಾದ ಪರಮಪುರುಷನನ್ನು ಉಪಾಸನೆಮಾಡುವುದರಲ್ಲಿಯೇ ಆಸಕ್ತನಾಗಿರತಕ್ಕವ ನು ರಾಜರ್ಷಿಯೆನಿಸಿಕೊಂಡ ನೀನು, ಇಂತಹ ಬ್ರಹ್ಮರ್ಷಿಯನ್ನು ಕೊಲ್ಲು ವುದಕ್ಕೆ ಯತ್ನಿಸಬಹುದೆ ಓ ರಾಜಾ! ನಿನಗೆ ತಿಳಿಯದ ಧರ್ಮಗಳಿಲ್ಲ! ನೀ ನು ವಿಪನ್ನರಾದ ಪ್ರಜೆಗಳನ್ನು ಕಾಪಾಡತಕ್ಕವನು ತಂದೆಯು ಮಗನನ್ನು ಕೊಲ್ಲುವುದಕ್ಕೆ ಕೈಯೆತ್ತುವಂತೆ, ಕಾಪಾಡತಕ್ಕ ಪ್ರಭುವಾದ ನೀನೇ ಇವ ನನ್ನು ಕೊಲ್ಲುವುದು ಧರ್ಮವೆ? ಸಾಧುಪ್ರಿಯನೆನಿಸಿಕೊಂಡ ನೀನು, ಪರಮ ಸಾಧುವಾಗಿಯೂ, ಪಾಪರಹಿತನಾಗಿಯೂ, ಬ್ರಹ್ಮವಾದಿಯಾಗಿಯೂ, ಕ ಲ್ಪಸೂತ್ರಗಳನ್ನು ಬಲ್ಲವನಾಗಿಯೂ ಇರುವ ಈ ಬ್ರಾಹ್ಮಣನನ್ನು ಕೊಲ್ಲು ವುದೆಂದರೇನು? ಗೋಹತ್ಯೆಯೂ, ಬ್ರಹ್ಮಹತ್ಯೆಯೂ ಸಮಾನವಾದ ಕ್ರೂರ ಪಾತಕವೆನಿಸುವುದು ಆದುದರಿಂದ ನೀನು ಇವನನ್ನು ಬಿಟ್ಟುಬಿಡು! ನಿನ್ನ ಹಸಿವಿನ ಆತುರಕ್ಕಾಗಿ ಹೇಗಾದರೂ ಇವನನ್ನು ಭಕ್ಷಿಸಿಯೇ ತೀರಬೇಕೆಂದು ನಿಶ್ಚಯಿಸಿದ್ದಪಕ್ಷದಲ್ಲಿ, ಮೊದಲು ನನ್ನನ್ನು ಭಕ್ಷಿಸಿ, ಆಮೇಲೆ ಬೇಕಾದರೆ ಇವನನ್ನು ಭಕ್ಷಿಸು! ನಾನು ಇವನನ್ನಗಲಿ ಬದುಕಿರಲಾರೆನು" ಎಂದು

ದೈನ್ಯದಿಂದ ಮೊರೆಯಿಡುತ್ತ, ಬಾರಿಬಾರಿಗೂ ಪ್ರಾರ್ಥಿಸುತಿದ್ದಳು. ಹಾಗಿದ್ದರೂ ಕೇಳದೆ ಸೌದಾಸನು, ದೈವಚೋದಿತನಾಗಿ ಆ ಬ್ರಾಹ್ಮಣನಮೇಲೆ ಬಿದ್ದು, ಹುಲಿಯು ಹಸುವನ್ನು ನುಂಗುವಂತೆ ಅವನನ್ನು ಹಿಡಿದು ಭಕ್ಷಿಸಿಬಿಟ್ಟನು. ಆಗ ಬ್ರಾಹ್ಮಣಿಯು ದಿಕ್ಕಿಲ್ಲದೆ ಗೋಳಿಡುತ್ತ, ಸಹಿಸಲಾರದ ದುಃಖದಿಂದ ತತ್ತಳಿಸುತಿದ್ದು, ಕೊನೆಗೆ ಕೋಪಾವಿಷ್ಟಳಾಗಿ ಸೌದಾಸನನ್ನು ಕುರಿತು “ಓ ದುರಾತ್ಮಾ ! ನಾನು ಅಷ್ಟುವಿಧದಿಂದ ಪ್ರಾರ್ಥಿಸಿದರೂ ಕೇಳದೆ,ನಿರಪರಾಧಿಯಾದ ನನ್ನ ಪತಿಯನ್ನು, ಕಾಮಾರ್ತನಾಗಿದ್ದ ಕಾಲದಲ್ಲಿ ನೀನು ಹಿಡಿದು ಭಕ್ಷಿಸಿದೆಯಲ್ಲವೆ ? ಆದುದರಿಂದ ನೀನು ಶಾಪಾರ್ಹನು ! ನೀನೂ ಹೀಗೆಯೇ ಸ್ತ್ರೀಯರೊಡನೆ ಸಂಗಮಿಸಿದಕಾಲದಲ್ಲಿ ಮರಣವನ್ನು ಹೊಂದು !” ಎಂದು ಶಪಿಸಿ, ತಾನೂ ತನ್ನ ಪತಿಯೊಡನೆ ಸಹಗಮನಮಾಡುವುದಕ್ಕಾಗಿ ನಿಶ್ಚಯಿಸಿಕೊಂಡಳು.ಆ ರಾಕ್ಷಸನು ಬಿಸಾಡಿದ ತನ್ನ ಪತಿಯ ದೇಹದ ಅಸ್ಥಿಗಳೆಲ್ಲವನ್ನೂ ಸಂಗ್ರಹಿಸಿ ತಂದು, ಅದನ್ನು ಚಿತೆಯಮೇಲೇರಿಸಿ, ಅದಕ್ಕೆ ಬೆಂಕಿಯನ್ನಿಟ್ಟು, ತಾನೂ ಅದರಮೇಲೆ ಮಲಗಿ, ಪತಿಲೋಕವನ್ನು ಹೊಂದಿದಳು ಇತ್ತಲಾಗಿ ಸೌದಾಸನು ಹನ್ನೆರಡುವರ್ಷಗಳಾದಮೇಲೆ ಶಾಪವಿಮುಕ್ತನಾಗಿ ತನ್ನ ಪುರವನ್ನು ಸೇರಿದನು ಒಮ್ಮೆ ಕಾಮಾತುರದಿಂದ ತನ್ನ ಪತ್ನಿಯಾದ ಮದಯಂತಿಯೊಡನೆ ಕ್ರೀಡಿಸುವುದಕ್ಕಾಗಿ ಯತ್ನಿಸುವಷ್ಟರಲ್ಲಿ, ಮಹಾಬುದ್ಧಿಮತಿಯಾದ ಆಕೆಯು, ಅವನಿಗೆ ಮುನಿಪತ್ನಿಯ ಶಾಪವನ್ನು ತಿಳಿಸಿ, ಅವನನ್ನು ನಿವಾರಿಸಿದಳು. ಅದು ಮೊದಲು ಸೌದಾಸನು ಮರಣಭಯದಿಂದ ಸ್ತ್ರೀಸಂಗವನ್ನೇ ತ್ಯಜಿಸಿಬಿಟ್ಟನು ಈ ಕಾರಣದಿಂದ ಅವನಿಗೆ ಔರಸಸಂತಾನವಿಲ್ಲದೆ ಹೋಯಿತು. ಆದರೆ ಸೌದಾಸನು ತನಗೆ ಸಂತಾನವಿಲ್ಲದುದರಿಂದ ತನ್ನ ವಂಶವು ಅಷ್ಟಕ್ಕೇ ನಿಂತು ಹೋಗದಂತೆ ಮಾಡಬೇಕೆಂದು, ತನ್ನ ಕುಲಗುರುವಾದ ವಸಿಷ್ಠನಲ್ಲಿ ಪ್ರಾರ್ಥಿಸಿದನು ಅವನ ಪ್ರಾರ್ಥನೆಯಮೇಲೆ ವಸಿಷ್ಠನು ಮದಯಂತಿಯಲ್ಲಿ ಗರ್ಭೋತ್ಪತ್ತಿಯನ್ನುಂಟುಮಾಡಿದನು ಗರ್ಭವು ಬೆಳೆಯಲಾರಂಭಿಸಿ ಏಳುಸಂವತ್ಸರಗಳಾದರೂ ಪ್ರಸವವಾಗಲಿಲ್ಲ. ಆಗ ಮದಯಂತಿಯು, ಕೋಪದಿಂದ ಒಂದುಕಲ್ಲನ್ನು ತೆಗೆದು ತನ್ನ ಹೊಟ್ಟೆಯನ್ನು ಚಚ್ಚಿಕೊಳ್ಳಲು,

ಒಡನೆಯೇ ಪುತ್ರಜನನವಾಯಿತು ಅಶ್ಮ (ಶಿಲಾ) ಘಾತದಿಂದ ಹುಟ್ಟಿದ ಈ ಪುತ್ರನಿಗೆ ಅಶ್ಮಕನೆಂದೇ ಲೋಕದಲ್ಲಿ ಪ್ರಸಿದ್ಧಿಯುಂಟಾಯಿತು. ಈ ಅಶ್ಮಕನ ಮಗನು ನಾರೀಕವಚನೆಂದೂ,ಮೂಲಕನೆಂದೂ ಎರಡು ಹೆಸರುಗಳಿಂದ ಪ್ರಸಿದ್ಧನಾದನು ಹಿಂದೆ ಪರಶುರಾಮನು ಕ್ಷತ್ರಿಯರನ್ನು ನಿರ್ಮೂಲವಾಗಿ ಸಂಹರಿಸುವುದಕ್ಕಾಗಿ, ಇಪ್ಪತ್ತೊಂದಾವರ್ತಿ ಭೂಮಿಯನ್ನು ಸುತ್ತಿಸುತ್ತಿ ಹುಡುಕಿ ಕೊಲ್ಲುತ್ತಬಂದನು. ಆಗ ಅಶ್ಮಕನ ಅಂತಃಪುರದ ರಾಜಸ್ತ್ರೀಯರು, ಆ ರಾಜಕುಮಾರನನ್ನು ತಮ್ಮ ಗುಂಪಿನಲ್ಲಿ ಬಚ್ಚಿಟ್ಟುಕೊಂಡು, ಪರಶುರಾಮನ ಕಣ್ಣಿಗೆ ಬೀಳದಂತೆ ಕಾಪಾಡಿದರು. ಹೀಗೆ ಸ್ತ್ರೀಯರಿಂದ ರಕ್ಷಿತನಾದುದರಿಂದಲೇ ನಾರೀಕವಚನೆಂದೂ, ಆಗಿನ ಕ್ಷತ್ರಿಯವಂಶವು ವೃದ್ಧಿಹೊಂದುವುದಕ್ಕೆ ಇವನೇ ಮೂಲವಾದುದರಿಂದ ಮೂಲಕನೆಂದೂ ಹೆಸರನ್ನು ಪಡೆದನು ಮೂಲಕನಿಗೆ ದಶರಥನೆಂಬ ಮಗನಾದನು. ಆ ದಶರಥನಿಂದ ಐಲಬಿಲನೂ, ಅವನಿಂದ ವಿಶ್ವಸಹನೂ ಜನಿಸಿದರು. ಈ ವಿಶ್ವಸಹನಿಗೆ ಖಟ್ವಾಂಗನೆಂಬ ಮಗನಾದನು ಈತನು ಚಕ್ರವರ್ತಿಯಾಗಿ ಭೂಮಿಯನ್ನು ಪಾಲಿಸುತ್ತಿರುವಾಗ,ಒಮ್ಮೆ ದೇವತೆಗಳ ಸಹಾಯಾರ್ಥವಾಗಿ ಹೋಗಿ ಯುದ್ಧದಲ್ಲಿ ದೈತ್ಯರನ್ನು ಸಂಹರಿಸಿದನು. ಇದಕ್ಕಾಗಿ ದೇವತೆಗಳು ಅವನಲ್ಲಿ ಪ್ರಸನ್ನರಾಗಿ, ಅವನಿಗೆ ಕೇಳಿದ ವರವನ್ನು ಕೊಡುವುದಾಗಿ ವಾಗ್ದಾನಮಾಡಿದರು ಆಗ ಖಟ್ವಾಂಗನು ತನ್ನ ಆಯುಃಪರಿಮಾಣವೆಷ್ಟೆಂಬುದನ್ನು ತಿಳಿಸಬೇಕೆಂದು ಕೇಳಿಕೊಂಡನು. ಅದಕ್ಕಾ ದೇವತೆಗಳು "ಇನ್ನೆರಡುಗಳಿಗೆಗಳುಮಾತ್ರವೇ ನಿನ್ನ ಆಯುಃಕಾಲ"ವೆಂದು ತಿಳಿಸಿದರು. ಈ ಮಾತನ್ನು ಕೇಳಿದೊಡನೆ ಖಟ್ವಾಂಗನು,ತನ್ನ ಪುರಕ್ಕೆ ಬಂದು,ವೈರಾಗ್ಯಬುದ್ಧಿಯಿಂದ ಹೀಗೆಂದು ಯೋಚಿಸುವನು "ನನಗೆ ಬ್ರಹ್ಮಕುಲಕ್ಕಿಂತಲೂ ನನ್ನ ಪ್ರಾಣಗಳು ಪ್ರಿಯವಲ್ಲ! ನನಗೆ ಕುಲದೈವಕ್ಕಿಂತಲೂ ಪ್ರಿಯವಾದ ಬೇರೊಂದು ವಸ್ತುವಿಲ್ಲ ನನ್ನ ಮಕ್ಕಳಾಗಲಿ, ನನ್ನ ಹೆಂಡತಿಯರಾಗಲಿ, ನನ್ನ ರಾಜ್ಯಭೋಗಗಳಾಗಲಿ, ನನ್ನ ರಾಷ್ಟ್ರವಾಗಲಿ, ರಾಜ್ಯಾಧಿಕಾರವಾಗಲಿ, ಆ ಭಗವಂತನಿಗಿಂತಲೂ ನನಗೆ ಹೆಚ್ಚು ಪ್ರೇಮಪಾತ್ರಗಳಲ್ಲ. ಬಾಲ್ಯದಿಂದಲೂ ನನ್ನ ಮನಸ್ಸು ಅಧರ್ಮಮಾರ್ಗದಲ್ಲಿ ಪ್ರವೇಶಿಸಿದುದಿಲ್ಲ ಉತ್ತಮ

ಶ್ಲೋಕನಾದ ಆ ಪರಮಪುರುಷನಿಗಿಂತಲೂ ಭಿನ್ನವಾದ ಬೇರೊಂದು ವಸ್ತುವು ಈ ಪ್ರಪಂಚದಲ್ಲಿರುವುದಾಗಿ ನನಗೆ ತೋರಲಿಲ್ಲ. ಲೋಕಪಾಲಕರಾದ ದೇವತೆಗಳು ನನಗೆ ಬೇಕಾದ ವರಗಳನ್ನು ಕೊಡುವುದಾಗಿ ಹೇಳಿದ್ದರೂ, ಭಗವತ್ಸೇವೆಯಲ್ಲಿಯೇ ನಟ್ಟಮನಸ್ಸುಳ್ಳ ನನಗೆ, ಆ ವರಗಳನ್ನು ಪಡೆಯುವುದರಲ್ಲಿಯೂ ಆಸೆಯಿಲ್ಲ ಆ ದೇವತೆಗಳಿಗೂ ದೇಹಾತ್ಮಾಭಿಮಾನವು ತಪ್ಪಿದುದಲ್ಲ. ಅವರೂ ಇಂದ್ರಿಯವಶರಾಗಿ, ಯಾವಾಗಲೂ ತಮ್ಮ ಹೃದಯದಲ್ಲಿಯೇ ನೆಲೆಗೊಂಡಿರುವ ಪರಮಾತ್ಮನ ಮಹಿಮೆಯನ್ನು ತಿಳಿಯದೆ, ಅವನೇ ತಮಗೆ ಪ್ರಿಯವಸ್ತುವೆಂಬುದನ್ನೂ ತಿಳಿಯದೆ,ಅತ್ಯಲ್ಪವಾದ ವಿಷಯಸುಖವನ್ನೇ ಪರವಸ್ತುವನ್ನಾಗಿ ಭಾವಿಸುವರು. ದೇವತೆಗಳ ಸ್ಥಿತಿಯೇ ಹೀಗಿರುವಾಗ ಇತರಸಾಮಾನ್ಯಮನುಷ್ಯರ ಪಾಡೇನು? ಆ ದೇವತೆಗಳು ಕೊಡತಕ್ಕ ವರಗಳಾಗಲಿ, ಸ್ವರ್ಗಾದಿಲೋಕಗಳಾಗಲಿ ನಾವು ಪಡೆಯಬೇಕಾದ ಉತ್ತಮಪುರುಷಾರ್ಥಕ್ಕೆ ಪ್ರತಿಬಂಧಕಗಳೇ ಹೊರತು, ಶ್ರೇಯಸ್ಕರವಲ್ಲ. ಅವೊಂದರಲ್ಲಿಯೂ ನನಗೆ ಆಸೆಯಿಲ್ಲ. ಆದುದರಿಂದ ನಾನು, ಲೋಕದಲ್ಲಿ ಭಗವನ್ಮಾಯೆಯಿಂದ – ಏರ್ಪಟ್ಟವುಗಳಾಗಿಯೂ, ಗಂಧರ್ವನಗರದಂತೆ ಕ್ಷಣಕಾಲವಿದ್ದು ಹೋಗತಕ್ಕವುಗಳಾಗಿಯೂ ಇರುವ ಶಬ್ದಾದಿವಿಷಯಗಳಲ್ಲಿಯೂ, ಪ್ರಕೃತಿಪರಿಣಾಮರೂಪವಾದ ಶರೀರದಲ್ಲಿಯೂ ಅಭಿಮಾನವನ್ನು ತೊರೆದು, ವಿಶ್ವಾತ್ಮನಾದ ಆ ಭಗವಂತನನ್ನು ಭಕ್ತಿಯಿಂದ ಮರೆಹುಗುವೆನು. ಈಗ ಉಳಿದಿರತಕ್ಕ ನನ್ನ ಅಲ್ಪಕಾಲದ ಆಯುಶ್ಶೇಷದಲ್ಲಿಯಾದರೂ ದೃಢಧ್ಯಾನದಿಂದ ಆ ಭಗವಂತನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳುವೆನು" ಎಂದು ನಿಶ್ಚಯಿಸಿಕೊಂಡನು. ಓ ಪರೀಕ್ಷಿದ್ರಾಜಾ! ಸೌದಾಸನು ದೃಢಬುದ್ಧಿಯಿಂದ ಹೀಗೆ ನಿಶ್ಚಯಿಸಿಕೊಂಡು, ದೇಹಾದಿಗಳಲ್ಲಿ ಅಭಿಮಾನರೂಪವಾದ ಅಜ್ಞಾನವನ್ನು ಬಿಟ್ಟು, ಆತ್ಮಾನುಸಂಧಾನದಿಂದ ತನ್ನ ದೇಹವನ್ನು ನೀಗಿ, ಪಾಪರಾಹಿತ್ಯವೇ ಮೊದಲಾದ ಅಷ್ಟಗುಣಗಳುಳ್ಳ ಶುದ್ಧಾತ್ಮಸ್ವರೂಪವನ್ನು ಹೊಂದಿದನು. ನಿಜವಾದ ದೈವಭಕ್ತಿಯುಳ್ಳವರೆಲ್ಲರೂ ಯಾವನನ್ನು, ಪ್ರಮಾಣಸಿದ್ಧವಾಗಿಯೂ!ದುರೂಹವಾಗಿಯೂ ಇರುವ ಪರಬ್ರಹ್ಮವೆಂದು ಹೇಳುವರೋ,ಅಂತಹ ಪರಮಪುರುಷನಾದ ವಾಸುದೇವ

ನಲ್ಲಿ, ಮನಸ್ಸನ್ನು ನೆಲೆಗೊಳಿಸಿ, ಉತ್ತಮಗತಿಯನ್ನೂ ಹೊಂದಿದನು. ಇದು ಒಂಬತ್ತನೆಯ ಅಧ್ಯಾಯವು.

---

## ರಾಮಾವತಾರಚರಿತ್ರವು.

ರಾಜೇಂದ್ರಾ, ಕೇಳು ! ಈ ಖಟ್ವಾಂಗನಿಗೆ ದೀರ್ಘಬಾಹುವೆಂಬ ಮಗನಾದನು. ಈ ದೀರ್ಘಬಾಹುವಿನ ಮಗನೇ ಪ್ರಸಿದ್ಧನಾದ ರಘುಮಹಾರಾಜನು. ರಘುವಿನ ಮಗನು ಅಜಮಹಾರಾಜನು. ಈ ಅಜನ ಮಗನೇ ಪರಮಭಾಗ್ಯಶಾಲಿಯಾದ ದಶರಥಚಕ್ರವರ್ತಿಯು. ವೇದಸ್ವರೂಪನಾದ ಶ್ರೀಹರಿಯು, ದೇವತೆಗಳ ಪ್ರಾರ್ಥನೆಯಮೇಲೆ, ತನ್ನ ಬೇರೆಬೇರೆ ನಾಲ್ಕು ಅಂಶಗಳಿಂದ ದಶರಥನ ಗರ್ಭದಲ್ಲಿ, ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ಕುಮಕ್ಕಳಾಗಿ ಹುಟ್ಟಿದನು. ಈ ನಾಲ್ವರಲ್ಲಿ ಶ್ರೀರಾಮನ ಚರಿತ್ರವನ್ನು ತತ್ವದರ್ಶಿಗಳಾದ ವಾಲ್ಮೀಕ್ಯಾದಿಮಹರ್ಷಿಗಳನೇಕರು ಬಹಳ ವಿಪುಲವಾಗಿ ವರ್ಣಿಸಿರುವರು. ನೀನೂ ಅನೇಕಾವರ್ತಿ ಆ ಚರಿತ್ರವನ್ನು ಕೇಳಿರುವುದರಲ್ಲಿ ಸಂದೇಹವಿಲ್ಲ. ಯಾವನು ತಂದೆಯ ಮಾತನ್ನು ಪಾಲಿಸುವುದಕ್ಕಾಗಿ ರಾಜ್ಯವನ್ನು ಬಿಟ್ಟು ಕಾಡಿಗೆಹೋಗಿ, ತನ್ನ ಪ್ರಿಯೆಯಾದ ಸೀತಾದೇವಿಯ ಹಸ್ತಸ್ಪರ್ಶವನ್ನೂ ಸಹಿಸಲಾರದಷ್ಟು ಕೋಮಲಗಳಾದ ತನ್ನ ಪಾದಪದ್ಮಗಳಿಂದಲೇ ಅಲ್ಲಲ್ಲಿ ಸಂಚರಿಸುತಿದ್ದನೋ, ಸುಗ್ರೀವಲಕ್ಷ್ಮಣರಿಬ್ಬರೂ ಯಾವನನ್ನೇ ಹಿಂಬಾಲಿಸುತ್ತ, ತಮ್ಮ ಸಾಂತ್ವವಾಕ್ಯಗಳಿಂದ ಆಗಾಗ ಅವನ ಮಾರ್ಗಾಯಾಸವನ್ನು ನೀಗಿಸುತಿದ್ದರೋ, ಯಾವನು ರಾವಣನ ತಂಗಿಯಾದ ಶೂರ್ಪಣಖೆಯನ್ನು ವಿರೂಪಮಾಡಿ, ಅದರಿಂದ ಕುಪಿತನಾದ ರಾವಣನು ತನ್ನ ಪ್ರಿಯೆಯನ್ನಪಹರಿಸಿಕೊಂಡುಹೋಗಲು, ಆ ಸೀತಾವಿರಹದುಃಖದಿಂದ ಕೋಪೋದ್ದೀಪಿತನಾಗಿ, ರಾವಣನನ್ನು ಹುಡುಕುತ್ತ ಹೊರಟು, ದಾರಿಗಡ್ಡಲಾಗಿದ್ದ ಸಮುದ್ರವನ್ನು ತನ್ನ ಭ್ರೂಭಂಗಮಾತ್ರದಿಂದಲೇ ಹೆದರಿಸಿ, ಆ ಸಮುದ್ರವನ್ನು ಬಂಧಿಸಿ, ರಾವಣಾದಿರಾಕ್ಷಸರೆಂಬ ಮಹಾರಣ್ಯಕ್ಕೆ ದಾವಾಗ್ನಿಯಂತಿದ್ದನೋ, ಆ ಶ್ರೀರಾಮನು ನಮ್ಮನ್ನು ರಕ್ಷಿಸಲಿ" ಎಂದು ಶುಕಮ



1625. ಸೀತಾಸ್ವಯಂವರವು.

ಹಾಮುನಿಯು ರಾಮನನ್ನು ಧ್ಯಾನಿಸಿ, ಆ ಕಥೆಯನ್ನು ಪರೀಕ್ಷಿದ್ರಾಜನಿಗೆ ವಿವರಿಸಿ ತಿಳಿಸಲಾರಂಭಿಸಿದನು.

ಓ ರಾಜೇಂದ್ರಾ! ಕೇಳು! ದಶರಥಪುತ್ರನಾದ ಶ್ರೀರಾಮನು, ಬಾಲ್ಯ ದಲ್ಲಿಯೇ ವಿಶ್ವಾಮಿತ್ರಮಹಾಮುನಿಯ ಪ್ರಾರ್ಥನೆಯಿಂದ, ಅವನ ಯಾಗ ರಕ್ಷಣಾರ್ಥವಾಗಿ ತಮ್ಮನಾದ ಲಕ್ಷ್ಮಣನೊಡನೆ ಹೊರಟನು. ಅಲ್ಲಿ ಲಕ್ಷ್ಮಣನ ಸಹಾಯವನ್ನಪೇಕ್ಷಿಸದೆಯೇ, ಸುಬಾಹುಮಾರೀಚರೇ ಮೊದ ಲಾದ ಅನೇಕರಾಕ್ಷಸರನ್ನು ಕೊಂಡನು ಅಲ್ಲಿಂದ ಹಾಗೆಯೇ ಜನಕರಾಜನ ಪಟ್ಟಣಕ್ಕೆ ಬಂದನು. ಅಲ್ಲಿ ಸೀತಾಸ್ವಯಂವರಕ್ಕಾಗಿ ಅನೇಕವೀರಾಗ್ರೇಸರ ರು ಬಂದು ನೆರೆದಿದ್ದರು. ಆಗ ಮುನ್ನೂರುಮಂದಿ ಮಹಾಬಲಾಢ್ಯರಿಂದ ಸಾಗಿಸಿ ತರಲ್ಪಟ್ಟ, ಕಠೋರವಾದ ರುದ್ರಧನುಸ್ಸನ್ನು, ಸುಲಭವಾಗಿ ತನ್ನ ಕೈಯಿಂದೆತ್ತಿ ನಾಣೇರಿಸುವಾಗ, ಆನೆಯು ಕಬ್ಬಿನ ಜಲ್ಲೆಯನ್ನು ಮುರಿಯು ವಂತೆ ಲೀಲಾಮಾತ್ರದಿಂದ ಅದನ್ನು ಮುರಿದು, ಗುಣದಲ್ಲಿಯೂ, ಶೀಲದ ಲ್ಲಿಯೂ, ವಯಸ್ಸಿನಲ್ಲಿಯೂ, ರೂಪಸಂಪತ್ತಿಯಲ್ಲಿಯೂ ತನಗೆ ಅನುರೂಪ ಳಾದ ಸೀತಾದೇವಿಯನ್ನು ವಿವಾಹಮಾಡಿಕೊಂಡನು. ರಾಜೇಂದ್ರಾ! ಈ ಸೀತೆಯನ್ನು ಸಾಮಾನ್ಯರಾಜಕುಮಾರಿಯೆಂದೆಣಿಸಬೇಡ! ಭಗವಂತನಿಗೆ ಪರಸ್ವರೂಪದಲ್ಲಿ ವಕ್ಷಸ್ಥಲನಿವಾಸಿನಿಯಾದ ಮಹಾಲಕ್ಷ್ಮಿಯೇ ಜನಕರಾ ಜನ ಅರಮನೆಯಲ್ಲಿ ಸೀತಾರೂಪದಿಂದಿದ್ದು, ರಾಮಾವತಾರದಲ್ಲಿ ಅವನನ್ನೇ ಕೈಹಿಡಿದಳೆಂದು ತಿಳಿ! ಈ ಸ್ವಯಂವರವಾದಮೇಲೆ ರಾಮನು ಸೀತಾಸ ಹಿತನಾಗಿ ತನ್ನ ರಾಜಧಾನಿಯಾದ ಅಯೋಧ್ಯೆಗೆ ಹಿಂತಿರುಗಿಬರುವಾಗ, ಕ್ಷ ತ್ರಿಯವಂಶವನ್ನು ನಿರ್ಮೂಲಮಾಡುವುದಕ್ಕಾಗಿ ಇಪ್ಪತ್ತೊಂದಾವರ್ತಿ ಭೂಮಿಯನ್ನು ಸುತ್ತಿಬಂದ ಪರಶುರಾಮನು, ನಡುದಾರಿಯಲ್ಲಿ ಈತನನ್ನಿದಿರಿ ಸಿದನು ಆಗ ರಾಮನು ಪರಶುರಾಮನ ಗರ್ವವನ್ನು ಮುರಿದು ಜಯಶೀಲ ನಾಗಿ ಅಯೋಧ್ಯೆಗೆ ಬಂದು, ಸೀತಾಸಮೇತನಾಗಿ ಸುಖದಿಂದಿದ್ದನು ಕೆಲ ವು ದಿನಗಳಮೇಲೆ ದಶರಥನು, ರಾಜ್ಯಾರ್ಹನಾದ ರಾಮನಿಗೆ ಪಟ್ಟಾಭಿಷೇಕ ವನ್ನು ಮಾಡುವುದಕ್ಕಾಗಿ ಸಕಲಸನ್ನಾಹಗಳನ್ನೂ ಸಿದ್ಧಪಡಿಸಿದ್ದನು. ಆದ ರೆ, ದಶರಥನು ಹಿಂದೆ ಒಂದಾನೊಂದು ಕಾಲದಲ್ಲಿ, ತನ್ನ ಕಿರಿಯ ಹೆಂಡತಿಯಾ

ದ ಕೈಕೇಯಿಗೆ ಎರಡು ವರಗಳನ್ನು ಕೊಡುವುದಾಗಿ ವಾಗ್ದಾನಮಾಡಿದ್ದು ದರಿಂದ, ಆಕೆಯು ರಾಮನಿಗೆ ಪಟ್ಟಾಭಿಷೇಕಪ್ರಯತ್ನವು ನಡೆಯುತ್ತಿರುವು ದನ್ನು ನೋಡಿ ಸಹಿಸಲಾರದೆ, ರಾಮನನ್ನು ಕಾಡಿಗೆ ಕಳುಹಿಸಬೇಕೆಂದೂ, ತನ್ನ ಮಗನಾದ ಭರತನಿಗೆ ರಾಜ್ಯಾಭಿಷೇಕವನ್ನು ಮಾಡಬೇಕೆಂದೂ, ದಶ ರಥನನ್ನು ನಿರ್ಬಂಧಿಸಿದಳು ದಶರಥನಿಗೆ ಇದು ಸರ್ವಥಾ ಸಮ್ಮತವಿಲ್ಲದಿದ್ದ ರೂ, ಸತ್ಯಕ್ಕೆ ಕಟ್ಟುಬೀಳಬೇಕಾಯಿತು. ಇದರಿಂದ ದಶರಥನು ಚಿಂತಾಕುಲ ನಾಗಿರುವ ಸಂಗತಿಯನ್ನು ಕೇಳಿದೊಡನೆ ರಾಮನು, ತನ್ನ ತಂದೆಯ ಸತ್ಯವ ನ್ನು ಕಾಪಾಡುವುದಕ್ಕಾಗಿ, ಸೀತಾಲಕ್ಷ್ಮಣರೊಡನೆ ತಾನಾಗಿಯೇ ಕಾಡಿ ಗೆ ಹೊರಟನು ಆಗ ರಾಮನು ಸರ್ವಸಂಗಪರಿತ್ಯಾಗಮಾಡಿದ ಯೋಗಿಗಳು ತಮ್ಮ ಪ್ರಾಣಗಳನ್ನು ಹೇಗೆ ೕಹಾಗೆ, ತನ್ನ ರಾಜ್ಯಲಕ್ಷ್ಮಿಯನ್ನೂ, ಇಷ್ಟ ಬಂಧುಗಳನ್ನೂ, ಮಿತ್ರರನ್ನೂ, ಅರಮನೆಯನ್ನೂ, ಹೆತ್ತ ತಾಯನ್ನೂ ಬಿಟ್ಟು ದಂಡಕಾರಣ್ಯಕ್ಕೆ ಬಂದು ಸೇರಿದನು ಅಲ್ಲಿ ರಾವಣನ ತಂಗಿಯಾದ ಶೂ ರ್ಪಣಖಿಯೆಂಬ ದುಷ್ಟರಾಕ್ಷಸಿಯೊಬ್ಬಳು, ಇವನನ್ನು ನೋಡಿ ಕಾಮಿಸಿ ನಿ ರ್ಬಂಧಿಸಲು, ಅವಳನ್ನು ವಿರೂಪಮಾಡಿ ಕಳುಹಿಸಿದನು. ಈ ಸಂಗತಿಯ ನ್ನು ಕೇಳಿ, ಆ ರಾಕ್ಷಸಿಯ ಬಂಧುಗಳಾದ ಖರ, ದೂಷಣ, ತ್ರಿಶಿರಸ್ಸುಗಳೇ ಮೊದಲಾದ ಹದಿನಾಲ್ಕು ಸಾವಿರಮಂದಿ ರಾಕ್ಷಸರು ಏಕಕಾಲದಲ್ಲಿ ಬಂದು ರಾಮನನ್ನಿದಿರಿಸಿದರು. ರಾಮನು ತಾನೊಬ್ಬನೇ ಧನುರ್ಧಾರಿಯಾಗಿ ನಿಂತು ಅವರೆಲ್ಲರನ್ನೂ ಮುಹೂರ್ತಮಾತ್ರದಲ್ಲಿ ಸಂಹರಿಸಿ, ಅಲ್ಲಿನ ಕಾಡುಗಳ ಲ್ಲಿಯೇ ಸಂಚರಿಸುತಿದ್ದನು ಇಷ್ಟರಲ್ಲಿ ಶೂರ್ಪಣಖಿಯು ತನಗುಂಟಾದ ಅವಮಾನವನ್ನೂ, ಖರದೂಷಣಾದಿಗಳ ವಧವನ್ನೂ ಲಂಕೆಯಲ್ಲಿದ್ದ ತನ್ನ ಣ್ಣನಾದ ರಾವಣನಿಗೆ ತಿಳಿಸಿದಳು. ರಾವಣನು ಅವಳಮೂಲಕವಾಗಿ ಸೀ ತಾದೇವಿಯ ಸೌಂದರ್ಯಾತಿಶಯವನ್ನು ಕೇಳಿ ಕಾಮಮೋಹಿತನಾಗಿ, ಆ ಸೀತೆಯನ್ನು ಕದ್ದುತರಬೇಕೆಂದು ನಿಶ್ಚಯಿಸಿದನು. ಆದರೆ, ಈ ಕಾರ್ಯಕ್ಕೆ ತಾನೊಬ್ಬನೇ ಹೋಗುವುದಕ್ಕೆ ಹೆದರಿ, ಮಾರೀಚನ ಸಹಾಯವನ್ನಪೇಕ್ಷಿ ಸಲು, ಮಾರೀಚನು ಮಾಯಾಮೃಗರೂಪದಿಂದ ಸೀತಾರಾಮರನ್ನು ಮರುಳುಗೊಳಿಸಿ, ರಾಮಲಕ್ಷ್ಮಣರಿಬ್ಬರನ್ನೂ ಆಶ್ರಮದಿಂದ ಬಹುದೂ

ರಕ್ಕೆ ಕರೆದುಕೊಂಡು ಹೋದನು. ಕೊನೆಗೆ ರಾಮನು ಅದು ರಾಕ್ಷಸಮಾಯೆಯೆಂಬುದನ್ನು ತಿಳಿದು, ರುದ್ರನು ದಕ್ಷನನ್ನು ಹೇಗೋಹಾಗೆ ಆ ಮೃಗವನ್ನು ತನ್ನ ಬಾಣದಿಂದ ಸಂಹರಿಸಿ ಹಿಂತಿರುಗಿದನು ರಾಮನು ಆಶ್ರಮಕ್ಕೆ ಬಂದು ಸೇರುವುದರೊಳಗಾಗಿ,ಇತ್ತಲಾಗಿ ರಾವಣನು ಸನ್ಯಾಸಿವೇಷದಿಂದ ಬಂದು, ತೋಳನಂತೆ ಹೊಂಚುಹಾಕುತ್ತ, ಏಕಾಕಿನಿಯಾಗಿದ್ದ ಸೀತೆಯನ್ನು ಕದ್ದುಯ್ದು ತನ್ನ ರಾಜಧಾನಿಯಾದ ಲಂಕೆಯಲ್ಲಿ ಬಚ್ಚಿಟ್ಟನು ಆಮೇಲೆ ರಾಮನು ಪತ್ನಿಯನ್ನು ಕಾಣದೆ ದುಃಖಿಸುತ್ತ, ಲಕ್ಷ್ಮಣಸಹಿತನಾಗಿ ಆ ವನದಲ್ಲಿಯೇ ಅಲ್ಲಲ್ಲಿ ಹುಡುಕುತಿದ್ದನು. ಓ ಪರೀಕ್ಷಿದ್ರಾಜಾ! ಸಾಕ್ಷಾತ್ಪರಬ್ರಹ್ಮಸ್ವರೂಪನಾಗಿ, ನಿತ್ಯಾನಂದಮಯನಾದ ಆ ಶ್ರೀರಾಮನು, ಪತ್ನೀವಿಯೋಗದಿಂದ ಕೃಪಣನಂತೆ ದುಃಖಿಸುವುದೆಂದರೇನು ? ಇವೆಲ್ಲವೂ ಕೇವಲನಟನಗಳು! ಲೋಕದಲ್ಲಿ ಸ್ತ್ರೀಮೋಹವುಳ್ಳವರ ಗತಿಯೇ ಹೀಗೆಂಬುದನ್ನು ತೋರಿಸುವುದಕ್ಕಾಗಿಯೇ ಹೀಗೆ ದುಃಖವನ್ನು ನಟಿಸುತಿದ್ದನಲ್ಲದೆ ಬೇರೆಯಲ್ಲ ಆಮೇಲೆ ರಾಮನು ಸೀತೆಯನ್ನು ಹುಡುಕುತ್ತಬರುವಾಗ, ದಾರಿಯಲ್ಲಿ ಕಂಠಗತಪ್ರಾಣನಾಗಿ ಬಿದ್ದಿದ್ದ ಜಟಾಯುವೆಂಬ ಗೃಧ್ರರಾಜನನ್ನು ಕಂಡನು ಆ ಜಟಾಯುವು ಸೀತೆಯನ್ನು ಬಿಡಿಸುವುದಕ್ಕಾಗಿ ಪ್ರಯತ್ನಿಸಿ, ರಾವಣನಿಂದ ಹತನಾದುದನ್ನು ತಿಳಿದು, ತನಗಾಗಿ ಪ್ರಾಣವನ್ನು ಕಳೆದುಕೊಂಡ ಆ ಗೃಧ್ರಪಕ್ಷಿಗೆ ತನ್ನ ಕೈಯಿಂದಲೇ ಉತ್ತರಕ್ರಿಯೆಯನ್ನು ಮಾಡಿ ಉತ್ತಮಗತಿಯನ್ನು ಹೊಂದಿಸಿದನು. ಅಲ್ಲಿಂದ ಮುಂದೆ ಹೊರಟು, ಕಬಂಧನೆಂಬ ರಾಕ್ಷಸನನ್ನು ಸಂಹರಿಸಿ, ಸುಗ್ರೀವಾದಿವಾನರರೊಡನೆ ಸ್ನೇಹವನ್ನು ಬೆಳೆಸಿ, ವಾಲಿಯನ್ನು ಕೊಂದು, ವಾನರರಾಜ್ಯದಲ್ಲಿ ಸುಗ್ರೀವನಿಗೆ ಪಟ್ಟವನ್ನು ಕಟ್ಟಿದನು. ಆಮೇಲೆ ಆಂಜನೇಯಾದಿ ವಾನರರಮೂಲಕವಾಗಿ ಸೀತೆಯಿರುವ ಸ್ಥಾನವನ್ನು ತಿಳಿದು, ಆ ವಾನರಸೈನ್ಯದೊಡನೆ ಲಂಕೆಗೆ ಹೊರಟು, ಸಮುದ್ರತೀರವನ್ನು ಸೇರಿದನು. ಅಲ್ಲಿ ರಾಮನು ಮೂರುದಿನಗಳವರೆಗೆ ಸಮುದ್ರರಾಜನನ್ನುಪಾಸನೆಮಾಡಿದರೂ, ಅವನು ಪ್ರಸನ್ನನಾಗಿ ದಾರಿಕೊಡದಿರಲು, ಆಗ ರಾಮನು ಕೋಪಾಗ್ನಿಜ್ವಾಲೆಯನ್ನು ಕೆದರುತ್ತಿರುವ ತನ್ನ ಕಣ್ಣುಗಳಿಂದಲೇ ಆಸಮುದ್ರವನ್ನು ಶೋಷಿಸಿಬಿಡುವಂತೆ, ದುರದುರನೆ ನೋ

ಡಿದನು? ಇಷ್ಟುಮಾತ್ರದಲ್ಲಿಯೇ ಅಲ್ಲಿನ ಜಲಜಂತುಗಳೆಲ್ಲವೂ ಅಡಗಿಹೋದು ವು ಒಡನೆಯೇ ಸಮುದ್ರರಾಜನು ಭಯದಿಂದ ಪುರುಷಾಕೃತಿಯನ್ನು ತಾಳಿ, ಸಮಸ್ತಪೂಜಾದ್ರವ್ಯಗಳೊಡನೆ ಬಂದು, ರಾಮನ ಪಾದಗಳಲ್ಲಿ ಶರಣಾಗತ ನಾಗಿ ಹೀಗೆಂದು ವಿಜ್ಞಾಪಿಸುವನು "ಓ ರಾಮಾ! ನಿನ್ನ ಮಹಿಮೆಯನ್ನು ತಿ ಳಿಯದೆ ನಾನು ನಿನ್ನಲ್ಲಿ ಅಪರಾಧಿಯಾದೆನು ಮೂಢಬುದ್ಧಿಯುಳ್ಳ ನಾವು ನಿರ್ವಿಕಾರನಾಗಿಯೂ, ಲೋಕಾಧಿಪತಿಯಾಗಿಯೂ, ಆದಿಪುರುಷನಾಗಿಯೂ ಇರುವ ನಿನ್ನ ಮಹಾಮಹಿಮೆಯನ್ನು ಹೇಗೆ ತಾನೇ ತಿಳಿಯಬಲ್ಲೆವು ? ಈಗ ನಿನ್ನ ಪ್ರಭಾವವು ನನಗೆ ಚೆನ್ನಾಗಿ ತಿಳಿಯಿತು ನಿನ್ನ ದರ್ಶನಮಾತ್ರದಿಂದಲೇ ನನಗೆ ಜ್ಞಾನೋದಯವುಂಟಾಯಿತು. ನಿನಗೆ ವಶವಾದ ಸತ್ವರಜಸ್ತ ಮೋಗುಣಗಳಿಂದಲೇ,ಕ್ರಮವಾಗಿ,ಲೋಕಪಾಲಕರಾದ ದೇವಗಣಗಳೂ,ಸೃ ಷ್ಟಿಕರ್ತರಾದ ಪ್ರಜಾಧಿಪತಿಗಳೂ, ಲಯಕರ್ತರಾದ ರುದ್ರಾದಿಗಳೂ ಜನಿಸಿ ದರೆಂಬುದನ್ನೂ, ನೀನೇ ಆ ಪ್ರಕೃತಿಗುಣಗಳಿಗೆ ನಿಯಾಮಕನೆಂಬುದನ್ನೂ ಈ ಗ ನಾನು ಚೆನ್ನಾಗಿ ತಿಳಿದುಕೊಂಡೆನು ನಾನು ಇದಕ್ಕೆಮೊದಲು ಅಜ್ಞಾನ ದಿಂದ ನಿನ್ನಲ್ಲಿ ಮಾಡಿದ ಅಪರಾಧವನ್ನು ಮನ್ನಿಸಬೇಕು! ದೇವಾ!ಇನ್ನು ನೀನು ಮುಂದಿನ ಕಾರ್ಯವನ್ನು ನಡೆಸು ! ನನ್ನ ಜಲಕ್ಕೆ ಅಣೆಕಟ್ಟನ್ನು ಕಟ್ಟಿಸಿ, ಅದರಮೇಲೆ ನೀನು ಯಥೇಷ್ಟವಾಗಿ ಸಂಚರಿಸು! ಅದೇ ಮಾರ್ಗವಾಗಿ ಲಂಕೆ ಯನ್ನು ಸೇರಿ ರಾವಣನನ್ನೂ ಸಂಹರಿಸು ! ನಿನ್ನ ಪತ್ನಿಯಾದ ಸೀತೆಯನ್ನು ಹಿಂದಕ್ಕೆ ಕರೆತರುವನಾಗು ! ನನ್ನ ಜಲವು ಯಾವವಿಧದಲ್ಲಿಯೂ ನಿನಗೆ ಪ್ರ ತಿಬಂಧಕವಾಗಲಾರದು ನೀನು ಇದರಮೇಲೆ ಅನಾಯಾಸವಾಗಿ ಸೇತುವ ನ್ನು ಕಟ್ಟಬಹುದು ನಿನ್ನ ಮಹಾಮಹಿಮೆಗೆ ಇದೊಂದು ದೊಡ್ಡಕಾರ್ಯ ವಲ್ಲದಿದ್ದರೂ, ಈ ಸೇತುಬಂಧದಿಂದಲೇ ನಿನ್ನ ಕೀರ್ತಿಯೂ, ನಿನ್ನ ಪ್ರಭಾ ವವೂ ಲೋಕದಲ್ಲಿ ವಿಶೇಷವಾಗಿ ವಿಸ್ತರಿಸಲಿ! ದಿಗ್ವಿಜಯಿಗಳಾದ ರಾಜರೆ ಲ್ಲರೂ ನಿನ್ನ ಈ ಮಹಾಕಾರ್ಯವನ್ನು ಆಶ್ಚರ್ಯದಿಂದ ಕೊಂಡಾಡಲಿ!" ಎಂದನು ಇದನ್ನು ಕೇಳಿ ರಾಮನು ಸಂತೋಷಭರಿತನಾಗಿ, ಅಲ್ಲಲ್ಲಿಂದ ವಾನರರು ಸಂಗ್ರಹಿಸಿತಂದ, ಬೆಟ್ಟಗುಡ್ಡಗಳಿಂದಲೂ, ಗಿಡುಬಳ್ಳಿಗಳಿಂದ ಲೂ ಸಮುದ್ರದಮೇಲೆ ಸೇತುವನ್ನು ಕಟ್ಟಿಸಿದನು ಸುಗ್ರೀವ, ನಳ, ನೀಲ,

ಹನುಮಂತನೇ ಮೊದಲಾದ ವಾನರವೀರರೊಡನೆ ಆ ಸೇತುವಿನ ಮಾರ್ಗ ವಾಗಿ ಸಮುದ್ರವನ್ನು ದಾಟಿ, ಅಲ್ಲಿಂದ ಮುಂದೆ ವಿಭೀಷಣನು ತೋರಿಸಿದ ಮಾರ್ಗವನ್ನು ಹಿಡಿದು, ಮೊದಲೇ ಹನುಮಂತನ ವಾಲಾಗ್ನಿಯಿಂದ ಅರ್ಧದ ಗ್ಧವಾದ ಲಂಕೆಗೆ ಬಂದು ಸೇರಿದನು. ಒಡನೆಯೇ ಲೆಕ್ಕವಿಲ್ಲದಷ್ಟು ವಾ ನರಸೈನ್ಯವು, ಉತ್ಸಾಹದಿಂದ ನಾನು ತಾನೆಂದು ಮುಂದೆಬಿದ್ದು ಲಂಕೆಯೊ ಳಗೆ ಪ್ರವೇಶಿಸಿ, ಅಲ್ಲಿನ ವಿಹಾರಸ್ಥಾನಗಳನ್ನೂ, ಸಭಾಂಗಣಗಳನ್ನೂ, ಪ್ರಾಸಾದದ ಮುಂಭಾಗಗಳನ್ನೂ, ನಾನಾವಿಧವಾದ ಕಟ್ಟಡಗಳನ್ನೂ, ವೇ ದಿಕೆಗಳನ್ನೂ ಇಡಿದು ಕೆಡಹುತ್ತ ಬಂದುವು ಅಲ್ಲಿನ ರಾಜಧ್ವಜಗಳನ್ನು ಮು ರಿದು, ಸುವರ್ಣಕಲಶಗಳನ್ನು ಕಿತ್ತು, ಚತುಷ್ಪಥಗಳನ್ನು ಧ್ವಂಸಮಾಡುತ್ತ ಬಂದುವು. ಈ ವಾನರಸೈನ್ಯದ ಹಾವಳಿಯಿಂದ ಲಂಕಾನಗರವೆಲ್ಲವೂ ಕ್ಷಣ ಮಾತ್ರದಲ್ಲಿ, ಕಾಡಾನೆಯು ಕಲಗಿಸಿದ ನದಿಯಂತೆ ವ್ಯಾಕುಲಿತವಾಯಿತು. ಇದನ್ನು ಸಹಿಸಲಾರದೆ ರಾವಣನು, ಅವರನ್ನು ತಡೆಯುವುದಕ್ಕಾಗಿ, ನಿಕುಂ ಭ, ಕುಂಭ, ಧೂಮ್ರಾಕ್ಷ, ದುರ್ಮುಖ, ದೇವಾಂತಕ, ನರಾಂತಕ, ಇಂ ದ್ರಜಿತ್ತು, ಪ್ರಹಸ್ತ, ಕುಂಭಕರ್ಣನೇ ಮೊದಲಾದ ರಾಕ್ಷಸವೀರರನ್ನು ಬೇ ರೆಬೇರೆಯಾಗಿ, ಅನೇಕಸೈನ್ಯಸಹಾಯದೊಡನೆ ಕಳುಹಿಸಿದನು ಈ ರಾಕ್ಷಸ ರೆಲ್ಲರೂ, ಬಿಲ್ಲು, ಬಾಣ, ಕತ್ತಿ, ಶೂಲ, ಪ್ರಾಸ, ತೋಮರ, ಭಿಂಡಿವಾಲ, ಪಟ್ಟಸ, ಮೊದಲಾದ ನಾನಾಯುಧಗಳನ್ನು ಹಿಡಿದು,ವಾನರಸೈನ್ಯವನ್ನಿದಿರಿ ಸುವುದಕ್ಕಾಗಿ ವೇಗದಿಂದ ಬರುತಿದ್ದರು ಇದನ್ನು ನೋಡಿ ಶ್ರೀರಾಮನೂ ಕೂಡ ಇತ್ತಲಿಂದ ತನ್ನ ತಮ್ಮನಾದ ಲಕ್ಷ್ಮಣನೊಡನೆಯೂ, ಸುಗ್ರೀವ, ನಲ, ನೀಲ, ಗಂಧಮಾದನ, ಅಂಗದ, ಋಕ್ಷ, ಪನಸ, ಆಂಜನೇಯರೇ ಮೊ ದಲಾದ ವಾನರವೀರರೊಡನೆಯೂ ಸೇರಿ ದೈತ್ಯರನ್ನಿದಿರಿಸಿ ಯುದ್ಧವನ್ನಾ ರಂಭಿಸಿದನು ಅಂಗದನೇ ಮೊದಲಾದ ಕಪಿಸೈನ್ಯಾಧಿಪತಿಗಳೆಲ್ಲರೂ, ರಾವ ಣನ ಚತುರಂಗಸೈನ್ಯಗಳೊಡನೆ ಕೈಕಲೆತು, ವೃಕ್ಷಗಳಿಂದಲೂ, ಪರ್ವತಗ ಳಿಂದಲೂ, ಬಾಣಗಳಿಂದಲೂ, ಗದೆಗಳಿಂದಲೂ ಕಂಡಕಂಡ ರಾಕ್ಷಸರನ್ನು ಕೊಲ್ಲುತ್ತ ಬಂದರು. ಉಭಯಪಕ್ಷದವರಿಗೂ ಭಯಂಕರವಾದ ಯುದ್ಧವು ನಡೆಯಿತು. ಇಷ್ಟರಲ್ಲಿ ರಾವಣನ ಸೈನ್ಯವೆಲ್ಲವೂ ಕ್ರಮಕ್ರಮವಾಗಿ ಕ್ಷೀಣಿ

ಸುತ್ತಬಂದಿತು ಕೊನೆಗೆ ರಾವಣನು ತಾನಾಗಿಯೇ! ವಿಮಾನವನ್ನೇರಿ ಬಂ ದು ರಾಮನನ್ನಿದಿರಿಸಿ ನಿಂತನು ಇಷ್ಟರಲ್ಲಿ ಇಂದ್ರನಿಂದ ಪ್ರೇರಿತನಾದ ಮಾತಲಿಯು, ಒಂದಾನೊಂದು ದಿವ್ಯರಥವನ್ನು ರಾಮನಿಗಾಗಿ ತಂದು ನಿಲ್ಲಿ ಸಿದನು ರಾಮನು ಅತ್ಯಂತಕಾಂತಿವಿಶಿಷ್ಟವಾದ ಆ ರಥವನ್ನೇರಿ ಕುಳಿತು ಸೂರ್ಯನಂತೆ ಪ್ರಕಾಶಿಸುತ್ತಿರಲು, ಆಗ ರಾವಣನು, ಅದನ್ನು ನೋ ಡಿ ಸಹಿಸಲಾರದೆ ಅವನಮೇಲೆ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿದನು ರಾಮನು ಆ ಬಾಣಗಳನ್ನು ಅರ್ಧದಾರಿಯಲ್ಲಿಯೇ ತುಂಡುಮಾಡಿ ರಾ ವಣನನ್ನು ಕುರಿತು, ‘‘ಎಲೆ ರಾಕ್ಷಸಾಧಮಾ! ಯಾರೂ ಇಲ್ಲದ ಸಮಯದಲ್ಲಿ ಮನೆಗೆ ನುಗ್ಗಿ ಅಲ್ಲಲ್ಲಿ ಸಿಕ್ಕಿದ ಆಹಾರಪದಾರ್ಥಗಳನ್ನು ಕದ್ದೋಡಿಹೋಗು ವ ನಾಯಿಯಂತೆ, ಅಲ್ಪಬುದ್ಧಿಯುಳ್ಳ ನೀನು,ನಾವಿಲ್ಲದಸಮಯದಲ್ಲಿ ವೇಷ ಧಾರಿಯಾಗಿ ನಮ್ಮ ಆಶ್ರಮವನ್ನು ಪ್ರವೇಶಿಸಿ, ಪತಿವ್ರತೆಯಾದ ನನ್ನ ಭಾ ರ್ಯೆಯನ್ನು ಕದ್ದೋಡಿದೆಯಲ್ಲವೆ? ಕೇವಲಲಜ್ಜಾಸ್ಪದವಾದ ಈ ಕಾರ್ಯ ವನ್ನು ನಡೆಸಿಯೂ ನೀನು ನಾಚಿಕೆಯಿಲ್ಲದೆ ನನ್ನಮುಂದೆ ನಿಂತಿರುವೆಯ ಲ್ಲಾ ? ಎಲೆ ನೀಚಾ ! ನಿನ್ನ ದುಷ್ಕೃತ್ಯಕ್ಕೆ ಈಗಲೇ ಫಲವನ್ನು ತೋರಿಸು ವನು ನೋಡು! ನಿನ್ನ ಭಾಗಕ್ಕೆ ನಾನೇ ಮೃತ್ಯುವೆಂದು ತಿಳಿ” ಎಂದು ಹೇಳಿ, ಬಿಲ್ಲಿನಲ್ಲಿ ಬಾಣವನ್ನು ಸಂಧಾನಮಾಡಿ, ರಾವಣನ ಎದೆಗೆ ಗುರಿಯಿಟ್ಟು ಹೊಡೆದನು ಅದು ವಜ್ರಾಯುಧದಂತೆ ನಿರಂಕುಶವಾದ ವೇಗದಿಂದ ಬಂ ದು ಅವನ ಎದೆಯನ್ನು ಭೇದಿಸಿತು ಆಕ್ಷಣವೇ ರಾವಣನು ಹತ್ತುಮೊ ಗಗಳಿಂದಲೂ ರಕ್ತವನ್ನು ಕಾರುತ್ತ, ಕ್ಷೀಣಪುಣ್ಯನು ಸ್ವರ್ಗದಿಂದ ನೆಲದಮೇ ಲೆ ಬೀಳುವಂತೆ, ವಿಮಾನದಿಂದ ಕೆಳಗೆಬಿದ್ದು ಪ್ರಾಣವನ್ನು ಬಿಟ್ಟನು ಇದ ನ್ನು ಕೇಳಿ!ಮಂಡೋದರಿ ಮೊದಲಾದ ರಾಕ್ಷಸಸ್ತ್ರೀಯರೆಲ್ಲರೂ ಓಡಿಬಂದು ರಾಮಬಾಣದಿಂದ ಹತರಾಗಿ ಬಿದ್ದ ತಮ್ಮತಮ್ಮ ಬಂಧುಗಳ ದೇಹವನ್ನಾಲಿಂ ಗಿಸಿ, ಎದೆಯನ್ನು ಬಡಿದುಕೊಳ್ಳುತ್ತ ದೈನ್ಯದಿಂದ ರೋದಿಸುವರು. ‘‘ಅಯ್ಯೋ! ನಾವು ಕೆಟ್ಟೆವು! ನಾಥಾ! ನೀನಿಲ್ಲದುದರಿಂದ ಲಂಕಾಪುರಿಯೇ ಶೂನ್ಯಾರಣ್ಯದಂತೆ ಕಾಂತಿಹೀನವಾಯಿತು ! ನಮ್ಮ ಪಟ್ಟಣವೆಲ್ಲವೂ ಶತ್ರುಗಳ ಪಾಲಾಯಿತು. ಅಯ್ಯೋ! ಇನ್ನು ಲಂಕಾನಿವಾಸಿಗಳಿಗೆ ದಿಕ್ಕಾ

ರು ? ಓ ನಾಥಾ! ನೀನು ಕಾಮಾಂಧನಾಗಿ ಆ ಸೀತಾದೇವಿಯ ಪ್ರಭಾವ ವನ್ನು ತಿಳಿಯದೆ ಆವಳಲ್ಲಿ ಮಹಾಪರಾಧವನ್ನುಮಾಡಿದೆ ! ಈ ಅಕೃತ್ಯದಿಂ ದಲೇ ನಿನಗೆ ಈ ದುಸ್ಥಿತಿಯು ಪ್ರಾಪ್ತವಾಯಿತು ಅದರಿಂದಲೇ ಲಂಕಾ ಪುರಿಯೂ ನಮ್ಮಂತೆ ಅನಾಥೆಯಾಯಿತು ರಾಕ್ಷಸಚಕ್ರವರ್ತಿಯೆನಿಸಿ ಕೊಂಡ ನಿನ್ನ ದೇಹವು ಹದ್ದುಗಳಿಗೆ ಆಹಾರವಾಯಿತು ನಿನ್ನ ಆತ್ಮವು ನರ ಕಾನುಭವಕ್ಕೆ ಗುರಿಯಾಯಿತು. ಅಯ್ಯೋ! ನಾವೇನು ಮಾಡಬಲ್ಲೆವು?" ಎಂ ದು ನಾನಾವಿಧವಾಗಿ ವಿಲಪಿಸುತ್ತಿರುವಾಗ, ವಿಭೀಷಣನು ರಾಮನ ಅನುಮ ತಿಯನ್ನುಪಡೆದು, ಆವರನ್ನು ಸಮಾಧಾನಪಡಿಸಿ,ರಾವಣಾದಿಗಳಿಗೆ ಯಥಾವಿ ಧಿಯಾಗಿ ಪ್ರೇತಕಾರ್ಯಗಳನ್ನು ನಡೆಸಿದರು. ಆಮೇಲೆ ಶ್ರೀರಾಮನು, ಸೀತೆಯನ್ನು ಕರೆತರುವದಕ್ಕಾಗಿ ಅಶೋಕವನಕ್ಕೆ ಹೋಗಿ, ಅಲ್ಲಿ ತನ್ನ ವಿಯೋಗದುಃಖದಿಂದ ಬಹಳವಾಗಿ ಕಂದಿಕುಂದಿ ಕೃಶವಾದ ಮೈಯುಳ್ಳವಳಾಗಿ,ಒಂದಾನೊಂದುಶಿಂಶುಪಾವೃಕ್ಷದ ಬುಡದಲ್ಲಿ ದೈನ್ಯದಿಂ ದ ಕುಳಿತಿದ್ದ ತನ್ನ ಪ್ರಿಯೆಯನ್ನು ಕಂಡನು ಶ್ರೀರಾಮನ ಮುಖಪದ್ಮ ವನ್ನು ಕಂಡಾಗ ಅವಳ ಸಂತೋಷಕ್ಕೆ ಪಾರವುಂಟೆ? ರಾಮನು ದುಃಖಿತೆಯಾಗಿದ್ದ ಆ ಸೀತೆಯನ್ನು ಸಮಾಧಾನಪಡಿಸಿ, ಪುಷ್ಪಕವಿಮಾನ ದಲ್ಲಿ ಕುಳ್ಳಿರಿಸಿ ಕರತಂದನು ವಿಭೀಷಣನಿಗೆ ಲಂಕೆಯಲ್ಲಿ ರಾಜ್ಯಾಭಿಷೇ ಕವನ್ನೂ ಮಾಡಿದನು. ಕಲ್ಪಾಂತದವರೆಗೆ ಬದುಕಿರುವಂತೆ ಆ ವಿಭೀಷಣನಿಗೆ ವರವನ್ನೂ ಕೊಟ್ಟನು. ಹೀಗೆ ಲಂಕೆಯಲ್ಲಿ ವಿಭೀಷಣನಿಗೆ ಪಟ್ಟವನ್ನು ಕಟ್ಟಿ ದಮೇಲೆ ಆ ವಿಭೀಷಣನನ್ನೂ, ಸುಗ್ರೀವಾಂಜನೇಯಾದಿಕಪಿವೀರರನ್ನೂ ತ ನ್ನೊಡನೆ ಆ ಪುಷ್ಪಕದಲ್ಲಿಯೇ ಕುಳ್ಳಿರಿಸಿಕೊಂಡು, ಅಯೋಧ್ಯಾಪಟ್ಟಣದ ಕಡೆಗೆ ಹಿಂತಿರುಗಿದನು ಅವನು ಹಿಂತಿರುಗಿ ಬರುವಾಗ ದಾರಿಯುದ್ದಕ್ಕೂ ಲೋಕಪಾಲಕರೂ,ಅನೇಕರಾಜಾಧಿರಾಜರೂ ಕೈಕಾಣಿಕೆಗಳನ್ನು ತಂದೊಪ್ಪಿ ಸುತ್ತಿದ್ದರು ಬ್ರಹ್ಮಾದಿದೇವತೆಗಳು ಮುಂದೆ ಬಂದು ಆತನ ಅದ್ಭುತಚರಿ ತ್ರೆಗಳನ್ನು ಕೀರ್ತಿಸುತ್ತಿದ್ದರು. ಶ್ರೀರಾಮನು ಅವರ ಸತ್ಕಾರ್ಯಗಳೆಲ್ಲವ ನ್ನೂ ಪ್ರೀತಿಯಿಂದ ಕೈಕೊಳ್ಳುತ್ತ,ಅಯೋಧ್ಯಾನಗರದ ಸಮೀಪಕ್ಕೆ ಬಂದ ನು ಇತ್ತಲಾಗಿ ಭರತನು ಆ ರಾಮನ ಪ್ರತ್ಯಾಗಮನವನ್ನೇ ನಿರೀಕ್ಷಿಸುತ್ತಾ

ಜಟಾವಲ್ಕಗಳನ್ನು ಧರಿಸಿ, ಗೋಮೂತ್ರಸಹಿತವಾದ ಯವಾನ್ನವನ್ನೇ ಭುಜಿಸುತ್ತ, ದರ್ಭೆಗಳಮೇಲೆ ಮಲಗುತ್ತಿದ್ದನು ಹೀಗೆ ಭರತನು ತನ್ನ ವಿಯೋಗದಿಂದ ಬಹಳವಾಗಿ ದುಃಖಿಸುತ್ತ, ದೃಢವಾದ ತಾಪಸವೃತ್ತಿಯನ್ನು ಹಿಡಿದು ದೇಹಶೋಷಣಮಾಡುತ್ತಿರುವುದನ್ನು ಕೇಳಿ ರಾಮನಿಗೆ ಬಹಳವಾದ ಪಶ್ಚಾತ್ತಾಪವುಂಟಾಯಿತು. ಇಷ್ಟರಲ್ಲಿ ರಾಮನು ಹಿಂತಿರುಗಿಬರುತ್ತಿರುವ ವೃತ್ತಾಂತವು ಭರತನಿಗೂ ತಿಳಿದುಬಂದಿತು. ಆಗ! ಭರತನು ಪರಮಾನಂದಭರಿತನಾಗಿ, ಆ ರಾಮನ ಪಾದುಕೆಯನ್ನು ಶಿರಸ್ಸಿನಲ್ಲಿ ಧರಿಸಿ, ಸಮಸ್ತಪುರಜನಗಳೊಡನೆಯೂ, ಮಂತ್ರಿಪುರೋಹಿತರೊಡನೆಯೂ ಸೇರಿ, ಮಂಗಳವಾದ್ಯಗಳೊಡನೆ ರಾಮನನ್ನಿದಿರುಗೊಳ್ಳುವುದಕ್ಕಾಗಿ ಹೊರಟನು. ಬ್ರಾಹ್ಮಣರೆಲ್ಲರೂ ಸ್ವಸ್ತಿವಾಚನಗಳನ್ನು ಮಾಡುತ್ತಬಂದರು ಹೀಗೆ ಭರತನು ಮಹಾವೈಭವದಿಂದ ನಂದಿಗ್ರಾಮವನ್ನು ಬಿಟ್ಟು ಹೊರಟಾಗ, ಕೆಲವರು ಧ್ವಜಪತಾಕೆಗಳಿಂದಲಂಕೃತವಾದ ರಥಗಳಮೇಲೆಯೂ, ಕೆಲವರು ಉತ್ತಮಾಶ್ವಗಳಮೇಲೆಯೂ ಕುಳಿತು ಅವನನ್ನು ಹಿಂಬಾಲಿಸಿದರು. ಅನೇಕ ವೀರಭಟರು. ಸುವರ್ಣಕವಚಗಳನ್ನು ಧರಿಸಿ, ವಿವಿಧಾಯುಧಗಳೊಡನೆ ಬರುತ್ತಿದ್ದರು. ವಾರಸ್ತ್ರೀಯರು| ತಾಂಬೂಲಾದಿಭೋಗಸಾಮಗ್ರಿಗಳನ್ನು ಹಿಡಿದು ಹೊರಟರು. ಪುರಜನರೆಲ್ಲರೂ ರಾಜಯೋಗ್ಯಗಳಾದ ಛತ್ರಚಾಮರಾದಿಗಳೊಡನೆ ಇದಿರುಗೊಂಡುಬಂದರು ಹೀಗೆ ಭರತನು ಸಕಲಸನ್ನಾಹದೊಡನೆ ಹೊರಟು, ದೂರದಲ್ಲಿಯೇ ರಾಮನನ್ನು ಕಂಡೊಡನೆ ಆತನ ಮನಸ್ಸು ಆನಂದಾತಿಶಯದಿಂದ ಕರಗಿದಂತಾಯಿತು ಅವನ ಕಣ್ಣುಗಳಲ್ಲಿ! ಆನಂದಬಾಷ್ಪವು ತುಳುಕುತ್ತಿತ್ತು ಮುಂದೆ ಬಂದು ತನ್ನ ತಲೆಯಲ್ಲಿದ್ದ ಪಾದುಕೆಗಳನ್ನು ರಾಮನಮುಂದಿಟ್ಟು, ಆತನ ಪಾದಗಳನ್ನು ಹಿಡಿದು ಸಾಷ್ಟಾಂಗಪ್ರಣಾಮವನ್ನು ಮಾಡಿ ಬದ್ಧಾಂಜಲಿಯಾಗಿ ನಿಂತಿದ್ದನು ಆಗ ಶ್ರೀರಾಮನು ಭರತನನ್ನು ಪ್ರೇಮದಿಂದಾಲಿಂಗಿಸಿಕೊಂಡು, ಕಣ್ಣುಗಳಲ್ಲಿ ಆನಂದಬಾಷ್ಪಗಳನ್ನು ತುಳುಕಿಸುತ್ತ, ತನ್ನ ಸಂಪೂರ್ಣವಾದ ಸಹೋದರಪ್ರೇಮವನ್ನು ತೋರಿಸುತ್ತಿದ್ದನು ಅಯೋಧ್ಯಾವಾಸಿಗಳು ಪ್ರಣಾಮಪೂರ್ವಕವಾಗಿ ತನಗೆ ತಂದೊಪ್ಪಿಸಿದ ಕೈಕಾಣಿಕೆಗಳೆಲ್ಲವನ್ನೂ ಪ್ರೀತಿಯಿಂದ ಕೈಕೊಂಡನು. ತನಗೆ

ನಮಸ್ಕಾರಯೋಗ್ಯರಾದ ಕುಲವೃದ್ಧರನ್ನು ಸೀತಾಲಕ್ಷ್ಮಣಸಮೇತನಾಗಿ ಬಂದು ನಮಸ್ಕರಿಸಿದನು. ಆಗ ಕೋಸಲದೇಶವಾಸಿಗಳಾದ ಪ್ರಜೆಗಳೆಲ್ಲರೂ ಬಹುಕಾಲದವರೆಗೆ ತಮ್ಮನ್ನಗಲಿ ಹಿಂತಿರುಗಿಬಂದ ತಮ್ಮ ಪ್ರಭುವನ್ನು ನೋಡಿ, ಅವನಮೇಲೆ ಪುಷ್ಪಗಳನ್ನು ಚೆಲ್ಲಿ, ಸಂತೋಷದಿಂದ ತಮ್ಮ ಉತ್ತರೀಯಗಳನ್ನು ಮೇಲೆಹಾರಿಸುತ್ತ, ಮೈಮರೆತು ಕುಣಿದಾಡುತ್ತಿದ್ದರು. ರಾಮನು ಅವರೆಲ್ಲರೊಡನೆ ಅಯೋಧ್ಯಾಭಿಮುಖವಾಗಿ ಹೊರಟನು. ಭರತನು ಅವನ ಪಾದುಕೆಗಳನ್ನು ತಲೆಯಮೇಲೆ ಧರಿಸಿ ಮುಂದೆ ಬರುತ್ತಿದ್ದನು. ಸುಗ್ರೀವವಿಭೀಷಣರಿಬ್ಬರೂ ರಾಮನ ಉಭಯಪಾರ್ಶ್ವಗಳಲ್ಲಿ ಚಾಮರಗಳನ್ನು ಬೀಸುತ್ತಿದ್ದರು. ಆಂಜನೇಯನು ಶ್ವೇತಛತ್ರವನ್ನು ಹಿಡಿದನು. ಶತ್ರುಘ್ನನು ರಾಮನ ಬಿಲ್ಲುಬತ್ತಳಿಕೆಗಳನ್ನು ಕೈಗೆತ್ತಿಕೊಂಡನು. ಸೀತೆಯು ಕೈಯಲ್ಲಿ ಕರಗವನ್ನು ಹಿಡಿದು ಬರುತ್ತಿದ್ದಳು. ಹಾಗೆಯೇ, ಅಂಗದನು ರಾಮನ ಖಡ್ಗವನ್ನೂ, ಜಾಂಬವಂತನು ಸುವರ್ಣಫಲಕವನ್ನೂ (ಗುರಾಣಿ) ಹಿಡಿದು ರಾಮನ ಪಕ್ಕದಲ್ಲಿ ಬರುತ್ತಿದ್ದರು. ಹೀಗೆ ಶ್ರೀರಾಮನು ಸಮಸ್ತಜನರಿಂದ ಸೇವಿಸಲ್ಪಡುತ್ತ, ಪುಷ್ಪಕದ ಮೇಲೆ ಕುಳಿತು, ಅನೇಕಸ್ತ್ರೀಯರಿಂದ ಪರಿವೃತನಾಗಿ ಬರುವಾಗ, ಆ ವಿಮಾನದಸುತ್ತಲೂ ಸ್ತುತಿಪಾಠಕರು, ಅವನ ಗುಣಗಳನ್ನೂ, ಚರಿತ್ರಗಳನ್ನೂ ಸ್ತುತಿಸಿ ಕೊಂಡಾಡುತ್ತಿರಲು, ಶುಕ್ರಾದಿಗ್ರಹಗಳನಡುವೆ ಉದಿಸಿಬಂದ ಚಂದ್ರನಂತೆ ಕಾಣುತ್ತಿದ್ದನು. ಹೀಗೆ ರಾಮನು ಮಹಾವೈಭವದೊಡನೆ ಭರತನ ಅನುಮತಿಯಿಂದ ಅಯೋಧ್ಯೆಯನ್ನು ಪ್ರವೇಶಿಸಿ, ತನ್ನ ಅರಮನೆಗೆ ಬಂದು, ಅಲ್ಲಿ ಕೈಕೇಯಿ ಮೊದಲಾದ ತನ್ನ ಸವತಿತಾಯಿಯರಿಗೂ, ತನ್ನ ಹೆತ್ತತಾಯಿಯಾದ ಕೌಸಲ್ಯೆಗೂ, ವಸಿಷ್ಠಾದಿಮಹಾತ್ಮರಿಗೂ ನಮಸ್ಕರಿಸಿ, ತನ್ನ ಮಿತ್ರರನ್ನೂ, ಕುಲೀನರಾದ ಇತರಬಂಧುಗಳನ್ನೂ, ಅನುಚರರನ್ನೂ ಯಥಾಯೋಗ್ಯವಾಗಿ ಆದರಿಸಿದನು ಅವರ ಸತ್ಕಾರಗಳೆಲ್ಲವನ್ನೂ ಪ್ರೀತಿಯಿಂದ ಕೈಕೊಂಡನು. ಹೀಗೆಯೇ ಸೀತಾಲಕ್ಷ್ಮಣರೂ, ಅವರವರಿಂದ ಪೂಜಿಸಲ್ಪಡುತ್ತ, ತಾವೂ ಯಥಾಯೋಗ್ಯವಾಗಿ ಅವರನ್ನು ಸತ್ಕರಿಸಿ, ರಾಜಭವನವನ್ನು ಪ್ರವೇಶಿಸಿದರು. ಕೌಸಲ್ಯೆ ಮೊದಲಾದ ದಶರಥನ

ತ್ರಿಯರೆಲ್ಲರೂ, ಬಹುಕಾಲಕ್ಕೆ ಹಿಂತಿರುಗಿಬಂದ ತಮ್ಮ ಮಕ್ಕಳನ್ನು ನೋಡಿ, ಹೋಗಿದ್ದ ಪ್ರಾಣವು ಹಿಂತಿರುಗಿಬಂದಂತೆ ಸಂತೋಷಗೊಂಡವರಾಗಿ,ಆ ಮಕ್ಕಳನ್ನು ಪ್ರೀತಿಯಿಂದಾಲಿಂಗಿಸಿ,ತೊಡೆಯಮೇಲೆ ಕುಳ್ಳಿರಿಸಿಕೊಂಡು,ಧಾರೆಧಾರೆಯಾಗಿ ಆನಂದಬಾಷ್ಪವನ್ನು ಸುರಿಸುತ್ತಿದ್ದರು. ಆಮೇಲೆ ವಸಿಷ್ಠನು ಕುಲವೃದ್ಧರೊಡನೆ ಸೇರಿ, ರಾಮನ ಜಟೆಯನ್ನು ಬಿಚ್ಚಿಸಿ, ನಾಲ್ಕು ಸಮುದ್ರಗಳಿಂದಲೂ ತೀರ್ಥಗಳನ್ನು ತರಿಸಿ, ವಿಧ್ಯುಕ್ತವಾಗಿ ರಾಮನಿಗೆ ತೀರ್ಥಾಭಿಷೇಕವನ್ನು ನಡೆಸಿದನು. ಹೀಗೆಯೇ ಸೀತಾಲಕ್ಷ್ಮಣಭರತಶತ್ರುಘ್ನರೂ ಸ್ನಾನಮಾಡಿ ದಿವ್ಯವಸ್ತ್ರಾಭರಣಗಳಿಂಧಲಂಕೃತರಾದರು.

ಭರತನು ಪಾದಗಳಲ್ಲಿ ಬಿದ್ದು ಅನೇಕವಿಧದಿಂದ ಪ್ರಾರ್ಥಿಸಿದಮೇಲೆ ರಾಮನು ಸಿಂಹಾಸನವನ್ನೇರಿ ರಾಜ್ಯಭಾರವನ್ನು ಮಾಡತೊಡಗಿದನು. ಈ ರಾಮರಾಜ್ಯದಲ್ಲಿ ಪ್ರಜೆಗಳೆಲ್ಲರೂ ತಮ್ಮತಮ್ಮ ಧರ್ಮಗಳನ್ನು ಸ್ವಲ್ಪವೂ ಲೋಪವಿಲ್ಲದೆ ನಡೆಸುತ್ತಿದ್ದರು ರಾಮನು ಪ್ರಜೆಗಳನ್ನು ಪುತ್ರವಾತ್ಸಲ್ಯದಿಂದ ಪೋಷಿಸುತ್ತಿದ್ದನು. ಪ್ರಜೆಗಳೆಲ್ಲರೂ ರಾಮನನ್ನೇ ತಂದೆಯೆಂದು ಭಾವಿಸುತ್ತಿದ್ದರು. ಓ ರಾಜೇಂದ್ರಾ! ಅದು ತ್ರೇತಾಯುಗವಾಗಿದ್ದರೂಕೂಡ, ಕೃತಯುಗದಂತೆಯೇ ಅದರಲ್ಲಿ ಧರ್ಮವು ನಾಲ್ಕುಪಾದಗಳಿಂದಲೂ ಪ್ರವರ್ತಿಸುತ್ತಿತ್ತು. ರಾಮನು ರಾಜ್ಯವನ್ನು ನಡೆಸುವಾಗ, ನದೀನದಗಳೂ, ಪರ್ವತಗಳೂ, ಅರಣ್ಯಗಳೂ, ರಮ್ಯಕಾದಿ ವರ್ಷಗಳೂ, ಸಿಂಹಳಾದಿದ್ವೀಪಗಳೂ, ಸಮುದ್ರಗಳೂ, ಆಗಾಗ ಪ್ರಜೆಗಳು ಕೋರಿದ ವಸ್ತುಗಳನ್ನೊದಗಿಸಿ ಕೊಡುತಿದ್ದುವು ಆ ರಾಮರಾಜ್ಯದಲ್ಲಿ ಪ್ರಜೆಗಳಿಗೆ ಆಧಿವ್ಯಾಧಿಗಳಾಗಲಿ, ಮುಪ್ಪು, ಹಸಿವು, ಬಾಯಾರಿಕೆ, ಮುಂತಾದುವುಗಳಿಂದ ಸಂಭವಿಸುವ ಕಷ್ಟಗಳಾಗಲಿ, ದುಃಖವಾಗಲಿ, ಭಯವಾಗಲಿ, ಯಾವುದೊಂದೂ ತೋರುತ್ತಿರಲಿಲ್ಲ. ಆ ಕಾಲದಲ್ಲಿ ಯಾರಿಗೂ ಅಕಾಲಮರಣವಿಲ್ಲ. ಶ್ರೀರಾಮನು ಸಮಸ್ತಭೂಮಂಡಲಕ್ಕೂ ತಾನೇ ಚಕ್ರವರ್ತಿಯಾಗಿದ್ದರೂ, ವಿಶೇಷವಾಗಿ ಭೋಗಾಪೇಕ್ಷೆಯಿಲ್ಲದೆ, ಏಕಪತ್ನೀವ್ರತವನ್ನು ಹಿಡಿದು,ರಾಜರ್ಷಿಯಂತೆ ನಡೆಯುತಿದ್ದನು. ತನ್ನ ವರ್ಣಾಶ್ರಮಧರ್ಮಗಳನ್ನು ಲೋಪವಿಲ್ಲದೆ ನಡೆಸುತ್ತ, ಪ್ರಜೆಗಳನ್ನೂ ಆಯಾಕರ್ಮಗಳಲ್ಲಿ ಕ್ರಮವಾಗಿ ನಿಯಮಿಸುತ್ತಿದ್ದನು. ಸೀತಾ

ದೇವಿಯೂಕೂಡ, ವಿನಯದಿಂದಲೂ, ಪ್ರೇಮದಿಂದಲೂ, ಶುಶ್ರೂಷೆಯಿಂ ದಲೂ, ಸುಸ್ವಭಾವದಿಂದಲೂ, ಭಯಭಕ್ತಿಗಳಿಂದಲೂ ಸ್ತ್ರೀಯರಿಗೆ ಯೋ ಗ್ಯವಾದ ನಾಚಿಕೆಯಿಂದಲೂ ತನ್ನ ಪತಿಯಾದ ರಾಮನ ಮನಸ್ಸನ್ನು ವಶ ಪಡಿಸಿಕೊಂಡು, ಅವನ ಪ್ರೀತಿಗೆ ಪಾತ್ರಳಾಗಿದ್ದಳು. ಇದು ಹತ್ತನೆಯ ಅಧ್ಯಾಯವು.

---

## ರಾಮನು ಅಶ್ವಮೇಧಯಾಗವನ್ನು ನಡೆಸಿದುದು ಲವಕುಶರ ವೃತ್ತಾಂತವು.

ರಾಜೇಂದ್ರಾ ! ಕೇಳು ! ಹೀಗೆ ರಾಮನು ರಾಜ್ಯವನ್ನು ನಡೆಸುವಾಗ, ವಸಿಷ್ಠಾದಿಗಳ ಸಹಾಯದಿಂದ ಅನೇಕಯಾಗಗಳನ್ನು ನಡೆಸಿ ಅವುಗಳಿಂದ ಸರ್ವದೇವಮಯನಾದ ತನ್ನನ್ನೇ ತಾನು ಆರಾಧಿಸಿಕೊಳ್ಳುತಿದ್ದನು ಹೀ ಗೆ ಅನೇಕಯಾಗಗಳನ್ನು ನಡೆಸಿದಮೇಲೆ, ಆ ಯಾಗದಲ್ಲಿ ಹೋತೃವಾಗಿ ದ್ದವನಿಗೆ ಪೂರ್ವದಿಕ್ಕನ್ನೂ, ಬ್ರಹ್ಮನಿಗೆ ದಕ್ಷಿಣದಿಕ್ಕನ್ನೂ, ಅಧ್ವರ್ಯುವಿಗೆ ಪಶ್ಚಿಮದಿಕ್ಕನ್ನೂ, ಉದ್ಗಾತೃವಿಗೆ ಉತ್ತರದಿಕ್ಕನ್ನೂ, ಆಚಾರ್ಯನಿಗೆ ಈ ನಾಲ್ಕುದಿಕ್ಕುಗಳ ನಡುವೆ ಇದ್ದ ಭೂಭಾಗವನ್ನೂ ದಕ್ಷಿಣೆಯಾಗಿ ಕೊ ಟ್ಟನು. ಮತ್ತು ತನ್ನ ಸರ್ವೈಶ್ವರ್ಯಕ್ಕೂ ಸತ್ಪಾತ್ರದಾನವೇ ಫಲವೆಂದು ನಿಶ್ಚಯಿಸಿ, ಯಾವುದರಲ್ಲಿಯೂ ಆಸೆಯಿಲ್ಲದೆ, ರಾಜಯೋಗ್ಯಗಳಾದ ಭೋ ಗಸಾಮಗ್ರಿಗಳನ್ನೂ, ವಸ್ತ್ರಾಭರಣಗಳನ್ನೂ ಬ್ರಾಹ್ಮಣರಿಗೆ ದಾನಮಾಡಿ, ತನ್ನ ಮೈಮೇಲಿನ ಬಟ್ಟೆಗಳೆರಡನ್ನು ಮಾತ್ರ ತನ್ನದಾಗಿ ಮಿಗಿಸಿಕೊಂಡನು. ಸೀತಾದೇವಿಯೂ ಹೀಗೆಯೇ ತನ್ನ ವಸ್ತ್ರಾಭರಣಗಳೆಲ್ಲವನ್ನೂ ದಾನಮಾ ಡಿ, ಮಾಂಗಲ್ಯವೊಂದನ್ನುಮಾತ್ರ ತನ್ನದಾಗಿ ಮಿಗಿಸಿಕೊಂಡಳು ಆಗ ಅಲ್ಲಿ ದ್ದ ಋತ್ವಿಕ್ಕುಗಳೆಲ್ಲರೂ ರಾಮನ ಬ್ರಾಹ್ಮಣಭಕ್ತಿಗೂ, ವಾತ್ಸಲ್ಯಕ್ಕೂ, ಔದಾರ್ಯಕ್ಕೂ ಮೆಚ್ಚಿ, ಅವನಲ್ಲಿ ಮನಸ್ಸುಕರಗಿ, ಅವನು ತಮಗೆ ದಕ್ಷಿಣೆ ಯಾಗಿ ಕೊಟ್ಟಿದ್ದ ಭೂಭಾಗಗಳೆಲ್ಲವನ್ನೂ ಅವನಿಗೇ ಹಿಂತಿರುಗಿ ಕೊಡುತ್ತ "ರಾಮಾ ! ಸಾಕ್ಷಾತ್ಪರಮಪುರುಷನೇ ನೀನಲ್ಲದೆ ಬೇರೆಯಲ್ಲ ! ಅವಾಪ್ತ ಸಮಸ್ತಕಾಮನಾದ ನಿನಗೆ ಈ ರಾಜ್ಯಕೋಶಾದಿಗಳಲ್ಲಿ ಆಸೆಯಿಲ್ಲದಿರುವು

ದೇನೂ ಆಶ್ಚರ್ಯವಲ್ಲ! ಮತ್ತು ನಮ್ಮ ಹೃದಯದಲ್ಲಿ ಪ್ರವೇಶಿಸಿ, ಜ್ಞಾ
ನೋದಯವನ್ನುಂಟುಮಾಡಿ, ಉತ್ತಮಪುರುಷಾರ್ಥವಾದ ಮೋಕ್ಷವನ್ನೇ
ಕೊಡತಕ್ಕ ನೀನು, ಈ ಭೂದಾನಾದಿಗಳನ್ನು ಮಾಡುವುದೇನೂ ದೊಡ್ಡ
ದಲ್ಲ! ಆದರೆ ಇವುಗಳನ್ನು ಪಡೆದು ನಾವೇನು ಮಾಡಬಲ್ಲೆವು? ಇವು ನಿ
ನ್ನಲ್ಲಿಯೇ ಇರಲಿ! ಬ್ರಾಹ್ಮಣಹಿತನಾಗಿಯೂ, ಸ್ವಯಂಪ್ರಕಾಶನಾಗಿಯೂ
ಅಪರಿಚ್ಛಿನ್ನಜ್ಞಾನಸ್ವರೂಪನಾಗಿಯೂ, ಪುಣ್ಯಕೀರ್ತಿಗಳಲ್ಲಿ ಪ್ರಧಾನ
ನಾಗಿಯೂ, ಮಹಾಯೋಗಿಗಳಿಂದಲೂ ಧ್ಯಾನಿಸಲ್ಪಡತಕ್ಕ ಪಾದಾರವಿಂ
ದಗಳುಳ್ಳವನಾಗಿಯೂ ಇರುವ ನಿನಗೆ ನಮಸ್ಕಾರವು" ಎಂದು ಹೇಳಿ
ತಮ್ಮತಮ್ಮ ಸ್ಥಾನಗಳಿಗೆ ಹೊರಟುಹೋದರು. ಆಮೇಲೆ ಇತ್ತಲಾಗಿ ರಾ
ಮನು ಹತ್ತುಸಾವಿರವರ್ಷಗಳವರೆಗೆ ಸೀತಾಸಮೇತನಾಗಿ ಸುಖದಿಂದ
ರಾಜ್ಯವನ್ನು ಪಾಲಿಸುತಿದ್ದನು. ಆಮೇಲೆ ಒಂದಾನೊಂದು ದಿನದಲ್ಲಿ ರಾ
ಮನು ತನ್ನ ರಾಜ್ಯಭಾರವಿಷಯದಲ್ಲಿ ಪ್ರಜೆಗಳ ಅಭಿಪ್ರಾಯವೇನೆಂ
ಬುದನ್ನು ತಿಳಿದುಬರುವುದಕ್ಕಾಗಿ, ಯಾರಿಗೂ ತಿಳಿಯದಂತೆ ಗುಪ್ತ
ವೇಷದಿಂದ ಪಟ್ಟಣವನ್ನು ಸುತ್ತಿಬರುತಿದ್ದನು. ಹೀಗೆ ಬರುತ್ತಿರುವಾಗ
ಒಂದಾನೊಂದುಮನೆಯಲ್ಲಿ, ಗಂಡಹೆಂಡಿರಿಗೆ ಜಗಳವು ನಡೆಯುತಿತ್ತು. ಒ
ಬ್ಬ ಪುರುಷನು, ತನ್ನ ಹೆಂಡತಿಯು ಪರಪುರುಷನಮನೆಗೆ ಹೋಗಿ ಬಂದು
ದರಿಂದ, ಅವಳನ್ನು ವ್ಯಭಿಚಾರಣಿಯೆಂದು ಸಂದೇಹಿಸಿ, ಅವಳನ್ನು ಮನೆ
ಯಿಂದ ಹೊರಡಿಸುವುದಕ್ಕಾಗಿ ಯತ್ನಿಸುತಿದ್ದನು ನೆರೆಹೊರೆಯ ಬಂಧುಗ
ಳೆಲ್ಲರೂ ಅವನಿಗೆ ಸಮಾಧಾನವನ್ನು ಹೇಳುತ್ತ "ಅಯ್ಯಾ! ನಮ್ಮ ಪ್ರ
ಭುವಾದ ರಾಮನೇ ರಾವಣನ ಮನೆಯಲ್ಲಿದ್ದ ಸೀತೆಯನ್ನು ತಿರುಗಿ ಪರಿಗ್ರಹಿ
ಸಲಿಲ್ಲವೆ? ಅವನಿಗಿಂತಲೂ ನೀನು ಧರ್ಮಜ್ಞನೆ?" ಎಂದು ವಾದಿಸುತಿದ್ದರು
ಅದಕ್ಕಾ ಪುರುಷನು "ಕೇವಲಕಾಮುಕನಾದ ರಾಮನು ಹೆಂಡತಿಯನ್ನು
ಬಿಡಲಾರದೆ ಹೋದಮಾತ್ರಕ್ಕೆ, ನಾನೂ ಹಾಗೆ ಮಾಡಬೇಕೆ? ನಾ
ನೇನೂ ಅವನಂತೆ ಸ್ತ್ರೀವಶ್ಯನಲ್ಲ!" ಎಂದು ನಿರಾಕರಿಸುತಿದ್ದನು.
ಈ ಮಾತು ಕಿವಿಗೆ ಬಿದ್ದೊಡನೆ ರಾಮನು ದುಃಖಿತನಾಗಿ, ತನ್ನ ವಿಷ
ಯವಾಗಿ ಹರಡಿರುವ ಲೋಕಾಪವಾದಕ್ಕೆ ಹೆದರಿ, ಗರ್ಭಿಣಿಯಾಗಿದ್ದ

ಸೀತೆಯನ್ನು ಯಾರಿಗೂ ತಿಳಿಯದಂತೆ ಕಾಡಿಗೆ ಕಳುಹಿಸಿಬಿಟ್ಟನು. ಘೋ
ರಾರಣ್ಯದಲ್ಲಿ ಒಂಟಿಯಾಗಿದ್ದಾಗಲೂ ಸೀತೆಯು, ದೈವವಶದಿಂದ ಕಾಡು
ಮೃಗಗಳ ಬಾಯಿಗೆ ತುತ್ತಾಗದೆ ಬದುಕಿದ್ದಳು ಕೊನೆಗೆ ಭಾಗ್ಯವಶದಿಂದ
ವಾಲ್ಮೀಕಿಮಹರ್ಷಿಯ ದೃಷ್ಟಿಗೆ ಬಿದ್ದು, ಅವನಿಂದ ಸತ್ಕೃತಳಾಗಿ, ಅವನ
ಆಶ್ರಮಕ್ಕೆ ಹೋಗಿ, ಪ್ರಸವಕಾಲವು ಬಂದೊಡನೆ ಅವಳಿಮಕ್ಕಳನ್ನು
ಹಡೆದಳು ಅವರಿಬ್ಬರಿಗೂ ಲವಕುಶರೆಂದು ಹೆಸರಾಯಿತು. ಇವರಿಗೆ ವಾ
ಲ್ಮೀಕಿಯೇ ಜಾತಕರ್ಮಾದಿಸಂಸ್ಕಾರಗಳನ್ನು ನಡೆಸಿದನು. ಇಷ್ಟರಲ್ಲಿ
ಇತ್ತಲಾಗಿ ಲಕ್ಷ್ಮಣನಿಗೂ, ಅಂಗದಚಂದ್ರಕೇತುಗಳೆಂಬ ಇಬ್ಬರು ಪು
ತ್ರರು ಜನಿಸಿದರು ಭರತನಿಗೆ ದಕ್ಷ ಪುಷ್ಕಲರೆಂಬ ಇಬ್ಬರು ಮಕ್ಕಳಾದರು
ಶತ್ರುಘ್ನನಿಗೆ ಸುಬಾಹು ಶ್ರುತಸೇನರೆಂಬ ಇಬ್ಬರು ಕುಮಾರರು ಜನಿಸಿದರು.
ಈ ಸಮಸ್ತಬಂಧುಗಳೊಡನೆ ರಾಮನು. ರಾಜ್ಯವನ್ನಾಳುತ್ತಿರುವಾಗ, ಭರತ
ನು ದಿಗ್ವಿಜಯಕ್ಕಾಗಿ ಹೊರಟು, ಅನೇಕಕೋಟಿಗಂಧರ್ವರನ್ನು ಜಯಿಸಿ,ಅ
ವರ ಸರ್ವಸ್ವವನ್ನೂ ತಂದು ರಾಮನ ಪಾದಗಳಿಗೊಪ್ಪಿಸಿದನು. ಹಾಗೆ
ಯೇ ಶತ್ರುಘ್ನನೂ ಮತ್ತೊಂದು ದಿಕ್ಕಿಗೆ ಹೊರಟು, ಮಧುವನದಲ್ಲಿ ಮಧು
ವೆಂಬ ರಾಕ್ಷಸನ ಮಗನಾದ ಲವಣಾಸುರನನ್ನು ಕೊಂದು, ಅಲ್ಲಿ ಮಧು
ರಾಪುರಿಯನ್ನು ನಿರ್ಮಿಸಿದನು ಅತ್ತಲಾಗಿ ಸೀತೆಯು ತನ್ನ ಕುಮಾರರನ್ನು
ವಾಲ್ಮೀಕಿಯ ಕೈಗೊಪ್ಪಿಸಿ, ಪತಿವಿರಹವನ್ನು ತಾಳಲಾರದೆ, ಆ ರಾಮನ
ಪಾದಪದ್ಮಗಳನ್ನೇ ಧ್ಯಾನಿಸುತ್ತ, ಭೂವಿವರವನ್ನು ಪ್ರವೇಶಿಸಿಬಿಟ್ಟಳು.
ಈ ವೃತ್ತಾಂತವು, ಇತ್ತಲಾಗಿ ರಾಮನ ಕಿವಿಗೂ ಮುಟ್ಟಿತು. ರಾಮನು ಎ
ಷ್ಟೇ ಧೀರನಾಗಿದ್ದರೂ, ಆ ದುಃಖವನ್ನು ಸಹಿಸಲಾರದೆ, ಸೀತೆಯ ಗುಣಗಳ
ನ್ನೇ ಆಗಾಗ ಸ್ಮರಿಸಿಕೊಳ್ಳುತ್ತ, ಬಹಳವಾಗಿ ಕೊರಗುತಿದ್ದನು. ಓ ಪರೀ
ಕ್ಷಿದ್ರಾಜಾ ! ಯಾರಿಗಾದರೇನು ? ಸ್ತ್ರೀಸಂಗವೆಂಬುದು ಎಂದಿದ್ದರೂ
ಹಾನಿಯನ್ನುಂಟುಮಾಡದಿರದು ! ಭಗವದಂಶಭೂತನಾದ ರಾಮನ ಸ್ಥಿತಿ
ಯೇ ಹೀಗಿರುವಾಗ,ಇತರಗ್ರಾಮ್ಯಜನರ ಪಾಡೇನು? ಸೀತಾವಿಯೋಗವಾ
ದಮೇಲೆ ರಾಮನು, ಬೇರೆ ಪತ್ನಿಯನ್ನು ಪರಿಗ್ರಹಿಸದೆ, ಬ್ರಹ್ಮಚರ್ಯದಲ್ಲಿ

ಯೇ ಇದ್ದು, * ಹದಿಮೂರು ಸಾವಿರವರ್ಷಗಳವರೆಗೆ,ಅವಿಚ್ಛಿನ್ನವಾಗಿ ಅಗ್ನಿ ಹೋತ್ರಕಾರ್ಯವನ್ನು ನಡೆಸುತಿದ್ದನು ಹೀಗೆ ಶ್ರೀರಾಮನು, ದಂಡಕಾರ ಣ್ಯಸಂಚಾರದಿಂದ ಮುಳ್ಳುನಾಟಿದ ತನ್ನ ಪಾದಗಳನ್ನು, ಪ್ರಜೆಗಳು ಯಾ ವಾಗಲೂ ತಮ್ಮ ಹೃದಯದಲ್ಲಿಟ್ಟು ಧ್ಯಾನಿಸುವಂತೆ ಮಾಡಿ, ಕೊನೆಗೆ ಜ್ಯೋತಿರ್ಮಯವಾದ ತನ್ನ ಸ್ಥಾನದಲ್ಲಿ ನೆಲೆಗೊಂಡನು ಓ ರಾಜಾ! ರಾ ಮನು ದೇವಕಾರ್ಯಾರ್ಥವಾಗಿ ಮನುಷ್ಯರೂಪದಿಂದ ಭೂಮಿಯಲ್ಲಿ ಅವ ತಾರವನ್ನೆತ್ತಿದ ಸಾಕ್ಷಾನ್ನಾರಾಯಣನೇಹೊರತು ಬೇರೆಯಲ್ಲ ಲೋಕದ ಲ್ಲಿ ಅವನಿಗೆ ಮೇಲೆನಿಸಿದವರಾಗಲಿ, ಸಮಾನರಾಗಲಿ ಬೇರೊಬ್ಬರಿಲ್ಲ. ಅವನ ಮಹಾಮಹಿಮೆಗೆ ಸಮುದ್ರಬಂಧನವಾಗಲಿ, ರಾವಣಾದಿರಾಕ್ಷಸರ ವಧ ವಾಗಲಿ, ಲೀಲಾಮಾತ್ರವೇ ಹೊರತು ಆಶ್ಚರ್ಯಕಾರ್ಯಗಳಲ್ಲ ಆತನಿಗೆ ಯುದ್ಧದಲ್ಲಿ ಕಾಡುಕಪಿಗಳು ಸಹಾಯಕವಾಗಿ ಬಂದುದೂ ಆಶ್ಚರ್ಯವಲ್ಲ. ಸಂಕಲ್ಪಮಾತ್ರದಿಂದಲೇ ಲೋಕವನ್ನು ಸೃಜಿಸಬಲ್ಲ ಆ ಶ್ರೀರಾಮನಿಗೆ ಈ ಕಾರ್ಯಗಳು ಕೀರ್ತಿಕರಗಳೂ ಅಲ್ಲ. ಸರ್ವಲೋಕವ್ಯಾಪಿಯಾದ ಯಾವನ ಕೀರ್ತಿಯನ್ನು, ಯಶೋಧನರೆನಿಸಿಕೊಂಡ ಧರ್ಮರಾಜಾದಿಗಳೂ ತಮ್ಮ ಸಭೆಯಲ್ಲಿ ಅನವರತವೂ ಸ್ತುತಿಸುತ್ತಿರುವರೋ, ಯಾವನ ಗು ಣಚರಿತ್ರಗಳನ್ನು ಮಾರ್ಕಂಡೇಯಾದಿಮಹರ್ಷಿಗಳೂ ಭಕ್ತಿಯಿಂದ ಗಾನ ಮಾಡುತ್ತಿರುವರೋ, ಯಾವನ ಪಾದಪದ್ಮಗಳನ್ನು ದೇವತೆಗಳೂ, ರಾಜಾ ಧಿರಾಜರೂ ಪಾಪನಿವೃತ್ತಿಗಾಗಿ ಶಿರಸಾಧಾರಣಮಾಡುತ್ತಿರುವರೋ,ಅಂತ-

---

* ರಾಮಾಯಣದಲ್ಲಿ "ದಶವರ್ಷಸಹಸ್ರಾಣಿ ದಶವರ್ಷಶತಾನಿಚ!" ಎಂದು, ರಾಮನು, ಸೀತಾಸಮೇತನಾಗಿ ಹತ್ತು ಸಾವಿರವರ್ಷಗಳೂ, ಸೀತೆಯನ್ನು ಕಾಡಿಗೆ ಕ ಳುಹಿಸಿದಮೇಲೆ ಒಂದು ಸಾವಿರವರ್ಷಗಳೂ ರಾಜ್ಯವಾಳಿದುದಾಗಿ ಹೇಳಲ್ಪಟ್ಟಿದೆ: ಇಲ್ಲಿ ಹದಿಮೂರುಸಾವಿರವರ್ಷಗಳು ಅಗ್ನಿಹೋತ್ರವನ್ನು ನಡೆಸಿದುದಾಗಿ ಹೇಳುವುದು ವಿರುದ್ಧವಾಗಿ ತೋರಿದರೂ,ಸೀತಾವಿಯೋಗದಲ್ಲಿ ರಾಮನಿಗೆ ಆ ಒಂದುಸಾವಿರವರ್ಷಗ ಳೇ ಮೂರರಷ್ಟುದೀರ್ಘವಾಗಿ ತೋರುತಿದ್ದುದರಿಂದ ಹೀಗೆ ಹೇಳಿದುದಾಗಿ ಸಮಾಧಾ ನವನ್ನು ಕಲ್ಪಿಸಬಹುದು. ಸೀತೆಯನ್ನು ಕಾಡಿಗೆ ಕಳುಹಿಸಿದಮೇಲೆಯೂ, ಸ್ವರ್ಣಸೀತೆ ಯನ್ನಿಟ್ಟುಕೊಂಡು ಅಗ್ನಿಕಾರ್ಯವನ್ನು ನಡೆಸುತಿದ್ದುದಾಗಿ ಗ್ರಾಹ್ಯವು.

ಹ ಶ್ರೀರಾಮನನ್ನು ಶರಣುಹೊಂದುವೆವು. ಓರಾಜೇಂದ್ರಾ! ಆಗ ಕೋಸಲ ದೇಶವಾಸಿಗಳಲ್ಲಿ ಶ್ರೀರಾಮನನ್ನು ಭಕ್ತಿಯಿಂದ ಸೇವಿಸಿದವರೂ, ಅವನನ್ನು ಕಣ್ಣಾರೆ ಸಂದರ್ಶನಮಾಡಿದವರೂ, ಅವನನ್ನು ಅನುವರ್ತಿಸುತಿದ್ದವರೂ, ಅವರೆಲ್ಲರೂ ತಮ್ಮ ಕರ್ಮಪಾಶವನ್ನು ಕಳೆದು, ಯೋಗೀಶ್ವರರು ಹೊಂದತಕ್ಕ ಉತ್ತಮಪದವನ್ನು ಹೊಂದಿದರು. ಅಷ್ಟೇಕೆ? ಈಗಲೂ ಲೋಕದಲ್ಲಿ ಆ ಶ್ರೀರಾಮನ ಚರಿತ್ರವನ್ನು ಶ್ರದ್ಧೆಯಿಂದ ಯಾವನು ಹೇಳುವನೋ, ಯಾವನು ಕೇಳುವನೋ, ಅವನು ಸಂಸಾರಹೇತುವಾದ ಕರ್ಮಬಂಧವನ್ನು ನೀಗಿ ಮುಕ್ತನಾಗುವನು" ಎಂದನು.

ಇದನ್ನು ಕೇಳಿ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು, "ಶ್ರೀರಾಮನು ವನವಾಸದಿಂದ ಬಂದಮೇಲೆ ದೇಶವಾಸಿಗಳನ್ನೂ, ಪುರವಾಸಿಗಳನ್ನೂ, ಬಂಧುವರ್ಗಗಳನ್ನೂ, ಸೋದರರನ್ನೂ ಯಾವವಿಧದಿಂದ ಪಾಲಿಸುತಿದ್ದನು? ಪ್ರಜೆಗಳು ಆತನವಿಷಯದಲ್ಲಿ ಹೇಗೆ ನಡೆಯುತಿದ್ದರು? ಈ ಸಂಗತಿಯನ್ನು ನನಗೆ ವಿವರಿಸಿ ತಿಳಿಸಬೇಕು" ಎಂದನು. ಅದಕ್ಕಾಶುಕನು "ರಾಜಾ! ಕೇಳು! ತ್ರೈಲೋಕ್ಯನಾಥನಾದ ಶ್ರೀರಾಮನು ಸಿಂಹಾಸನವನ್ನೇರಿದೊಡನೆ, ಬೇರೆಬೇರೆ ದಿಕ್ಕುಗಳನ್ನು ಪಾಲಿಸುವುದಕ್ಕಾಗಿ ತನ್ನ ತಮ್ಮಂದಿರನ್ನು ನಿಯಮಿಸಿ, ತಾನು ಮಾತ್ರ ತಾಯಿ ಮುಂತಾದ ಬಂಧುಗಳ ಸಮೀಪದಲ್ಲಿಯೇ ಇದ್ದು, ಅನುಚರರೊಡನೆ ಅಯೋಧ್ಯಾನಗರಿಯ ಕ್ಷೇಮಲಾಭವನ್ನು ತಾನೇ ನೋಡಿಕೊಳ್ಳುತಿದ್ದನು ರಾಮನು ಮೊದಲು ಪುರಪ್ರವೇಶಮಾಡುವಾಗಲೇ ಪುರಗ್ರಾಮಗಳ ಒಂದೊಂದು ಬೀದಿಯೂ, ಚಂದನಜಲದಿಂದಲೂ, ಮದದಾನೆಗಳ ಮದಜಲದಿಂದಲೂ ಸೇಚಿತವಾಗಿ ಘಮಘಮಿಸುತಿತ್ತು. ಪ್ರಭುವಾದ ರಾಮನು ಬರುವನೆಂಬ ಸುದ್ದಿಯನ್ನು ಕೇಳಿದೊಡನೆ, ಪುರವಾಸಿಗಳೆಲ್ಲರೂ ಪರಮಸಂತೋಷಭರಿತರಾಗಿ, ಅಲ್ಲಲ್ಲಿನ ಪ್ರಾಸಾದಗಳನ್ನೂ, ದೇವಾಲಯಗಳನ್ನೂ, ಸುವರ್ಣಕಲಶಗಳಿಂದಲೂ, ಧ್ವಜಪತಾಕೆಗಳಿಂದಲೂ ಅಲಂಕರಿಸಿಟ್ಟರು. ಎಲ್ಲಿ ನೋಡಿದರೂ ಬಾಳೆಯ ಕಂಬಗಳು! ಎಲ್ಲಿ ನೋಡಿದರೂ ಹೊಂಬಾಳೆಯ ಗೊನೆಗಳು! ವಿಚಿತ್ರವಾದ ಮೇಲಕಟ್ಟುಗಳು! ಅಂದವಾದ ಕನ್ನಡಿಗಳು ! ಪುಷ್ಪಮಾಲಿಕೆಗಳು! ಮಕರತೋರ

ಣಗಳು! ಮುತ್ತಿನ ಕುಚ್ಚುಗಳು! ಹೀಗೆ ಪಟ್ಟಣವೆಲ್ಲವೂ ಶೋಭಾತಿಶಯದಿಂದ ಬೆಳಗುತ್ತಿತ್ತು. ಇದಲ್ಲದೆ ರಾಮನು ಬರುವಾಗ ದಾರಿಯುದ್ದಕ್ಕೂ ಪುರವಾಸಿಗಳು ಕೈಕಾಣಿಕೆಗಳನ್ನು ತಂದೊಪ್ಪಿಸಿ,ಅವನನ್ನು ಪೂಜಿಸಿ, ಅವನ ದರ್ಶನಾನಂದದಿಂದ ಸಂತುಷ್ಟರಾಗಿ "ದೇವಾ! ಮೊದಲು ನೀನು ವರಾಹರೂಪದಿಂದುದ್ಧರಿಸಿದ ಈ ಭೂಮಿಯನ್ನು ರಾಮರೂಪದಿಂದ ಬಹುಕಾಲದವರೆಗೆ ಪಾಲಿಸುತ್ತಿರು!" ಎಂದು ಮಂಗಳಾಶಾಸನವನ್ನು ಮಾಡುತಿದ್ದರು ಮತ್ತು ಶ್ರೀರಾಮನನ್ನು ಸಂದರ್ಶನಮಾಡಬೇಕೆಂಬ ಕುತೂಹಲದಿಂದ, ಪಟ್ಟಣದಲ್ಲಿರುವ ಸ್ತ್ರೀಬಾಲವೃದ್ಧರೆಲ್ಲರೂ, ತಮ್ಮ ತಮ್ಮ ವ್ಯಾಪಾರಗಳೆಲ್ಲವನ್ನೂ ಬಿಟ್ಟು ಉಪ್ಪರಿಗೆಗಳನ್ನೂ, ಗೋಪುರಗಳನ್ನೂ ಏರಿ, ಎಷ್ಟಾವರ್ತಿ ನೋಡಿದರೂ ತೃಪ್ತಿಯಿಲ್ಲದೆ, ದಾರಿಯುದ್ದಕ್ಕೂ ಅವನನ್ನು ಹಿಂಬಾಲಿಸಿಬಂದರು. ಒಬ್ಬೊಬ್ಬರೂ ಅವನಮೇಲೆ ಪುಷ್ಪವರ್ಷವನ್ನು ಕರೆಯುತಿದ್ದರು ಇಂತಹ ಮಹಾವೈಭವದೊಡನೆ ರಾಮನು,ಇಕ್ಷ್ವಾಕು ಮೊದಲಾದ ಪೂರ್ವರಾಜರಿಂದ ಸೇವಿತವಾದ ತನ್ನ ರಾಜಗೃಹವನ್ನು ಪ್ರವೇಶಿಸಿದನು ಆ ಅರಮನೆಯ ಸೌಭಾಗ್ಯಸಮೃದ್ಧಿಯನ್ನು ಕೇಳಬೇಕೆ? ಎಣೆಯಿಲ್ಲದ ರತ್ನರಾಶಿಗಳಿಂದಲೂ, ಅಮೂಲ್ಯವಸ್ತುಗಳಿಂದಲೂ ಒಪ್ಪುತ್ತಿರುವ ಆ ಅರಮನೆಯಲ್ಲಿ, ಎಲ್ಲಿ ನೋಡಿದರೂ ಹವಳದ ದ್ವಾರಬಂಧಗಳು! ವೈಡೂರ್ಯದ ಕಂಬಗಳು! ಮರಕತದ ನೆಲಗಟ್ಟುಗಳು! ಸ್ಫಟಿಕದ ಕಲ್ಲುಗಳಿಂದ ಚಿತ್ರಿತಗಳಾದ ದಂತದ ಗೋಡೆಗಳು! ವಿಚಿತ್ರಪುಷ್ಪಮಾಲಿಕೆಗಳು! ನಾನಾಬಣ್ಣದ ಧ್ವಜಪತಾಕೆಗಳು! ಪಟ್ಟೆಮಡಿಯ ಜಾಲರಿಗಳು! ರತ್ನದ ಕುಚ್ಚುಗಳು! ಮುತ್ತಿನ ಸರಗಳು! ಬೇಕುಬೇಕಾದ ಭೋಗ್ಯವಸ್ತುಗಳು! ಇವುಗಳಿಂದ ಆ ರಾಜಭವನವು ನೋಡುವವರ ಮನಸ್ಸನ್ನು ಉಲ್ಲಾಸಗೊಳಿಸುತ್ತಿರುವುದು. ಯಾವ ಕಡೆಯಲ್ಲಿ ನೋಡಿದರೂ ಪರಿಮಳಧೂಪಗಳಿಂದಲೂ, ದೀಪಗಳಿಂದಲೂ, ಪುಷ್ಪೋಪಹಾರಗಳಿಂದಲೂ ಸಮಸ್ತದಿಕ್ಕುಗಳೂ ಘಮಘಮಿಸುತ್ತಿರುವುವು. ಎಲ್ಲಿ ನೋಡಿದರೂ ದೇವಸಮಾನರಾದ ಸ್ತ್ರೀಪುರುಷರು ಸರ್ವಾಭರಣಭೂಷಿತರಾಗಿ ಸಂಚರಿಸುತ್ತಿರುವರು ಮುನಿಜನಪ್ರಿಯನಾದ ಶ್ರೀರಾಮನು ಇಂತಹ ರಾಜಮಂದಿರವನ್ನು ಪ್ರವೇಶಿಸಿ, ತನಗೆ ಪರಮಪ್ರಿಯೆಯಾಗಿಯೂ, ಸ

ರ್ವವಿಧದಿಂದಲೂ ತನ್ನನ್ನು ಅನುವರ್ತಿಸತಕ್ಕವಳಾಗಿಯೂ ಇರುವ ಸೀತಾ ದೇವಿಯೊಡನೆ, ಬಹುಕಾಲದವರೆಗೆ ಸುಖವನ್ನನುಭವಿಸುತಿದ್ದನು: ಅಲ್ಲಿ ಶ್ರೀರಾಮನು ಧರ್ಮಲೋಪವಿಲ್ಲದೆ ಕಾಲೋಚಿತವಾಗಿ ಭೋಗಗಳನ್ನನುಭ ವಿಸುತ್ತ, ಸಮಸ್ತಪ್ರಜೆಗಳಿಂದಲೂ ನಿರಂತರವೂ ಧ್ಯಾನಿಸಲ್ಪಟ್ಟ ಪಾದಕ ಮಲವುಳ್ಳವನಾಗಿ, ಅನೇಕಸಂವತ್ಸರಗಳವರೆಗೆ ರಾಜ್ಯವನ್ನು ಪಾಲಿಸುತಿದ್ದ ನು. ಇದು ಹನ್ನೊಂದನೆಯ ಅಧ್ಯಾಯವು.

---

## ಶ್ರೀರಾಮವಂಶಾನುಕ್ರಮವು.

ರಾಜೇಂದ್ರಾ ಕೇಳು! ಶ್ರೀರಾಮನಿಗೆ ಲವಕುಶರೆಂಬ ಪುತ್ರರಾದರ ಷ್ಟೆ? ಕುಶನ ಮಗನು ಅತಿಥಿ! ಅತಿಥಿಯಿಂದ ನಿಷಧನು ಹುಟ್ಟಿದನು ಹಾಗೆ ಯೇ ನಿಷಧನಿಂದ ನಭನೂ, ಅವನಿಂದ ಪುಂಡರೀಕನೂ, ಅವನಿಂದ ಕ್ಷೇತ್ರ ಧನ್ವನೂ, ಆತನಿಂದ ದೇವಾನೀಕನೂ ಜನಿಸಿದರು. ಈ ದೇವಾನೀಕನಿಂದ ಅಹೀನನೆಂಬವನು ಹುಟ್ಟಿದನು. ಇವನ ಮಗನು ಪಾರಿಯಾತ್ರನು: ಈ ಪಾರಿಯಾತ್ರನಿಂದ ಬಲನೂ, ಅವನಿಂದ ಚಲನೂ, ಅವನಿಂದ ವಜ್ರನಾಭ ನೂ ಜನಿಸಿದರು. ಈ ವಜ್ರನಾಭನನ್ನು ಸೂರ್ಯಾಂಶದಿಂದ ಹುಟ್ಟಿದವ ನೆಂದು ಹೇಳುವರು. ಇವನ ಮಗನು ಖಗಣನು. ಅವನಿಂದ ವಿಧೃತಿ ಯೆಂಬವನು ಜನಿಸಿದನು. ಇವನಿಗೆ ಹಿರಣ್ಯನಾಭನೆಂಬ ಮಗನಾದನು. ಈ ಹಿರಣ್ಯನಾಭನೇ ಯೋಗಾಚಾರ್ಯನೆನಿಸಿಕೊಂಡ ಜೈಮಿನಿಮುನಿಗೆ ಶಿಷ್ಯ ನಾಗಿ, ಯೋಗಶಾಸ್ತ್ರವನ್ನಭ್ಯಸಿಸಿ, ಅಜ್ಞಾನನಿವಾರಕವಾದ ಆ ಅಧ್ಯಾತ್ಮ ವಿದ್ಯೆಯನ್ನು ಯಾಜ್ಞವಲ್ಕ್ಯನಿಗೆ ಉಪದೇಶಿಸಿದನು. ಈ ಹಿರಣ್ಯನಾಭನಿಂ ದ ಪುಷ್ಯನೂ, ಅವನಿಂದ ಧ್ರುವಸಂಧಿಯೂ, ಅವನಿಂದ ಸುದರ್ಶನನೂ, ಅವನಿಂದ ಅಗ್ನಿವರ್ಣನೂ, ಅಗ್ನಿವರ್ಣನಿಂದ ಶೀಘ್ರನೂ, ಇವನಿಂದ ಮರುತ್ತೂ ಜನಿಸಿದರು. ಈ ಮರುತ್ತೆಂಬವನು ತನ್ನ ಯೋಗಬಲದಿಂದ ಮೃತ್ಯುವನ್ನು ಜಯಿಸಿ, ಕಲಾಪವೆಂಬ ಗ್ರಾಮದಲ್ಲಿ ಈಗಲೂ ತಪೋನಿಷ್ಠ ನಾಗಿಕುಳಿತಿರುವನು ಇವನು ನಷ್ಟವಾದ ಸೂರ್ಯವಂಶವನ್ನು, ಮುಂದೆ ಕಲಿ ಯುಗದ ಕೊನೆಯಲ್ಲಿ ತಿರುಗಿ ತನ್ನ ಪುತ್ರಪೌತ್ರಪರಂಪರೆಯಾಗಿ ವೃದ್ಧಿಗೊ

ಳಿಸುವವನು. ಈ ಮರುತ್ತಿಗೆ ಪ್ರಸ್ಸುವೆಂಬ ಮಗನಾದನು ಅವನಿಂದ ಸಂಧಿ ಯೆಂಬ ಪುತ್ರನಾದನು. ಈ ಸಂಧಿಯಿಂದ ಮರ್ಷಣನೂ, ಅವನಿಂದ ಸು ಮಹತ್ತೂ, ಅವನಿಂದ ವಿಶ್ವಸಾಹ್ಯನೂ, ಅವನಿಂದ ಬೃಹದ್ಬಲನೂ ಜನಿಸಿದರು ಓ ಪರೀಕ್ಷಿದ್ರಾಜಾ! ಈ ಬೃಹದ್ಬಲನು ನಿನ್ನ ತಂದೆ ಯಾದ ಅಭಿಮನ್ಯುವಿನಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟನು. ಓ ರಾಜಾ! ಇವರೆಲ್ಲರೂ ಇಕ್ಷ್ವಾಕುವಂಶದಲ್ಲಿ ಇದುವರೆಗೆ ಹುಟ್ಟಿದ ರಾಜರು, ಇ ದೇ ವಂಶದಲ್ಲಿ ಮುಂದೆ ಹುಟ್ಟುವ ರಾಜರನ್ನೂ ತಿಳಿಸುವೆನು ಕೇಳು! ಬೃ ಹದ್ಬಲನಿಗೆ ಬೃಹದ್ರಣನೆಂಬ ಪುತ್ರನು ಜನಿಸುವನು ಅವನಿಂದ ಉರುಕ್ಷ ತನೂ, ಆ ಉರುಕ್ಷತನಿಂಡ ವತ್ಸಪ್ರೀತನೂ, ಅವನಿಂದ ಪ್ರತಿವ್ಯೋಮನೂ, ಅವನಿಂದ ಭಾನುವೂ, ಭಾನುವಿನಿಂದ ವಾಹಿನೀಪತಿಯೆಂಬ ನಾಮಾಂತರವು ಳ್ಳ ದೇವಾಕನೂ, ಅವನಿಂದ ಸಹದೇವನೂ, ಅವನಿಂದ ಬೃಹದಶ್ವನೂ, ಅವನಿಂದ ಭಾನುಮಂತನೂ, ಅವನಿಂದ ಪ್ರತೀಪಾಶ್ವನೂ, ಅವನಿಂದ ಸು ಪ್ರತೀಕನೂ ಜನಿಸುವರು ಈಪ್ರತೀಕನ ಮಗನು ಮೇರುದೇವನು. ಅವನಿಂದ ಸುರಕ್ಷತ್ರನೂ,ಅವನಿಂದ ಋಕ್ಷಕನೂ,ಋಕ್ಷಕನಿಂದ ಅಂತರಿಕ್ಷನೂ,ಅವನಿಂದ ಸುತಪ್ತನೂ, ಅವನಿಂದ ಅಮಿತ್ರಜಿತ್ತೂ, ಅವನಿಂದ ಬೃಹದ್ವಾಜಿಯೂ, ಅವನಿಂದ ಬರ್ಹಿಯೂ, ಅವನಿಂದ ಧನಂಜಯನೂ, ಅವನಿಂದ ರಣಂಜಯ ನೂ, ಅವನಿಂದ ಸೃಂಜಯನೂ ಹುಟ್ಟುವರು. ಆ ಸೃಂಜಯನಿಗೆ ಶಾಕ್ಯ ನೆಂಬ ಮಗನಾಗುವನು. ಶಾಕ್ಯನಿಂದ ಶುದ್ಧೋದನೂ, ಅವನಿಂದ ಲಾಂಗ ಲನೂ, ಅವನಿಂದ ಪ್ರಸೇನಜಿತ್ತೂ, ಅವನಿಂದ ಕ್ಷುದ್ರಕನೂ, ಅವನಿಂದ ಕುಣಕನೂ, ಅವನಿಂದ ಸುರಥನೂ ಹುಟ್ಟುವರು. ಆಸುರಥನಿಗೆ ಸುಮಿ ತ್ರನೆಂಬ ಮಗನು ಜನಿಸುವನು. ಮುಂದೆ ಬೃಹದ್ಬಲನಿಂದ ಹುಟ್ಟುವ ಸೂ ರ್ಯವಂಶದ ರಾಜರಲ್ಲಿ ಇವನೇ ಕೊನೆಯವನು. ಕಲಿಯುಗದಲ್ಲಿ ಇಕ್ಷ್ವಾಕು ವಂಶವು ಈ ಸುಮಿತ್ರನವರೆಗೆ ಅನುಸ್ಯೂತವಾಗಿ ನಡೆದುಬಂದು, ಇಲ್ಲಿಗೆ ನಿಂತುಹೋಗುವುದು. ಇದು ಹನ್ನೆರಡನೆಯ ಅಧ್ಯಾಯವು.

---

## ನಿಮಿವಂಶಾನುಕ್ರಮವು.

ರಾಜಾ! ಇಕ್ಷ್ವಾಕುಕುಮಾರರಲ್ಲಿ ವಿಕುಕ್ಷಿಯ ವಂಶವನ್ನು ಹೇಳಿದೆನ ಷ್ಟೆ? ಇನ್ನು ನಿಮಿಯ ವಂಶಾನುಕ್ರಮವನ್ನು ಹೇಳುವೆನು ಕೇಳು ! ಈ ನಿ ಮಿಯು, ಒಮ್ಮೆ ಸತ್ರಯಾಗವನ್ನಾರಂಭಿಸಿ, ಗುರುವಾದ ವಸಿಷ್ಠನಲ್ಲಿಗೆ ಬಂ ದು, ಆ ಯಾಗಕ್ಕೆ ಅವನನ್ನು ಋತ್ವಿಕ್ಕಾಗಿರಬೇಕೆಂದು ಪ್ರಾರ್ಥಿಸಿದನು ಆದರೆ ವಸಿಷ್ಠನು, ಇದಕ್ಕೆ ಮೊದಲೇ ಇಂದ್ರನಯಾಗದಲ್ಲಿ ಪೌರೋಹಿತ್ಯಕ್ಕೆ ಒ ಪ್ಪಿದ್ದುದರಿಂದ, ಆ ಯಾಗವನ್ನು ಮುಗಿಸಿಬಂದಮೇಲೆ ಈ ಯಾಗವನ್ನು ನ ಡೆಸುವುದಾಗಿ ಹೇಳಿದನು. ನಿಮಿಯು ಅದಕ್ಕೆ ಸಮ್ಮತಿಸಲು, ವಸಿಷ್ಠ ನು ಇಂದ್ರನ ಯಾಗಕ್ಕೆ ಹೋದನು. ಇಷ್ಟರಲ್ಲಿ ಇತ್ತಲಾಗಿ ನಿ ಮಿಯ ಮನಸ್ಸಿನಲ್ಲಿ ಬೇರೆ ಆಲೋಚನೆಯು ಹುಟ್ಟಿತು ಮನುಷ್ಯನ ಜೀವಿತವು ಚಂಚಲವಾದುದರಿಂದ, ಉದ್ದೇಶಿಸಿದ ಕಾರ್ಯವನ್ನು ಕಾಲವಿಳಂಬ ವಿಲ್ಲದೆ ಆಗಾಗಲೇ ನಿರ್ವಹಿಸಬೇಕೆಂದು ನಿಶ್ಚಯಿಸಿ, ವಸಿಷ್ಠಾಗಮನವನ್ನು ನಿರೀಕ್ಷಿಸದೆ, ಬೇರೆ ಮಹರ್ಷಿಗಳನ್ನು ಋತ್ವಿಕ್ಕುಗಳನ್ನಾಗಿ ಏರ್ಪಡಿಸಿ, ಯಾ ಗವನ್ನಾರಂಭಿಸಿಬಿಟ್ಟನು. ಅತ್ತಲಾಗಿ ವಸಿಷ್ಠನು ಇಂದ್ರನಯಾಗವು ಪೂರ್ತಿ ಯಾದೊಡನೆ, ನಿಮಿಗೆ ಮಾತುಕೊಟ್ಟಂತೆ ಅವನಬಳಿಗೆ ಬಂದನು. ಇಷ್ಟರಲ್ಲಿ ಇಲ್ಲಿ ಯಾಗಾರಂಭವಾಗಿರುವುದನ್ನು ನೋಡಿ ವಸಿಷ್ಠನಿಗೆ ನಿಮಿಯ ಮೇಲೆ ಅತ್ಯಾಕ್ರೋಶವುಂಟಾಯಿತು. ಈ ಕೋಪದಿಂದ ವಸಿಷ್ಠನು, ನಿಮಿ ಯನ್ನು ಕುರಿತು “ಎಲಮದಾಂಧಾ! ಪಂಡಿತಂಮನ್ಯನಾದ ನೀನು, ನನ್ನನ್ನು ತಿರಸ್ಕರಿಸಿ ಯಾಗವನ್ನಾರಂಭಿಸಿದೆಯಲ್ಲವೆ? ಇದರಿಂದ ಈಗಲೇ ನಿನ್ನ ದೇಹ ವು ಬಿದ್ದುಹೋಗಲಿ!” ಎಂದು ಶಪಿಸಿದನು ಇದನ್ನು ಕೇಳಿ ನಿಮಿಗೂ ಕೋ ಪವುಂಟಾಯಿತು. “ಹಣದಾಸೆಯಿಂದ ವಿವೇಕಜ್ಞಾನವಿಲ್ಲದೆ, ಧರ್ಮವನ್ನೂ ಯೋಚಿಸದೆ, ನಿಷ್ಕಾರಣವಾಗಿ ನನ್ನನ್ನು ಶಪಿಸಿದ ನಿನ್ನ ದೇಹವೂ ಬಿದ್ದು ಹೋಗಲಿ!” ಎಂದು ಪ್ರತಿಶಾಪವನ್ನು ಕೊಟ್ಟನು. ಒಡನೆಯೇ ಅವರಿ ಬ್ಬರೂ ಮೃತರಾದರು! ಆದರೆ, ನನ್ನ ಮುತ್ತಾತನಾದ ವಸಿಷ್ಠನು. ನಿಮಿ ಶಾಪದಿಂದ ದೇಹವನ್ನು ನೀಗಿದಮೇಲೆ, ಮುಂದಿನ ಜನ್ಮದಲ್ಲಿ, ಊರ್ವಶಿಯಲ್ಲಿ ಮಿತ್ರಾವರುಣರಿಗೆ ಕುಮಾರನಾಗಿ ಹುಟ್ಟಿದನು. ಇತ್ತಲಾಗಿ ನಿಮಿಯ

ಯಾಗದಲ್ಲಿ ಋತ್ವಿಕ್ಕುಗಳಾಗಿದ್ದ ಮಹರ್ಷಿಗಳು, ಆ ನಿಮಿಯ ದೇಹವನ್ನು ಪರಿಮಳತೈಲದಲ್ಲಿಟ್ಟು ಕಾಪಾಡುತ್ತ, ತಾವು ಆರಂಭಿಸಿದ್ದ ಸತ್ರಯಾಗವನ್ನು ಮುಗಿಸಿ, ಆ ಯಾಗಕ್ಕಾಗಿ ಬಂದಿದ್ದ ದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ! ನಿಮಗೆ ಶಕ್ತಿಯಿದ್ದರೆ, ಈ ರಾಜನನ್ನು ಬದುಕಿಸಬೇಕು" ಎಂದು ಪ್ರಾರ್ಥಿಸಿದರು. ದೇವತೆಗಳು ಪ್ರಸನ್ನರಾಗಿ, ಆ ಶರೀರಕ್ಕೆ ಜೀವವನ್ನು ಕೊಡಿಸುವಷ್ಟರಲ್ಲಿ ಆ ಶರೀರವನ್ನು ಬಿಟ್ಟು ಸೂಕ್ಷ್ಮದೇಹದಿಂದಿದ್ದ ನಿಮಿಯು, ಆ ದೇವತೆಗಳನ್ನು ಕುರಿತು "ಎಲೈ ಮಹಾತ್ಮರೆ! ನನಗೆ ತಿರುಗಿ ಈ ದೇಹಸಂಬಂಧವನ್ನುಂಟುಮಾಡಬೇಡಿರಿ? ದೇಹವು ಎಂದಿದ್ದರೂ ವಿಯೋಗದುಃಖಕ್ಕೆ ಕಾರಣವಾಗುವುದೆಂದು ಭಯಪಟ್ಟೇ, ಯೋಗೀಶ್ವರರು ಆ ದೇಹಸಂಬಂಧವನ್ನು ಕೋರದೆ, ಶ್ರೀಹರಿಯಲ್ಲಿ ತಮ್ಮ ಮನಸ್ಸನ್ನು ನೆಲೆಗೊಳಿಸಿ, ಅವನ ಪಾದಸೇವೆಯನ್ನೇ ಅಪೇಕ್ಷಿಸುತ್ತಿರುವರು ಆದುದರಿಂದ ದುಃಖಕ್ಕೂ, ಮೋಹಕ್ಕೂ, ಭಯಕ್ಕೂ ಕಾರಣವಾದ ಈ ದೇಹವನ್ನು ಹೊಂದುವುದಕ್ಕೆ ನನಗೆ ಸರ್ವಥಾಸಮ್ಮತವಿಲ್ಲ" ಎಂದನು ಅದಕ್ಕಾ ದೇವತೆಗಳು ಋಷಿಗಳನ್ನು ಕುರಿತು "ಎಲೈ ಋತ್ವಿಕ್ಕುಗಳಿರಾ! ಹಾಗಿದ್ದರೆ ಇವನ ಇಷ್ಟದಂತೆಯೇ ಆಗಲಿ! ಇವನು ತಿರುಗಿ ಸ್ಥೂಲದೇಹಸಂಬಂಧವಿಲ್ಲದೆ, ಈ ಸೂಕ್ಷ್ಮದೇಹದಿಂದಲೇ ಪ್ರಾಣಿಗಳ ಕಣ್ಣುಗಳಲ್ಲಿ ಸೇರಿ, ಆಯಾಪ್ರಾಣಿಗಳ ಎವೆಯಾಟಗಳಿಂದ ತನ್ನ ಸ್ಥಿತಿಯನ್ನು ತೋರಿಸುತ್ತಿರಲಿ! ಇದರಿಂದ ಆವನು ನಿಮ್ಮ ಕೋರಿಕೆಯಂತೆ ಜೀವಿಸಿದ್ದಂತೆಯೂ ಆಗುವುದು. ಅವನ ಇಷ್ಟದಂತೆ ಸ್ಥೂಲದೇಹಸಂಬಂಧವಿಲ್ಲದಂತೆಯೂ ಆಗುವುದು." ಎಂದು ಹೇಳಿ ಹೊರಟುಹೋದರು. ಆದರೆ ಇತ್ತಲಾಗಿ ರಾಜ್ಯವು ಅನಾಯಕವಾಗಿ ಹೋಗುವುದೆಂಬ ಭಯದಿಂದ ಮಹರ್ಷಿಗಳು, ಆ ನಿಮಿಗೆ ಸಂತತಿಯನ್ನುಂಟುಮಾಡಬೇಕೆಂದುದ್ದೇಶಿಸಿ, ಆತನ ಮೃತಶರೀರವನ್ನು ಮಂತ್ರಪೂರ್ವಕವಾಗಿ ಮಥನಮಾಡಿದರು. ಅದರಿಂದ ಒಬ್ಬ ಪುತ್ರನು ಜನಿಸಿದನು ಹೀಗೆ ಲೋಕವಿಲಕ್ಷಣವಾದ ಜನನವುಳ್ಳವನಾದುದರಿಂದ ಈ ರಾಜಕುಮಾರನಿಗೆ ಜನಕನೆಂದೂ, ಜೀವರಹಿತವಾದ ದೇಹದಿಂದ ಹುಟ್ಟಿದುದಕ್ಕಾಗಿ ವಿದೇಹನೆಂದೂ, ಮಥನದಿಂದ

ಹುಟ್ಟಿದುದಕ್ಕಾಗಿ ಮಿಥಿಲನೆಂಬೂ ಹೆಸರಾಯಿತು. ಈತನು ಪ್ರಸಿದ್ಧ ವಾದ ಒಂದು ಪಟ್ಟಣವನ್ನು ನಿರ್ಮಿಸಿ. ಅದಕ್ಕೆ ಮಿಥಿಲಾಪುರವೆಂದೇ ಹೆಸರಿಟ್ಟನು. ಈ ಮಿಥಿಲನಿಗೆ ಉದಾವಸುವೆಂಬ ಪುತ್ರನಾದನು. ಇವನಿಗೆ ನಂದಿವರ್ಧನನೆಂಬ ಪುತ್ರನು ಹುಟ್ಟಿದನು. ಈ ನಂದಿವರ್ಧನನಿಂದ ಸುಕೇ ಶನೂ, ಅವನಿಂದ ದೇವರಾತನೂ, ಅವನಿಂದ ಬೃಹದ್ರಥನೂ, ಅವನಿಂದ ಮಹಾವೀರ್ಯನೂ, ಅವನಿಂದ ಹರ್ಯಶ್ವನೂ, ಅವನಿಂದ ಮರುವೂ, ಮರುವಿ ನಿಂದ ಪ್ರತೀಂಥಕನೂ, ಅವನಿಂದ ಕೃತರಥನೂ ಹುಟ್ಟಿದರು. ಕೃತರಥನಿ ಗೆ ದೇವಮೀಢನೆಂಬ ಪುತ್ರನಾದನು. ಅವನಿಂದ ವಿಧೃತಿಯೂ, ವಿಧೃತಿ ಯಿಂದ ಮಹಾಧೃತಿಯೂ, ಅವನಿಂದ ಕೃತರಾತನೂ, ಅವನಿಂದ ಮಹಾ ರೋಮನೂ, ಅವನಿಂದ ಸ್ವರ್ಣರೋಮನೂ, ಅವನಿಂದ ಹ್ರಸ್ವರೋಮ ನೂ ಜನಿಸಿದರು. ಈ ಹ್ರಸ್ವರೋಮನ ಮಗನು, ಯಜ್ಞಾರ್ಥವಾಗಿ ಭೂಮಿ ಯನ್ನು ತ್ತು ಶೋಧಿಸುತ್ತಿರುವಾಗ, ಅವನ ನೇಗಿಲಿಗೆ ಒಂದು ಹೆಣ್ಣು ಮಗುವು ಸಿಕ್ಕಿತು ಅವಳೇ ಸೀತೆಯೆಂದು ಪ್ರಸಿದ್ಧಳಾದಳು. ಇದರಿಂದ ಆ ರಾಜ ನಿಗೂ ಸೀರಧ್ವಜನೆಂಬ ಹೆಸರಾಯಿತು. ಈ ಸೀರಧ್ವಜನಿಂದ ಕುಶಧ್ವಜನೂ, ಅವನಿಂದ ಧರ್ಮಧ್ವಜನೂ,ಅವನಿಂದ ಕೃತಧ್ವಜ ಮಿತ್ರಧ್ವಜರೆಂಬ ಪುತ್ರರಿಬ್ಬ ರೂ ಜನಿಸಿದರು. ಇವರಿಬ್ಬರಿಗೂ ಕ್ರಮವಾಗಿ ಕೇಶಿಧ್ವಜ ಖಾಂಡಿಕ್ಯರೆಂಬ ಬೇರೆಬೇರೆ ಇಬ್ಬರು ಮಕ್ಕಳಾದರು ಇವರಲ್ಲಿ ಕೇಶಿಧ್ವಜನು ಬ್ರಹ್ಮವಿದ್ಯೆ ಯಲ್ಲಿಯೂ, ಖಾಂಡಿಕ್ಯನು ಕರ್ಮಯೋಗದಲ್ಲಿಯೂ ನಿಪುಣನೆನಿಸಿಕೊಂಡ ನು. ಆದರೆ ಕರ್ಮಪ್ರವಣನಾದ ಖಾಂಡಿಕ್ಯನು, ಬ್ರಹ್ಮಜ್ಞನಾದ ಕೇಶಿ ಧ್ವಜನಮುಂದೆ ವಾದಿಸಲಾರದೆ ಭಯಪಟ್ಟು, ದೇಶಭ್ರಷ್ಟನಾಗಿ ಎಲ್ಲಿಗೂೀ ಓಡಿಹೋದನು ಆ ಕೇಶಿಧ್ವಜನಿಗೆ ಭಾನುಮಂತನೆಂಬ ಮಗನಾದನು ಅ ವನಿಂದ ಶತದ್ಯುಮ್ನನೂ, ಅವನಿಂದ ಶುಚಿಯೂ, ಶುಚಿಯಿಂದ ಸನದ್ವಾ ಜನೂ, ಅವನಿಂದ ಊರ್ಧ್ವಕೇತುವೂ, ಅವನಿಂದ ಅಜನೂ, ಅಜನಿಂದ ಪು ರುಜಿತ್ತೂ, ಅವನಿಂದ ಅರಿಷ್ಟನೇಮಿಯೂ, ಅವನಿಂದ ಶ್ರುತಾಯುವೂ, ಅವನಿಂದ ಪಾರ್ಶ್ವಗನೂ, ಪಾರ್ಶ್ವಗನಿಂದ ಚಿತ್ರರಥನೂ, ಅವನಿಂದ ಕ್ಷೇ ಮಾದ್ರಿಯೂ, ಕ್ಷೇಮಾದ್ರಿಯಿಂದ ಹೇಮರಥನೂ, ಅವನಿಂದ ಕೃತ್ಯರಥ

ನೂ, ಅವನಿಂದ ಉಪಗುರುವೂ, ಅವನಿಂದ ಅಗ್ನ್ಯಂತಸಂಭೂತನಾದ ಉಪಗುಪ್ತನೆಂಬವನೂ, ಆ ಉಪಗುಪ್ತನಿಂದ ಶ್ವಸನನೂ, ಶ್ವಸನನಿಂದ ಸುವರ್ಚಸನೂ, ಅವನಿಂದ ಸುಭಾಷಣನೂ, ಅವನಿಂದ ಶ್ರುತನೂ, ಶ್ರುತ ನಿಂದ ಜಯನೂ, ಜಯನಿಂದ ವಿಜಯನೂ, ವಿಜಯನಿಂದ ಋತನೂ, ಋತನಿಂದ ಶುನಕನೂ, ಶುನಕನಿಂದ ವೀತಿಹವ್ಯನೂ, ಅವನಿಂದ ಧೃತಿಯೂ ಧೃತಿಯಿಂದ ವಿಪುಲಾಶ್ವನೂ, ಅವನಿಂದ ಕೃತಿಯೂ, ಕೃತಿಯಿಂದ ಮಹಾ ವಶಿಯೆಂಬವನೂ ಜನಿಸಿದರು ಓ ಪರೀಕ್ಷಿದ್ರಾಜಾ! ಇವರೆಲ್ಲರೂ ಮಿಥಿಲ ಸಂತತಿಯವರು. ಇವರೊಬ್ಬೊಬ್ಬರೂ ಆತ್ಮವಿದ್ಯೆಯಲ್ಲಿ ನಿಪುಣರಾಗಿ, ಗೃ ಹಸ್ಥಾಶ್ರಮದಲ್ಲಿರುವಾಗಲೂ, ಸುಖದುಃಖಾದಿ ದ್ವಂದ್ವಗಳನ್ನು ಜಯಿಸಿ, ಭಗವದನುಗ್ರಹದಿಂದ ಮುಕ್ತಿಯನ್ನು ಹೊಂದಿರುವರು. ಇದು ಹದಿಮೂ ರನೆಯಅ ಧ್ಯಾಯವು.

---

ಚಂದ್ರವಂಶಾರಂಭವು.
ಚಂದ್ರನಿಗೆ ಬೃಹಸ್ಪತಿಭಾರ್ಯೆಯಾದ ತಾರೆಯಲ್ಲಿ
ಬುಧನು ಹುಟ್ಟಿದುದು

ರಾಜಾ! ಇದುವರೆಗೆ ನಿನಗೆ ಸೂರ್ಯವಂಶವನ್ನು ವಿವರಿಸಿದುದಾಯಿತು! ಇನ್ನು ಪರಿಶುದ್ಧವಾದ ಚಂದ್ರವಂಶವನ್ನು ವಿವರಿಸುವೆನು ಕೇಳು! ಈ ವಂಶದಲ್ಲಿಯೇ ಪುಣ್ಯಕೀರ್ತಿಯುಳ್ಳ ಪುರೂರವಸೇ ಮೊದಲಾದವರು ಹುಟ್ಟಿ ಪ್ರಸಿದ್ಧಿಗೊಂಡಿರುವರು ಸಹಸ್ರಶಿರಸ್ಸುಳ್ಳ ಪರಮಪುರುಷನ ನಾಭಿಕಮಲದಿಂದ ಮೊದಲು ಬ್ರಹ್ಮನು ಹುಟ್ಟಿದನಷ್ಟೆ? ಅವನಿಗೆ ಗುಣಗ ಳಲ್ಲಿ ತನಗೆ ಸಮಾನನಾದ ಅತ್ರಿಯೆಂಬವನು ಹುಟ್ಟಿದನು ಈ ಅತ್ರಿಮುನಿಯ ಕಣ್ಣುಗಳಿಂದ ಅಮೃತಮಯವಾದ ದೇಹವುಳ್ಳ ಚಂದ್ರನು ಜನಿಸಿದನು. ಈ ಚಂದ್ರನೇ ಬ್ರಾಹ್ಮಣರಿಗೂ, ಓಷಧಿಗಳಿಗೂ, ಜಲದಲ್ಲಿ ಹುಟ್ಟತಕ್ಕ ನೈದಿಲೆ ಮೊದಲಾದುವುಗಳಿಗೂ ಅಧಿಪತಿಯಾಗಿ, ಬ್ರಹ್ಮನಿಂದ, ನಿಯಮಿಸಲ್ಪಟ್ಟನು. ಈ ಚಂದ್ರನು ತ್ರೈಲೋಕ್ಯವನ್ನೂ ಜಯಿಸಿ, ರಾಜಸೂಯಯಾಗವನ್ನು ಮಾಡಿದನು. ಮತ್ತು ಒಮ್ಮೆ ಈತನು ಬೃಹಸ್ಪತಿಯ ಭಾರ್ಯೆಯಾದ ತಾರೆಯ

ನ್ನು ಬಲಾತ್ಕಾರದಿಂದಪಹರಿಸಿ, ಬೃಹಸ್ಪತಿಯು ಬಹಳದೈನ್ಯದಿಂದ ಅನೇಕಾ ವರ್ತಿ ಕೇಳಿದರೂ ಅವಳನ್ನು.ಬಿಡದೆ ಹೋದನು. ಇದೇ ನಿಮಿತ್ತವಾಗಿ ದೇವ ತೆಗಳಿಗೂ ದಾನವರಿಗೂ ದೊಡ್ಡಯುದ್ಧವು ಆರಂಭವಾಯಿತು. ಬೃಹಸ್ಪತಿ ಯಮೇಲಿನ ಅಸೂಯೆಯಿಂದ ಶುಕ್ರನು ದಾನವರೊಡನೆ ಸೇರಿ,ಚಂದ್ರನ ಪ ಕ್ಷವನ್ನು ಹಿಡಿದನು. ರುದ್ರನು ತನ್ನ ಸಮಸ್ತಭೂತಗಣಗಳೊಡಗೂಡಿ ಬೃಹ ಸ್ಪತಿಯ ಪಕ್ಷವನ್ನು ಹಿಡಿದನು. ಇಂದ್ರನೂ ತನ್ನ ಸಮಸ್ತದೇವಗಣಗಳೊಡ ನೆ ಬೃಹಸ್ಪತಿಗೆ ಸಹಾಯಕನಾಗಿ ನಿಂತನು. ಹೀಗೆ ಚಂದ್ರಬೃಹಸ್ಪತಿಗಳ ನಿ ಮಿತ್ತವಾಗಿ ದಾನವರೂ,ದೇವತೆಗಳೂ ಎರಡು ಕಕ್ಷಿಗಳಾಗಿ ನಿಂತು,ದೊಡ್ಡ ಯುದ್ಧವನ್ನಾರಂಭಿಸಿದರು. ಉಭಯಪಕ್ಷದಲ್ಲಿಯೂ ಅನೇಕಸೈನ್ಯಗಳು ಸ ತ್ತುವು.ಆಗ ಬೃಹಸ್ಪತಿಯ ತಂದೆಯಾದ ಅಂಗಿರಸನು, ಬ್ರಹ್ಮಾಜ್ಞೆಯಿಂದ ಚಂದ್ರನಬಳಿಗೆ ಬಂದು, ಅವನನ್ನು ಬಹಳವಾಗಿ ಹೆದರಿಸಿ, ತನ್ನ ಸೊಸೆಯನ್ನು ಬಿಟ್ಟುಕೊಡಬೇಕೆಂದು ನಿಷ್ಠುರವಾಕ್ಯಗಳಿಂದ ನಿರ್ಬಂಧಿಸಿದನು. ಚಂದ್ರನು ಬ್ರಹ್ಮನಿಗೆ ಭಯಪಟ್ಟು, ಆಗ ಗರ್ಭಿಣಿಯಾಗಿದ್ದ ತಾರೆಯನ್ನು ಬೃಹಸ್ಪತಿಗೆ ಒಪ್ಪಿಸಿಬಿಟ್ಟನು. ಬೃಹಸ್ಪತಿಯು ತಾರೆಯನ್ನು ಮನೆಗೆ ಕರೆತಂದಮೇಲೆ, ಅವಳು ಗರ್ಭಿಣಿಯಾಗಿರುವುದನ್ನು ತಿಳಿದು,ಕೋಪದಿಂದ ಅವಳನ್ನು ಕುರಿತು "ಎಲೆ ನೀಚೆ!ನನ್ನಪತ್ನಿಯಾದ ನಿನ್ನಲ್ಲಿ ಪರಪುರುಷನಿಂದುಂಟಾದ ಈ ಗರ್ಭ ವು ನಿಲ್ಲಬಾರದು. ಈಗಲೇ ಅದನ್ನು ನೀಗಿ ಬಾ! ಹಾಗಿಲ್ಲದಪಕ್ಷದಲ್ಲಿ ಈಕ್ಷಣವೇ ನಿನ್ನನ್ನು ಭಸ್ಮಮಾಡಿ ಬಿಡುವೆನು" ಎಂದು ಹೆದರಿಸಿದನು ಅದ ಕ್ಕಾಗಿ ತಾರೆಯು ಭಯಗ್ರಸ್ತಳಾಗಿ ನಡುಗುತ್ತಿರುವುದನ್ನು ನೋಡಿ,ಬೃಹಸ್ಪ ತಿಗೆ ಮೊದಲಿದ್ದ ಕೋಪವು ತಗ್ಗಿ, ಅವಳಲ್ಲಿ ಕನಿಕರವುಂಟಾಯಿತು. ಅದರಮೇಲೆ ತಿರುಗಿ ಅವಳನ್ನು ಕುರಿತು "ಎಲೌ! ಈಗಲೂ ಚಿಂತೆಯಿಲ್ಲ. ನಿನ್ನ ಗರ್ಭದಲ್ಲಿ, ವಂಶೋದ್ಧಾರಕನಾದ ಮತ್ತು ಯೋಗ್ಯನಾದ ಪುತ್ರನು ಜನಿಸುವಪಕ್ಷದಲ್ಲಿ, ನಿನಗೆ ಹಾನಿಯನ್ನು ಮಾಡಲಾರೆನು" ಎಂದನು ಆಮೇ ಲೆ ಸ್ವಲ್ಪಕಾಲದೊಳಗಾಗಿ ತಾರೆಯಗರ್ಭದಲ್ಲಿ ಚಂದ್ರನಂತೆ ಕಾಂತಿವಿಶಿಷ್ಟ ನಾದ ಮಗನೊಬ್ಬನು ಹುಟ್ಟಿದನು. ಆ ಶಿಶುವಿನ ಸೌಂದರ್ಯವನ್ನು ನೋ ಡಿದಮೇಲೆ ಬೃಹಸ್ಪತಿಗೆ,ಅವನಲ್ಲಿ ತನ್ನ ಮಗನೆಂಬ ಅಭಿಮಾನವು ಹುಟ್ಟಿತು.

ಚಂದ್ರನಿಗೂ ಅದೇವಿಧವಾದ ಅಭಿಮಾನವುಂಟಾಯಿತು. ತಿರುಗಿ ಚಂದ್ರ ಬೃಹಸ್ಪತಿಗಳಿಬ್ಬರಿಗೂ ಆ ಶಿಶುವಿನ ವಿಷಯದಲ್ಲಿ ನನಗೆ ತನಗೆಂಬ ವಿವಾದ ವು ಹುಟ್ಟಿತು ಕೊನೆಗೆ ದೊಡ್ಡ ಕಲಹಕ್ಕೂ ಆರಂಭವಾಯಿತು ಆಗ ಮಹ ರ್ಷಿಗಳೂ, ದೇವತೆಗಳೂ ತಾರೆಯಬಳಿಗೆ ಬಂದು, ಆ ಮಗುವು ಯಾರಿಗೆ ಸೇ ರಿದುದೆಂದು ಪ್ರಶ್ನೆಮಾಡಿದರು. ತಾರೆಯು ನಿಜಸ್ಥಿತಿಯನ್ನು ತಿಳಿಸುವುದಕ್ಕೆ ನಾಚಿಕೆಪಟ್ಟು ಬಾಯೆತ್ತದೆ ಸುಮ್ಮನಿದ್ದಳು ಮೊದಲು ಹೀನಕಾರ್ಯವನ್ನು ನಡೆಸಿ, ಈಗ ವ್ಯರ್ಥವಾಗಿ ಲಜ್ಜೆಯನ್ನು ನಟಿಸುತ್ತಿರುವ ತಾರೆಯ ನ್ನು ನೋಡಿ, ಆ ಬಾಲಕನಿಗೂ ತಾಯಿಯಮೇಲೆ ಬಹಳ ಕೋಪವುಂಟಾಯಿ ತು. ಆದರಿಂದ ಆ ಬಾಲಕನು, ಅವಳನ್ನು ಕುರಿತು “ಎಲೆ ಕೆಟ್ಟನಡತೆಯು ಳ್ಳವಳೆ! ಇದೇನು ಮಾತಾಡದೆ ನಿಂತಿರುವೆ? ನಿನ್ನ ದೋಷವನ್ನು ಮರೆಸಬೇ ಡ! ನಿಜಸ್ಥಿತಿಯನ್ನು ತಿಳಿಸು!” ಎಂದನು. ಹೀಗೆ ಆ ಬಾಲನು ಹೆತ್ತತಾಯ ನ್ನೇ!ನಿಂದಿಸುತ್ತಿರುವುದನ್ನು ನೋಡಿ, ಬ್ರಹ್ಮನು ಆವಳಲ್ಲಿ ಕನಿಕರಗೊಂಡು, ಅವಳನ್ನು ಏಕಾಂತಸ್ಥಳಕ್ಕೆ ಕರೆತಂದು, ಸಾಮವಾಕ್ಯಗಳಿಂದ ಸಮಾ ಧಾನಪಡಿಸಿ “ಅಮ್ಮಾ! ಈಗಲಾದರೂ ನಿಜವನ್ನು ಹೇಳು! ಇವನು ಯಾರ ಮಗನು?” ಎಂದನು ಅವಳು ಲಜ್ಜೆಯಿಂದ ತಲೆಯೆತ್ತದೆ” ಇವನು ಚಂದ್ರನಿಗೆ ಹುಟ್ಟಿದವನು” ಎಂದು ಮೆಲ್ಲಗೆ ಹೇಳಿದಳು ಆಗ ಬ್ರಹ್ಮನು ಆ ಬಾಲನನ್ನು ಚಂದ್ರನ ವಶಕ್ಕೆ ಒಪ್ಪಿಸಿಬಿಟ್ಟನು ಆ ಬಾಲನಿಗಿದ್ದ ಗಂಭೀ ರಬುದ್ಧಿಯನ್ನು ನೋಡಿ ಬ್ರಹ್ಮನು, ಅವನಿಗೆ “ಬುಧ” ನೆಂದು ಹೆಸರಿಟ್ಟನು. ಈ ಪುತ್ರಲಾಭದಿಂದ ಚಂದ್ರನು ಬಹಳ ಸಂತೋಷಭರಿತನಾಗಿದ್ದನು

ಓ ಪರೀಕ್ಷಿದ್ರಾಜಾ! ಸುದ್ಯುಮ್ನನೆಂಬವನು ಇಳೆಯೆಂಬ ಹೆಸರಿನಿಂ ದ ಸ್ತ್ರೀರೂಪವನ್ನು ಹೊಂದಿದ್ದನೆಂದೂ,ಅವಳು ಬುಧನಿಗೆ ಪತ್ನಿಯಾದಳೆಂ ದೂ ಹಿಂದೆಯೇ ಹೇಳಿದ್ದೆನಷ್ಟೆ? ಆ ಇಳೆಯಲ್ಲಿ ಬುಧನಿಗೆ ಪುರೂರವನೆಂಬ ಪುತ್ರನು ಜನಿಸಿದನು ಈ ಪುರೂರವನಲ್ಲಿ ಊರ್ವಶಿಗೆ ಮೋಹವು ಹುಟ್ಟಿತು. ಪುರೂರವನು ಅವಳನ್ನು ವರಿಸಿ, ಆಯು ಮೊದಲಾದ ಕೆಲವುಪುತ್ರರನ್ನು ಪಡೆ ದನು. ದೇವಕಾಂತೆಯಾದ ಊರ್ವಶಿಯು, ಭೂಲೋಕದಲ್ಲಿದ್ದ ಈ ರಾಜನ ನ್ನು ವರಿಸಿದುದಕ್ಕೆ ಕಾರಣವೇನೆಂಬುದನ್ನೂ ತಿಳಿಸುವೆನು ಕೇಳು. ಒಮ್ಮೆ

ನಾರದನು ದೇವಸಭೆಯಲ್ಲಿ ಈ ಪುರೂರವನ ಸೌಂದರ್ಯವನ್ನೂ, ಗುಣಗಳನ್ನೂ, ಔದಾರ್ಯವನ್ನೂ, ಸೌಶೀಲ್ಯವನ್ನೂ, ಅವನ ಮಹಾಭಾಗ್ಯವನ್ನೂ, ಪರಾಕ್ರಮವನ್ನೂ ಬಹಳವಾಗಿ ಕೊಂಡಾಡುತಿದ್ದನು ಇದನ್ನು ಕೇಳಿ ಊರ್ವಶಿಯೆಂಬ ಅಪ್ಸರಸಿಗೆ ಅವನಲ್ಲಿ ಮೋಹವುಂಟಾಯಿತು ಇದಕ್ಕೆತಕ್ಕಂತೆ ಅವಳಿಗೆ, ಕೆಲವು ದಿನಗಳವರೆಗೆ ಮನುಷ್ಯಭಾವದಿಂದ ಭೂಲೋಕದಲ್ಲಿರಬೇಕೆಂದು ಮಿತ್ರಾವರುಣರ ಶಾಪವೂ ಇದ್ದುದರಿಂದ, ಆಕೆಯು ಕಾಮಪೀಡಿತೆಯಾಗಿ ಭೂಲೋಕಕ್ಕೆ ಬಂದಳು ಮನ್ಮಥನಂತೆ ಸುಂದರಾಕಾರವುಳ್ಳ ಆ ರಾಜನನ್ನು ನೋಡಿದೊಡನೆ, ಆಕೆಯು ಸ್ತ್ರೀಯರಿಗ ಸಹಜವಾದ ಲಜ್ಜೆಯನ್ನು ಮರೆತು, ಆ ಪುರೂರವನಮುಂದೆ ಧೈರ್ಯದಿಂದ ಬಂದುನಿಂತಳು ಆಕೆಯ ಅದ್ಭುತರೂಪಲಾವಣ್ಯಗಳನ್ನು ನೋಡಿ ಪುರೂರವನಿಗೂ ಮನಸ್ಸು ಕದಲಿತು. ಸಂತೋಷದಿಂದ ಅವನ ಕಣ್ಣುಗಳು ಅರಳಿದುವು ಅವನ ದೇಹವೆಲ್ಲವೂ ಪುಳಕಿತವಾಯಿತು ಆಗ ಪುರೂರವನು ಅವಳನ್ನು ಕುರಿತು ಮೃದುಮಧುರವಾಕ್ಯದಿಂದ “ ಎಲೆ ಸುಂದರಿ ! ನಿನಗೆ ಸುಖಾಗಮನವು ! ಕುಳ್ಳಿರು ! ನನ್ನಿಂದಾಗಬೇಕಾದುದೇನು ? ನಮ್ಮಿಬ್ಬರ ಈಪ್ರೇಮವು ಎಂದೆಂದಿಗೂ ಶಾಶ್ವತವಾಗಿರಲಿ! ನನ್ನನ್ನು ವರಿಸು ” ಎಂದನು ಅದಕ್ಕಾ ಊರ್ವಶಿಯು “ಓ ಸುಂದರಾಂಗಾ ! ನಿನ್ನನ್ನು ನೋಡಿದಮೇಲೆ ಯಾವ ಸ್ತ್ರೀಯ ಮನಸ್ಸುತಾನೇ ಕರಗದಿರುವುದು ! ನಿನ್ನನ್ನು ನೋಡುವುದಕ್ಕೆ ಯಾವಳ ದೃಷ್ಟಿಯು ಹಿಂತೆಗೆಯುವುದು ? ನಿನ್ನೊಡನೆ ರಮಿಸಬೇಕೆಂದು ಬಂದ ಯಾವ ಸ್ತ್ರೀಯೂ ನಿನ್ನನ್ನು ಬಿಟ್ಟುಹೋಗಲಾರಳು ಓ ರಾಜೇಂದ್ರಾ ! ಇದೋ ! ಈ ಎರಡುಮೇಕೆಗಳನ್ನೂ ನಾನು ಬಹಳಮೋಹದಿಂದ ಬೆಳೆಸಿರುವೆನು ಇವು ನನಗೆ ಮಕ್ಕಳಂತಿರುವುವು ನೀನು ಇವುಗಳನ್ನು ರಕ್ಷಿಸುತ್ತಿರಬೇಕು ನೀನು ಇವುಗಳನ್ನು! ಪೋಷಿಸುತ್ತಿರುವವರೆಗೆಮಾತ್ರವೇ ನಾನೂ ನಿನ್ನೊಡನೆ ರಮಿಸುತ್ತಿರುವೆನು. ಲೋಕದಲ್ಲಿ ಸ್ತ್ರೀಯರಿಗೆ ನೀನೇ ಉತ್ತಮವರನೆನಿಸಿಕೊಂಡಿರುವೆ! ರಾಜೇಂದ್ರಾ! ನಾನು ತುಪ್ಪವನ್ನು ಹೊರತು ಬೇರೆ ಯಾವಪದಾರ್ಥವನ್ನೂ ಆಹಾರವಾಗಿ ತೆಗೆದುಕೊಳ್ಳುವವಳಲ್ಲ. ಮತ್ತು ಸಂಭೋಗಕಾಲದಲ್ಲಿಹೊರತು, ಬೇರೆ ಯಾವಾಗಲೂ ನೀನು ದಿಗಂಬರನಾಗಿ ನನ್ನ

ಕಣ್ಣಿಗೆ ಬೀಳಕೂಡದು ನೀನು ಇತರಕಾಲಗಳಲ್ಲಿ ನಿರ್ವಾಣವಾಗಿ ನನ್ನ ಕಣ್ಣಿಗೆ ಗೋಚರಿಸಿದಪಕ್ಷದಲ್ಲಿ, ಆಕ್ಷಣವೇ ನಾನು ನಿನ್ನನ್ನು ಬಿಟ್ಟು ಹೊರಟು ಹೋಗುವೆನು ಇವೆರಡೂ ನನ್ನ ನಿಯಮಗಳು! ಈ ನಿಯಮಕ್ಕೆ ನೀನು ಸಮ್ಮತಿಸಿದಪಕ್ಷದಲ್ಲಿ ನಾನು ನಿನ್ನ ಅಭಿಲಾಷೆಯನ್ನು ನೆರವೇರಿಸುವೆನು" ಎಂದಳು ಪುರೂರವನು ಅವಳ ನಿಯಮಕ್ಕೆ ಸಮ್ಮತಿಸಿ "ಓ ಸುಂದರೀ! ನಿನ್ನ ಸೌಂದರ್ಯವಾದರೋ ನಿರುಪಮಾನವಾದುದು! ನಿನ್ನ ಹಾವಭಾವಗಳು ಲೋಕಮೋಹಕವಾಗಿರುವುವು. ಇಂತಹ ನೀನು ಸ್ವಯಮಾಗಿ ಬಂದಿರುವಾಗ, ಯಾವನು ತಾನೇ ನಿನ್ನನ್ನು ಅಂಗೀಕರಿಸದಿರುವನು?" ಎಂದು ಹೇಳಿ, ಅವಳೊಡಗೂಡಿ ಚೈತ್ರರಥವೇ ಮೊದಲಾದ ದೇವೋದ್ಯಾನಗಳಲ್ಲಿ ಯಥೇಚ್ಛವಾಗಿ ವಿಹರಿಸುತಿದ್ದನು ಪದ್ಮಗಂಧಿನಿಯಾದ ಆಕೆಯ ಮುಖಪರಿಮಳಕ್ಕೆ ವಶ್ಯನಾಗಿ, ಬಹುಸಂವತ್ಸರಕಾಲಗಳವರೆಗೆ ಆನಂದಿಸುತ್ತಿದ್ದನು ಕೆಲವುಕಾಲದಮೇಲೆ ಇಂದ್ರನು, ತನ್ನ ಸಭೆಯಲ್ಲಿ ಊರ್ವಶಿಯಿಲ್ಲದುದರಿಂದ ಅದು ಕಳೆಗೆಟ್ಟಿರುವುದನ್ನು ಕಂಡು, ಅವಳನ್ನು ಕರೆತರುವುದಕ್ಕಾಗಿ ಕೆಲವು ಗಂಧರ್ವರನ್ನು ಭೂಲೋಕಕ್ಕೆ ಕಳುಹಿಸಿದನು. ಆ ಗಂಧರ್ವರಿಬ್ಬರೂ ಅರ್ಧರಾತ್ರಿಯ ಕತ್ತಲೆಯಲ್ಲಿ ಯಾರಿಗೂ ಕಾಣಿಸದಂತೆ ಬಂದು, ಪುರೂರವನು ಪ್ರೇಮದಿಂದ ಪೋಷಿಸುತಿದ್ದ ಮೇಕೆಗಳೆರಡನ್ನೂ ಅಪಹರಿಸಿಕೊಂಡು ಹೋಗುತಿದ್ದರು. ಇಷ್ಟರಲ್ಲಿ ಆ ಮೇಕೆಗಳು ಭಯದಿಂದ ಅರಚಿಕೊಂಡುವು. ಈಧ್ವನಿಯು ಊರ್ವಶಿಯಕಿವಿಗೆ ಬಿದ್ದೊಡನೆಯೇ, ಅವಳು ಭಯಗ್ರಸ್ತಳಾಗಿ "ಅಯ್ಯೋ! ಇನ್ನೇನು ಗತಿ! ಕೆಟ್ಟೆನು! ಕೆಟ್ಟೆನು! ಕುತ್ಸಿತನಾಗಿಯೂ, ನಪುಂಸಕನಾಗಿಯೂ, ತಾನೇ ವೀರನೆಂಬ ವೃಥಾಭಿಮಾನವುಳ್ಳವನಾಗಿಯೂ ಇರುವ ಈತನನ್ನು ನಂಬಿ ನಾನು ಕೆಟ್ಟೆನಲ್ಲಾ! ಓ ಪುರೂರವಾ! ಇದುವರೆಗೂ ಮಕ್ಕಳಂತೆ ಪ್ರೇಮದಿಂದ ಸಾಕಿದ ಮೇಕೆಗಳನ್ನು ನಿನ್ನ ವಶಕ್ಕೊಪ್ಪಿಸಿದರೆ, ನೀನು ಅವುಗಳನ್ನು ಕಳ್ಳರ ಕೈಗೊಪ್ಪಿಸಿದೆಯಾ? ಇನ್ನೇನು ಗತಿ! ಅವುಗಳನ್ನು ಕಳೆದುಕೊಂಡು ನಾನು ಬದುಕುವ ಬಗೆಯೇನು? ಛೀ! ಷಂಡಾ! ಅತ್ತ ಹೋಗು! ನನ್ನ ಕೊರಲಿಗೆ ಕಟ್ಟಿರುವ ನಿನ್ನ ಕೈಯನ್ನು ಬಿಡು! ಮುಖದಲ್ಲಿ ಮೀಸೆಯನ್ನು ಹೊತ್ತ ಗಂಡಸಾಗಿದ್ದೂ ನೀನು, ಭೀರುಸ್ತ್ರೀಯರಂತೆ ಕಳ್ಳರ

ಗೆ ಹೆದರಿ ಮುಸುಕೆತ್ತದೆ ಮಲಗಿರುವೆಯಲ್ಲಾ! ನೀನು ಬಹಳ ಹೇಡಿ! ಕೇವಲಸ್ತ್ರೀಲೋಲನು” ಎಂದು ಹೀಗಳೆಯುತಿದ್ದಳು ಹೀಗೆ ಊರ್ವಶಿಯು ನಿಂದಿಸುತ್ತಿದ್ದಾಗ, ಅಂಕುಶದಿಂದ ಚುಚ್ಚಿದ ಆನೆಯಂತೆ ಪುರೂರವನು ಅವಳ ತಿರಸ್ಕಾರವಾಕ್ಯಗಳಿಂದ ನೊಂದವನಾಗಿ, ಅದನ್ನು ಸಹಿಸಲಾರದೆ, ಕತ್ತಿಯನ್ನು ಕೈಗೆತ್ತಿಕೊಂಡು, ಕೋಪದಿಂದ ಮೈತಿಳಿಯದೆ, ಮೈಮೇಲೆ ವಸ್ತ್ರವೂ ಇಲ್ಲದೆ, ಆ ಗಂಧರ್ವರನ್ನು ಬೆನ್ನಟ್ಟಿಹೊರಟನು ಇವನನ್ನು ಕಂಡೊಡನೆ ಆಗಂಧರ್ವರಿಬ್ಬರೂ ಹೆದರಿ, ಆ ಮೇಕೆಗಳನ್ನು ಅಲ್ಲಿಯೇ ಬಿಟ್ಟು, ಮಿಂಚಿನಂತೆ ಕಣ್ಮರೆಯಾಗಿಬಿಟ್ಟರು.

ಪುರೂರವನು ಆ ಮೇಕೆಗಳನ್ನು ಹಿಂದಕ್ಕೆ ಕರೆತರುತ್ತಿರುವಾಗ, ಮೈಮೇಲೆ ಬಟ್ಟೆಯಿಲ್ಲದೆ ದಿಗಂಬರನಾಗಿರುವುದನ್ನು ಕಂಡು ಊರ್ವಶಿಯು, ಹಿಂದೆ ತಾನು ಶಪಥಮಾಡಿದ್ದರೀತಿಯಲ್ಲಿ, ತಿರುಗಿ ಅವನ ಕಣ್ಣಿಗೆ ಬೀಳದೆ, ಅವನನ್ನು ಬಿಟ್ಟು ಹೊರಟುಹೋದಳು. ಪುರೂರವನು ಹಿಂತಿರುಗಿ ಬಂದು, ಹಾಸಿಗೆಯಮೇಲೆ ತನ್ನ ಪ್ರಿಯೆಯಾದ ಊರ್ವಶಿಯಿಲ್ಲದಿರುವುದನ್ನು ಕಂಡು ಅವಳ ವಿಯೋಗದುಃಖದಿಂದ ಬುದ್ಧಿಗೆಟ್ಟು, ಅವಳನ್ನೇ ಚಿಂತಿಸುತ್ತ ಹುಚ್ಚನಂತೆ ಭೂಮಿಯಮೇಲೆ ಅಲ್ಲಲ್ಲಿ ತಿರುಗುತಿದ್ದನು ಕೊನೆಗೆ ಮಾರ್ಗವಶದಿಂದ ಕುರುಕ್ಷೇತ್ರಕ್ಕೆ ಬಂದಾಗ, ಸರಸ್ವತೀನದಿಯ ತೀರದಲ್ಲಿ ಊರ್ವಶಿಯು, ಬೇರೆ ಐದುಮಂದಿ ಸಖಿಯರೊಡನೆ ವಿಲಾಸದಿಂದ ಸಂಚರಿಸುತ್ತಿರುವುದನ್ನು ಕಂಡನು ಆಗ ಇವನ ಸಂತೋಷಕ್ಕೆ ಪಾರವುಂಟೆ? ಆಕೆಯನ್ನು ಕಂಡೊಡನೆ ಮುಂದೆ ಬಂದು, ಮೃದುವಾಕ್ಯದಿಂದ ಅವಳನ್ನು ಕುರಿತು, “ಎಲೆ ಪ್ರಿಯೆ! ನಿಲ್ಲುನಿಲ್ಲು! ನನ್ನನ್ನು ಈ ಭಯಂಕರವಾದ ವಿಯೋಗದುಃಖದಲ್ಲಿ ಮುಳುಗಿಸಿ ಹೋಗುವುದು ನಿನಗೆ ಯುಕ್ತವೆ? ನಾವು ನಡೆಸಬೇಕಾದ ಏಕಾಂತಸಲ್ಲಾಪಗಳು ಇನ್ನೂ ಮುಗಿದಿಲ್ಲ! ನಾವು ರಹಸ್ಯಸಲ್ಲಾಪಗಳನ್ನು ಮಾಡುವೆವು! ಬೇಗ ಬಾ! ನಾನು ನಿನ್ನನ್ನು ಬಹಳ ದೂರದಿಂದ ಹುಡುಕಿಕೊಂಡು ಬಂದಿರುವೆನು. ಈಗಲೂ ನೀನು ನನ್ನಲ್ಲಿ ಅನುಗ್ರಹವನ್ನು ತೋರಿಸದಿದ್ದರೆ, ನಾನು ಇಲ್ಲಿಯೇ ಈ ದೇಹವನ್ನು ಬಿಡಬೇಕಾಗುವುದು ನನ್ನ ದೇಹವು ತೋಳಗಳ ಮತ್ತು ಹದ್ದು

ಗಳ ಪಾಲಾಗುವುದು ದೇವೀ! ನನ್ನನ್ನು ಕರುಣಿಸು" ಎಂದು ಕೂಗಿ ಕೊಂಡನು ಅದನ್ನು ಕೇಳಿ ಊರ್ವಶಿಯು "ಓ ರಾಜಾ! ಧೀರನಾದ ನೀನು ಹೀಗೆ ನಿನ್ನ ಪೌರುಷವನ್ನೂ, ಧೈರ್ಯವನ್ನೂ ವ್ಯರ್ಥಮಾಡಬಾರದು ಧೈರ್ಯ ದಿಂದಿರು! ನನ್ನನ್ನಗಲಿದಮೇಲೆ ನಿನ್ನ ದೇಹವು ತೋಳಗಳಿಗೂ ಹದ್ದುಗಳಿಗೂ ಆಹಾರವಾಗುವುದೆಂದು ಹೇಳಿದೆಯಲ್ಲವೆ? ಈಗಲೇ ನೀನು ತೋಳಗಳ ಬಾಯಿಗೆ ಸಿಕ್ಕಿರುವೆ! ಮತ್ತೆಷ್ಟು ಸಿಕ್ಕಬೇಕಾದುದೇನು? ಈಗಲೂ ನೀನು ಧೈರ್ಯದಿಂದಿದ್ದರೆ ಅದನ್ನು ತಪ್ಪಿಸಿಕೊಳ್ಳಬಹುದು ಹೇಗೆಂದು ಕೇಳುವೆಯಾ! ನಮ್ಮಂತಹ ಸ್ತ್ರೀಯರು ತೋಳಗಳಿಗಿಂತಲೂ ಕ್ರೂರರೆಂದು ತಿಳಿ! ತೋಳಗಳ ಸಹವಾಸದಂತೆ ಸ್ತ್ರೀಯರ ಸ್ನೇಹವೂ ಎಂದಿದ್ದರೂ ಅಪಾಯಕರವು! ಸ್ತ್ರೀಯರು ನಿಷ್ಕರುಣರು! ಕ್ರೂರರು! ಸ್ವಲ್ಪವಾದರೂ ತಾಳ್ಮೆಯಿಲ್ಲದವರು! ತಮ್ಮ ಉದ್ದೇಶವನ್ನು ನಡೆಸಿಕೊಳ್ಳುವುದಕ್ಕಾಗಿ ಎಷ್ಟೋ ಸಾಹಸಗಳನ್ನು ಮಾಡುವರು! ತಮ್ಮ ಸ್ವಲ್ಪ ಪ್ರಯೋಜನಕ್ಕಾಗಿ ನಂಬಿಕೆಯುಳ್ಳ ಪತಿಯನ್ನಾಗಲಿ, ಪ್ರಿಯಸಹೋದರರನ್ನಾಗಲಿ, ಕೊಲ್ಲುವುದಕ್ಕೂ ಹಿಂತೆಗೆಯುವವರಲ್ಲ ಸ್ತ್ರೀಯರು ಕಪಟಪ್ರೇಮದಿಂದ ನೈಚಿಸುವ ಗಂಡನನ್ನು ಮರುಳುಮಾಡುತ್ತ, ಆ ಪತಿಯನು ವಂಚಿಸಿ ಹೊಸಹೊಸಪುರುಷರನ್ನೇ ಹುಡುಕುವರು. ಯಥೇಚ್ಛವಾಗಿ ಪ್ರವರ್ತಿಸುವರು ಆದುದರಿಂದ ನಮ್ಮಂತವರನ್ನು ನಂಬಿದಾಗಲೇ ನೀನು ತೋಳಗಳ ಬಾಯಿಗೆ ಸಿಕ್ಕಿದಂತಾಗಲಿಲ್ಲವೆ? ಈಗಲೂ ಚಿಂತೆಯಿಲ್ಲ! ಈಗ ನನ್ನಲ್ಲಿ ಗರ್ಭವು ಬೆಳೆಯುತ್ತಿರುವುದು" ಇನ್ನು ಮುಂದೆ ಒಂದು ಸಂವತ್ಸರವು ಕಳೆದ ಮೇಲೆ, ನೀನು ಒಂದುರಾತ್ರಿ ನನ್ನೊಡನೆ ರಮಿಸಬಹುದು ಆಗ ನನ್ನಲ್ಲಿ [illegible] ಇನ್ನೂ ಕೆಲವು ಮಕ್ಕಳಾಗುವರು" ಎಂದಳು ಪುರೂರವನು ಅವಳು ಗರ್ಭಿಣಿಯಾಗಿರುವುದನ್ನು ತಿಳಿದು, ಅವಳ ಮಾತಿಗೆ ಸಮ್ಮತಿಸಿ, ತನ್ನ ಪಟ್ಟಣಕ್ಕೆ ಹಿಂತಿರುಗಿಹೋದನು. ಒಂದು ಸಂವತ್ಸರಕಾಲವು ಕಳೆದಮೇಲೆ ಊರ್ವಶಿಯು ಒಬ್ಬ ಪುತ್ರನೊಡನೆ ಪುರೂರವನಬಳಿಗೆ ಬಂದಳು ಅವಳನ್ನು ನೋಡಿ ಪುರೂರವನು, ಸಂತೋಷದಿಂದ ಆಕೆಯೊಡನೆ ಆ ರಾತ್ರಿಯಲ್ಲಿ ಸುಖವಾಗಿದ್ದನು ಬೆಳಗಾದಮೇಲೆ ಅವಳನ್ನು ಬಿಟ್ಟುಬರಲಾರದೆ ದುಃ

ಖಿಸುತ್ತಿರಲು, ಊರ್ವಶಿಯು ಅವನನ್ನು ಕುರಿತು" ರಾಜಾ ! ನೀನು ಆ ಗಂ
ಧರ್ವರಲ್ಲಿಯೇ ಮರೆಹೊಕ್ಕು ಪ್ರಾರ್ಥಿಸು ! ಅವರು ನಿನಗೆ ನನ್ನ ಲೋಕ
ಕ್ಕೆ ಬರುವ ಉಪಾಯವನ್ನು ತೋರಿಸುವರು"ಎಂದಳು.ಆದರಂತೆ ಪುರೂರವ
ನು ಗಂಧರ್ವರನ್ನು ಸ್ತೋತ್ರಮಾಡಲು. ಅವರು ಆತನಲ್ಲಿ ಪ್ರಸನ್ನರಾಗಿ,
ಅವನಿಗೆ ಒಂದಾನೊಂದು ಅಗ್ನಿಪಾತ್ರವನ್ನು ಅನುಗ್ರಹಿಸಿದರು. ರಾ
ಜನು ಆ ಅಗ್ನಿಸ್ಥಾಲಿಯನ್ನು ಸಂತೋಷದಿಂದ ಸ್ವೀಕರಿಸಿ ಊರ್ವಶಿಯ
ನ್ನು ಪಡೆಯುವುದಕ್ಕೆ ಸಾಧನಭೂತವಾದ ಆ ಪಾತ್ರವನ್ನು ಎಚ್ಚರದಿಂದ
ತನ್ನಲ್ಲಿಯೇ ಇಟ್ಟು ಕಾಪಾಡುತಿದ್ದನು ಹಾಗಿದ್ದರೂ ಒಮ್ಮೆ ಆತನು ವನ
ವಿಹಾರಾರ್ಥವಾಗಿ ಹೊರಟು, ಕಾಡಿನಲ್ಲಿ ಸುತ್ತುತ್ತಿರುವಾಗ, ಒಂದಾನೊಂದು
ಕಡೆಯಲ್ಲಿ ಅದನ್ನು ಮರೆತು ಮನೆಗೆ ಬಂದು ಆ ರಾತ್ರಿಯನ್ನು ಕಳೆದನು.
ಮಾರನೆಯ ತ್ರೇತಾಯುಗಾರಂಭದಿನದಲ್ಲಿ, ಅವನ ಮನಸ್ಸಿಗೆ ಮೂರುವೇ
ದಗಳೂ ಹೊಳಡುವು ಆಗ ಅವನಿಗೆ ತಾನು ಕಾಡಿನಲ್ಲಿ ಮರೆತುಬಂದ
ಅಗ್ನಿಸ್ಥಾಲಿಯ ಸ್ಮರಣವೂ ಉಂಟಾಯಿತು ಆಕ್ಷಣವೇ ಅವನು ಆ ಅಗ್ನಿ
ಪಾತ್ರವನ್ನು ಮರೆತುಬಂದ ಸ್ಥಳಕ್ಕೆ ಹೋಗಿ ನೋಡಿದನು ಆಸ್ಥ
ಳದಲ್ಲಿ ಒಂದು ಶಮೀವೃಕ್ಷವು (ಬನ್ನೀಮರವು) ಬೆಳೆದು, ಅದರ ಗರ್ಭದಿಂದ
ಒಂದು ಅಶ್ವತ್ಥಶಾಖೆಯು (ಅರಳಿಯ ಗೊನೆಯ) ಹೊರಟಿದ್ದಿತು. ಅದನ್ನು
ನೋಡಿದೊಡನೆ ಆ ರಾಜನಿಗೆ "ಶಮೀಗರ್ಭವಾದ ಅಶ್ವತ್ಥಕಾಷ್ಠಗಳನ್ನು ಮ
ಥಿಸಿ ಅಗ್ನಿಯನ್ನು ಹುಟ್ಟಿಸಬಹು"ದೆಂಬ ವೇದವಾಕ್ಯಾರ್ಥವು ಸ್ಮರಣೆಗೆ ಬಂದಿ
ತು. ಅದರಮೇಲೆ ಆ ಪುರೂರವನು, ಆ ಅರಳಿಯ ಕೊನೆಯಲ್ಲಿ ಎರಡು ಕ
ಡ್ಡಿಗಳನ್ನು ಕಿತ್ತುಕೊಂಡು, ಅವುಗಳನ್ನೇ ಅರಣಿಕಾಷ್ಠಗಳನ್ನಾಗಿ ಮಾಡಿ,
ತನಗೆ ಊರ್ವಶೀಲೋಕಪ್ರಾಪ್ತಿಯುಂಟಾಗಬೇಕೆಂಬ ಉದ್ದೇಶದಿಂದ,
ಒಂದರಮೇಲೊಂದನ್ನಿಟ್ಟು,ಕೆಳಗಿನ ಕಾಷ್ಠವನ್ನು ಊರ್ವಶಿಯನ್ನಾಗಿಯೂ
ಮೇಲಿನ ಕಾಷ್ಠವನ್ನು ತನ್ನನ್ನಾಗಿಯೂ, ಆ ಕಾಷ್ಠಗಳ ಮಥನದಿಂದುಂ
ಟಾಗುವ ಅಗ್ನಿಯನ್ನೇ ತನ್ನ ಪುತ್ರನನ್ನಾಗಿಯೂ ಭಾವಿಸುತ್ತ, ಮಂತ್ರಪೂ
ರ್ವಕವಾಗಿ ಅವೆರಡನ್ನೂ ಮಥಿಸಿದನು. ಅದರಿಂದ ಅಗ್ನಿಯು ಹುಟ್ಟಿತು ಆ
ಅಗ್ನಿಯನ್ನು ವೇದೋಕ್ತಗಳಾದ ಮೂರುಬಗೆಯ ಸಂಸ್ಕಾರಗಳಿಂದ ದಕ್ಷಿ

ಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಮೂರುವಿಧವಾಗಿ ವಿಭಾಗಿಸಿ ದನು ಪುಣ್ಯಲೋಕಪ್ರಾಪ್ತಿಗೆ ಸಾಧನಗಳಾದ ಆ ಅಗ್ನಿಗಳನ್ನು ತನ್ನ ಪು ತ್ರರನ್ನಾಗಿಯೇ ಭಾವಿಸಿದನು ಮತ್ತು ಆ ಪುರೂರವನು ತನಗೆ ಊರ್ವಶೀ ಲೋಕಪ್ರಾಪ್ತಿಯಾಗಬೇಕೆಂಬ ಉದ್ದೇಶದಿಂದ, ಸರ್ವದೇವತಾತ್ಮಕನಾಗಿ ಯೂ ಸಮಸ್ತ ಯಜ್ಞಫಲಪ್ರದನಾಗಿಯೂ ಇರುವ ಶ್ರೀಹರಿಯನ್ನು ಆ ಅಗ್ನಿಮುಖವಾಗಿ ಆರಾಧಿಸುತಿದ್ದನು ಓ ಪರೀಕ್ಷಿದ್ರಾಜಾ! ಈ ಪುರೂರವನ ಕಾಲಕ್ಕೆ ಮೊದಲು, ಕೃತಯುಗಾಂತದವರೆಗೆ ಸಮಸ್ತ ಶಬ್ದಜಾಲಗಳಿಗೂ ಬೀಜವೆನಿಸಿಕೊಂಡ ಓಂಕಾರವೊಂದೇ ವೇದವೆನಿಸಿ ಕೊಂಡಿದ್ದಿತು ಆಗ ಶ್ರೀಮನ್ನಾರಾಯಣನೊಬ್ಬನೇ ದೈವವಲ್ಲದೆ ದೇ ವತಾಂತರಗಳೂ ಇರುತ್ತಿರಲಿಲ್ಲ. ಅಗ್ನಿಯೂ ಒಂದೇ ಆಗಿದ್ದಿತು ಹಂ ಸನೆಂಬ ಹೆಸರಿನಿಂದ ವರ್ಣವೂ ಒಂದೇ ಆಗಿದ್ದಿತೇಹೊರತು ಈಗಿ ನಂತೆ ವರ್ಣಭೇದಗಳೂ ಇರುತ್ತಿರಲಿಲ್ಲ ತ್ರೇತಾಯುಗಾರಂಭದಲ್ಲಿ ಈ ಪುರೂರವನಿಂದಲೇ ವೇದವೂ, ಅಗ್ನಿಯೂ, ಮೂರ್ರುಶಾಖೆಗಳಾಗಿ ವಿಭಾಗ ಹೊಂದಿದುವು ಅಲ್ಲಿಂದೀಚೆಗೆ ಕರ್ಮಮಾರ್ಗವೂ ತಲೆಯೆತ್ತಿತು ಕೊನೆಗೆ ಆ ಪುರೂರವನು ತನ್ನ ಪುತ್ರರೂಪವಾದ ಅಗ್ನಿಯ ಸಹಾಯದಿಂದ, ಗಂಧ ರ್ವಲೋಕವನ್ನು ಸೇರಿ ಸುಖಿಸುತಿದ್ದನು ಇದು ಹದಿನಾಲ್ಕನೆಯ ಅಧ್ಯಾ ಯವು

---

## ಪುರೂರವನ ವಂಶಾನುಕ್ರಮವು.

ಓ ಪರೀಕ್ಷಿದ್ರಾಜಾ! ಈ ಪುರೂರವನಿಗೆ ಊರ್ವಶಿಯಲ್ಲಿ ಆರುಮಂ ದಿ ಮಕ್ಕಳು ಹುಟ್ಟಿದರು. ಅವರಿಗೆ ಕ್ರಮವಾಗಿ, ಆಯು, ಶ್ರುತಾಯು, ಸತ್ಯಾಯು, ರಯ, ವಿಜಯ, ಜಯರೆಂದು ಹೆಸರು ಇವರಲ್ಲಿ ಶ್ರುತಾ ಯುವಿಗೆ ವಸುಮಂತನೂ, ಸತ್ಯಾಯುವಿಗೆ ಶ್ರುತಂಜಯನೂ, ರಯನಿಗೆ ಏಕನೂ, ಜಯನಿಗೆ ಅಮಿತನೂ, ವಿಜಯನಿಗೆ ಭೀಮನೂ ಜನಿಸಿದರು. ಈ ಭೀಮನಿಂದ ಕಾಂಚನನೂ, ಕಾಂಚನನಿಂದ ಹೋತ್ರಕನೂ, ಅವನಿಂದ ಜಹ್ನುವೂ ಜನಿಸಿದರು. ಈ ಜಹ್ನುವೇ ತನ್ನ ಆಶ್ರಮದಲ್ಲಿ ಪ್ರವೇ

ತಿಸಿದ ಗಂಗೆಯನ್ನು ಆಪೋಶನವಾಗಿ ಕುಡಿದುಬಿಟ್ಟವನು. ಈ ಜಹ್ನುವಿಗೆ ಪೂರುವೆಂಬ ಮಗನಾದನು. ಈ ಪೂರುವಿನಿಂದ ಬಲಾಕನೂ, ಅವನಿಂದ ಅಜಕನೂ, ಅವನಿಂದ ಕುಶನೂ ಜನಿಸಿದರು. ಈ ಕುಶನಿಗೆ ಕುಶಾಂಬ, ಧೂರ್ತರಯ, ವಸು, ಕುಶನಾಭರೆಂಬ ನಾಲ್ವರು ಮಕ್ಕಳಾದರು. ಇವರಲ್ಲಿ ಕುಶಾಂಬನಿಗೆ ಗಾಧಿಯೆಂಬ ಮಗನಾದನು ಈ ಗಾಧಿಯಲ್ಲಿ ಸತ್ಯವತಿಯೆಂಬ ಮಗಳಾದಳು. ಭೃಗುವಂಶಸಂಭೂತನಾದ ಋಚೀಕನೆಂಬ ಬ್ರಾಹ್ಮಣನೊಬ್ಬನು, ಆ ಕನ್ಯೆಯನ್ನು ತನಗೆ ಕೊಡಬೇಕೆಂದು ಗಾಧಿಯಬಳಿಗೆ ಬಂದು ಬಹಳವಾಗಿ ಪ್ರಾರ್ಥಿಸಿದನು. ಆದರೆ ಗಾಧಿಯು, ಆವೈದಿಕಬ್ರಾಹ್ಮಣನಿಗೆ ತನ್ನ ಮುದ್ದುಮಗಳನ್ನು ಕೊಡುವುದಕ್ಕೆ ಇಷ್ಟವಿಲ್ಲದೆ, ಏನಾದರೂ ಉಪಾಯದಿಂದ ಅವನ ಆಸೆಯನ್ನು ಬಿಡಿಸಬೇಕೆಂದು ನಿಶ್ಚಯಿಸಿ, "ಓ ಬ್ರಾಹ್ಮಣಾ! ನನ್ನಮಗಳನ್ನು ನಿನಗೆ ಕೊಡುವುದಕ್ಕೆ ಏನೂ ಅಡ್ಡಿಯಿಲ್ಲ! ಆದರೆ ನನ್ನದೊಂದು ನಿಯಮವುಂಟು! ದೇಹವೆಲ್ಲವೂ ಚಂದ್ರನಂತೆ ಬಿಳುಪಾಗಿ, ಒಂದುಕಿವಿಯುಮಾತ್ರ ಕಪ್ಪಾಗಿರುವ ಒಂದು ಸಾವಿರ ಕುದುರೆಗಳನ್ನು ಕನ್ಯಾಶುಲ್ಕವಾಗಿ ತಂದು ಕೊಟ್ಟವರಿಗೆ, ನನ್ನ ಮಗಳನ್ನು ಕೊಡುವುದಾಗಿ ನಿಶ್ಚಯಿಸಿರುವೆನು ಸರ್ವೋತ್ತಮವಾದ ನಮ್ಮ ಕುಶಿಕವಂಶದಲ್ಲಿ ಹುಟ್ಟಿದ ಈ ಕನ್ಯೆಗೆ ಈ ಶುಲ್ಕವೂ ಅತಿಸ್ವಲ್ಪವೆಂದೇ ನನ್ನ ಅಭಿಪ್ರಾಯವು. ಆದರೂ ಚಿಂತೆಯಿಲ್ಲ ನಿನ್ನವಿಷಯದಲ್ಲಿ ಹೆಚ್ಚೇನೂ ಬೇಕಾದುದಿಲ್ಲ. ಅಷ್ಟನ್ನುಮಾತ್ರ ತಂದುಕೊಟ್ಟರೆ, ನಿನಗೆ ನನ್ನ ಮಗಳನ್ನು ಕೊಟ್ಟುಬಿಡುವೆನು."ಎಂದನು. ರಾಜನು ತನ್ನ ಮಗಳನ್ನು ಕೊಡಲಾರದುದಕ್ಕಾಗಿಯೇ ಈ ಅಸಾಧ್ಯಕಾರ್ಯವನ್ನು ಹೇಳಿರುವನೆಂದು ಋಚೀಕನ ಮನಸ್ಸಿಗೆ ತೋರಿತು ಹಾಗಿದ್ದರೂ ಆ ಕಾರ್ಯವನ್ನು ನಡೆಸಿ, ಆ ಕನ್ಯೆಯನ್ನು ಸಾಧಿಸಿಯೇ ತೀರಬೇಕೆಂಬ ಹಟದಿಂದ ಋಚೀಕನು, ವರುಣನಬಳಿಗೆ ಹೋಗಿ ಪ್ರಾರ್ಥಿಸಿ, ರಾಜನು ಹೇಳಿದ ಲಕ್ಷಣಗಳುಳ್ಳ ಸಾವಿರಕುದುರೆಗಳನ್ನು ಅವನಿಂದ ಪಡೆದು ಬಂದು ರಾಜನಿಗೆ ಕೊಟ್ಟು, ಆ ಕನ್ಯೆಯನ್ನು ವಿವಾಹಮಾಡಿಕೊಂಡನು. ಆಮೇಲೆ ಒಮ್ಮೆ ಸತ್ಯವತಿಯೂ, ಅವಳ ತಾಯಿಯೂ ಋಚೀಕನ ಬಳಿಗೆ ಬಂದು, ತಮ್ಮಿಬ್ಬರಿಗೂ ಪುತ್ರಸಂತಾನವಾಗುವಂತೆ ಅನುಗ್ರಹಿಸಬೇಕೆಂದು

ಪ್ರಾರ್ಥಿಸಿದರು. ಅದರಂತೆ ಋಚೀಕನು ಕ್ಷತ್ರಿಯಸಂತಾನಕ್ಕೂ, ಬ್ರಾಹ್ಮಣ ಸಂತಾನಕ್ಕೂ ಕಾರಣವಾದ ಎರಡುಮಂತ್ರಗಳಿಂದ ಎರಡುಚರುಗಳ ನ್ನು ಸಿದ್ಧಪಡಿಸಿ, ಅವುಗಳಲ್ಲಿ ಮೊದಲನೆಯದನ್ನು (ರಾಜಪತ್ನಿಯಾದ) ತನ್ನ ಅತ್ತೆಗೂ, ಎರಡನೆಯದನ್ನು ಸತ್ಯವತಿಗೂ ಕೊಡಬೇಕೆಂದು ಉದ್ದೇಶಿಸಿ, ಸ್ನಾನಮಾಡಿ ಬರುವುದಕ್ಕಾಗಿ ನದಿಗೆ ಹೋದನು. ಇಷ್ಟರಲ್ಲಿ ಇತ್ತಲಾಗಿ ಸತ್ಯವತಿಯ ತಾಯಿಯು, ತನ್ನಳಿಯನು ಬ್ರಾಹ್ಮಣಸಂತಾನಕ್ಕೆ ಯೋಗ್ಯ ವಾದ ಉತ್ತಮಮಂತ್ರದಿಂದ ತನ್ನ ಮಗಳಿಗಾಗಿ ಸಿದ್ಧಪಡಿಸಿರುವ ಚರುವನ್ನೇ ತನಗೆ ಕೊಡಿಸಬೇಕೆಂದು ಮಗಳನ್ನು ಯಾಚಿಸಿದಳು. ತಾಯಿಯ ಮಾತನ್ನು ನಿರಾಕರಿಸಲಾರದೆ ಸತ್ಯವತಿಯು, ತಾನಾಗಿಯೇ ಸ್ವತಂತ್ರಿಸಿ, ತನಗಾಗಿ ಮಾಡಿದ ಚರುವನ್ನು ತಾಯಿಗೆ ಕೊಟ್ಟು, ಅವಳ ಚರುವನ್ನು ತಾನು ಭುಜಿ ಸಿದಳು. ಋಚೀಕನು ಸ್ನಾನಮಾಡಿ ಬಂದಮೇಲೆ ಅವನಿಗೆ ಈ ವೃತ್ತಾಂತವು ತಿಳಿಯಿತು ಆಗ ಆ ಮಹರ್ಷಿಯು ಕೋಪದಿಂದ ತನ್ನಪತ್ನಿಯನ್ನು ನೋಡಿ "ಅಯ್ಯೋ! ಬುದ್ಧಿಗೆಟ್ಟವಳೆ! ಬಹಳ ಅವಿವೇಕದ ಕಾರ್ಯವನ್ನು ಮಾಡಿದೆ! ಇನ್ನು ಮಾಡುವುದೇನು? ನಿನ್ನ ಗರ್ಭದಲ್ಲಿ ಜನಿಸತಕ್ಕ ಪುತ್ರನು ಕ್ರೂರ ಸ್ವಭಾವವುಳ್ಳ ಕ್ಷತ್ರಿಯನಾಗುವನು ನಿನ್ನ ತಮ್ಮನು ಬ್ರಹ್ಮಜ್ಞಾನಿಗಳಲ್ಲಿ ಮೇಲೆನಿಸಿದ ಬ್ರಾಹ್ಮಣನಾಗುವನು ನಿನ್ನ ಅವಿವೇಕಕ್ಕೆ ತಕ್ಕ ಫಲವನ್ನನು ಭವಿಸು!" ಎಂದನು ಇದನ್ನು ಕೇಳಿ ಸತ್ಯವತಿಯು, ಬಹಳ ಚಿಂತಾಕುಲಿತೆ ಯಾಗಿ, ಪತಿಯನ್ನು ಕುರಿತು "ನಾಥಾ! ನಾನು ವಿವೇಕವಿಲ್ಲದೆ ಮಾಡಿದ ತ ಪ್ಪನ್ನು ಕ್ಷಮಿಸಬೇಕು! ಈಗಲೂ ನನ್ನ ಗರ್ಭದಲ್ಲಿ ಯೋಗ್ಯನಾದ ಪುತ್ರನೇ ಜನಿಸುವಂತೆ ಅನುಗ್ರಹಿಸು" ಎಂದು ಬಹಳವಾಗಿ ಪ್ರಾರ್ಥಿಸಿದಳು ಆಗ ಋಚೀಕನು ಅವಳಲ್ಲಿ ಕನಿಕರಗೊಂಡು, "ದೇವಿ! ಹಾಗಿದ್ದರೆ ನಿನ್ನ ಮಗನು ಶಾಂತನಾಗಿಯೇ ಇರಲಿ! ಆದರೆ ಆ ಮಗನ ವೀರ್ಯದಿಂದ ಹುಟ್ಟತಕ್ಕ ವನು, (ಪೌತ್ರನು) ಕ್ರೂರನಾಗಿರಲಿ!" ಎಂದು ಅನುಗ್ರಹಿಸಿದನು. ಅದರಂತೆ ಸತ್ಯವತಿಯ ಗರ್ಭದಲ್ಲಿ ಶಾಂತನಾಗಿಯೂ, ತಪೋನಿಷ್ಠನಾಗಿ ಯೂ ಇರುವ ಜಮದಗ್ನಿಯು ಹುಟ್ಟಿದನು. ಆಮೇಲೆ ಸತ್ಯವತಿಯು ಒಂ ದು ಪುಣ್ಯನದಿಯಾಗಿ ಪ್ರವಹಿಸಿದಳು ರಾಜೇಂದ್ರಾ! ಅದನ್ನೇ ಈಗ ಕೌಶಿ

ಕೀನದಿಯೆಂದು ಹೇಳುವರು ಸತ್ಯವತಿಯ ಮಗನಾದ ಜಮದಗ್ನಿಯು, ರೇಣುವಿನ ಮಗಳಾದ ರೇಣುಕೆಯೆಂಬವಳನ್ನು ವಿವಾಹಮಾಡಿಕೊಂಡನು ಅವಳಲ್ಲಿ ವಸುಮಂತನೇ ಮೊದಲಾದ ಕೆಲವು ಪುತ್ರರು ಜನಿಸಿದರು ಅವರಲ್ಲಿ ಕನಿಷ್ಠನೇ ಪರಶುರಾಮನು ಇವನನ್ನು ಭಗವಂತನ ಅಂಶಾವತಾರವೆಂದು ಹೇಳುವರು

ಪರಶುರಾಮ ವೃತ್ತಾಂತವು.

ಈ ಪರಶುರಾಮನು, ಹೈಹಯರೆಂಬ ಕಾರ್ತವೀರ್ಯನ ಸಂತತಿಯವರನ್ನು ನಾಶಮಾಡುವುದಲ್ಲದೆ, ಲೋಕದಲ್ಲಿ ಕ್ಷತ್ರಿಯಜಾತಿಯೇ ಇಲ್ಲದಂತೆ ಮಾಡಬೇಕೆಂಬ ಉದ್ದೇಶದಿಂದ, ಇಪ್ಪತ್ತೊಂದಾವರ್ತಿ ಭೂಮಿಯನ್ನು ಸುತ್ತಿ ಸುತ್ತಿ ಹುಡುಕಿ, ಕಂಡಕಂಡ ಕ್ಷತ್ರಿಯರನ್ನು ಕೊಲ್ಲುತ್ತಬಂದನು. ಯಾವನೋ ಒಬ್ಬ ಕ್ಷತ್ರಿಯನು ಬ್ರಾಹ್ಮಣನ ವಿಷಯದಲ್ಲಿ ಅತ್ಯಲ್ಪವಾದ ಅಪರಾಧವನ್ನು ಮಾಡುವುದಕ್ಕಾಗಿ, ಗರ್ವಿಷ್ಠರಾಗಿಯೂ, ಭೂಮಿಗೆ ಭಾರಭೂತರಾಗಿಯೂ, ಅಧಾರ್ಮಿಕರಾಗಿಯೂ, ಕೇವಲ ರಜಸ್ತಮೋಗುಣಗಳಿಂದ ತುಂಬಿದವರಾಗಿಯೂ ಇದ್ದ ಅನೇಕಕ್ಷತ್ರಿಯರು ಹತರಾದುದಲ್ಲದೆ, ಕ್ಷತ್ರಿಯವಂಶವೇ ಪೂರ್ಣವಾಗಿ ನಾಶಹೊಂದುವಂತಾಯಿತು" ಎಂದನು ಇದನ್ನು ಕೇಳಿ ಪರೀಕ್ಷಿದ್ರಾಜನು "ಮಹರ್ಷೀ! ಕ್ಷತ್ರಿಯರು ಬ್ರಾಹ್ಮಣರ ವಿಷಯದಲ್ಲಿ ಮಾಡಿದ ಅಂತಹ ಅಪರಾಧವೇನು? ಅದರಿಂದ ಕ್ಷತ್ರಿಯಕುಲವೇ ಪೂರ್ಣವಾಗಿ ನಾಶಹೊಂದಬೇಕಾದರೆ, ಅದು ಬಹಳಕ್ರೂರವಾಗಿರಬೇಕಲ್ಲವೆ? ಆ ವೃತ್ತಾಂತವನ್ನು ಸವಿಸ್ತರವಾಗಿ ತಿಳಿಸಬೇಕು" ಎಂದನು. ಅದಕ್ಕಾ ಶುಕಮುನಿಯು ಪರೀಕ್ಷಿದ್ರಾಜನನ್ನು ಕುರಿತು "ರಾಜಾ ಕೇಳು! ಹಿಂದೆ ಕಾರ್ತವೀರ್ಯಾರ್ಜುನನೆಂಬ ರಾಜಶ್ರೇಷ್ಠನೊಬ್ಬನು, ಹೈಹಯದೇಶಗಳನ್ನು ಪಾಲಿಸುತಿದ್ದನು. ಆತನು ಶ್ರೀಮನ್ನಾರಾಯಣಾಂಶದಿಂದವತರಿಸಿದ ದತ್ತಾತ್ರೇಯನನ್ನಾರಾಧಿಸಿ, ಆತನ ಅನುಗ್ರಹದಿಂದ ಸಾವಿರತೋಳುಗಳನ್ನೂ, ಶತ್ರುದುಸ್ಸಹವಾದ ಪರಾಕ್ರಮವನ್ನೂ, ಬುದ್ಧಿಬಲವನ್ನೂ, ತೇಜಸ್ಸನ್ನೂ, ಇಂದ್ರಿಯಬಲವನ್ನೂ, ದೇಹಬಲವನ್ನೂ, ಕೀರ್ತಿಯನ್ನೂ, ಅಣಿಮಾದಿಗಳಾದ ಅಷ್ಟೈಶ್ವರ್ಯಸಿದ್ಧಿಗಳನ್ನೂ ಪಡೆದಿದ್ದನು. ಇಂತಹ

ಎಣೆಯಿಲ್ಲದ ಪ್ರಭಾವದಿಂದ, ಲೋಕದಲ್ಲಿ ತನಗೆ ಯಾರೂ ಇದಿರಿಲ್ಲದೆ ವಾ
ಯುವಿನಂತೆ ನಿರಂಕುಶವಾದ ಗತಿಯುಳ್ಳವನಾಗಿದ್ದನು ಹೀಗೆ ಮದದಿಂದ
ಕೊಬ್ಬಿದ ಈ ಕಾರ್ತವೀರ್ಯಾರ್ಜುನನು, ಒಮ್ಮೆ ವೈಜಯಂತಿಯೆಂಬ ಪುಷ್ಪಮಾಲಿಕೆ
ಯನ್ನು ಧರಿಸಿ, ತನ್ನ ಸ್ತ್ರೀಯರೊಡನೆ ರೇವಾನದಿಯಲ್ಲಿ ಜಲಕ್ರೀಡೆಯನ್ನಾ
ಡುವುದಕ್ಕಾಗಿ ಹೋದನು ಅಲ್ಲಿ ನದಿಯ ಪ್ರವಾಹವೇಗವನ್ನು ತಗ್ಗಿಸು
ವುದಕ್ಕಾಗಿಯೂ, ಜಲಕ್ರೀಡೆಗೆ ಸಾಕಾದಷ್ಟು ನೀರನ್ನು ನಿಲ್ಲಿಸಿಕೊಳ್ಳು
ವುದಕ್ಕಾಗಿಯೂ, ಆ ಜಲಕ್ಕೆ ತನ್ನ ಭುಜಗಳನ್ನೇ ಅಡ್ಡಗಟ್ಟಿ ನಿಲ್ಲಿಸಿದನು.
ಈ ಸಮಯಕ್ಕೆ ಸರಿಯಾಗಿ ಲಂಕೇಶ್ವರನಾದ ರಾವಣನು, ಈ ಕಾರ್ತ
ವೀರ್ಯನಮೇಲೆ ಯುದ್ಧೋದ್ಯುಕ್ತನಾಗಿ ಬಂದು, ಆ ನದೀತೀರದಲ್ಲಿಯೇ ತನ್ನ
ದಂಡನ್ನಿಳಿಸಿದ್ದನು. ಕಾರ್ತವೀರ್ಯನು ತನ್ನ ಸಾವಿರತೋಳುಗಳಿಂದ ಆ ನದಿ
ಯನ್ನು ಅಡ್ಡಗಟ್ಟಿದೊಡನೆ, ಅದರ ಪ್ರವಾಹವು ಉಕ್ಕಿ, ನಾನಾಶಾಖೆಯಾಗಿ
ಹೊರಟು, ಸಮೀಪದಲ್ಲಿದ್ದ ರಾವಣನ ಪಾಳೆಯವನ್ನು ಕೊಚ್ಚಿಸಿತು ರಾವಣ
ನಿಗೆ ಸಹಿಸಲಾರದ ಕೋಪವುಂಟಾಯಿತು. ಒಡನೆಯೇ ಆತನು, ಇದೇನೆವದಿಂ
ದ ಕಾರ್ತವೀರ್ಯನನ್ನಿದಿರಿಸಿ ಪರಾಭವಿಸುವುದಕ್ಕಾಗಿ ಅತ್ಯಾತುರದಿಂದ
ಬಂದನು ಅದನ್ನು ನೋಡಿ ಕಾರ್ತವೀರ್ಯನು, ಕಪಿಯನ್ನು ಹಿಡಿದು ಕಟ್ಟು
ವಂತೆ ಆ ರಾವಣನನ್ನು ಕೇವಲಲೀಲಾಮಾತ್ರದಿಂದಲೇ ಹಿಡಿದು, ಪಾಶದಿಂದ
ಕಟ್ಟಿ, ಕೆಲವು ಕಾಲದವರೆಗೆ ತನ್ನ ಸೆರೆಯಲ್ಲಿಟ್ಟಿದ್ದು, ಆಮೇಲೆ ಸೆರೆಯಿಂದ
ಬಿಡಿಸಿ ಕಳುಹಿಸಿಬಿಟ್ಟನು ರಾವಣನಿಗುಂಟಾದ ಈ ದುರವಸ್ಥೆಯನ್ನು ನೋಡಿ
ಅಲ್ಲಿದ್ದ ಸ್ತ್ರೀಯರೆಲ್ಲರೂ ಕೈತಟ್ಟಿನಗುತಿದ್ದರು ಇದಲ್ಲದೆ ಮಹಾಬಲಾಢ್ಯ
ನಾದ ಆ ಕಾರ್ತವೀರ್ಯಾರ್ಜುನನು, ಒಮ್ಮೆ ಬೇಟೆಗಾಗಿ ಹೊರಟು, ಅಲ್ಲಲ್ಲಿ
ಸ್ವೇಚ್ಛೆಯಾಗಿ ಸಂಚರಿಸುತ್ತ, ಜಮದಗ್ನಿಯ ಆಶ್ರಮಕ್ಕೆ ಬಂದನು ಆಗ
ಜಮದಗ್ನಿಯು, ಅತಿಥಿಯಾಗಿ ಬಂದ ಆರಾಜನನ್ನು ಯಥೋಚಿತವಾಗಿ ಗೌ
ರವಿಸಿ, ಸ್ವರ್ಗದಲ್ಲಿದ್ದ ಕಾಮಧೇನುವನ್ನು ಕರೆಸಿ, ಅವನಿಗೂ, ಅವನ ಅನುಚ
ರರಿಗೂ ಬೇಕಾದ ಸತ್ಕಾರಗಳನ್ನು ಮಾಡಿದನು. ಆಗ ಕಾರ್ತವೀರ್ಯನು, ಸ
ಕಲೈಶ್ವರ್ಯಸಂಪನ್ನನಾದ ತನಗಿಂತಲೂ ಆ ಮಹರ್ಷಿಯಲ್ಲಿ ಅಧಿಕವಾದ ಶಕ್ತಿ
ಯಿರುವುದನ್ನುನೋಡಿ ಸಹಿಸಲಾರದೆ, ಅವನ ಸತ್ಕಾರವನ್ನೂ ಸ್ವೀಕರಿಸದೆ,

ಅವನಲ್ಲಿದ್ದ ಕಾಮಧೇನುವನ್ನು ಹಿಡಿದು ತರಬೇಕೆಂದು ತನ್ನ ಭಟರಿಗೆ ಆಜ್ಞಾ ಪಿಸಿದನು ರಾಜಾಜ್ಞೆಯಂತೆ ಭಟರು ಆ ಧೇನುವನ್ನು ಹಿಡಿದು, ಅದು ದೈನ್ಯ ದಿಂದ ಅರಚಿಕೊಂಡರೂ ಬಿಡದೆ, ಕರುವಿನೊಡನೆ ಅದನ್ನು ಮಾಹಿಷ್ಮತೀ ಪುರಕ್ಕೆ ಸೆಳೆತಂದರು ಈ ಕಾರ್ಯವು ನಡೆದ ಸ್ವಲ್ಪಹೊತ್ತಿನೊಳಗಾ ಗಿಯೇ, ಸಂಚಾರಾರ್ಥವಾಗಿ ಹೊರಗೆ ಹೋಗಿದ್ದ ಪರಶುರಾಮನು ಹಿಂ ತಿರುಗಿ ಬಂದು, ಕಾರ್ತವೀರ್ಯನು ಮಾಡಿ ಹೋದ ದೌರ್ಜನ್ಯವನ್ನು ಕೇಳಿ, ದಂ ಡಾಹತವಾದ ಸರ್ಪದಂತೆ, ಅತ್ಯಾಕ್ರೋಶದಿಂದ ಬುಸುಗುಟ್ಟುತ್ತ, ತನಗೆ ಮುಖ್ಯಾಯುಧವಾದ ಗಂಡುಗೊಡಲಿಯನ್ನೂ, ಬಿಲ್ಲು ಬಾಣಗಳನ್ನೂ, ಬತ್ತ ಳಿಕೆಗಳನ್ನೂ ಹಿಡಿದು, ಯುದ್ಧಕವಚವನ್ನು ತೊಟ್ಟು, ಆನೆಯನ್ನು ಬೆನ್ನಟ್ಟಿ ಹೋಗುವ ಸಿಂಹದಂತೆ ಕಾರ್ತವೀರ್ಯನನ್ನು ಬೆನ್ನಟ್ಟಿಹೊರಟನು ಆತನಿ ಗಾದರೋ ಕೈಯಲ್ಲಿ ಧನುರ್ಬಾಣಗಳು! ಹೆಗಲಮೇಲೆ ಗಂಡುಗೊಡಲಿ!ಬೆನ್ನ ಮೇಲೆ ಕರೀಜಿಂಕೆಯ ತೊಗಲು! ತಲೆಯಲ್ಲಿ ಸೂರ್ಯಕಾಂತಿಯಿಂದ ಝಗ ಝಗಿಸುವ ಜಟಾಕಲಾಪಗಳು! ಇಂತಹ ವಿರುದ್ಧವೇಷದೊಡನೆ ಅತಿವೇಗದಿಂ ದ ಬೆನ್ನಟ್ಟಿಬರುವ ಕ್ರೂರಪರಾಕ್ರಮಿಯಾದ ಆ ಪರಶುರಾಮನನ್ನು ಕಂ ಡೊಡನೆ, ಕಾರ್ತವೀರ್ಯನು, ಅವನನ್ನು ಕೊಲ್ಲುವಂತೆ ತನ್ನ ಸೈನ್ಯಗಳಿಗೆ ಕ್ರೂರ ಶಾಸನವನ್ನು ಮಾಡಿ,ತಾನು ಪುರಪ್ರವೇಶಮಾಡಿದನು.ರಾಜಾಜ್ಞೆಯಿಂದ ಹದಿ ನೇಳಕ್ಷೌಹಿಣೀಸಂಖ್ಯೆಯುಳ್ಳ ಚತುರಂಗಸೈನ್ಯಗಳು, ಕತ್ತಿ, ಗದೆ, ಬಿಲ್ಲು, ಬಾ ಣ, ಶತಘ್ನಿ,ಶಕ್ತಿ,ಮೊದಲಾದ ವಿವಿಧಾಯುಧಗಳನ್ನು ಹಿಡಿದು,ರಾಮನನ್ನಿದಿ ರಿಸಿದುವು ಆ ಸಮಸ್ತಸೈನ್ಯವನ್ನೂ ರಾಮನೊಬ್ಬನೇ ನಿಮಿಷಮಾತ್ರದಲ್ಲಿ ಸಂಹರಿಸಿದನು ತನ್ನ ಪ್ರತಾಪಾಗ್ನಿಯಿಂದ ಶತ್ರುಸೈನ್ಯವನ್ನು ಭಸ್ಮಮಾಡ ತಕ್ಕ ಆ ಪರಶುರಾಮನು, ಗಂಡುಗೊಡಲಿಯನ್ನು ಗಿರಗಿರನೆ ತಿರುಗಿಸು ತ್ತ, ಆ ಶತ್ರುಸೈನ್ಯದಲ್ಲಿ ಸುತ್ತುತ್ತಿರುವಾಗ, ಅದರ ವೇಗದಿಂದಲೇ ಅಲ್ಲಿದ್ದ ಸೈನಿಕರ, ಕೈ, ಕಾಲು ತೋಳು, ತೊಡೆ, ಮುಂತಾದ ಅವಯವಗಳೆಲ್ಲವೂ. ಛಿನ್ನಭಿನ್ನವಾಗಿ ಕತ್ತರಿಸಿಬಿದ್ದುವು. ಅನೇಕವೀರಾಗ್ರೇಸರರು ಮಡಿದ ರು ಆನೆ, ಕುದುರೆ, ರಥ ಮೊದಲಾದ ವಾಹನಗಳೆಲ್ಲವೂ ರಾಶಿರಾಶಿಯಾಗಿ ಮುರಿದುಬಿದ್ದುವು ಹೀಗೆ ಆ ಪರಶುರಾಮನ ಕೊಡಲಿಯ ಪೆಟ್ಟಿನಿಂದಲೂ,

ಬಾಣಘಾತದಿಂದಲೂ, ಆ ರಣರಂಗದಲ್ಲಿ ಎಷ್ಟೋ ಕವಚಗಳು ಹರಿದು ಬಿದ್ದುವು! ಅನೇಕಧ್ವಜಗಳು ಮುರಿದುವು! ಲೆಕ್ಕವಿಲ್ಲದಷ್ಟು ಬಿಲ್ಲು ಬಾಣಗಳು ತುಂಡಾದುವು ಅನೇಕಪ್ರಾಣಿಗಳು ಹತವಾದುವು ನೆಲ ವೆಲ್ಲವೂ ರಕ್ತಪ್ರವಾಹಮಯವಾಯಿತು. ಹೀಗೆ ತನ್ನ ಸೈನ್ಯವು ಹತವಾಗುತ್ತಿರುವುದನ್ನು ಕೇಳಿ ಕಾರ್ತವೀರ್ಯನು, ಅತಿಕೋಪೋದ್ದೀಪಿತನಾಗಿ, ತಾನೇ ಯುದ್ಧಸನ್ನದ್ಧನಾಗಿ ಬಂದನು ತನ್ನ ಐನೂರುಕೈಗಳಲ್ಲಿಯೂ ಐನೂರು ಬಿಲ್ಲುಗಳನ್ನು ಹಿಡಿದು, ಉಳಿದ ಕೈಗಳಿಂದ ಬಾಣಗಳನ್ನು ಸಂಧಾನಮಾಡುತ್ತ, ರಾಮನಮೇಲೆ ಪರಂಪರೆಯಾಗಿ ಬಾಣಗಳನ್ನು ವರ್ಷಿಸುತಿದ್ದನು ಆದರೇನು ? ಧನುರ್ವಿದ್ಯೆಗೆ ಪರಮಾಚಾರ್ಯನೆನಿಸಿಕೊಂಡ ಪರಶುರಾಮನು, ತನ್ನ ಒಂದೇ ಬಿಲ್ಲಿನಿಂದ, ಆ ಬಾಣಗಳೆಲ್ಲವನ್ನೂ ತುಂಡುಮಾಡಿ ಕೆಡಹಿದನು ಇದನ್ನು ನೋಡಿ ಕಾರ್ತವೀರ್ಯನು, ಮತ್ತಷ್ಟು ಕೋಪಾವೇಶವುಳ್ಳವನಾಗಿ, ತನ್ನ ಸಾವಿರಕೈಗಳಿಂದಲೂ, ಪರ್ವತಗಳನ್ನೂ, ವೃಕ್ಷಗಳನ್ನೂ ಕಿತ್ತುತಂದು ರಾಮನಮೇಲೆ ಎಡೆಬಿಡದೆ ಪ್ರಯೋಗಿಸುತಿದ್ದನು ಪರಶುರಾಮನು ಅವೆಲ್ಲವನ್ನೂ ನಡುದಾರಿಯಲ್ಲಿಯೇ ತನ್ನ ಬಾಣಗಳಿಂದ ಛೇದಿಸಿ, ಯುದ್ಧಾತುರದಿಂದ ಮೈತಿಳಿಯದೆ ಮೇಲೆ, ಬಿದ್ದು ಬರುತ್ತಿರುವ ಆ ಕಾರ್ತವೀರ್ಯನನ್ನು ಪರಿಹಾಸಮಾಡುತ್ತ, ತೀವ್ರಧಾರೆಯುಳ್ಳ ತನ್ನ ಕೊಡಲಿಯಿಂದ ಅವನ ಸಹಸ್ರಭುಜಗಳನ್ನೂ ಕತ್ತರಿಸಿಕೆಡಹಿದನು ಪರ್ವತಶಿಖರವನ್ನುರುಳಿಸುವಂತೆ ಅವನ ತಲೆಯನ್ನೂ ಭೇದಿಸಿದನು ಕ್ರೂರಪರಾಕ್ರಮಿಯಾದ ಕಾರ್ತವೀರ್ಯನು ಸತ್ತುಬಿದ್ದೊಡನೆ, ಅವನ ಹತ್ತುಸಾವಿರಮಂದಿ ಪುತ್ರರೂ ರಾಮನ ಕೋಪಾವೇಶಕ್ಕೆ ಹೆದರಿ, ತಮ್ಮಲ್ಲಿದ್ದ ಹೋಮಧೇನುವನ್ನು ಅದರ ಕರುವಿನೊಡನೆ ಕರೆತಂದು ರಾಮನಿಗೆ ಕೊಟ್ಟು ಪಲಾಯನ ಮಾಡಿದರು. ರಾಮನು ಆ ಹೋಮಧೇನುವನ್ನು ತನ್ನ ತಂದೆಯ ವಶಕ್ಕೆ ಕೊಟ್ಟು, ತಾನು ನಡೆಸಿದ ಕಾರ್ಯಗಳೆಲ್ಲವನ್ನೂ, ತನ್ನ ಸಹೋದರರಿಗೂ, ತಂದೆಗೂ ವಿವರಿಸಿ ತಿಳಿಸಿದನು ಇದನ್ನು ಕೇಳಿ ಜಮದಗ್ನಿಯು ತನ್ನ ಮಗನ ಕಾರ್ಯಕ್ಕಾಗಿ ಮನಸ್ಸಿನಲ್ಲಿ ಪಶ್ಚಾತ್ತಾಪಪಡುತ್ತ "ಓ ರಾಮಾ! ಈ ನಿನ್ನ ಭುಜಪರಾಕ್ರಮವು ಶ್ಲಾಘಾರ್ಹವಾಗಿದ್ದರೂ, ನೀನು ನಡೆಸಿದ ಕಾರ್ಯವು ನನ

ಗೆಮಾತ್ರ ತೃಪ್ತಿಕರವಾಗಿಲ್ಲ, ನೀನು ಪಾಪಕಾರ್ಯವನ್ನು ನಡೆಸಿದೆ! ರಾಜರು ಸಕಲದೇವತಾಸ್ವರೂಪನೆನಿಸಿಕೊಂಡಿರುವರು ನೀನು ಈ ಧರ್ಮಸೂಕ್ಷ್ಮವನ್ನು ಯೋಚಿಸದೆ, ಕೋಪವಶನಾಗಿ, ಅಂತಹ ರಾಜನನ್ನು ಕೊಂದು ಮಹಾಪಾಪಕ್ಕೆ ಗುರಿಯಾದೆಯಲ್ಲವೆ? ವತ್ಸಾ! ಬ್ರಾಹ್ಮಣಕುಲದಲ್ಲಿ ಹುಟ್ಟಿದ ನಾವು, ಇಂತಹ ರಾಜಸಕಾರ್ಯಗಳಿಗೆ ಯಾವಾಗಲೂ ಪ್ರವರ್ತಿಸಬಾರದು! ನಮಗೆ ಶಾಂತಿಯೇ ಮುಖ್ಯಧನವು! ಈ ತಾಳ್ಮೆಯಿಂದಲೇ ಲೋಕದಲ್ಲಿ ಬ್ರಾಹ್ಮಣಜಾತಿಗೆ ಪೂಜ್ಯತೆಯುಂಟು! ಕ್ಷಮೆಗಿಂತಲೂ ಉತ್ತಮವಾದ ಗುಣವು ಬೇರೊಂದಿಲ್ಲ. ಲೋಕಗುರುವಾದ ಬ್ರಹ್ಮನೂಕೂಡ ಈ ಗುಣದಿಂದಲೇ ಸರ್ವೋತ್ತಮವಾದ,ಪದವಿಯನ್ನು ಹೊಂದಿರುವನು ಈ ಶಮದಮಾದಿಗುಣಗಳಿಂದಲೇ ಬ್ರಾಹ್ಮಣತೇಜಸ್ಸು ಸೂರ್ಯಕಾಂತಿಯಂತೆ ವಿಶೇಷವಾಗಿ ಬೆಳಗುವುದು ಕ್ಷಮಾಗುಣವಿದ್ದವರಲ್ಲಿ ಶ್ರೀಹರಿಯು ಶೀಘ್ರದಲ್ಲಿ ಪ್ರಸನ್ನನಾಗುವನು ಮೂರ್ಧಾಭಿಷಿಕ್ತನಾದ ರಾಜನನ್ನು ಕೊಲ್ಲುವುದು ಬ್ರಹ್ಮಹತ್ಯೆಗಿಂತಲೂ ಕ್ರೂರವಾದ ಪಾತಕವೆನಿಸುವುದು ಈಗ ನೀನು ಅಂತಹ ಮಹಾಪಾಪಕ್ಕೆ ಗುರಿಯಾಗಿರುವೆ? ಆದುದರಿಂದ ಭಗವದ್ಧ್ಯಾನಪರನಾಗಿ ತೀರ್ಥಯಾತ್ರೆಯನ್ನು ಮಾಡಿಬಾ! ಅದರಿಂದ ಈ ಪಾಪವು ನೀಗುವುದು." ಎಂದನು. ಇದು ಹದಿನೈದನೆಯ ಅಧ್ಯಾಯವು,

---

ಪರಶುರಾಮನು ತಂದೆಯಾಜ್ಞೆಯಿಂದ ತಾಯಿಯನ್ನೂ, ಸಹೋದರರನ್ನೂ ಕೊಂದು ತಿರುಗಿ ಅವರನ್ನು ಬದುಕಿಸಿದುದು, ಕ್ಷತ್ರಿಯವಂಶವನ್ನು ನಾಶಮಾಡಿದುದು.

'ರಾಜೇಂದ್ರಾ! ಕೇಳು! ಪರಶುರಾಮನು ಜಮದಗ್ನಿಯ ಮಾತನ್ನು ಶಿರಸಾವಹಿಸಿ, ಒಂದುಸಂವತ್ಸರದವರೆಗೆ ಪುಣ್ಯತೀರ್ಥಯಾತ್ರೆಯನ್ನುಮಾಡಿ ಹಿಂತಿರುಗಿಬಂದು ಸೇರಿದನು ಆಮೇಲೆ ಒಂದಾನೊಂದುದಿನದಲ್ಲಿ ರಾಮನ ತಾಯಿಯಾದ ರೇಣುಕೆಯು, ಜಲಾಹರಣಾರ್ಥವಾಗಿ ಗಂಗೆಗೆ ಹೋದಾಗ, ಅಲ್ಲಿ ಚಿತ್ರರಥನೆಂಬ ಗಂಧರ್ವರಾಜನು, ಅಪ್ಸರಸ್ತ್ರೀಯರೊಡನೆ ಜಲಕ್ರೀಡೆಯನ್ನಾಡುತಿದ್ದನು. ಅಂದವಾದ ಪದ್ಮಮಾಲಿಕೆಯನ್ನು ಕಂಠದಲ್ಲಿ ಧರಿಸಿ,

ಸುಂದರಾಕಾರದಿಂದ ಶೋಭಿಸುತಿದ್ದ ಆ ಗಂಧರ್ವನನ್ನು ನೋಡಿದೊಡನೆ,
ರೇಣುಕೆಯು ಅವನ ಸುಂದರಾಕೃತಿಗೆ ಮರುಳಾಗಿ,ಆಶ್ರಮದಲ್ಲಿ ನಡೆಯಬೇ
ಕಾದ ಹೋಮಕಾಲವನ್ನೂ ಮರೆತು,ಅವನನ್ನೇ ನೋಡುತ್ತ ನಿಂತುಬಿಟ್ಟಳು
ಸ್ವಲ್ಪಹೊತ್ತಿನಮೇಲೆ ಅವಳಿಗೆ ಗೃಹಕೃತ್ಯದ ಸ್ಮರಣವುಂಟಾಯಿತು ಈ
ಕಾಲಾತಿಕ್ರಮಕ್ಕಾಗಿ ಪತಿಯಾದ ಜಮದಗ್ನಿಯು ಎಷ್ಟು ಕೋಪಗೊಂಡಿ
ರುವನೋ ಎಂದು ಭಯಪಟ್ಟು, ಅತಿವೇಗದಿಂದ ಹೊರಟು, ಜಲಪಾ
ತ್ರವನ್ನು ಜಮದಗ್ನಿಯ ಮುಂದಿಟ್ಟು, ಶಾಪಭಯದಿಂದ ಗಡಗಡನೆ ನ
ಡುಗುತ್ತ ಬದ್ಧಾಂಜಲಿಯಾಗಿ ಅವನ ಮುಂದೆ ನಿಂತಿದ್ದಳು ಆಗ ಜಮದ
ಗ್ನಿಯು, ಗಂಧರ್ವನವಿಷಯದಲ್ಲಿ ಆಕೆಗುಂಟಾದ ಮನಶ್ಚಾಂಚಲ್ಯವನ್ನು ತನ್ನ
ಧ್ಯಾನದೃಷ್ಟಿಯಿಂದ ತಿಳಿದುಕೊಂಡು, ಅತಿಕೋಪಾವಿಷ್ಟವಾಗಿ, ಆಶ್ರಮ
ದಲ್ಲಿದ್ದ ತನ್ನ ಮಕ್ಕಳನ್ನು ಕರೆದು ‘‘ಎಲೈ ಮಕ್ಕಳಿರಾ! ಪಾಪಬುದ್ಧಿಯು
ಳ್ಳ ಈಕೆಯನ್ನು ಈಗಲೇ ಕೊಲ್ಲಿರಿ !” ಎಂದನು ಆದರೆ ತಾಯಿಯನ್ನು
ಕೊಲ್ಲುವ ವಿಷಯದಲ್ಲಿ ಯಾರೂ ಇಷ್ಟಪಡದೆ, ತಂದೆಯ ಮಾತನ್ನು ನಿರಾ
ಕರಿಸಿದರು. ಆಗ ಜಮದಗ್ನಿಗೆ ಮತ್ತಷ್ಟು ಕೋಪವು ಹೆಚ್ಚಿತು ಸಮೀಪ
ದಲ್ಲಿದ್ದ ಪರಶುರಾಮನನ್ನು ಪ್ರತ್ಯೇಕವಾಗಿ ಕರೆದು. ‘‘ವತ್ಸಾ! ಚಪಲಬುದ್ಧಿ
ಯುಳ್ಳ ಈ ನಿನ್ನ ತಾಯಿಯನ್ನೂ, ಅವಿಧೇಯರಾದ ಈ ನಿನ್ನ ಸಹೋದರ
ನ್ನೂ, ಈಕ್ಷಣವೇ ನೀನು ನಿನ್ನ ಕೈಯಿಂದ ಕೊಲ್ಲಬೇಕು” ಎಂದನು. ಪರ
ಶುರಾಮನು ಇದನ್ನು ಮಹಾಪಾಪಕಾರ್ಯವೆಂದು ತಿಳಿದಿದ್ದರೂ, ತನ್ನ ತಂ
ದೆಯ ಪ್ರಭಾವವನ್ನೂ, ಅವನ ಯೋಗಬಲವನ್ನೂ ಚೆನ್ನಾಗಿ ಬಲ್ಲವನಾದು
ದರಿಂದ, ಪಿತ್ರಾಜ್ಞೆಯನ್ನು ನಿರಾಕರಿಸಲಾರದೆ, ಧೈರ್ಯದಿಂದ ಮುಂದೆಬಿ
ದ್ದು,ತನ್ನ ತಾಯಿಯನ್ನೂ, ಸಹೋದರರನ್ನೂ ಒಂದೇ ಪ್ರಹಾರದಿಂದ ಸಂ
ಹರಿಸಿಬಿಟ್ಟನು. ಆಗ ಜಮದಗ್ನಿಯು ಪರಶುರಾಮನ ವಿಧೇಯತೆಗೆ ಸಂತೋ
ಷಪಟ್ಟು ‘‘ಕುಮಾರಾ! ನಿನಗೆ ಬೇಕಾದ ವರವನ್ನು ಕೇಳು! ಕೊಡುವೆನು”
ಎಂದನು. ಅದಕ್ಕಾ ರಾಮನು ‘‘ಜನಕಾ! ತಿರುಗಿ ಈ ನನ್ನ ತಾಯಿಯನ್ನೂ,
ಸಹೋದರರನ್ನೂ ಬದುಕಿಸಬೇಕು! ಮತ್ತು ಇವರಿಗೆ ನಾನು ಮಾಡಿದ
ಈಅಪರಾಧವು ಸಂಪೂರ್ಣವಾಗಿ ಮರೆತುಹೋಗಬೇಕು. ಇದೇ ಈಗ ನಾನು

ನಿನ್ನಲ್ಲಿ ಪ್ರಾರ್ಥಿಸತಕ್ಕ ವರವು” ಎಂದನು ಜಮದಗ್ನಿಯು ಹಾಗೆಯೇ ಆಗ ಲೆಂದು ಅವರಿಗೆ ಪುನರ್ಜೀವವನ್ನು ಕರುಣಿಸಲು, ಎಲ್ಲರೂ ನಿದ್ರೆತಿಳಿದ ವರಂತೆ ಮೇಲೆದ್ದುನಿಂತರು ಆದರೆ ಪರಶುರಾಮನು, ತನ್ನ ಹೆತ್ತ ತಾಯಿಯನ್ನೂ, ಒಡಹುಟ್ಟಿದವರನ್ನೂ ಕೊಂದುದು ಕೇವಲಪಾಪಕೃ ತ್ಯವಲ್ಲವೆ?” ಎಂದು ನೀನು ಶಂಕಿಸಬಹುದು ರಾಜೇಂದ್ರಾ! ಹಾಗಲ್ಲ! ಆ ಪರಶುರಾಮನು, ತನ್ನ ತಂದೆಯ ತಪೋಮಹಿಮೆಯನ್ನು ಚೆನ್ನಾಗಿ ತಿಳಿದಿದ್ದು ದರಿಂದ, ತಿರುಗಿ ಅವನ ಅನುಗ್ರಹದಿಂದಲೇ ಅವರನ್ನು ಬದುಕಿಸಬಹು ದೆಂಬ ನಂಬಿಕೆಯಿಂದ ಆ ಕಾರ್ಯವನ್ನು ನಡೆಸಿದನು. ಇದರಿಂದ ಅವನು ಪಿತೃವಾಕ್ಯಪರಿಪಾಲನವನ್ನೂ ಮಾಡಿದಂತಾಯಿತು. ತಾನೇ ತಿರುಗಿ ಅವ ರನ್ನು ಬದುಕಿಸಿದಂತೆಯೂ ಆಯಿತು. ಹಾಗಿಲ್ಲದಪಕ್ಷದಲ್ಲಿ ಭಗವದಂಶಸಂ ಭೂತನಾದ ಆ ರಾಮನು,ಮಾತೃವಧಕ್ಕೆ ಎಂದಿಗೂ ಪ್ರಯತ್ನಿಸುತ್ತಿರಲಿಲ್ಲ. ಅದು ಹಾಗಿರಲಿ! ಹಿಂದೆ ಪರಶುರಾಮನು ಕಾರ್ತವೀರ್ಯನನ್ನು ಕೊಂದ ಮೇಲೆ ಅವನ ಮಕ್ಕಳೆಲ್ಲರೂ ಭಯಪಟ್ಟು ದೇಶಭ್ರಷ್ಟರಾಗಿ ಓಡಿಹೋದರ ಷ್ಟೆ? ಅವರು ತಮ್ಮ ದುರ್ದಶೆಯನ್ನೂ, ತಂದೆಯ ಮರಣವನ್ನೂ ಸ್ಮರಿಸಿ ಕೊಂಡು, ಅನವರತವೂ ದುಃಖಿಸುತ್ತ, ಎಲ್ಲೆಲ್ಲಿ ಹೋದರೂ ನೆಮ್ಮದಿಯಿಲ್ಲ ದೆ ಸಂಕಟಪಡುತಿದ್ದರು. ಕೊನೆಗೆ ಅವರೆಲ್ಲರೂ ತಮ್ಮ ತಂದೆಯನ್ನು ಕೊಂ ದ ಪರಶುರಾಮನಮೇಲೆ ಹೇಗಾದರೂ ಹಗೆತೀರಿಸಿಕೊಳ್ಳಬೇಕೆಂದು ಏ ಕಾಭಿಪ್ರಾಯದಿಂದ ನಿಶ್ಚಯಿಸಿ, ಸಮಯವನ್ನು ಹುಡುಕುತ್ತಿದ್ದರು. ಒಮ್ಮೆ ಆ ಹೈಹಯರೆಲ್ಲರೂ ಪರಶುರಾಮನು ತನ್ನ ಸಹೋದರರೊಡನೆ ಸ್ಥ ಳಾಂತರಕ್ಕೆ ಹೋಗಿದ್ದಸಮಯವನ್ನು ನೋಡಿ, ಜಮದಗ್ನಿಯ ಆಶ್ರಮಕ್ಕೆ ಪ್ರವೇಶಿಸಿ, ಅಲ್ಲಿನ ಯಾಗಶಾಲೆಯಲ್ಲಿ ಭಗವದ್ಧ್ಯಾನಪರನಾಗಿ ಮೈಮರೆತು ಕುಳಿತಿದ್ದ ಜಮದಗ್ನಿಯನ್ನು ಕೊಂದುಬಿಡಬೇಕೆಂದು ನಿರ್ಧರಿಸಿದರು, ಹೀಗೆ ಪಾಪಕಾರ್ಯಕ್ಕಾಗಿ ನಿಶ್ಚಯಿಸಿ ಮೇಲೆ ಬಿದ್ದುಬರುತ್ತಿರುವ ಆ ರಾಜಪುತ್ರರ ನ್ನು ನೋಡಿ ರೇಣುಕೆಯು, “ಬೇಡಬೇಡ” ವೆಂದು ದೈನ್ಯದಿಂದ ನಿ ವಾರಿಸುತಿದ್ದರೂ ಮುನಿಪತ್ನಿಯ ವಿಲಾಪವನ್ನೂ ಲಕ್ಷ್ಯಮಾಡದೆ, ಅವರು ಕೇವಲಕಠಿನಮನಸ್ಕರಾಗಿ ತಪೋನಿರತನಾದ ಜಮದಗ್ನಿಯ ತಲೆಯನ್ನು

ಕಡಿದು, ಆ ಶಿರಸ್ಸನ್ನು ತಮ್ಮೊಡನೆ ತೆಗೆದುಕೊಂಡು ಹೋದರು. ರೇಣು ಕೆಯು ಪತಿಗುಂಟಾದ ಈ ಘೋರಮರಣವನ್ನು ನೋಡಿ ಸಹಿಸಲಾರದೆ, ಸಂಕಟದಿಂದ ಎದೆಯನ್ನು ಬಡಿದುಕೊಳ್ಳುತ್ತ 'ರಾಮಾ ! ರಾಮಾ ! ಎಲ್ಲಿ ಹೋದೆ! ಬೇಗ ಬಾ! ನಿನ್ನ ತಂದೆಯ ಸ್ಥಿತಿಯನ್ನು ನೋಡು!" ಎಂದು ಉಚ್ಚಸ್ವರದಿಂದ ಕೂಗಿಕೊಂಡಳು ಈ ಆರ್ತಸ್ವರವು ಆಶ್ರಮಸ ಮೀಪದ ಒಂದಾನೊಂದು ವನದಲ್ಲಿ ಸಂಚರಿಸುತಿದ್ದ ಪರಶುರಾಮನಿಗೂ, ಅವನಸೋದರರಿಗೂ ಕೇಳಿಸಿತು ಒಡನೆಯೇ ಅವರೆಲ್ಲರೂ ಆಶ್ರಮಕ್ಕೆಬಂ ದು, ತಮ್ಮ ತಂದೆಯ ಮರಣವನ್ನು ನೋಡಿ, ದುಃಖದಿಂದ ಮೈಮರೆತು, ಸಂಕಟವನ್ನು ತಡೆಯಲಾರದೆ "ಹಾ ಜನಕಾ ! ಹಾ ಸುಜನೋತ್ತಮಾ ! ಹಾ ಧರ್ಮವತ್ಸಲಾ! ನಮ್ಮನ್ನು ಅನಾಥರನ್ನಾಗಿ ಮಾಡಿ ಹೋದೆಯಾ ?" ಎಂದು ಗೋಳಿಡುತಿದ್ದರು ಆಗ ಪರಶುರಾಮನು ದುಃಖವನ್ನು ಬಿಟ್ಟು ಧೈರ್ಯವನ್ನು ತಂದುಕೊಂಡು, ತನ್ನ ತಂದೆಯ ತಲೆಯಿಲ್ಲದ ಮುಂಡವನ್ನು ಹಾಗೆಯೇ ರಕ್ಷಿಸಿಡುವಂತೆ ತನ್ನ ಸೋದರರಿಗೆ ನಿಯಮಿಸಿ, ಕ್ಷತ್ರಿಯ ಬೀಜವೇ ಭೂಮಿಯಲ್ಲಿಲ್ಲದಂತೆ ನಾಶಮಾಡುವುದಾಗಿ ಪ್ರತಿಜ್ಞೆಮಾಡಿ ತನ್ನ ಗಂಡುಗೊಡಲಿಯನ್ನು ಕೈಗೆತ್ತಿಕೊಂಡು,ಆಶ್ರಮದಿಂದ ಹೊರಟುಬಿಟ್ಟನು. ಬ್ರಾಹ್ಮಣಘಾತುಕರಿಗೆ ನೆಲೆಯಾದುದರಿಂದ ಮೊದಲೇ ಕಾಂತಿಹೀನ ವಾಗಿದ್ದ ಮಾಹಿಷ್ಮತೀಪುರಕ್ಕೆ ಹೋಗಿ, ಅಲ್ಲಿನ ಹೈಹಯರೆಲ್ಲರನ್ನೂ ಛಿನ್ನ ಭಿನ್ನವಾಗಿ ಕತ್ತರಿಸಿ, ಅವರ ತಲೆಗಳನ್ನು ಬೆಟ್ಟದಂತೆ ರಾಶಿಹಾಕಿದನು. ಆ ವರರಕ್ತದಿಂದ ಒಂದು ಮಹಾನದಿಯನ್ನುಂಟುಮಾಡಿದನು ಅಷ್ಟರಲ್ಲಿಯೂ ತೃಪ್ತಿಯಿಲ್ಲದೆ, ಅತಿತಹ ಪಾಪಬುದ್ಧಿಯುಳ್ಳ ಕ್ಷತ್ರಿಯವಂಶವನ್ನೇ ನಿರ್ಮೂ ಲಮಾಡಬೇಕೆಂದು ನಿಶ್ಚಯಿಸಿ, ಇಪ್ಪತ್ತೊಂದಾವರ್ತಿ ಭೂಪ್ರದಕ್ಷಿಣೆಯ ನ್ನುಮಾಡಿ, ಅನೇಕಕ್ಷತ್ರಿಯಕುಲವನ್ನು ನಾಶಮಾಡಿದನು. ಆ ಕ್ಷತ್ರಿಯ ರ ರಕ್ತದಿಂದ, ಈಗ ಸ್ಯಮಂತಪಂಚಕವೆಂದು ಕರೆಯಲ್ಪಡುವ ಪ್ರದೇಶ ದಲ್ಲಿ ಐದುಮಡುಗಳನ್ನು ತುಂಬಿ, ಆ ರಕ್ತಜಲದಿಂದಲೇ ತನ್ನ ತಂದೆಗೆ ತರ್ಪಣವನ್ನು ಬಿಟ್ಟು,ತನ್ನ ಕೋಪವನ್ನಡಗಿಸಿಕೊಂಡನು (ಆ ಮಡುಗಳ ಸ ಮೀಪದಲ್ಲಿರುವುದರಿಂದಲೇ ಆಪ್ರದೇಶಕ್ಕೆ ಸ್ಯಮಂತಪಂಚಕವೆಂದು ಹೆಸರು)

ಆಮೇಲೆ ರಾಮನು ಮಾಹಿಷ್ಮತಿಯಲ್ಲಿದ್ದ ತನ್ನ ತಂದೆಯ ಶಿರಸ್ಸನ್ನು ತಂದು, ಅದನ್ನು ಆಶ್ರಮದಲ್ಲಿದ್ದ ದೇಹಭಾಗದೊಡನೆ ಸೇರಿಸಿ, ಅಪರಸಂಸ್ಕಾರಗಳನ್ನು ನಡೆಸಿದನು. ಆಮೇಲೆ ತಾನು ಸರ್ವದೇವತಾತ್ಮಕನಾದ ಶ್ರೀಹರಿಯನ್ನು ಅನೇಕಯಾಗಗಳಿಂದ ಆರಾಧಿಸುತ್ತ, ಆ ಯಾಗಾಂತದಲ್ಲಿ ಹೋತೃವಿಗೆ ಪೂರ್ವದಿಕ್ಕನ್ನೂ, ಬ್ರಹ್ಮನಿಗೆ ದಕ್ಷಿಣದಿಕ್ಕನ್ನೂ, ಅಧ್ವರ್ಯುವಿಗೆ ಪಶ್ಚಿಮದಿಕ್ಕನ್ನೂ, ಉದ್ಗಾತೃವಿಗೆ ಉತ್ತರದಿಕ್ಕನ್ನೂ ಯಾಗದಕ್ಷಿಣೆಯಾಗಿ ಧಾರೆಯರೆದು ಕೊಟ್ಟನು ಆಗ್ನೇಯಾದಿದಿಕ್ಕುಗಳನ್ನು ಇತರಬ್ರಾಹ್ಮಣರಿಗೆ ದಾನಮಾಡಿದನು ಇವುಗಳನಡುವೆ ಉಳಿದಿದ್ದ ಪ್ರದೇಶದಲ್ಲಿ, ವಿಂಧ್ಯಹಿಮಾಲಯಗಳ ಮಧ್ಯಭಾಗವಾದ ಆರ್ಯಾವರ್ತವನ್ನು ಉಪದ್ರಷ್ಟೃವಿಗೂ, ಅದರ ಪರ್ಯಂತಪ್ರದೇಶಗಳನ್ನು ಸದಸ್ಯರಿಗೂ ಕೊಟ್ಟು, ಉಳಿದ ಭಾಗವನ್ನೆಲ್ಲಾ ಕಶ್ಯಪನಿಗೆ ದಾನಮಾಡಿದನು ಆಮೇಲೆ ಸರಸ್ವತೀನದಿಯಲ್ಲಿ ಅವಭೃತವನ್ನು ಮಾಡಿ, ಮೇಘದ ಮರೆಯಿಂದ ಹೊರಕ್ಕೆ ಬಂದ ಸೂರ್ಯನಂತೆ ಸಮಸ್ತಪಾಪಗಳಿಂದಲೂ ಮುಕ್ತನಾಗಿ, ನಿಜತೇಜಸ್ಸಿನಿಂದ ಬೆಳಗುತ್ತಿರುವನು. ಜಮದಗ್ನಿಯು ಪ್ರಾಕೃತದೇಹವನ್ನು ಬಿಟ್ಟಮೇಲೆ ಜ್ಞಾನಾತ್ಮಕವಾದ ಬೇರೆ ದೇಹವನ್ನು ಹೊಂದಿ, ಈಗ ಸಪ್ತರ್ಷಿಮಂಡಲದಲ್ಲಿ ಏಳನೆಯವನಾಗಿ ಪ್ರಕಾಶಿಸುತ್ತಿರುವನು ಆತನ ಪುತ್ರನಾದ ಪರಶುರಾಮನೂ ಹಾಗೆಯೇ ಮುಂದಿನ ಮನ್ವಂತರದಲ್ಲಿ, ಸಪ್ತರ್ಷಿಗಳಲ್ಲಿ ಒಬ್ಬನಾಗಿ ವೇದಗಳನ್ನು ಪ್ರಚಾರಗೊಳಿಸಬೇಕಾದುದರಿಂದ, ಈಗ ಕೇವಲಶಾಂತಮೂರ್ತಿಯಾಗಿ, ಸಿದ್ಧಾದಿಗಳಿಂದ ಸ್ತುತಿಸಲ್ಪಡುತ್ತ, ಮಹೇಂದ್ರಪರ್ವತದ ತಪ್ಪಲಲ್ಲಿರುವನು. ಓ ಪರೀಕ್ಷಿದ್ರಾಜಾ ! ವಿಶ್ವಾತ್ಮಕನಾದ ಶ್ರೀಹರಿಯು ಹೀಗೆ ಪರಶುರಾಮಾವತಾರದಿಂದ ಭೃಗುವಂಶದಲ್ಲಿ ಹುಟ್ಟಿ, ದುಷ್ಟಕ್ಷತ್ರಿಯರನ್ನು ಕೊಂದು ಭೂಭಾರವನ್ನು ಪರಿಹರಿಸಿದನು. ರಾಜೇಂದ್ರಾ ! ಇದಿಷ್ಟೂ ಸತ್ಯವತೀದೇವಿಯ ಗರ್ಭದಲ್ಲಿ ಜನಿಸಿದ ಜಮದಗ್ನಿಯ ವೃತ್ತಾಂತವು ಅತ್ತಲಾಗಿ ಸತ್ಯವತಿಯ ತಾಯಿಯು ತನ್ನ ಮಗಳನ್ನು ನಿರ್ಬಂಧಿಸಿ, ಅವಳಿಗಾಗಿ ಕಲ್ಪಿತವಾಗಿದ್ದ ಬ್ರಹ್ಮಮಂತ್ರಪೂತವಾದ ಹವಿಸ್ಸನ್ನು ಭಕ್ಷಿಸಿದಳಷ್ಟೆ?ಅದರಿಂದ ಅವಳು ಮಹಾತೇಜಸ್ವಿಯಾದ ಒಬ್ಬಪುತ್ರನನ್ನು ಪಡೆದ

ಳು. ಈತನೇ ಲೋಕಪ್ರಸಿದ್ಧನಾದ ವಿಶ್ವಾಮಿತ್ರನು ಈತನು ಅಗ್ನಿಯಂ ತೆ ತೇಜಸ್ವಿಯಾಗಿದ್ದು, ಘೋರತಪಸ್ಸನ್ನು ಮಾಡಿ, ತನಗೆ ಜನ್ಮಪ್ರಾಪ್ತ ವಾದ ಕ್ಷತ್ರಜಾತಿಯನ್ನು ಬಿಟ್ಟು ಬ್ರಹ್ಮರ್ಷಿತ್ವವನ್ನು ಸಂಪಾದಿಸಿದನು. ಇವನು ಮೊದಲು ಕ್ಷತ್ರಿಯಜಾತಿಯಲ್ಲಿ ಹುಟ್ಟಿ, ಆಮೇಲೆ ಬ್ರಾಹ್ಮಣ ನಾಗುವುದಕ್ಕೆ, ಇವನ ತಾಯಿಯು ಬ್ರಹ್ಮಮಂತ್ರಪೂತವಾದ ಹವಿಸ್ಸನ್ನು ಭಕ್ಷಿಸಿದುದೇ ಮುಖ್ಯಕಾರಣವೆಂದು ತಿಳಿ ! ಹಾಗಿಲ್ಲದೆ ಬ್ರಾಹ್ಮಣ್ಯವು ಲಭಿಸ ಲಾರದು. ಈ ವಿಶ್ವಾಮಿತ್ರನಿಗೆ ನೂರುಮಂದಿಮಕ್ಕಳು ಅವರಲ್ಲಿ ಮ ಧ್ಯಮಪುತ್ರನಿಗೆ ಮಧುಚ್ಛಂದನೆಂದು ಹೆಸರು. ಇವನ ಸಂಬಂಧದಿಂದ, ಉಳಿದ ಸಹೋದರರೆಲ್ಲರೂ ಆ ಹೆಸರಿನಿಂದಲೇ ಕರೆಯಲ್ಪಡುತಿದ್ದರು ಈ ಕಾಲದಲ್ಲಿ ಭೃಗುವಂಶೋತ್ಪನ್ನನಾದ ಅಜೀಗರ್ತನೆಂಬ ಬ್ರಾಹ್ಮಣನಿಗೆ ಶುನಶ್ಶೇಫನೆಂಬ ಕುಮಾರನಿದ್ದನು ಈ ಕುಮಾರನು ಹರಿಶ್ಚಂದ್ರನ ಯಾಗಕ್ಕಾಗಿ ತನ್ನ ತಂದೆಯಿಂದ ನರಬಲಿಗಾಗಿ ವಿಕ್ರಯಿಸಲ್ಪಟ್ಟನು. ಹರಿಶ್ಚಂದ್ರನ ಮಗನಾದ ರೋಹಿತನು, ಇವನನ್ನು ಯಾಗಸ್ಥಾನಕ್ಕೆ ಕರೆದು ಕೊಂಡು ಹೋಗುತ್ತಿರುವ ದಾರಿಯಲ್ಲಿ ವಿಶ್ವಾಮಿತ್ರನು ತಪಸ್ಸುಮಾ ಡುತಿದ್ದನು. ಆಗ ಶುನಶ್ಶೇಫನು! ವಿಶ್ವಾಮಿತ್ರನ ಕಾಲಮೇಲೆ ಬಿದ್ದು ತನ್ನ ನ್ನು ರಕ್ಷಿಸಬೇಕೆಂದು ಬೇಡಲು, ವಿಶ್ವಾಮಿತ್ರನು ಅವನಲ್ಲಿ ಕರುಣಿಸಿ, ಅಭ ಯವನ್ನು ಕೊಟ್ಟು ಪುತ್ರಭಾವದಿಂದ ಸ್ವೀಕರಿಸಿದನು ಈ ಸ್ವೀಕೃತಪುತ್ರ ನನ್ನೇ ತನ್ನ ಮಕ್ಕಳಲ್ಲಿ ಜ್ಯೇಷ್ಠನನ್ನಾಗಿ ಮಾಡಬೇಕೆಂದೆಣಿಸಿ, ತನ್ನ ನೂರು ಮಂದಿಮಕ್ಕಳನ್ನೂ ಕರೆದು,''ಈ ಶುನಶ್ಶೇಫನನ್ನು ನಿಮ್ಮೆಲ್ಲರಿಗೂ ಹಿರಿಯವನ ನ್ನಾಗಿ ಭಾವಿಸಬೇ"ಕೆಂದುಹೇಳಿದನು ಅವರಲ್ಲಿ ಮಧುಚ್ಛಂದನಿಗಿಂತಲೂ ಹಿರಿ ಯರಾದ ಐವತ್ತುಮಂದಿಮಕ್ಕಳೂ, ಆ ಮಾತಿಗೆ ಸಮ್ಮತಿಸದೆ ನಿರಾಕರಿಸಿ ರು. ವಿಶ್ವಾಮಿತ್ರನು ಕುಪಿತನಾಗಿ, ಆ ಐವತ್ತುಮಂದಿಮಕ್ಕಳನ್ನೂ ಮ್ಲೇ ಚ್ಛರಾಗುವಂತೆ ಶಪಿಸಿದನು. ಉಳಿದ ಕನಿಷ್ಠಪುತ್ರರೆಲ್ಲರೂ ಶಾಪಭಯದಿಂದ, ಆ ಶುನಶ್ಶೇಫನನ್ನೇ ತಮಗೆ ಜ್ಯೇಷ್ಠನೆಂದು ಒಪ್ಪಿಕೊಂಡರು. ಹರಿಶ್ಚಂದ್ರ ನ ಯಾಗದಲ್ಲಿ ಈ ಶುನಶ್ಶೇಫನನ್ನು ನರಪಶುವನ್ನಾಗಿ ಯೂಪಸ್ತಂಭಕ್ಕೆ ಕಟ್ಟಿದಾಗ, ಅವನು ವಿಶ್ವಾಮಿತ್ರನಿಂದ ತನಗುಪದೇಶಿಸಲ್ಪಟ್ಟ ಎರಡು ಮಂ

ತ್ರಗಳನ್ನು ಪುನಶ್ಚರಣೆಮಾಡುತಿದ್ದನು. ಆಗ ಯಜ್ಞದೇವತೆಗಳೆಲ್ಲರೂ ಪ್ರತ್ಯ ಕ್ಷವಾಗಿ ಬಂದು, ಆ ಮಂತ್ರದಿಂದಲೇ ತಾವು ತೃಪ್ತರಾದುದಾಗಿ ಹೇಳಿ, ಆ ಮುನಿಕುಮಾರನನ್ನು ಕೊಲೆಯಿಂದ ತಪ್ಪಿಸಿದರು. ಹೀಗೆ ಈ ಶುನಶ್ಶೇಫ ನಿಗೆ ದೇವತೆಗಳು ಪ್ರಾಣದಾನವನ್ನು ಮಾಡಿದುದರಿಂದ, ಅವನಿಗೆ ದೇವರಾ ತನೆಂದೂ ನಾಮಾಂತರವಾಯಿತು. ಈ ದೇವರಾತನು ಯಾಗದಿಂದ ಬ ದುಕಿಬಂದಮೇಲೆ, ವಿಶ್ವಾಮಿತ್ರನ ಮಕ್ಕಳಾದ ಮಧುಚ್ಛಂದಾದಿಗಳೆಲ್ಲರೂ ಅವನನ್ನೇ ತಮಗೆ ಜ್ಯೇಷ್ಠನನ್ನಾಗಿಯೂ, ಮಂತ್ರದ್ರಷ್ಟನನ್ನಾಗಿಯೂ ಮಾಡಿಕೊಂಡರು. ವಿಶ್ವಾಮಿತ್ರನು ತನ್ನ ಮಾತನ್ನು ಮನ್ನಿಸಿದ ಮಧು ಚ್ಛಂದಾದಿಗಳಲ್ಲಿ ಸಂತೋಷಪಟ್ಟು,ಅವರನ್ನು ಕುರಿತು “ಎಲೈ ಕುಮಾರರೆ! ನೀವು ನನ್ನ ಮಾತನ್ನು ಮೀರದೆ ದೇವರಾತನನ್ನು ನಿಮಗೆ ಜ್ಯೇಷ್ಠನನ್ನಾಗಿ ಒಪ್ಪಿಕೊಂಡು, ನನ್ನನ್ನೂ ಪುತ್ರವಂತನನ್ನಾಗಿ ಮಾಡಿದಿರಿ! ನಾನು ಇದಕ್ಕಾ ಗಿ ಬಹಳ ಸಂತೋಷಪಟ್ಟೆನು. ನೀವೂ ಹೀಗೆಯೇ ಸುಪುತ್ರವಂತರಾಗಿ ವೃ ದ್ಧಿಹೊಂದಬೇಕು ಈ ದೇವರಾತನು ನಮ್ಮ ಕೌಶಿಕವಂಶದಲ್ಲಿಯೇ ಒಬ್ಬ ನಾಗಿ ಪ್ರಸಿದ್ಧಿಹೊಂದಲಿ ! ನೀವು ಇವನನ್ನನುವರ್ತಿಸಿರಿ” ಎಂದನು. ರಾ ಜಾ ! ವಿಶ್ವಾಮಿತ್ರನಿಗೆ ಇವರುಮಾತ್ರವಲ್ಲದೆ, ಅಷ್ಟಕ, ಹಾರೀತ, ಜಯಂ ತ, ಸುಮದ, ಮೊದಲಾದ ಇನ್ನೂ ಅನೇಕಪುತ್ರರು ಹುಟ್ಟಿದರು. ಹೀಗೆ ವಿ ಶ್ವಾಮಿತ್ರನ ಮಕ್ಕಳಲ್ಲಿ, ಕೆಲವರು ಶಪಿಸಲ್ಪಟ್ಟುದರಿಂದಲೂ,ಕೆಲವರು ಅನು ಗ್ರಹಿಸಲ್ಪಟ್ಟುದರಿಂದಲೂ, ದೇವರಾತನು ಸ್ವೀಕೃತನಾದುದರಿಂದಲೂ, ಕೌಶಿಕಗೋತ್ರವು ಲೋಕದಲ್ಲಿ ನಾನಾಮುಖವಾಗಿ ಹರಡಿರುವುದು. ದೇವ ರಾತನು ಬೇರೆ ಕುಲದವನಾಗಿದ್ದರೂ,ಕೌಶಿಕರಲ್ಲಿ ಜ್ಯೇಷ್ಠನೆನಿಸಿಕೊಂಡು,ಈ ಪ್ರವರದಲ್ಲಿ ಸೇರಿದುದರಿಂದ, ಅವನ ಪ್ರವರವೂ ಈಕಡೆಗೆ ಸೇರಿತು. ಇದು ಹದಿನಾರನೆಯ ಅಧ್ಯಾಯವು.

---

## ಆಯುವಿನ ಸಂತತಿಯು.

ರಾಜೇಂದ್ರಾ ! ಪುರೂರವನ ಮಕ್ಕಳಲ್ಲಿ ಐದುಮಂದಿ ಕನಿಷ್ಠಪುತ್ರರ ಸಂತಾನಕ್ರಮವನ್ನು ತಿಳಿಸಿದೆನಷ್ಟೆ ? ಇವರೆಲ್ಲರಿಗೂ ಜ್ಯೇಷ್ಠನಾದವನಿಗೆ

ಆಯುವೆಂದು ಹೆಸರು. ಈತನಿಗೆ, ನಹುಷ, ಕ್ಷತ್ರವೃದ್ಧ, ರಜಿ, ರಂಭ,ಅನೇ
ನಸರೆಂಬ ಐದುಮಂದಿ ಪುತ್ರರಾದರು ಅವರಲ್ಲಿ ಮೊದಲು ಕ್ಷತ್ರವೃದ್ಧನ
ಸಂತತಿಯನ್ನು ತಿಳಿಸುವೆನು ಕೇಳು! ಈತನಿಗೆ ಸುಹೋತ್ರನೆಂಬ ಮಗ
ನಾದನು. ಆ ಸುಹೋತ್ರನಿಗೆ ಕಾಶ್ಯನೆಂದೂ, ಕುಶನೆಂದೂ, ಕೃತ್ಸ್ನಮದ
ನೆಂಗೂ ಮೂವರು ಪುತ್ರರು ಜನಿಸಿದರು ಕೃತ್ಸ್ನಮದನಿಗೆ ಶುನಕನೆಂಬ
ಮಗನು ಹುಟ್ಟಿದನು. ಅವನಿಂದ ಶೌನಕನು ಹುಟ್ಟಿದನು ಈತನು ಬಹ್ವೃಚ
ರಲ್ಲಿ ಪ್ರಧಾನನೆನಿಸಿಕೊಂಡ ಮಹರ್ಷಿಯೆನಿಸಿದನು ಕಾಶ್ಯನಿಗೆ ಕಾಶಿಯೆಂ
ಬ ಮಗನಾದನು. ಅವನ ಮಗನು ರಾಷ್ಟ್ರನು ಅವನ ಮಗನು ದೀ
ರ್ಘತಪನು ದೀರ್ಘತಪನಿಂದ ಧನ್ವಂತರಿಯೆಂಬವನು ಜನಿಸಿ, ಆಯುರ್ವೇ
ದಪ್ರವರ್ತಕನಾದನು ಇವನನ್ನು ಭಗವದಂಶಸಂಭೂತನೆಂದು ಹೇಳುವ
ರು ಇವನಿಗೆ ಯಜ್ಞಗಳಲ್ಲಿ ಭಾಗವುಂಟು ಇವನು ತನ್ನ ಸ್ಮರಣಮಾತ್ರ
ದಿಂದಲೇ ಸಮಸ್ತರೋಗಗಳನ್ನೂ ನೀಗಿಸುವನು ಈ ಧನ್ವಂತರಿಗೆ ಕೇತು
ಮಂತನೆಂಬ ಪುತ್ರನಾದನು ಅವನ ಮಗನು ಭೀಮರಥನು ಅವನ ಮಗ
ನು ದಿವೋದಾಸನು ಅವನಿಂದ ದ್ಯುಮಂತನೆಂಬವನು ಹುಟ್ಟಿದನು ಇವನ
ನ್ನೇ ಪ್ರತರ್ದನನೆಂದೂ ಹೇಳುವರು ಇದಲ್ಲದೆ ಇವನಿಗೆ ಶತ್ರುಜಿತ್ತೆಂದೂ,
ವತ್ಸನೆಂದೂ, ಋತಧ್ವಜನೆಂದೂ ನಾಮಾಂತರಗಳುಂಟು ಇವನ ಮಗನು
ಕುವಲಯಾಶ್ವನು ಕುವಲಯಾಶ್ವನಿಂದ ಅಲರ್ಕನೇ ಮೊದಲಾದ ಕೆಲವು
ಪುತ್ರರು ಜನಿಸಿದರು ಈ ಅಲರ್ಕನು ಅರುವತ್ತಾರು ಸಾವಿರವರ್ಷಗಳವರೆ
ಗೆ ಯೌವನಶಾಲಿಯಾಗಿಯೇ ರಾಜಭೋಗಗಳನ್ನನುಭವಿಸುತ್ತಿದ್ದನು ಇವ
ನಂತೆ ಯೌವನವಂತನಾಗಿ ಅಷ್ಟುಕಾಲದವರೆಗೆ ರಾಜ್ಯವನ್ನನುಭವಿಸಿದವರು
ಬೇರೊಬ್ಬರಿಲ್ಲ. ಅಲರ್ಕನ ಮಗನು ಸನ್ನತಿ ಈ ಸನ್ನತಿಯಿಂದ ಸುಕೇತ
ನೂ, ಅವನಿಂದ ಸುಕೇತನನೂ, ಅವನಿಂದ ಧರ್ಮಕೇತುವೂ, ಅವನಿಂದ
ಸತ್ಯಕೇತುವೂ ಅವನಿಂದ ಧೃಷ್ಟಕೇತುವೂ, ಅವನಿಂದ ಸುಕುಮಾರನೂ
ಜನಿಸಿದರು. ಈ ಸುಕುಮಾರನ ಮಗನು ವೀತಿಹೋತ್ರನು. ಇವನ ಮಗನು
ಭರ್ಗನು. ಈತನ ಮಗನು ಭರ್ಗಭೂಮಿ. ಮೇಲೆ ಹೇಳಿದ ಈ ರಾಜರೆ
ಲ್ಲರೂ ಕ್ಷತ್ರವೃದ್ಧನ ಸಂತತಿಯವರು ಆಯುವಿನ ನಾಲ್ಕನೆಯ ಮಗನಾದ

ರಂಭನಿಗೆ ರಭಸನೆಂಬ ಮಗನಾದನು. ಇವನ ಮಗನು ಗಂಭೀರನು. ಇವನ ಮಗನು ಕ್ರತು. ಈ ಕ್ರತುವಿನಿಂದ ಬ್ರಾಹ್ಮಣಕುಲವು ಹುಟ್ಟಿತು. ಆಯುವಿನ ಕನಿಷ್ಠಪುತ್ರನಾದ ಅನೇನಸನಿಗೆ ಶುದ್ಧನೆಂಬ ಮಗನಾದನು. ಇವನ ಮಗನು ಶುಚಿ. ಇವನ ಮಗನಿಗೆ ತ್ರಿಕಕುಭನೆಂದು ಹೆಸರು. ಇವನನ್ನು ಧರ್ಮಸಾರಥಿಯೆಂದೂ ಕರೆಯುವರು ಇವನ ಮಗನು ಶಾಂತರಯನು. ಈತನು ಕೇವಲ ಜ್ಞಾನನಿಷ್ಠನಾಗಿ, ಮುಕ್ತಿಯನ್ನು ಸಾಧಿಸಿ, ಅದರಿಂದಲೇ ತನ್ನನ್ನು ಕೃತಕೃತ್ಯನನ್ನಾಗಿ ಭಾವಿಸಿದನೇಹೊರತು ಸಂತಾನವನ್ನಪೇಕ್ಷಿಸಲಿಲ್ಲ ಆಯುವಿನ ಮೂರನೆಯ ಮಗನಾದ ರಜಿಗೆ, ಮಹಾತೇಜಸ್ವಿಗಳಾದ ಐನೂರುಮಂದಿ ಮಕ್ಕಳಾದರು. ಈ ರಜಿಯೆಂಬವನು ದೇವತೆಗಳ ಪ್ರಾರ್ಥನೆಯಿಂದ ಅವರ ಸಹಾಯಾರ್ಥವಾಗಿ ಹೊರಟು, ತನ್ನ ಪರಾಕ್ರಮದಿಂದ ದೈತ್ಯರನ್ನು ನಿಗ್ರಹಿಸಿ, ಸ್ವರ್ಗಸಾಮ್ರಾಜ್ಯವನ್ನು ಇಂದ್ರನಿಗೆ ಹಿಂತಿರುಗಿಸಿದನು ಹಾಗಿದ್ದರೂ ಇಂದ್ರನು ದೈತ್ಯರಾಜನಾದ ಪ್ರಹ್ಲಾದನ ಮಹಿಮೆಗೆ ಭಯಪಟ್ಟು, ಸ್ವರ್ಗಾಧಿಪತ್ಯವನ್ನು ತಾನು ವಹಿಸಲಾರದೆ, ಆ ರಾಜ್ಯವನ್ನೂ ತನ್ನನ್ನೂ ರಕ್ಷಿಸತಕ್ಕ ಭಾರವೆಲ್ಲವನ್ನೂ ಆ ರಜಿಯಮೇಲೆಯೇ ಇರಿಸಿದ್ದನು ರಜಿಯು ಕಾಲಾಧೀನನಾದಮೇಲೆಯೂ ಅವನ ಮಕ್ಕಳೇ ಸ್ವರ್ಗರಾಜ್ಯವನ್ನನುಭವಿಸುತ್ತ, ಯಜ್ಞಭಾಗಗಳನ್ನೂ ತಾವೇ ಸ್ವೀಕರಿಸುತಿದ್ದರು. ಇಂದ್ರನು ಅನೇಕಾವರ್ತಿ ಬಂದು ಯಾಚಿಸಿದರೂ, ಅವರು ರಾಜ್ಯವನ್ನು ಕೊಡದೆ ಹೋಗಲು, ಆಗ ದೇವೇಂದ್ರನು ಬೃಹಸ್ಪತಿಯೊಡನೆ ಆಲೋಚಿಸಿ, ಅವನ ಮೂಲಕವಾಗಿ ಅಭಿಚಾರಹೋಮವನ್ನು (ಮಾಟವನ್ನು) ಮಾಡಿಸಿ, ಅದರಿಂದ ಮೊದಲು ರಜಿಯ ಮಕ್ಕಳಿಗೆ ಬುದ್ಧಿಭ್ರಮವಾಗುವಂತೆ ಮಾಡಿದನು ಇದರಿಂದ ರಾಜ್ಯಾಧಿಪತ್ಯವನ್ನು ನಡೆಸುವುದಕ್ಕೆ ತಕ್ಕ ಬುದ್ಧಿಯಿಲ್ಲದೆ, ಮಾರ್ಗಭ್ರಷ್ಟರಾಗಿ ನಡೆಯುತ್ತಿದ್ದ ಅವರನ್ನು ತನ್ನ ಪರಾಕ್ರಮದಿಂದ ನಿಶ್ಶೇಷವಾಗಿ ಕೊಂದುಬಿಟ್ಟನು.

ಓ ಪರೀಕ್ಷಿದ್ರಾಜಾ ! ಕ್ಷತ್ರವೃದ್ಧನ ಮುಮ್ಮಗನಾದ ಕುಶನಿಗೆ ಪ್ರೀತಿಯೆಂಬ ಮಗನಾದನು ಅವನಿಂದ ಸಂಜಯನೂ, ಸಂಜಯನಿಂದ ಜಯನೂ, ಜಯನಿಂದ ಕೃತನೂ, ಕೃತನಿಂದ ಹರ್ಯಶ್ವಕನೂ, ಅವನಿಂದ ಸಹ

ದೇವನೂ, ಸಹದೇವನಿಂದ ಭೀಮನೂ, ಭೀಮನಿಂದ ಜಯತ್ಸೇನನೂ, ಆತ ನಿಂದ ಸಂಕೃತಿಯೂ, ಅವನಿಂದ ಜಯನೂ ಜನಿಸಿದರು. ಈತನು ಕ್ಷತ್ರ ಧರ್ಮನಿರತನಾಗಿ ಮಹಾರಥನೆನಿಸಿಕೊಂಡಿದ್ದನು. ಈಗ ಹೇಳಿದ ಈ ರಾಜರೆಲ್ಲರೂ ಕ್ಷತ್ರವೃದ್ಧನ ಸಂತತಿಯವರೇ! ಇನ್ನು ನಹುಷನ ಸಂತತಿಯ ನ್ನು ತಿಳಿಸುವೆನು ಕೇಳು ಇದು ಹದಿನೇಳನೆಯ ಅಧ್ಯಾಯವು.

---

ನಹುಷವಂಶಾನುಕ್ರಮವು

ಮನುಷ್ಯನಿಗೆ ಮನಸ್ಸು ಮೊದಲಾದ ಆರಿಂದ್ರಿಯಗಳು ಹೇಗೋ ಹಾಗೆ, ನಹುಷನಿಗೆ, ಯತಿ, ಯಯಾತಿ, ಸಂಯಾತಿ, ಆಯಾತಿ, ವಿಯತಿ, ಕೃ ತಿಯೆಂಬ ಆರುಮಂದಿ ಪುತ್ರರಾದರು. ಇವರಲ್ಲಿ ಜ್ಯೇಷ್ಠಪುತ್ರನಾದ ಯತಿ ಯು ರಾಜ್ಯಾರ್ಹನಾಗಿದ್ದರೂ, ರಾಜ್ಯಾಧಿಕಾರದಲ್ಲಿರತಕ್ಕವನು ಆ ಅಧಿಕಾರಮದದಿಂದ ತನ್ನ ಸ್ವರೂಪವನ್ನೇ ತಾನು ಮರೆತುಬಿಡುವನೆಂದು, ಅದರಲ್ಲಿರುವ ಕೇಡನ್ನು ತಿಳಿದು, ತನ್ನ ತಂದೆಯು ತನಗೆ ರಾಜ್ಯವನ್ನು ಕೊ ಟ್ಟರೂ ಅದನ್ನೊಲ್ಲದೆ ವಿರಕ್ತನಾಗಿ ಹೊರಟುಹೋದನು ನಹುಷನು ಇಂ ದ್ರಪತ್ನಿಯಾದ ಶಚಿಯಲ್ಲಿ ಮೋಹಿತನಾಗಿ, ಬ್ರಾಹ್ಮಣಶಾಪದಿಂದ ಅಜ ಗರಸ್ವರೂಪವನ್ನುಹೊಂದಿ ರಾಜ್ಯಭ್ರಷ್ಟನಾದಮೇಲೆ, ಅವನ ಎರಡನೆ ಯ ಮಗನಾದ ಯಯಾತಿಯು ಪಟ್ಟಕ್ಕೆ ಬಂದು ರಾಜ್ಯವನ್ನಾಳುತಿದ್ದನು. ಇವನು, ತನ್ನ ನಾಲ್ಕುಮಂದಿ ತಮ್ಮಂದಿರಿಗೂ ನಾಲ್ಕುದಿಕ್ಕುಗಳ ಅಧಿಕಾರ ವನ್ನು ಹಂಚಿಕೊಟ್ಟು, ತಾನು ಅವರ ಮೇಲ್ವಿಚಾರಣೆಯನ್ನು ನೋಡುತ್ತ, ಧರ್ಮದಿಂದ ಭೂಮಿಯನ್ನು ಪಾಲಿಸುತಿದ್ದನು ಇವನು ಶುಕ್ರಾಚಾರ್ಯನ ಮಗಳಾದ ದೇವಯಾನಿಯನ್ನೂ, ವೃಷಪರ್ವನೆಂಬ ದಾನವನ ಮಗಳಾದ ಶರ್ಮಿಷ್ಠೆಯನ್ನೂ ಮದುವೆಯಾದನು" ಎಂದು ಶುಕಮುನಿಯು ಹೇಳುತ್ತಿ ರುವಾಗ, ನಡುವೆ ಪರೀಕ್ಷಿದ್ರಾಜನು. "ಓ ಮಹರ್ಷೀ! ಇದೇನಾಶ್ಚರ್ಯವು? ಶುಕ್ರಾಚಾರ್ಯನಾದರೋ ಬ್ರಹ್ಮರ್ಷಿಯೆನಿಸಿಕೊಂಡವನು .ಕ್ಷತ್ರಿಯಕುಲದ ವನಾದ ಯಯಾತಿಯು. ಆ ಬ್ರಾಹ್ಮಣನ ಮಗಳನ್ನು ವರಿಸಿದುದು ಹೇಗೆ? ಉತ್ತಮಜಾತಿಯ ಕನ್ಯೆಯನ್ನು ಹೀನಜಾತಿಯವನು ಮದುವೆಯಾಗುವುದು

ಶಾಸ್ತ್ರವಿರುದ್ಧವಲ್ಲವೆ ?" ಎಂದನು. ಅದಕ್ಕಾ ಶುಕನು. "ರಾಜೇಂದ್ರಾ! ಕೇಳು ! ವೃಷಪರ್ವನ ಮಗಳಾದ ಶರ್ಮಿಷ್ಠೆಯು, ಒಮ್ಮೆ ತನ್ನ ಗುರುಪುತ್ರಿ ಯಾದ ದೇವಯಾನಿಯೊಡನೆಯೂ,ಬೇರೆ ನೂರಾರುಮಂದಿ ಸಖಿಯರೊಡನೆ ಯೊಸೇರಿ, ಫಲಪುಷ್ಪಸಮೃದ್ಧವಾದ ತನ್ನ ಪುರೋದ್ಯಾನಕ್ಕೆ ಹೋಗಿ, ಅಲ್ಲಿ ವಿನೋದಿಸುತಿದ್ದಳು ತನ್ನ ಸಖಿಯರೊಡನೆ ಅಲ್ಲಿನ ಪಕ್ಷಿಗಳ ಮಧುರ ಧ್ವನಿಯನ್ನೂ, ಅಲ್ಲಿನ ಭ್ರಮರಝೇಂಕಾರಗಳನ್ನೂ ಕೇಳಿ ಆನಂದಿಸುತ್ತಾ, ಅಲ್ಲಿನ ಒಂದಾನೊಂದು ಸರೋವರಕ್ಕೆ ಬಂದಳು ಸ್ವಚ್ಛಜಲದಿಂದಲೂ,ಅರ ಳಿದ ಕಮಲಗಳಿಂದಲೂ, ಅಂದವಾದ ಮಳಲಿಸಿಂದಲೂ ಮನೋರಂಜಕ ವಾದ ಆ ಸರೋವರವನ್ನು ನೋಡಿದೊಡನೆ, ಅವಳಿಗೆ ಅದರಲ್ಲಿಳಿದು ಜಲ ಕ್ರೀಡೆಯನ್ನಾಡಬೇಕೆಂಬ ಕುತೂಹಲವು ಹುಟ್ಟಿತು. ಎಲ್ಲರೂ ತಮ್ಮತಮ್ಮ ಬಟ್ಟೆಗಳನ್ನು ತೆಗೆದು ತೀರದಲ್ಲಿಟ್ಟು, ಆ ಸರೋವರದಲ್ಲಿಳಿದು, ಒಬ್ಬರಮೇ ಲೊಬ್ಬರು ನೀರನ್ನೆರಚುತ್ತ ವಿನೋದದಿಂದ ಜಲಕ್ರೀಡೆಯನ್ನಾಡುತಿ ದ್ದರು ಈ ಸಮಯದಲ್ಲಿ ಪಾರ್ವತೀಪರಮೇಶ್ವರರಿಬ್ಬರೂ ವೃಷಭಾರೂಢ ರಾಗಿ ಆ ಮಾರ್ಗವಾಗಿ ಹೋಗುತಿದ್ದರು ಅವರನ್ನು ಕಂಡೊಡನೆ ಈ ಸ್ತ್ರೀಯರೆಲ್ಲರೂ ನಾಚಿಕೆಪಟ್ಟು, ಥಟ್ಟನೆ ಮೇಲೆದ್ದುಬಂದು, ತಮ್ಮತಮ್ಮ ಬ ಟ್ಟೆಗಳನ್ನು ಸುತ್ತಿಕೊಂಡರು.ಆ ಲಜ್ಜಾತುರದಲ್ಲಿ ಶರ್ಮಿಷ್ಠೆಯು, ಅಜ್ಞಾನದಿಂ ದ ದೇವಯಾನಿಯ ಸೀರೆಯನ್ನು ತಾನು ಸುತ್ತಿಕೊಂಡುಬಿಟ್ಟಳು ಇದನ್ನು ನೋಡಿ ದೇವಯಾನಿಯು,ಕೋಪದಿಂದ ಸಮೀಪದಲ್ಲಿದ್ದ ಇತರಸಖಿಯರನ್ನು ನೋಡಿ "ಆಹಾ !ಎಲೈ ಸಖಿಯರೆ ! ಈ ಶರ್ಮಿಷ್ಠೆಯ ಕುಚೇಷ್ಟೆಯನ್ನು ನೋಡಿದಿರಾ! ನಮ್ಮ ಗೌಡಿಯಾಗಿ ಬಿದ್ದಿರಬೇಕಾದ ಈಕೆಗೆ ನನ್ನೊಡನೆ ಈ ಹುಡುಗಾಟವೆ ? ನಾಯಿಯು ಯಾಗದ ಹವಿಸ್ಸನ್ನು ಕಚ್ಚಿದಂತೆ, ನಾ ನು ಧರಿಸತಕ್ಕ ವಸ್ತ್ರವನ್ನು ತೆಗೆದು ಇವಳು ಧರಿಸಿದಳಲ್ಲಾ ! ಈ ಅನ್ಯಾ ಯವನ್ನು ನೋಡಿರಿ! ಎಲ್ಲಾಜಾತಿಗಳಿಗಿಂತಲೂ ನಮ್ಮ ಬ್ರಾಹ್ಮಣಜಾತಿ ಯೇ ಉತ್ತಮವು ! ಬ್ರಾಹ್ಮಣರು ಪರಮಪುರುಷನಿಗೆ ಮುಖವೆನಿಸಿಕೊಂಡ ವರು. ಜ್ಯೋತಿಸ್ಸ್ವರೂಪವಾದ ಪರಮಪುರುಷನನ್ನು ಉಪಾಸನೆಮಾಡಿದ ವರು. ಲೋಕಕ್ಕೆ ಶ್ರೇಯಸ್ಕರವಾದ ವೈದಿಕಮಾರ್ಗವನ್ನು ಉಪದೇಶಿಸ

ತಕ್ಕವರೂ ಈ ಬ್ರಾಹ್ಮಣರೇ! ಲೋಕಪಾಲಕರಾದ ದೇವತೆಗಳೂ ಅವರನ್ನು ಭಕ್ತಿಯಿಂದ ನಮಸ್ಕರಿಸುವರು ! ಅಷ್ಟೇಕೆ? ವಿಶ್ವಾತ್ಮಕನಾಗಿಯೂ, ಶ್ರಿಯಃಪತಿಯಾಗಿಯೂ ಇರುವ ಭಗವಂತನೂ ಅವರನ್ನು ಗೌರವಿಸುವನು. ಅಂತಹ ಬ್ರಾಹ್ಮಣಕುಲದಲ್ಲಿಯೂ ನಾವು ಸರ್ವೋತ್ತಮವಾದ ಭೃಗುವಂಶದಲ್ಲಿ ಹುಟ್ಟಿದವರು. ಈಕೆಯ ತಂದೆಯಾದ ವೃಷಪರ್ವನು ನಮಗೆ ಶಿಷ್ಯನು ಹೀಗಿರುವಾಗಲೂ ಈ ಶರ್ಮಿಷ್ಠೆಯು, ನನ್ನಲ್ಲಿ ಸ್ವಲ್ಪವಾದರೂ ಗೌರವಜ್ಞಾನವಿಲ್ಲದೆ, ಶೂದ್ರನು ವೇದಮಂತ್ರವನ್ನು ಅಧಿಕರಿಸುವಂತೆ, ನನ್ನ ವಸ್ತ್ರವನ್ನು ತೆಗೆದು ತಾನುಟ್ಟುಕೊಂಡಿರುವಳಲ್ಲಾ ! ಆಹಾ ! ಇವಳ ಹೆಮ್ಮೆಯನ್ನು ನೋಡಿರಿ !" ಎಂದಳು ಹೀಗೆ ದೇವಯಾನಿಯು ಕ್ರೂರವಾಕ್ಯಗಳಿಂದ ತನ್ನನ್ನು ನಿಂದಿಸುತ್ತಿರುವುದನ್ನು ಕೇಳಿ, ಶರ್ಮಿಷ್ಠೆಗೆ ಸಹಿಸಲಾರದ ಕೋಪವುಂಟಾಯಿತು. ಈ ಕೋಪಾವೇಶದಿಂದ ಸರ್ಪದಂತೆ ಬುಸುಗುಟ್ಟುತ್ತ, ತುಟಿಗಳನ್ನು ಕಚ್ಚಿ, ಆ ದೇವಯಾನಿಯನ್ನು ಕುರಿತು. "ಎಲೆ ಭಿಕ್ಷುಕಿ ! ನಿನ್ನ ಯೋಗ್ಯತೆಯೇನೆಂಬುದನ್ನು ತಿಳಿಯದೆ ಬಾಯಿಗೆ ಬಂದಂತೆ ಹರಟುವೆಯಾ ? ಸಾಕು! ಬಾಯಿಮುಚ್ಚು ! ಕಾಗೆಗಳಂತೆ ನಮ್ಮ ಮನೆಯ ಅನ್ನಕ್ಕಾಗಿ ಕಾದಿರತಕ್ಕ ನಿನಗೆ ಇಷ್ಟೊಂದು ನಾಲಗೆಯೆ ? " ಎಂದಳು ಹೀಗೆ ಶರ್ಮಿಷ್ಠೆಯು ಗುರುಪುತ್ರಿಯನ್ನು ಕ್ರೂರವಾಕ್ಯಗಳಿಂದ ನಿಂದಿಸಿದುದಲ್ಲದೆ, ತಾನುಟ್ಟಿದ್ದ ಆಕೆಯ ಸೀರೆಯನ್ನು ಕೋಪದಿಂದ ಆ ಸರೋವರಕ್ಕೆ ಬಿಸಾಡಿ, ಸಖಿಯರೊಡನೆ ತನ್ನ ಮನೆಗೆ ಹಿಂತಿರುಗಿ ಹೊರಟುಹೋದಳು ಇಷ್ಟರಲ್ಲಿ ಬೇಟೆಗಾಗಿ ಆ ವನದಲ್ಲಿ ಸಂಚರಿಸುತಿದ್ದ ಯಯಾತಿಯು, ಮಾರ್ಗಾಯಾಸದಿಂದ ಬಳಲಿ, ಜಲಪಾನಕ್ಕಾಗಿ ಆ ಸರೋವರದಬಳಿಗೆ ಬಂದನು ಅಲ್ಲಿ ಮೈಮೇಲೆ ಬಟ್ಟೆಯಿಲ್ಲದೆ ಏಕಾಕಿನಿಯಾಗಿ ದುಃಖದಿಂದ ಕುಳಿತಿದ್ದ ಈ ಬಾಲೆಯನ್ನುಕಂಡು, ಆಕೆಯ ಸ್ಥಿತಿಗೆ ಕನಿಕರಗೊಂಡು, ತಾನು ಹೊದೆದಿದ್ದ ಉತ್ತರೀಯವನ್ನೇ ಅವಳಿಗೆ ಕೊಟ್ಟು, ಅವಳನ್ನು ಕೈಹಿಡಿದು ಮೇಲಕ್ಕೆತ್ತಿಸಮಾಧಾನಪಡಿಸಿದನು ಹೀಗೆ ತನ್ನನ್ನುದ್ಧರಿಸಿದ ಆ ರಾಜನನ್ನು ನೋಡಿ ದೇವಯಾನಿಯು, ಪ್ರೇಮಸೂಚಕವಾದ ಮೃದುಮಧುರವಾಕ್ಯದಿಂದ "ಓ ವೀರಾ! ಈಗ ನೀನು ನನ್ನ ಕೈಯನ್ನು ಹಿಡಿದು ಮೇಲಕ್ಕೆತ್ತಿದೆ? ಇ

ದನ್ನೇ ನಾನು ಪಾಣಿಗ್ರಹಣವೆಂದು ಭಾವಿಸುವೆನು. ನಿನ್ನಿಂದ ಗ್ರಹಿಸಲ್ಪಟ್ಟ ಈ ನನ್ನ ಕೈಯನ್ನು ಇನ್ನುಮೇಲೆ ಮತ್ತೊಬ್ಬರು ಗ್ರಹಿಸಬಾರದು ನೀನೇ ನನ್ನನ್ನು ವರಿಸಬೇಕು. ಬ್ರಾಹ್ಮಣಕನ್ಯೆಯಾದ ನನ್ನನ್ನು ಕ್ಷತ್ರಿಯನಾದ ನೀನು ವರಿಸುವುದು ಯುಕ್ತವೆ? ಎಂದು ನೀನು ಸಂದೇಹಿಸಬೇಕಾದುದಿಲ್ಲ. ನಮ್ಮಿಬ್ಬರಿಗೆ ಘಟಿಸಿದ ಈ ದಾಂಪತ್ಯವು ದೈವಕೃತವಾದುದೇಹೊರತು, ಮನುಷ್ಯಪ್ರಯತ್ನದಿಂದಾದುದಲ್ಲ ಹಾಗಿಲ್ಲದಪಕ್ಷದಲ್ಲಿ, ನಿರ್ಜನವಾದ ಈ ಕೂಪದಲ್ಲಿ ಬಿದ್ದಿದ್ದ ನನಗೆ ನಿನ್ನ ದರ್ಶನವು ಹೇಗೆ ಲಭಿಸುತಿತ್ತು? ಇದು ದೈವಕೃತವೆಂಬುದಕ್ಕೆ ಬೇರೆ ನಿದರ್ಶನವೇಕೆ? ಇದಲ್ಲದೆ, ಪೂರ್ವದಲ್ಲಿ ಬೃಹಸ್ಪತಿಯ ಮಗನಾದ ಕಚನು ನನ್ನನ್ನು ಶಪಿಸಿರುವನು ಆ ಶಾಪವೃತ್ತಾಂತವನ್ನೂ ತಿಳಿಸುವೆನು ಕೇಳು ಹಿಂದೆ ಕಚನು ನನ್ನ ತಂದೆಯಲ್ಲಿ ಮೃತಸಂಜೀವನೀವಿದ್ಯೆಯನ್ನು ಕಲಿಯುತ್ತಿರುವಾಗ, ಅವನನ್ನು ನಾನು ಮೋಹಿಸಿ, ನನ್ನನ್ನು ವರಿಸಬೇಕೆಂದು ಕೇಳಿದೆನು ಗುರುಪುತ್ರಿಯೆಂದು ನನ್ನನ್ನು ಅವನು ವರಿಸುವುದಕ್ಕೆ ಸಮ್ಮತಿಸಲಿಲ್ಲ ಆಗ ನಾನು ಅವನಲ್ಲಿ ಕೋಪಗೊಂಡು, ಅವನು ಅದುವರೆಗೆನನ್ನ ತಂದೆಯಲ್ಲಿ ಕಲಿತವಿದ್ಯೆಯೆಲ್ಲವೂ ವ್ಯರ್ಥವಾಗಲೆಂದು ಶಪಿಸಿದೆನು. ಅವನೂ ನನ್ನಲ್ಲಿ ಕೋಪಗೊಂಡು, ಎಂದೆಂದಿಗೂ ನನಗೆ ಬ್ರಾಹ್ಮಣಜಾತಿಯ ಪತಿಯು ಸಿಕ್ಕದಿರಲೆಂದು ಶಪಿಸಿರುವನು. ಇದರಿಂದ ಎಂದಿದ್ದರೂ ನನಗೆ ಬ್ರಾಹ್ಮಣಜಾತಿಯಪತಿಯು ಸಿಕ್ಕಲಾರನು ಆದುದರಿಂದ ನೀನೇ ನನ್ನನ್ನು ವರಿಸಬೇಕು"ಎಂದಳು.ಈ ಸಂಬಂಧವು ಶಾಸ್ತ್ರವಿರುದ್ಧವಾದುದರಿಂದ ಯಯಾತಿಗೆ ಸಮ್ಮತವಿಲ್ಲದಿದ್ದರೂ, ದೈವಿಕವಾಗಿ ಈ ಘಟನೆಯುಂಟಾದುದರಿಂದಲೂ, ತನಗೂ ಅವಳಲ್ಲಿ ಅನುರಾಗವು ಹುಟ್ಟಿದುದರಿಂದಲೂ ಅವಳ ಮಾತಿಗೆ ಸಮ್ಮತಿಸಿ, ತಾನು ವರಿಸುವುದಾಗಿ ಹೇಳಿ ಹೊರಟುಹೋದನು.ಇತ್ತಲಾಗಿ ದೇವಯಾನಿಯು ತನಗುಂಟಾದ ಅವಮಾನದುಃಖವನ್ನು ಸಹಿಸಲಾರದೆ, ರೋದಿಸುತ್ತ, ತಂದೆಯಾದ ಶುಕ್ರಾಚಾರ್ಯನಬಳಿಗೆ ಬಂದು, ಶರ್ಮಿಷ್ಠೆಯು ತನ್ನವಿಷಯವಾಗಿ ಹೇಳಿದ ಕ್ರೂರವಾಕ್ಯವನ್ನು ತಿಳಿಸಿದಳು ಅದನ್ನು ಕೇಳಿ ಶುಕ್ರಾಚಾರ್ಯನಿಗೂ ಬಹಳ ಮನಸ್ಸಂಕಟವುಂಟಾಯಿತು.ತನ್ನ ಪೌರೋಹಿತ್ಯವೃತ್ತಿಗಿಂತಲೂ ಭಿಕ್ಷಾಟನದಿಂದಲಾದರೂ

ಜೀವಿಸುವುದೇ ಮೇಲೆಂದು ತಿಳಿದು, ತನ್ನ ಮಗಳನ್ನೂ ಕರೆದುಕೊಂಡು, ಆ ಕ್ಷಣವೇ ವೃಷಪರ್ವನ ಮನೆಯನ್ನು ಬಿಟ್ಟುಹೊರಟನು ಇಷ್ಟರಲ್ಲಿ ಈ ಸಂಗತಿಯು ವೃಷಪರ್ವನಿಗೆ ತಿಳಿಯಿತು ಶತ್ರುಗಳಾದ ದೇವತೆಗಳ ಪ್ರೇರಣೆಯಿಂದ ಶುಕ್ರಾಚಾರ್ಯನು, ತನ್ನನ್ನು ಬಿಟ್ಟು ದೇವತೆಗಳ ಪಕ್ಷವನ್ನು ಸೇರುವುದಕ್ಕಾಗಿ ಹೋಗುವನೆಂದು ಭ್ರಮಿಸಿ, ಅವನನ್ನು ಹಿಂಬಾಲಿಸಿ ಹೋಗಿ, ಅರ್ಧದಾರಿಯಲ್ಲಿ ತಡೆದು, ಅವನ ಪಾದಗಳನ್ನು ಹಿಡಿದು, ತನ್ನನ್ನು ಕೈಬಿಡಬಾರದೆಂದು ಪ್ರಾರ್ಥಿಸಿದನು. ಶುಕ್ರಾಚಾರ್ಯನು ಅವನ ವಿನಯಕ್ಕೆ ಪ್ರಸನ್ನನಾಗಿ, ಕೋಪವನ್ನು ಬಿಟ್ಟು “ಓ ದಾನವೇಂದ್ರಾ! ಈ ದೇವಯಾನಿಯು ನನಗೆ ಬಹಳ ಮೋಹಪಾತ್ರಳಾದುದರಿಂದ, ಅವಳನ್ನು ಬಿಟ್ಟು ನಾನು ನಿನ್ನಲ್ಲಿರಲಾರೆನು ಅವಳನ್ನೇ ನೀನು ಪ್ರಾರ್ಥಿಸಿ ಅವಳ ಇಷ್ಟಾನುಸಾರವಾಗಿ ನಡೆಯುವುದಾದರೆ, ನಾನು ನಿನ್ನಲ್ಲಿರುವುದಕ್ಕೆ ಅಭ್ಯಂತರವಿಲ್ಲ” ಎಂದನು. ವೃಷಪರ್ವನು ಆ ಮಾತಿಗೆ ಸಮ್ಮತಿಸಿ, ದೇವಯಾನಿಯನ್ನು ಕುರಿತು ಅಮ್ಮಾ! “ನಿನ್ನ ಇಷ್ಟವೇನು ಹೇಳು! ಅದರಂತೆ ನಡೆಸುಕೊಳ್ಳುವೆನು” ಎಂದು ದೈನ್ಯದಿಂದ ಕೇಳಿಕೊಂಡನು ಅದಕ್ಕಾ ದೇವಯಾನಿಯು “ದಾನವೇಂದ್ರಾ! ನಿನ್ನ ಮಗಳಾದ ಶರ್ಮಿಷ್ಠೆಯು, ತನ್ನ ಸಮಸ್ತಸಖೀಜನದೊಡನೆ ನನಗೆ ದಾಸಿಯಾಗಿದ್ದು, ನಾನುಹೋದಕಡೆಗೆ ಬಂದು ನನ್ನ ಸೇವೆಯನ್ನು ಮಾಡಬೇಕು. ಇದೇ ನನ್ನ ಕೋರಿಕೆ” ಎಂದಳು ವೃಷಪರ್ವನು ತನ್ನ ಮಗಳಾದ ಶರ್ಮಿಷ್ಠೆಗೆ ಈ ವಿಚಾರವನ್ನು ತಿಳಿಸಿದೊಡನೆ, ಕಾರ್ಯಜ್ಞಳಾದ ಆ ಕುಮಾರಿಯು, ತನ್ನ ತಂದೆಯು ಭಯಪಟ್ಟಿರುವುದನ್ನೂ, ಮುಂದೆ ಶುಕ್ರಾಚಾರ್ಯನಿಂದ ದೈತ್ಯಕುಲಕ್ಕೆ ನಡೆಯಬೇಕಾದ ಪ್ರಯೋಜನವನ್ನೂ ಯೋಚಿಸಿ, ಅವನ ಮಾತಿಗೆ ಸಮ್ಮತಿಸಿ, ತನ್ನ ಸಖಿಯರೊಡನೆ ದೇವಯಾನಿಗೆ ದಾಸಿಯಾಗಿ ಅವಳನ್ನುಪಚರಿಸುತಿದ್ದಳು ಆಮೇಲೆ ಶುಕ್ರಾಚಾರ್ಯನು ತನ್ನ ಮಗಳನ್ನು ಯಯಾತಿಗೆ ಶಾಸ್ತ್ರೋಕ್ತವಾಗಿ ವಿವಾಹಮಾಡಿಕೊಟ್ಟುದಲ್ಲದೆ, ಶರ್ಮಿಷ್ಠೆಯನ್ನೂ ಅವನಿಗೆ ವಿವಾಹಮಾಡಿಸಿ, ರಹಸ್ಯದಲ್ಲಿ ಆ ಯಯಾತಿಯನ್ನು ಕುರಿತು “ರಾಜೇಂದ್ರಾ! ನೀನು ಶರ್ಮಿಷ್ಠೆಯೊಡನೆಮಾತ್ರ ಯಾವಾಗಲೂ ಸಂಗಮಿಸಬಾರದು” ಎಂದು ಆಣೆಯಿಡಿಸಿಕೊಂಡನು. ಯಯಾ

ತಿಯು ಹಾಗೆಯೇ ಆಗಲೆಂದು ಸಮ್ಮತಿಸಿ, ಅವರಿಬ್ಬರನ್ನೂ ತನ್ನೊಡನೆ ಕರೆ ದುಕೊಂಡುಹೋದನು ಕೆಲವು ದಿನಗಳಲ್ಲಿ ದೇವಯಾನಿಗೆ ಪುತ್ರಸಂತಾನ ವಾಯಿತು. ದೇವಯಾನಿಯು ಪುತ್ರನನ್ನು ಪಡೆದು ಸಂತೋಷಿಸುತ್ತಿರುವುದ ನ್ನು ಕಂಡು ಶರ್ಮಿಷ್ಠೆಗೂ ಸಂತಾನಾಪೇಕ್ಷೆಯು ಹುಟ್ಟಿತು. ಒಮ್ಮೆ ಋತು ಮತಿಯಾದ ಶರ್ಮಿಷ್ಠೆಯು, ರಹಸ್ಯವಾಗಿ ಪತಿಯಬಳಿಗೆ ಬಂದು, ತನಗೆ ಸಂತಾನವನ್ನು ಕೊಡಸಬೇಕೆಂದು ದೈನ್ಯದಿಂದ ಪ್ರಾರ್ಥಿಸಿದಳು. ಯಯಾತಿ ಯು ಧರ್ಮಜ್ಞನಾದುದರಿಂದ, ಋತುಮತಿಯಾಗಿ ರಮಿಸಬೇಕೆಂದು ಬಂ ದ ಪತ್ನಿಯನ್ನು ನಿರಾಕರಿಸುವುದು ಅಧರ್ಮವೆಂದು ತಿಳಿದು, ಶುಕ್ರಾಚಾ ರ್ಯನ ಆಜ್ಞೆಯನ್ನೂ ಲಕ್ಷ್ಯಮಾಡದೆ, ಅವಳ ಕೋರಿಕೆಯನ್ನೀಡೇರಿಸಿದನು ದೇವಯಾನಿಗೆ ಯದುವೆಂದೂ, ದುರ್ವಸುವೆಂದೂ ಇಬ್ಬರು ಪುತ್ರರಾದರು. ಶರ್ಮಿಷ್ಠೆಗೆ, ದ್ರುಹ್ಯ, ಅನು, ಪೂರುವೆಂಬ ಮೂವರುಪುತ್ರರು ಜನಿಸಿದ ರು ಸ್ವಾಭಿಮಾನವುಳ್ಳ ದೇವಯಾನಿಯು, ತನ್ನ ಸವತಿಗೆ ಮಕ್ಕಳಾದುದ ನ್ನು ಕಂಡು, ತನ್ನ ಪತಿಯಮೇಲೆ ಕೋಪಗೊಂಡು, ಅವನನ್ನು ಬಿಟ್ಟು ತಂದೆ ಯಮನೆಗೆ ಹೊರಟುಬಿಟ್ಟಳು. ಅವಳಲ್ಲಿ ವಿಶೇಷಮೋಹಪರವಶನಾಗಿದ್ದ ಯಯಾತಿಯು,ಆಕೆಯ ಕಾಲಮೇಲೆ ಬಿದ್ದು,ಎಷ್ಟೋಪ್ರಿಯೋಪಿಥದಿಂದ ಸಮಾ ಧಾನಮಾಡಿದನು ಆದರೂ ಕೇಳದೆ ಅವಳು ತಂದೆಯಮನೆಗೆ ಬಂದು ನಡೆದ ವೃತ್ತಾಂತವನ್ನು ತಿಳಿಸಿದಳು ಒಡನೆಯೇ ಶುಕ್ರನು ಯಯಾತಿಯನ್ನು ಕರೆದು ಕೋಪದಿಂದ,‘‘ಎಲೆ ಕಾಮುಕಾ! ಕಾಮಾತುರನಾಗಿ,ಕೊಟ್ಟಮಾತನ್ನು ನಡೆ ಸಲಾರದೆಹೋದ ನಿನ್ನ ಪೌರುಷವೊಂದು ಪೌರುಷವೆ?ನಿನ್ನ ರೂಪಯೌವನ ಗಳಲ್ಲವೇ ಹೀಗೆ ನಿನ್ನಬುದ್ಧಿಯನ್ನು ಕೆಡಿಸಿದುವು. ಈಗಲೇ ನಿನ್ನ ದೇಹದಲ್ಲಿ ಆ ಯೌವನವು ಹೋಗಿ,ವಿಕಾರರೂಪವುಳ್ಳ ಮುಪ್ಪು ತಲೆದೋರಲಿ” ಎಂದು ಶಪಿಸಿದನು. ಆಗ ಯಯಾತಿಯು ಶುಕ್ರಾಚಾರ್ಯನನ್ನು ಕುರಿತು ದೈನ್ಯದಿಂ ದ ‘‘ಓ ಬ್ರಾಹ್ಮಣೋತ್ತಮಾ! ನನ್ನ ತಪ್ಪನ್ನು ಕ್ಷಮಿಸಿ, ನನ್ನಲ್ಲಿ ಅನುಗ್ರಹ ವನ್ನು ತೋರಿಸಬೇಕು! ನಿನ್ನ ಕುಮಾರಿಯಲ್ಲಿ ನಾನು ಇನ್ನೂ ಕಾಮೋಪ ಭೋಗದಿಂದ ತೃಪ್ತನಾಗಿಲ್ಲ! ಆದುದರಿಂದ ಇನ್ನೂ ಕೆಲವು ಕಾಲದವರೆಗೆ ನಾನು ಇದೇ ಸ್ಥಿತಿಯಲ್ಲಿರುವಂತೆ ಕರುಣಿಸು” ಎಂದನು. ಅವನ ದೈನ್ಯವ

ನ್ನು ನೋಡಿ ಶುಕ್ರನು ಸ್ವಲ್ಪವಾಗಿ ಕೋಪಸಮಾಧಾನವನ್ನುಹೊಂದಿ "ಯಯಾತೀ! ನನ್ನ ಶಾಪವು ತಪ್ಪಲಾರದು. ಹಾಗಿದ್ದರೂ ನೀನು ನಿನ್ನ ಮುಪ್ಪನು ಬೇರೊಬ್ಬರಿಗೆ ಕೊಟ್ಟು ಅವರ ಯೌವನವನ್ನು ತೆಗೆದುಕೊಳ್ಳು ವಂತೆ ನಿನಗೆ ಶಕ್ತಿಯನ್ನು ಕೊಡುವೆನು" ಎಂದನು ಈ ವ್ಯವಸ್ಥೆಯಿಂದ ಯಯಾತಿಯು ತನ್ನ ಅರಮನೆಗೆ ಬಂದು, ತನ್ನ ಜ್ಯೇಷ್ಠಕುಮಾರನಾದ ಯದುವನ್ನು ಕರೆದು "ಕುಮಾರಾ! ನಿನ್ನ ಮಾತಾಮಹನಾದ ಶುಕ್ರನು ನನಗೆ ಈ ಜರೆಯನ್ನುಂಟುಮಾಡಿರುವನು. ನನಗೆ ಇನ್ನೂ ವಿಷಯಸುಖಗ ಳನ್ನನುಭವಿಸಬೇಕೆಂಬ ಆಸೆಯಿರುವುದು. ಆದುದರಿಂದ ನೀನು, ಈ ನನ್ನ ಮುಪ್ಪನ್ನು ತೆಗೆದುಕೊಂಡು, ನಿನ್ನ ಯೌವನವನ್ನು ನನಗೆ ಕೊಡುವೆಯಾ? ತೃಪ್ತಿಯಾಗುವವರೆಗೆ ನಾನು ಅದನ್ನನುಭವಿಸುತಿದ್ದು, ಕೆಲವು ಸಂವ ತ್ಸರಗಳಮೇಲೆ, ಆ ನಿನ್ನ ಯೌವನವನ್ನು ನಿನಗೇ ಕೊಟ್ಟುಬಿಡುವೆನು" ಎಂ ದನು. ಅದಕ್ಕಾ ಯದುವು "ಓ ಜನಕಾ! ಮನುಷ್ಯನಾಗಿ ಹುಟ್ಟಿದಮೇ ಲೆ ಯಾರಿಗಾದರೂ ವಿಷಯಸುಖದಲ್ಲಿ ವೈರಾಗ್ಯವು ಹುಟ್ಟಲಾರದು ಇದ ರಮೇಲೆ ನಾನು ಹುಟ್ಟಿದುದುಮೊದಲು ಇದುವರೆಗೆ ಸ್ವಲ್ಪವಾದರೂ ವಿ ಷಯಸುಖವನ್ನನುಭವಿಸಿದವನಲ್ಲ ಬಹುಕಾಲದಿಂದ ಆ ವಿಷಯಸುಖದಲ್ಲಿ ಯೇ ಮುಳುಗಿ ತೇಲಿದ ನೀನೇ ಅದರಲ್ಲಿ ತೃಪ್ತಿಹೊಂದದಿದ್ದಮೇಲೆ,ನನಗೆ ಅ ದನ್ನು ಬಿಟ್ಟಿರುವುದಕ್ಕಾದೀತೆ? ಆದುದರಿಂದ ನಾನು ಎಂದಿಗೂ ಈ ಮಾತಿಗೆ ಸಮ್ಮತಿಸಲಾರೆನು ನಿನ್ನಂತೆ ನನಗೆಮಾತ್ರ ಅದರಲ್ಲಿ ಆಸೆ ಯಿಲ್ಲವೇನು!" ಎಂದನು. ಆಮೇಲೆ ಯಯಾತಿಯು, ತುರ್ವಸುವನ್ನು ಕರೆದು ಕೇಳಲು, ಅವನೂ ಅದಕ್ಕೆ ಸಮ್ಮತಿಸಿದೆ ಹೋದನು. ಆಮೇ ಲೆ ಬೇರೆ ಇಬ್ಬರು ಮಕ್ಕಳನ್ನು ಕರೆದುಕೇಳಿದನು. ಅವರೂ ನಿರಾಕರಿಸಿದ ರು ಹೀಗೆ ನಾಲ್ಕುಮಂದಿಪುತ್ರರೂ ಅಸ್ಥಿರವಾದ ಶರೀರದಲ್ಲಿ ಸ್ಥಿರತ್ವ ಬುದ್ಧಿಯನ್ನಿಟ್ಟು, ತನ್ನ ಮಾತನ್ನು ನಿರಾಕರಿಸಿದಮೇಲೆ, ಯಯಾತಿಯು, ವಯಸ್ಸಿನಲ್ಲಿ ಎಲ್ಲರಿಗಿಂತಲೂ ಕಿರಿಯವನಾಗಿದ್ದರೂ,'ಗುಣದಲ್ಲಿ ದೊಡ್ಡವ ನೆನಿಸಿಕೊಂಡ ಪೂರುವನ್ನು ಕರೆದು, ತನ್ನ ಅಭಿಪ್ರಾಯವನು ತಿಳಿಸಿ, "ವ ತ್ಸಾ! ನೀನಾದರೂ ನಿನ್ನ ಅಣ್ಣಂದಿರಂತೆ ನನ್ನ ಮಾತನ್ನು ನಿರಾಕರಿಸದೆ,

ನನ್ನ ಕೋರಿಕೆಯನ್ನು ಈಡೇರಿಸಬೇಕು” ಎಂದನು. ಅದಕ್ಕಾ ಪೂರುವು ತಂದೆಯನ್ನು ಕುರಿತು ವಿನಯದಿಂದ “ಓ ಜನಕಾ! ಲೋಕದಲ್ಲಿ, ಹೆತ್ತತಂದೆಯು ಮಾಡಿದ ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನು ಮಾಡಿ ತೀರಿಸತಕ್ಕ ಪುತ್ರನೊಬ್ಬನೂ ಇರುವುದಿಲ್ಲ. ಮನುಷ್ಯನು ಇಹಪರಲೋಕಸುಖಗಳೆರಡನ್ನೂ ತಂದೆಯ ಅನುಗ್ರಹದಿಂದಲೇ ಪಡೆಯಬೇಕು ಆದುದರಿಂದ ಯಾವನು ತಂದೆಯ ಮನೋಭಿಪ್ರಾಯವನ್ನು ತಾನಾಗಿಯೇ ತಿಳಿದು ನಡೆಸುವನೋ ಅವನೇ ಉತ್ತಮಪುತ್ರನೆನಿಸುವನು ತಂದೆಯ ಬಾಯಿಂದ ಹೇಳಿಸಿಕೊಂಡು ಕೆಲಸಮಾಡತಕ್ಕವನು ಮಧ್ಯಮನು! ತಂದೆಯು ಹೇಳಿದಮೇಲೆಯೂ ಅಶ್ರದ್ಧೆಯಿಂದ ಕೆಲಸಮಾಡತಕ್ಕವನು ಅಧಮನು! ತಂದೆಯು ಹೇಳಿದ ಕಾರ್ಯವನ್ನು ಅಶ್ರದ್ಧೆಯಿಂದಾದರೂ ನಡೆಸದಿರತಕ್ಕವನು ಅಧಮಾಧಮನೆನಿಸುವನು. ಇಂತವನಿಗೂ, ತಂದೆಯ ಜಠರದಿಂದ ಬಿದ್ದ ಅಮೇಧ್ಯಕ್ಕೂ ಏನೂ ವ್ಯತ್ಯಾಸವಿಲ್ಲ ಆದುದರಿಂದ ಶಿರಸಾವಹಿಸಿ ನಿನ್ನ ಆಜ್ಞೆಯನ್ನು ನಡೆಸುವೆನು” ಎಂದು ಹೇಳಿ, ಸಂತೋಷಪೂರ್ವಕವಾಗಿ ಅವನಿಗೆ ತನ್ನ ಯೌವನವನ್ನು ಕೊಟ್ಟು, ಅವನ ಮುಪ್ಪನ್ನು ತಾನು ತೆಗೆದುಕೊಂಡನು ಆಮೇಲೆ ಯಯಾತಿಯು,ತನ್ನ ಪುತ್ರನಿಂದ ತನಗೆ ಲಬ್ಧವಾದ ಯೌವನದಲ್ಲಿ, ಯಥೇಷ್ಟವಾಗಿ ವಿಷಯಸುಖಗಳನ್ನನುಭವಿಸುತ್ತ, ಬಹುಕಾಲದವರೆಗೆ ಸಪ್ತದ್ವೀಪಪರಿಮಿತವಾದ ಸಮಸ್ತಭೂಮಿಯನ್ನೂ ಸ್ವವಶಮಾಡಿಕೊಂಡು,ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ಹೇಗೋಹಾಗೆ ಪ್ರಜೆಗಳನ್ನು ಪೋಷಿಸುತಿದ್ದನು. ಹೀಗೆ ಯಯಾತಿಯು ಯಥೇಷ್ಟವಾಗಿ ಇಂದ್ರಿಯಸುಖಗಳನ್ನನುಭವಿಸುತಿದ್ದರೂ, ದೃಢೇಂದ್ರಿಯನಾಗಿ, ಧರ್ಮಮರ್ಯಾದೆಯನ್ನು ಮೀರದೆ ವರ್ತಿಸುತಿದ್ದನು ದೇವಯಾನಿಯೂಕೂಡ ತ್ರಿಕರಣಗಳಿಂದಲೂ ಪತಿಯನ್ನು ಸೇವಿಸುತ್ತ, ಅಂತರಂಗದಲ್ಲಿಯೂ, ಬಹಿರಂಗದಲ್ಲಿಯೂ ಅವನಿಗೆ ವಿಶೇಷಪ್ರೇಮಪಾತ್ರಳಾದಳು ಯಯಾತಿಯು ಹೀಗೆ ವಿಷಯಸುಖವನ್ನನುಭವಿಸುವಾಗಲೂಕೂಡ, ಭೂರಿದಕ್ಷಿಣೆಯುಳ್ಳ ಅನೇಕಯಾಗಗಳಿಂದ, ಸರ್ವದೇವತಾತ್ಮಕನಾಗಿಯೂ, ಸಕಲಯಜ್ಞಸ್ವರೂಪನಾಗಿಯೂ ಇರುವ ಭಗವಂತನನ್ನಾರಾಧಿಸುತಿದ್ದನು ಮತ್ತು ಚಿದಚಿದಾತ್ಮಕವಾಗಿಯೂ, ಸ್ವ

ಪ್ನಸಮಾನವಾಗಿಯೂ, ಮಾಯಾಮನೋರಥಸದೃಶವಾಗಿಯೂ ಇರುವ ಈ ಸಮಸ್ತಪ್ರಪಂಚವೂ ಆಕಾಶದಲ್ಲಿ ಮೇಘಪರಂಪರೆಗಳಂತೆ ಯಾವನಲ್ಲಿಯೇ ಹುಟ್ಟಿ, ಒಮ್ಮೊಮ್ಮೆ ವಿಚಿತ್ರಾಕಾರದಿಂದ ಕಾಣುತ್ತಲೂ, ಮತ್ತೊಮ್ಮೆ ಹಾಗೆಯೇ ಅದೃಶ್ಯವಾಗುತ್ತಲೂ ಇರುವುದೋ, ಯಾವನು ಸಮಸ್ತಪ್ರಾಣಿಗಳ ಹೃದಯಕುಹರದಲ್ಲಿ ಶಯನಿಸುತ್ತಿರುವನೋ, ಯಾವನು ಸೂಕ್ಷ್ಮವಸ್ತುವಿಗಿಂತಲೂ ಸೂಕ್ಷ್ಮಸ್ವರೂಪನೋ, ಯಾವನು ಜೀವವರ್ಗಕ್ಕೆ ಪ್ರಾಪ್ಯನಾಗಿಯೂ,ಪ್ರಾಪಕನಾಗಿಯೂ,ಆಧಾರನಾಗಿಯೂ ಇರುವನೋ, ಅಂತಹ ವಾಸುದೇವನನ್ನು ಸರ್ವದಾ ತನ್ನ ಹೃದಯದಲ್ಲಿಟ್ಟು, ಫಲಾಪೇಕ್ಷೆಯಿಲ್ಲದ ಕರ್ಮಗಳಿಂದ ಆತನನ್ನಾರಾಧಿಸುತಿದ್ದನು. ಓ ಪರೀಕ್ಷಿದ್ರಾಜಾ! ಹೀಗೆ ಆ ಯಯಾತಿಯು, ಸಹಸ್ರವರ್ಷಗಳವರೆಗೆ ಸಾರ್ವಭೌಮಪದವಿಯಲ್ಲಿದ್ದು, ಇಂದ್ರಿಯಸುಖಗಳನ್ನನುಭವಿಸಿಯೂ, ಕುತ್ಸಿತವಾದ ಆ ಇಂದ್ರಿಯಗಳನ್ನು ತೃಪ್ತಿಪಡಿಸಲಾರದೆ ಹೋದನು ಇಂದ್ರಿಯಗಳ ಪ್ರಾಬಲ್ಯವನ್ನು ನೋಡಿದೆಯಾ? ಅದು ಎಂತವರನ್ನಾದರೂ ಸೆಳೆದುಬಿಡುವುದು. ಇದು ಹದಿನೆಂಟನೆಯ ಅಧ್ಯಾಯವು

---

## ಯಯಾತಿಯು ಕಾಮೋಪಭೋಗದಲ್ಲಿ ವಿರಕ್ತನಾದುದು

ಹೀಗೆ ಯಯಾತಿಯು ಸ್ತ್ರೀಲೋಲನಾಗಿ ಬಹುಕಾಲವನ್ನು ಕಳೆದ ಮೇಲೆ, ಅವನಿಗೆ ಜ್ಞಾನೋದಯದಿಂದ ಎಚ್ಚರವುಂಟಾಯಿತು. ಅದುವರೆಗೆ ಆತ್ಮಸ್ವರೂಪವನ್ನು ಮರೆತು ವಿಷಯಲೋಲನಾಗಿದ್ದ ತನ್ನ ಸ್ಥಿತಿಗಾಗಿ ತಾನು ಪಶ್ಚಾತ್ತಾಪಪಡುತ್ತ,ದೇವಯಾನಿಯನ್ನುಕರೆದು,ಅವಳಿಗೆಒಂದು ಮೇಕೆಯ ಕಥೆಯನ್ನು ಹೇಳುವ ನೆವದಿಂದ, ಅನ್ಯಾಪದೇಶವಾಗಿ ತನ್ನ ಸ್ಥಿತಿಯನ್ನೇ ತಿಳಿಸಬೇಕೆಂದೆಣಿಸಿ, ಅವಳೊಡನೆ ಹೀಗೆಂದು ಹೇಳುವನು ''ಓ ಭೃಗುಪುತ್ರಿ! ಈಗ ನಿನಗೆ ವಿಚಿತ್ರವಾದ ಒಂದಾನೊಂದು ಕಥೆಯನ್ನು ಹೇಳುವೆನು ಕೇಳು! ನನ್ನ ಸ್ಥಿತಿಯೂ ಹಾಗೆಯೇ ಇರುವುದು. ಜಿತೇಂದ್ರಿಯರಾಗಿ ವನದಲ್ಲಿ ವಾಸಮಾಡತಕ್ಕ ಮಹರ್ಷಿಗಳು, ಪುರವಾಸಿಗಳಾದ ನಮ್ಮಂತವರ ಸ್ಥಿತಿಯನ್ನು ನೋಡಿದರೆ, ಬಹಳವಾಗಿ ಪಶ್ಚಾತ್ತಾಪ

ಪಡದಿರಲಾರರು ಹಿಂದೆ ಒಂದಾನೊಂದುಕಾಡಿನಲ್ಲಿ ಒಂದು ಮೇಕೆ ಯು, ಭೋಗಾಭಿಲಾಷೆಯಿಂದ ಅಲ್ಲಲ್ಲಿ ತಿರುಗುತ್ತ, ಕೊನೆಗೆ ಒಂ ದು ಹಾಳುಭಾವಿಯಲ್ಲಿ ಬಿದ್ದಿದ್ದ ಒಂದು ಹೆಣ್ಣುಮೇಕೆಯನ್ನು ಕಂಡಿತು. ಕಾಮಾತುರವುಳ್ಳ ಗಂಡುಮೇಕೆಯು, ಆ ಹೆಣ್ಣುಮೇಕೆಯನ್ನು ಬಾವಿಯಿಂ ದ ಮೇಲೆ ತರುವುದಕ್ಕೆ ಉಪಾಯವೇನೆಂದು. ನಾನಾವಿಧವಾಗಿ ಚಿಂತಿಸಿ, ಕೊನೆಗೆ, ತನ್ನ ಕೊಂಬಿನಿಂದ ತೀರದಲ್ಲಿದ್ದ ಮಣ್ಣನ್ನಗೆದು, ಆ ಹೆಣ್ಣುಮೇಕೆ ಯು ಮೇಲೇರಿಬರುವುದಕ್ಕೆ ತಕ್ಕ ಸೋಪಾನವನ್ನು ಮಾಡಿತು. ಹೆಣ್ಣು ಮೇಕೆಯು ಅದೇದಾರಿಯಿಂದ ಮೇಲೇರಿ ಬಂದು, ಆ ಮೇಕೆಯನ್ನೇ ತನಗೆ ಪತಿಯನ್ನಾಗಿ ವರಿಸಿತು ಈ ಹೆಣ್ಣುಮೇಕೆಯು ದೇಹಪುಷ್ಟಿಯುಳ್ಳುದಾಗಿ ಯೂ, ವೀರ್ಯಬಲವುಳ್ಳುದಾಗಿಯೂ, ರತಿಸಮರ್ಥವಾಗಿಯೂ ಇರುವ ಆ ಗಂಡುಮೇಕೆಯೊಡನೆ ಸಂತೋಷದಿಂದ ಕ್ರೀಡಿಸುತ್ತಿರುವುದನ್ನು ಕಂಡು, ಆ ವನದಲ್ಲಿದ್ದ ಬೇರೆಕೆಲವು ಹೆಣ್ಣುಮೇಕೆಗಳೂಕೂಡ,ಅದನ್ನೇ ಕಾಮಿಸಿ ಬಂ ದು, ಅದರೊಡನೆ ಸಂಭೋಗಿಸುತಿದ್ದುವು. ಆ ಒಂದೇ ಗಂಡುಮೇಕೆಯು, ತನ್ನಲ್ಲಿಗೆ ಬಂದ ಎಲ್ಲಾ ಹೆಣ್ಣುಮೇಕೆಗಳೊಡನೆಯೂ ಯಥೇಷ್ಟವಾಗಿ ರ ಮಿಸಿ, ಅವೆಲ್ಲವನ್ನೂ ತನ್ನ ರತಿಚಾತುರ್ಯದಿಂದ ಸಂತೋಷಪಡಿಸುತ್ತ, ಅದರಿಂದ ತಾನೂ ಕಾಮಪಿಶಾಚಹಿಡಿದಂತೆ ಯಾವಾಗಲೂ ರತಿಸುಖ ದಲ್ಲಿಯೇ ಮುಳುಗಿದ್ದಿತು ಆದರೆ ಈ ಮೇಕೆಗೆ ತನ್ನನ್ನು ಹಿಂಬಾಲಿಸುತ್ತಿರುವ ಹೆಣ್ಣುಮೇಕೆಗಳ ಗುಂಪಿನಲ್ಲಿ,ಒಂದಾನೊಂದು ಮೇಕೆಯಮೇಲೆಮಾತ್ರವಿಶೇ ಷ ಪ್ರೇಮವು ಹುಟ್ಟಿತು. ಇದನ್ನುನೋಡಿ ಮೊದಲು ಬಾವಿಯಲ್ಲಿ ಸಿಕ್ಕಿದ ಮೇಕೆಗೆ ಅಸೂಯೆ ಹುಟ್ಟಿ, ಅದಕ್ಕೆ ಗಂಡುಮೇಕೆಯಲ್ಲಿ ಮೊದಲಿದ್ದ ಪ್ರೀ ತಿಯು ತಪ್ಪಿಹೋಯಿತು. ಒಡನೆಯೇ ಆ ಹೆಣ್ಣುಮೇಕೆಯು,ತನ್ನಲ್ಲಿ ಪುರುಷ ಮೇಷವು ತೋರಿಸುತ್ತಿರುವ ಪ್ರೀತಿಯೆಲ್ಲವೂ ನಟನವೆಂದೂ, ಅದರ ಪ್ರೀತಿ ಯು ಸ್ಥಿರವಲ್ಲವೆಂದೂ ನಿಶ್ಚಯಿಸಿ, ಕಾಮಾತುರವಾಗಿದ್ದ ಆಮೇಕೆಯನ್ನು ಬಿಟ್ಟು ಹೊರಟುಹೋಯಿತು. ಇಂದ್ರಿಯಲೋಲವಾದ ಆ ಪುರುಷಮೇ ಷವು,ಆಗಲೂ ಅದನ್ನು ಬಿಟ್ಟಿರಲಾರದೆ, ಗಂಡುಬೆಕ್ಕು ಹೆಣ್ಣುಬೆಕ್ಕನ್ನು ಹಿಂ ಬಾಲಿಸುವಂತೆ, ಅದನ್ನು ಹಿಂಬಾಲಿಸಿ, ಅರ್ಧದಾರಿಯಲ್ಲಿ ತಡೆದು

ನಿಲ್ಲಿಸಿ, ದೈನ್ಯದಿಂದ ಕಾಲಮೇಲೆ ಬಿದ್ದು ಎಷ್ಟೆಷ್ಟೋವಿಧದಿಂದ ಪ್ರಾರ್ಥಿ ಸಿತು ಕೊನೆಗೂ ಅದರ ಕೋಪವನ್ನು ತಗ್ಗಿಸಲಾರದೆ, ನಿರಾಶವಾಗಿ ದುಃಖಿ ಸುತಿತ್ತು. ಇಷ್ಟರಲ್ಲಿ ಒಬ್ಬ ಬ್ರಾಹ್ಮಣನು ಬಂದು, ಆ ಗಂಡುಮೇಕೆಯ ಬೀ ಜವನ್ನೊಡೆದು ಅದರ ಕಾಮಾತುರವನ್ನು ತಪ್ಪಿಸಿದನು ಆಗಲೂ, ಆ ಮೇಕೆ ಯು ಸುಮ್ಮನಿರಲಾರದೆ, ಆ ಬ್ರಾಹ್ಮಣನ ಕಾಲಮೇಲೆ ಬಿದ್ದು ಪ್ರಾರ್ಥಿಸಲು, ಬ್ರಾಹ್ಮಣನು ಅದರ ದೈನ್ಯವನ್ನು ನೋಡಿ ಕನಿಕರಗೊಂಡು ತಿರುಗಿ ಆ ಬೀಜ ಗಳನ್ನಂಟಿಸಿದನು ಅದರಿಂದ ಆ ಮೇಕೆಯು ತಿರುಗಿ ಸಂಭೋಗಶಕ್ತಿಯನ್ನು ಪಡೆದು, ಬಾವಿಯಲ್ಲಿ ಸಿಕ್ಕಿದ ಆ ಹೆಣ್ಣು ಮೇಕೆಯೊಡನೆ ಸೇರಿ, ಬಹುಕಾಲದ ವರೆಗೆ ಕಾಮಸುಖವನ್ನನುಭವಿಸುತಿತ್ತು. ಎಷ್ಟುದಿನದವರೆಗೆ ಕಾಮವನ್ನನು ಭವಿಸಿದರೂ ತೃಪ್ತಿಯಿಲ್ಲದೆ ಅದರಲ್ಲಿಯೇ ತೊಳಲುತಿತ್ತು ಎಲೆ ಸುಭ್ರು! *ನನ್ನ ಅವಸ್ಥೆಯೂ ಇದೇರೀತಿಯಾಗಿರುವುದು ನಾನು ನಿನ್ನ ಪ್ರೇ ಮಪಾಶದಲ್ಲಿ ಬಿಗಿಯಲ್ಪಟ್ಟು, ನಿನ್ನ ಹಾವಭಾವವಿಲಾಸಗಳಿಗೆ ಮರುಳಾಗಿ ನನ್ನನ್ನೇ ನಾನು ಮರೆತಿರುವೆನು ಕಾಮವೆಂಬುದು ಅನುಭವಿಸುತಿದ್ದಷ್ಟೂ ಆಶೆಯನ್ನು ಹೆಚ್ಚಿಸುವುದೇಹೊರತು ಶಾಂತಿಹೊಂದಲಾರದು ಕಾಮಾಸ ಕ್ತನಿಗೆ ಭೂಮಿಯಲ್ಲಿರುವ ಧನಧಾನ್ಯಗಳಾಗಲಿ, ಪಶುಗಳಾಗಲಿ, ಉತ್ತಮ ಪತ್ನಿಯರಾಗಲಿ, ಯಾವುದೂ ಮನಃಪ್ರೀತಿಯನ್ನು ಹುಟ್ಟಿಸಲಾರವು ಈ ಸಮೃದ್ಧಿಗಳೆಲ್ಲವೂ ಅವನಿಗೆ ಮತ್ತಷ್ಟು ಆಸೆಯನ್ನೇ ಹೆಚ್ಚಿಸುವುವು ತುಪ್ಪ ವನ್ನು ಸುರಿದಷ್ಟೂ ಬೆಂಕಿಯು ಉರಿಯನ್ನು ಕೆದರುವಂತೆ,ಅನುಭವಿಸಿದಷ್ಟೂ ಕಾಮಾಗ್ನಿಯು ಮತ್ತಷ್ಟು ಜ್ವಲಿಸುವುದೇಹೊರತು ಶಾಂತವಾಗಲಾರ ದು. ಪುರುಷನು ರಾಗದ್ವೇಷಾದಿಗಳನ್ನು ಬಿಟ್ಟಾಗಲೇ, ಅವನಿಗೆ ಎಲ್ಲಿಹೋ ದರೂ ಸುಖವುಂಟು ಅಂತವನಿಗೆ ಸಮಸ್ತದಿಕ್ಕುಗಳೂ ಸುಖಮಯವಾಗಿ ತೋರುವುವು ದೇವಿ! ವಿಷಯಾಭಿಲಾಷೆಯೆಂಬುದು ಮನುಷ್ಯನಿಗೆ ಸರ್ವ ವಿಧದಲ್ಲಿಯೂ ಕೇಡನ್ನುಂಟುಮಾಡುವುದು. ಹಾಗಿದ್ದರೂ ಬುದ್ಧಿಹೀನರು

* ಇದುವರೆಗೆ ಹೇಳಿದ ಕಥೆಯಲ್ಲಿ, ಯಯಾತಿಗೂ ಗಂಡುಮೇಕೆಗೂ, ದೇವ ಯಾನಿಗೂ ಬಾವಿಯಲ್ಲಿದ್ದ ಹೆಣ್ಣುಮೇಕೆಗೂ, ಶುಕ್ರಾಚಾರ್ಯನಿಗೂ ಬ್ರಾಹ್ಮಣನಿ ಗೂ ಹೋಲಿಕೆಯನ್ನೂಹಿಸಬೇಕು.

ಅದನ್ನು ಬಿಡಲಾರರು. ದೇಹವು ಜೀರ್ಣವಾದರೂ ಅದು ಜೀರ್ಣವಾಗದು. ಮನುಷ್ಯನು ತನಗೆ ಸುಖವನ್ನು ಬಯಸುವಪಕ್ಷದಲ್ಲಿ, ಮೊದಲು ಆ ಕಾಮವನ್ನು ನೀಗಬೇಕು ಸಮಸ್ತದುಃಖಗಳಿಗೂ ಅದೇ ಮೂಲವು. ಪುರುಷನು ತನ್ನ ಹೆತ್ತತಾಯಿಯೊಡನೆಯಾಗಲಿ, ಸಹೋದರಿಯರೊಡನೆಯಾಗಲಿ, ಹೊಟ್ಟೆಯಲ್ಲಿ ಹುಟ್ಟಿದ ಮಗಳೊಡನೆಯಾಗಲಿ, ರಹಸ್ಯಸ್ಥಳದಲ್ಲಿ ಕ್ಷಣಮಾತ್ರವೂ ಕುಳ್ಳಿರಬಾರದು ಬಲಿಷ್ಠವಾದ ಇಂದ್ರಿಯಗಳು ವಿದ್ವಾಂಸನನ್ನಾದರೂ ಆಕರ್ಷಿಸದೆ ಬಿಡಲಾರವು ಎಲೆ ಸಾಧ್ವಿ! ನಾನು ನಿನ್ನೊಡಗೂಡಿ ಸಾವಿರಾರುವರ್ಷಗಳವರೆಗೆ ವಿಷಯಸುಖವನ್ನನುಭವಿಸಿದೆನು! ಇಷ್ಟಾದರೂ ನನಗೆ ಆ ವಿಷಯಾಭಿಲಾಷೆಯು ಹೆಚ್ಚುತ್ತಿರುವುದೇಹೊರತು, ಸ್ವಲ್ಪಮಾತ್ರವೂ ತಗ್ಗಲಿಲ್ಲ ಇನ್ನು ಈ ವ್ಯಾಪಾರವು ನಮಗೆ ಯೋಗ್ಯವಲ್ಲ. ಇನ್ನುಮೇಲಾದರೂ ನಾವು ಅದರ ಆಸೆಯನ್ನೇ ತೊರೆದು, ಪರಬ್ರಹ್ಮದಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು ನಾನು ಈ ದೇಹಾಭಿಮಾನವನ್ನು ನೀಗಿ, ಶೀತೋಷ್ಣಾದಿದ್ವಂದ್ವಗಳನ್ನೂ ಲಕ್ಷ್ಯಕ್ಕೆ ತಾರದೆ, ಕಾಡಿನಲ್ಲಿ ಮೃಗಗಳೊಡನೆ ಮೃಗವಾಗಿ ಕಲೆತಿರುವೆನು ವಿವೇಕಿಯಾದವನು ಇಹಲೋಕಸುಖಕ್ಕಾಗಲಿ, ಸ್ವರ್ಗಾದಿಪರಲೋಕಸುಖಕ್ಕಾಗಲಿ ಆಸೆಪಡಬಾರದು. ಹಾಗೆ ಆಸೆಪಡುವುದರಿಂದ ಸಂಸಾರದಲ್ಲಿ ಸಿಕ್ಕಿ, ಕೊನೆಗೆ ಸ್ಥಾವರಜನ್ಮವನ್ನೇ ಹೊಂದಬೇಕಾಗುವುದು. ಆದುದರಿಂದ ಯಾವನು ಇವೊಂದಕ್ಕೂ ಆಸೆಪಡದೆ, ನಿರತಿಶಯಾನಂದಸ್ವರೂಪನಾದ ಪರಮಾತ್ಮನ ಧ್ಯಾನದಲ್ಲಿರುವನೋ, ಅಂತವನಿಗೆ ವಿಷಯಾಭಿಲಾಷೆಯೆಂಬುದು ತಾನಾಗಿಯೇ ನಿವರ್ತಿಸುವುದು.” ಎಂದು ದೇವಯಾನಿಗೆ ತನ್ನ ನಿರ್ಧಾರವನ್ನು ತಿಳಿಸಿ, ಪೂರುವನ್ನು ಕರೆದು, ತಾನು ಅನುಭವಿಸುತಿದ್ದ ಯೌವನವನ್ನು ಅವನಿಗೆ ಹಿಂತಿರುಗಿ ಕೊಟ್ಟು, ಅವನ ಜರೆಯನ್ನು ತಾನು ತೆಗೆದುಕೊಂಡನು. ಆ ಪೂರುವಿಗೇ ತನ್ನ ಸಮಸ್ತ ಚಕ್ರಾಧಿಪತ್ಯವನ್ನೂ ಒಪ್ಪಿಸಿದನು. ಮತ್ತು ದ್ರುಹ್ಯು, ಯದು, ದುರ್ವಸು, ಅನುವೆಂಬ ಆತನ ನಾಲ್ಕುಮಂದಿ ಜ್ಯೇಷ್ಠಸಹೋದರರಿಗೂ ಕ್ರಮವಾಗಿ ಪೂರ್ವಾದಿದಿಕ್ಕುಗಳ ಅಧಿಕಾರವನ್ನು ಹಂಚಿಕೊಟ್ಟು, ಇವರೆಲ್ಲರನ್ನೂ ಪೂರುವಿಗೆ ಅಧೀನರಾಗಿ ನಡೆಯುವಂತೆ ನಿಯಮಿಸಿ, ತಾನು ತಪೋವನಕ್ಕೆ ಹೋ

ಧನು ಹೀಗೆ ಯಯಾತಿಯು, ರೆಕ್ಕೆಬೆಳೆದ ಹಕ್ಕಿಯು ಗೂಡನ್ನುಬಿಟ್ಟು ಹೋ
ಗುವಂತೆ, ವಿವೇಕಜ್ಞಾನವು ಹುಟ್ಟಿದಮೇಲೆ ತಾನು ಬಹುಕಾಲದಿಂದ
ತೃಪ್ತಿಯಿಲ್ಲವೆ ಅನುಭವಿಸುತಿದ್ದ ಎಲ್ಲಾವಿಷಯಸುಖಗಳ ಸಂಬಂಧವನ್ನೂ
ಬಿಟ್ಟು, ಕೇವಲ ಬ್ರಹ್ಮಧ್ಯಾನನಿರತನಾಗಿ, ಅದರಿಂದ ಕರ್ಮಗಳ ಮತ್ತು ಸತ್ವಾ
ದಿಗುಣಗಳ ಸಂಬಂಧವನ್ನು ನೀಗಿ, ಜೀವನಿಗೆ ಮುಖ್ಯಪ್ರಾಪ್ಯವಾದ ಪರಮಪ
ದವನ್ನು ಹೊಂದಿದನು ಇತ್ತಲಾಗಿ ದೇವಯಾನಿಗೂಕೂಡ ಮೇಕೆಯ ಕಥೆ
ಯನ್ನು ಕೇಳಿದುದು ಮೊದಲು, ಮನಸ್ಸಿನಲ್ಲಿ ವಿರಕ್ತಿ ಹುಟ್ಟಿತು ಯಯಾತಿಯು
ಲೋಕಸಾಮಾನ್ಯವಾಗಿ ಸ್ತ್ರೀಪುರುಷರ ಪರಸ್ಪರಸ್ನೇಹದಿಂದುಂಟಾಗುವ
ಮನೋವಿಕಾರವನ್ನು ತಿಳಿಸುವುದಕ್ಕಾಗಿಯೇ ಆ ಕಥೆಯನ್ನು ಹೇಳಿದ್ದರೂ,
ದೇವಯಾನಿಯು, ಸ್ತ್ರೀಯಾದ ತನ್ನನ್ನು ಹಾಸ್ಯಮಾಡಿ ನಿಂದಿಸುವುದಕ್ಕಾಗಿ
ಯೇ ಅದನ್ನು ಹೇಳಿದುದಾಗಿ ನಿಶ್ಚಯಿಸಿ, ಪತಿಪುತ್ರಾದಿಸಂಬಂಧಗಳೆಲ್ಲವೂ, ಸ
ತ್ರದಲ್ಲಿ ಬಂದಿಳಿಯುವ ಪ್ರಯಾಣಿಕರ ಸಂಬಂಧದಂತೆ, ಭಗವನ್ಮಾಯೆಯಿಂ
ದೇರ್ಪಟ್ಟ ಕ್ಷಣಿಕಕಾಲಸಂಬಂಧವೆಂದು ತಿಳಿದು ವಿರಕ್ತಿಯಿಂದ ಭಗವದ್ಧ್ಯಾ
ನಪರಳಾಗಿ, ಲಿಂಗದೇಹದಿಂದ ಮುಕ್ತಳಾದಳು ಓ ಪರೀಕ್ಷಿದ್ರಾಜಾ! ಹೀಗೆ
ಸಮಸ್ತಜಗತ್ತನ್ನೂ ತನ್ನ ಮಾಯೆಯಿಂದ ಮರುಳುಗೊಳಿಸತಕ್ಕವನಾಗಿ
ಯೂ, ಸರ್ವಭೂತಗಳಿಗೂ ಆಧಾರನಾಗಿಯೂ, ಶಾಂತಾತ್ಮನಾಗಿಯೂ
ಇರುವ ಆ ವಾಸುದೇವನನ್ನು ನಮಸ್ಕರಿಸುವೆವು" ಎಂದು ಧ್ಯಾನನಿರತನಾಗಿ
ದ್ದನು. ಇದು ಹತ್ತೊಂಬತ್ತನೆಯ ಅಧ್ಯಾಯವು.

---

## ಪೂರುವಂಶಾನುಕ್ರಮವು

ಓ ರಾಜಾ! ಇನ್ನು ಪೂರುವಿನ ವಂಶಾನುಕ್ರಮವನ್ನು ತಿಳಿಸುವೆನು
ಕೇಳು. ವಂಶವರ್ಧಕರಾದ ಅನೇಕರಾಜರ್ಷಿಗಳಿಗೂ, ಬ್ರಹ್ಮಕುಲದವರಿಗೂ
ಈ ವಂಶವೇ ಉತ್ಪತ್ತಿಕಾರಣವಾಗಿರುವುದು. ನೀನು ಈ ವಂಶದಲ್ಲಿಯೇ
ಹುಟ್ಟಿದವನು ಪೂರುವಿಗೆ ಜನಮೇಜಯನೆಂಬ ಮಗನಾದನು. ಆ ಜ
ನಮೇಜಯನಿಗೆ ಪ್ರಚನ್ವನೂ, ಅವನಿಗೆ ಪ್ರವಿಶೋಧನೂ, ಪ್ರವಿಶೋ
ಧನಿಗೆ ನಮಸ್ಯುವೂ, ನಮಸ್ಯುವಿಗೆ ಚಾರುವೂ, ಚಾರುವಿಗೆ ಸುದ್ಯು

ವೂ, ಸುದ್ಯುವಿಗೆ ಬಹುಗವನೂ, ಬಹುಗವನಿಗೆ ಶರ್ಯಾತಿಯೂ, ಶರ್ಯಾತಿಗೆ ಸಂಯಾತಿಯೂ, ಸಂಯಾತಿಗೆ ಅಹಂಯಾತಿಯೂ, ಅವನಿಗೆ ರೌದ್ರಾಶ್ವನೂ ಜನಿಸಿದರು. ಈ ರೌದ್ರಾಶ್ವನಿಗೆ, ಘೃತಾಚಿಯೆಂಬ ಅಪ್ಸರಸಿಯಲ್ಲಿ, ವಿಶ್ವಾತ್ಮಕನಾದ ಭಗವಂತನ ದಶೇಂದ್ರಿಯಗಳಂತೆ, ಋತೇಯು, ಕಕ್ಷೇಯು, ಸ್ಥಂಡಿಲೇಯು, ಕೃತೇಯು, ಜಲೇಯು, ಸನ್ನತೇಯು, ಧರ್ಮೇಯು, ಸತ್ಯೇಯು, ವ್ರತೇಯು, ವನೇಯುವೆಂಬ ಹತ್ತುಮಂದಿ ಪುತ್ರರು ಜನಿಸಿದರು. ಅವರಲ್ಲಿ ಋತೇಯುವಿನಿಂದ ಅಂತಿನಾರನೂ, ಅವನಿಂದ ಸುಮತಿ, ಧ್ರುವ, ಅಪ್ರತಿರಥರೆಂಬ ಮೂವರು ಮಕ್ಕಳೂ ಜನಿಸಿದರು. ಅವರಲ್ಲಿ ಅಪ್ರತಿರಥನಿಗೆ ಕಣ್ವನೆಂಬ ಮಗನಾದನು. ಕಣ್ವನಿಂದ ಮೇಧಾತಿಥಿಯೂ, ಅವನಿಂದ ಪ್ರಸ್ಕಣ್ವರೆಂಬ ಕೆಲವು ಬ್ರಾಹ್ಮಣರೂ ಜನಿಸಿದರು. ಅಂತಿನಾರನ ಮಗನಾದ ಸುಮತಿಗೆ ರೈಭ್ಯನೆಂಬ ಮಗನಾದನು. ಈ ರೈಭ್ಯನ ಮಗನೇ ಪ್ರಸಿದ್ಧನಾದ ದುಷ್ಯಂತನು. ಈ ದುಷ್ಯಂತನು ಒಮ್ಮೆ ಬೇಟೆಗಾಗಿ ಕಾಡಿಗೆ ಹೊರಟು, ಮಾರ್ಗವಶದಿಂದ ಕಣ್ವಾಶ್ರಮದಲ್ಲಿ ಪ್ರವೇಶಿಸಿ, ಅಲ್ಲಿ ಲಕ್ಷ್ಮೀದೇವಿಯಂತೆ ಸಹಜಕಾಂತಿಯಿಂದ ಶೋಭಿಸುತಿದ್ದ ಜಗನ್ಮೋಹನಾಕಾರವುಳ್ಳ ಶಕುಂತಲೆಯೆಂಬ ಯುವತಿಯನ್ನು ಕಂಡನು. ಅವಳಲ್ಲಿ ದುಷ್ಯಂತನಿಗೆ ಮೋಹವುಂಟಾಯಿತು. ಅವಳ ದರ್ಶನದಿಂದುಂಟಾದ ಸಂತೋಷದಿಂದ, ತನ್ನ ಮೃಗಯಾಶ್ರಮವನ್ನೂ ಮರೆತು, ಕಾಮವಿಕಾರಕ್ಕೊಳಗಾಗಿ, ಮಂದಹಾಸದೊಡನೆ ಮುಂದೆ ಹೋಗಿ, ಅವಳನ್ನು ಕುರಿತು ಮೃದುಮಧುರವಾಕ್ಯದಿಂದ ಹೀಗೆಂದು ಹೇಳುವನು. "ಓ ಯುವತೀ! ಇಂತಹ ಸುಂದರಾಕಾರವುಳ್ಳ ನೀನು ಯಾರು? ಯಾರ ಮಗಳು? ಯಾವ ಉದ್ದೇಶದಿಂದ ನಿರ್ಜನವಾದ ಈ ವನದಲ್ಲಿ ಒಂಟಿಯಾಗಿ ಕುಳಿತಿರುವೆ? ಓ ಸುಂದರಾಂಗಿ! ನೀನು ಈ ಋಷ್ಯಾಶ್ರಮದಲ್ಲಿದ್ದರೂ ರಾಜಕುಮಾರಿಯಾಗಿಯೇ ಇರಬೇಕು. ಇದಕ್ಕೆ ನನ್ನ ಮನಸ್ಸೇ ಸಾಕ್ಷಿಯು! ನೀನು ಬ್ರಾಹ್ಮಣಕುಲದವಳಾಗಿದ್ದಪಕ್ಷದಲ್ಲಿ ನನ್ನ ಮನಸ್ಸು ನಿನ್ನಲ್ಲಿ ಮೋಹಗೊಳ್ಳಲಾರದು. ಪೂರುವಂಶಜರಾದ ಕ್ಷತ್ರಿಯರ ಮನಸ್ಸು ಎಂದಿಗೂ ಅಧರ್ಮಮಾರ್ಗದಲ್ಲಿ ಪ್ರವೇಶಿಸಲಾರದು" ಎಂದನು. ಅದಕ್ಕಾ ಶಕುಂತಲೆಯು "ಓ ನರೇಂದ್ರಾ! ನೀನು ಊಹಿಸಿದುದೇ

ನಿಜವು! ನಾನು ವಿಶ್ವಾಮಿತ್ರರಾಜರ್ಷಿಗೆ, ಮೇನಕೆಯೆಂಬ ಅಪ್ಸರಸಿಯ ಲ್ಲಿ ಹುಟ್ಟಿದವಳು. ನನ್ನ ತಾಯಿಯು ನನ್ನನ್ನು ಬಾಲ್ಯದಲ್ಲಿಯೇ ಈ ವನದ ಲ್ಲಿ ಬಿಟ್ಟು ನಿಜಲೋಕಕ್ಕೆ ಹೋದಳು. ನನ್ನ ವೃತ್ತಾಂತವೆಲ್ಲವೂ ಈ ಆಶ್ರ ಮದಲ್ಲಿರುವ ಕಣ್ವಮಹರ್ಷಿಗೆ ಚೆನ್ನಾಗಿ ತಿಳಿಯುವುದು ಅದು ಹಾಗಿರಲಿ! ನಮ್ಮಿಂದ ಈಗ ನಿನಗಾಗಬೇಕಾದುದೇನು? ರಾಜೇಂದ್ರಾ! ಬಾ! ಇಲ್ಲಿ ಕುಳ್ಳಿರು! ನಮ್ಮ ಸತ್ಕಾರವನ್ನು ಸ್ವೀಕರಿಸು! ಇಷ್ಟವಿದ್ದರೆ ಇಲ್ಲಿ ಭೋಜ ನವನ್ನು ಮಾಡಬಹುದು ನಮ್ಮಲ್ಲಿ ನೀವಾರಧಾನ್ಯಗಳು ಸಮೃದ್ಧವಾ ಗಿರುವುವು ಅವಕಾಶವಿದ್ದರೆ ಕೆಲವು ದಿನಗಳವರೆಗೆ ಈ ಆಶ್ರಮ ದಲ್ಲಿಯೇ ವಾಸಮಾಡುತ್ತಿರಬಹುದು" ಎಂದಳು. ಅಮೃತಸಮಾನವಾದ ಈ ಪ್ರಿಯವಾಕ್ಯವನ್ನು ಕೇಳಿ ದುಷ್ಯಂತನು "ಓ ಸುಂದರೀ! ಕುಶಿಕವಂ ಶದಲ್ಲಿ ಹುಟ್ಟಿದ ನಿನಗೆ, ಈ ವಿನಯಾದಿಗುಣಗಳು ಸಹಜವಾಗಿಯೇ ಇರುವು ವು ಅದು ಹಾಗಿರಲಿ! ಲೋಕದಲ್ಲಿ ರಾಜಕನ್ಯೆಯರು ತಮಗ ಇಷ್ಟಬಂದ ಪತಿಯನ್ನು ತಾವೇ ಸ್ವತಂತ್ರಿಸಿ ವರಿಸಬಹುದು ನೀನೂ ರಾಜಕನ್ಯೆಯಾದು ದರಿಂದ ನಿನಗೆ ಇಷ್ಟವಾಗಿದ್ದರ ನನ್ನನ್ನು ವರಿಸಬಹುದಲ್ಲವೆ?" ಎಂದನು. ಶ ಕುಂತಲೆಗೂ ಅವನಲ್ಲಿ ಮೋಹವಿದ್ದುದರಿಂದ, ಆಕೆಯು ಹಾಗೆಯೇ ಆಗಲೆಂ ದು ಸಮ್ಮತಿಸಿದಳು ದೇಶಕಾಲಜ್ಞನಾದ ದುಷ್ಯಂತನು, ಆಕೆಯನ್ನು ಗಾಂ ಧರ್ವವಿಧಿಯಿಂದ ಪರಿಗ್ರಹಿಸಿದನು ಅಮೋಘವೀರ್ಯವುಳ್ಳ ಆ ರಾಜನು ಆ ರಾತ್ರಿಯೆಲ್ಲವೂ ಆ ಆಶ್ರಮದಲ್ಲಿಯೇ ಶಕುಂತಳೆಯೊಡನೆ ಸಹಸಗೋಷ್ಠಿ ಯ ಲ್ಲಿದ್ದು, ಮರುದಿನದಬೆಳಿಗ್ಗೆ ತನ್ನ ಪಟ್ಟಣಕ್ಕೆ ಹೊರಟುಬಂದನು ಇತ್ತಲಾ ಗಿ ಶಕುಂತಳೆಯು ಕೆಲವು ದಿನಗಳಲ್ಲಿಯೇ ಗರ್ಭವನ್ನು ತಳೆದು,ಒಬ್ಬಕುಮಾರ ನನ್ನು ಪಡೆದಳು ಈಕೆಯ ಸಾಕುತಂದೆಯಾದ ಕಣ್ವನು, ಆ ಬಾಲನಿಗೆ ತನ್ನ ಆಶ್ರಮದಲ್ಲಿಯೇ ಜಾತಕರ್ಮಾದಿಸಂಸ್ಕಾರಗಳನ್ನು ನಡೆಸಿದನು ಈ ಬಾಲಕನು ಕ್ರಮಕ್ರಮವಾಗಿ ದೇಹಬಲದಿಂದಲೂ, ವೀರ್ಯದಿಂದಲೂ, ತೇಜಸ್ಸಿನಿಂದ ಲೂ ವೃದ್ಧಿಹೊಂದಿ, ಒಮ್ಮೆ ಆ ಆಶ್ರಮಸಮೀಪದಲ್ಲಿ ಆಟವಾಡುತ್ತಿರು ವಾಗ, ಬಂದಾನೊಂದು ಸಿಂಹವನ್ನು ಕಂಡು, ಅದನ್ನು ಹಿಡಿದುತಂದು, ಅದ ರೊಡನೆ ವಿನೋದಿಸುತಿದ್ದನು. ಓ ಪರೀಕ್ಷಿದ್ರಾಜಾ! ಅವನನ್ನು ಸಾಧಾರ

ಣಕ್ಷತ್ರಿಯಬಾಲಕನೆಂದು ತಿಳಿಯಬೇಡ! ಅವನಲ್ಲಿ ಭಗವದಂಶವಿದ್ದುದರಿಂ
ದಲೇ, ಅವನಿಗೆ ಬಾಲ್ಯದಲ್ಲಿಯೇ ಆವಿಧವಾದ ಶೌರ್ಯಧೈರ್ಯಾದಿಗಳುಂ
ಟಾದುವು. ಕೆಲವುದಿನಗಳಮೇಲೆ ಶಕುಂತಳೆಯು, ಅಪಾರವಿಕ್ರಮವುಳ್ಳ ಆ
ಬಾಲಕನನ್ನೂ ಕರೆದುಕೊಂಡು, ಪತಿಗೃಹಕ್ಕೆ ಹೊರಟುಬಂದಳು. ಇಷ್ಟರ
ಲ್ಲಿ ಇತ್ತಲಾಗಿ ದುಷ್ಯಂತನಿಗೆ, ಹಿಂದೆ ತಾನು ಬೇಟೆಗೆ ಹೋಗಿ ಶಕುಂತಳೆಯ
ನ್ನು ವಿವಾಹಮಾಡಿಕೊಂಡುದೂ,ಒಂದು ರಾತ್ರಿ ಅವಳೊಡನೆ ಇದ್ದುಬಂದು
ದೂ ಇವೆಲ್ಲವೂ ಮರೆತುಹೋಗಿದ್ದಿತು. ಪುತ್ರವತಿಯಾಗಿ ಬಂದ ಆಕೆಯನ್ನು
ಪರಸ್ತ್ರೀಯೆಂದೂ, ಆ ಮಗನನ್ನು ಬೇರೆಪುರುಷನಿಗೆ ಹುಟ್ಟಿದ ಮಗನೆಂ
ದೂ ಭ್ರಮಿಸಿ, ಆಕೆಯನ್ನು ಸ್ವೀಕರಿಸದೆಹೋದನು. ಹೀಗೆ ರಾಜನು ನಿ
ರ್ದುಷ್ಟಳಾದ ಪತ್ನಿಯನ್ನು ನಿರಾಕರಿಸುತ್ತಿರುವಾಗ, ಆ ರಾಜಸಭೆಯಲ್ಲಿದ್ದ
ವರೆಲ್ಲರೂ ಕೇಳುತ್ತಿರುವಹಾಗೆಯೇ ಒಂದಾನೊಂದು ಅಶರೀರವಾಕ್ಕು ಕೇಳಿ
ಸಿತು 'ಓ ರಾಜಾ! ಈಕೆಯ ಸಂತಾನದವಿಷಯವಾಗಿ ನೀನು ಸ್ವಲ್ಪವೂ
ಸಂದೇಹಿಸಬೇಡ! ಈ ಪುತ್ರನಲ್ಲಿ ನಿನಗೆ ಸಮಾನವಾದ ಮಹಾಪುರುಷಲ
ಕ್ಷಣಗಳನ್ನು ನೋಡು! ಪುತ್ರೋತ್ಪತ್ತಿವಿಷಯದಲ್ಲಿ ತಾಯಿಯೆಂಬವಳು ತಂ
ದೆಯ ವೀರ್ಯವನ್ನು ಕಾಪಾಡಿಡತಕ್ಕ ಚರ್ಮದ ಚೀಲದಂತೆಯೇಹೊರತು
ಬೇರೆಯಲ್ಲ ತಂದೆಯೇ ತನ್ನ ಏಕಾಂಶದಿಂದ ಮಗನಾಗಿ ಹುಟ್ಟುವನು.
ಆದುದರಿಂದ ಈ ಬಾಲನು ನಿನ್ನ ವಂಶವರ್ಧಕನಾದ ಮಗನು. ಈಕೆಯು
ನಿನ್ನ ಪತ್ನಿ! ಇವರನ್ನು ನಿರಾಕರಿಸಬೇಡ! ನಿಸ್ಸಂದೇಹವಾಗಿ ಪರಿಗ್ರಹಿಸು!
ಪುತ್ರನೇ ತಂದೆಯನ್ನು ನರಕದಿಂದ ತಪ್ಪಿಸಿ ಕಾಪಾಡತಕ್ಕವನು ಈ ಶಕುಂ
ತಳೆಯ ಮಾತು ಸತ್ಯವು ಈ ಪುತ್ರನು ಭಗವದಂಶಸಂಭೂತನು. ಬ್ರಾಹ್ಮ
ಣಪ್ರಿಯನು! ಸತ್ಯಸಂಧನು. ಗುಣಗ್ರಾಹಿ! ಕೀರ್ತಿವರ್ಧನನು! ಕೃತಜ್ಞ
ನು ಮಹೋತ್ಸಾಹಶಕ್ತಿಯುಳ್ಳವನು. ಗುರುಹಿರಿಯರನ್ನು ಸೇವಿಸತಕ್ಕವ
ನು. ಇಂತಹ ಸುಪುತ್ರನನ್ನು ನೀನು ನಿರಾಕರಿಸಬೇಡ! ಭರಿಸು" ಎಂಬೀವಾ
ಕ್ಯಗಳು ಕೇಳಿಬಂದುವು. ಇದನ್ನು ಕೇಳಿ ದುಷ್ಯಂತನು ಸಂದೇಹವನ್ನುಬಿ
ಟ್ಟು, ಸಂತೋಷಪೂರ್ವಕವಾಗಿ ಆ ಭಾರ್ಯಾಪುತ್ರರನ್ನು ಸ್ವೀಕರಿಸಿದನು.
ಆಕಾಶವಾಣಿಯು ದುಷ್ಯಂತನನ್ನು ಕುರಿತು "ಈ ಪುತ್ರನನ್ನು ಭರಿಸು" ಎಂ

ದು ಹೇಳಿದುದರಿಂದ ಅವನಿಗೆ ಭರತನೆಂದೇ ಹೆಸರಾಯಿತು. ದುಷ್ಯಂತನ ಕಾಲಾನಂತರದಲ್ಲಿ ಈ ಭರತನೇ ಚಕ್ರವರ್ತಿಯಾಗಿ ರಾಜ್ಯವನ್ನು ಪಾಲಿಸುತ್ತ ಮಹಾಯಶಸ್ಸಿಗೆ ಭಾಗಿಯಾದನು ಇವನ ಮಹಿಮೆಯನ್ನು ಸಮಸ್ತಜಗತ್ತೂ ಕೊಂಡಾಡುವುದು ವಾಸುದೇವಾಂಶಸಂಭೂತನಾದ ಆ ಭರತನ ಹಸ್ತದಲ್ಲಿ, ಶ್ರೀವಿಷ್ಣುವಿಗೆ ಹೇಗೋಹಾಗೆ ಶಂಖಚಕ್ರಾದಿರೇಖೆಗಳೂ, ಪಾದದಲ್ಲಿ ಪದ್ಮರೇಖೆಯೂ ಗೋಚರಿಸುತಿದ್ದುವು ಈತನು ಮಹಾಭಿಷೇಕದಿಂದ ಚಕ್ರವರ್ತಿಯಾದಮೇಲೆ, ಗಂಗಾನದಿಯ ಉತ್ಪತ್ತಿಸ್ಥಾನದಿಂದ ಸಮುದ್ರಸಂಗಮದವರೆಗೆ, ಉದ್ದಕ್ಕೂ ಅನೇಕಸ್ಥಳಗಳಲ್ಲಿ ಇಪ್ಪತ್ತೈವತ್ತಾವರ್ತಿ ಅಶ್ವಮೇಧಯಾಗಗಳನ್ನು ನಡೆಸಿ ಭಗವಂತನನ್ನಾರಾಧಿಸಿದನು ಇದೇರೀತಿಯಾಗಿ ಯಮುನಾತೀರದಲ್ಲಿಯೂ ದೀರ್ಘತಮಸ್ಸೆಂಬ ಮುನಿಯನ್ನು ಪೂರೋಹಿತನನ್ನಾಗಿಟ್ಟುಕೊಂಡು, ಎಪ್ಪತ್ತೆಂಟು ಅಶ್ವಮೇಧಯಾಗದ ಕುದುರೆಗಳನ್ನು ಬಂಧಿಸಿ, ಅಮೂಲಕವಾಗಿ ಭಗವಂತನನ್ನಾರಾಧಿಸಿದುದಲ್ಲದೆ ಬ್ರಾಹ್ಮಣರಿಗೂ ಬೇಕಾದಷ್ಟು ಧನವನ್ನು ಕೊಟ್ಟನು ಮತ್ತು ಈ ರಾಜನು ಪ್ರಕೃಷ್ಟಗುಣವುಳ್ಳ ಒಂದಾನೊಂದು ಪ್ರದೇಶದಲ್ಲಿ, ಅಗ್ನಿಪೂಜೆಯನ್ನು ಮಾಡಿ, ಅಸಂಖ್ಯಾತವಾದ ಗೋವುಗಳನ್ನು ದಾನಮಾಡಲು, ಸಹಸ್ರ ಬ್ರಾಹ್ಮಣರು ಅವುಗಳನ್ನು ತಮ್ಮೊಳಗೆ ಸಂತೋಷದಿಂದ ಹಂಚಿಕೊಂಡು ಹೋದರು. ಮತ್ತು ಆ ದುಷ್ಯಂತಪುತ್ರನು ಮಷ್ಣಾರವೆಂಬ ಒಂದಾನೊಂದು ಪುಣ್ಯತೀರ್ಥದಲ್ಲಿ, ಇತರರಾಜರೆಲ್ಲರಿಗೂ ಆಶ್ಚರ್ಯಪಡುವಂತೆ ನೂರಮೂವತ್ತು ಹಯಮೇಧಗಳನ್ನಾರಂಭಿಸಿ,ಅದಕ್ಕೆ ಶತ್ರುರಾಜರಿಂದಲೂ, ಮಾಯಾವಿಗಳಾದ ದೇವತೆಗಳಿಂದಲೂ ಸಂಭವಿಸಿದ ವಿಘ್ನಗಳೆಲ್ಲವನ್ನೂ ತಪ್ಪಿಸಿಕೊಂಡು,ಯಾಗಪೂರ್ತಿಯನ್ನು ಮಾಡಿದುದಲ್ಲದೆ, ಆ ಪ್ರದೇಶದಲ್ಲಿ ಶುಭ್ರದಂತವುಳ್ಳವುಗಳಾಗಿಯೂ, ಸುವರ್ಣಾಭರಣಗಳಿಂದಲಂಕೃತಗಳಾಗಿಯೂ ಇರುವ ಹದಿನಾಲ್ಕು ಅಯುತಸಂಖ್ಯೆಯುಳ್ಳ ಭದ್ರಗಜಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು ಓ ಪರೀಕ್ಷಿದ್ರಾಜಾ! ಇಂತಹ ಅದ್ಭುತಕರ್ಮಗಳನ್ನು ಹಿಂದೆ ಯಾವರಾಜರೂ ನಡೆಸಿದುದಿಲ್ಲ ಮುಂದೆಯೂ ನಡೆಸಬಲ್ಲವರಿಲ್ಲ. ಕೈನೀಡಿ ಸ್ವರ್ಗವನ್ನು ಹಿಡಿಯಬಲ್ಲವರು ಹೇಗೆ ದುರ್ಲಭವೋ

ಹಾಗೆ ಆ ಭರತನಂತೆ ಕೀರ್ತಿಯನ್ನು ಪಡೆದವರು, ಹಿಂದೆಯೂ, ಈಗಲೂ, ಮುಂದೆಯೂ ಸಿಕ್ಕಲಾರರು. ಈ ಭರತನು ಬ್ರಾಹ್ಮಣಕುಲಕ್ಕೆ ಹಿಂಸಕರಾದ ಕಿರಾತರು, ಹೂಣರು, ಯವನರು, ಆಂಧ್ರರು, ವಂಗರು, ಶಕರು, ಕಷರು, ಮ್ಲೇಚ್ಛರು ಮೊದಲಾದ ಹೀನಜಾತಿಯ ರಾಜರೆಲ್ಲರನ್ನೂ ದಿಗ್ವಿಜಯದಲ್ಲಿ ಜಯಿಸಿ, ಲೋಕಕ್ಷೇಮವನ್ನುಂಟುಮಾಡಿದನು ಮತ್ತೊಮ್ಮೆ ದಾನವರನ್ನು ಜಯಿಸಿ,ಅವರು ಪಾತಾಳದಲ್ಲಿ ಬಚ್ಚಿಟ್ಟಿದ್ದ ದೇವತಾ ಸ್ತ್ರೀಯರನ್ನೂ, ಮನುಷ್ಯರನ್ನೂ ಬಿಡಿಸಿತಂದನು ಈ ಭರತನ ಆಳ್ವಿಕೆಯಲ್ಲಿ ಭೂಮ್ಯಾಕಾಶಗಳು ಪ್ರಜೆಗಳಿಗೆ ಬೇಕಾದ ಕೋರಿಕೆಗಳೆಲ್ಲವನ್ನೂ ಅನಾಯಾಸವಾಗಿ ಒದಗಿಸಿಕೊಡುತಿದ್ದುವು ಅವನ ಆಜ್ಞೆಗೆ ಯಾವ ದಿಕ್ಕಿನಲ್ಲಿಯೂ ತಡೆಯಿಲ್ಲದೆ ನಿರಂಕುಶವಾಗಿ ನಡೆಯುತಿತ್ತು ಭರತನು ಇಂತಹ ಏಕಛತ್ರಾಧಿಪತ್ಯದಿಂದ ಇಪ್ಪತ್ತೇಳು ಸಹಸ್ರಸಂವತ್ಸರಗಳವರೆಗೆ ಭೂಮಂಡಲವನ್ನು ಪಾಲಿಸುತಿದ್ದು, ಕೊನೆಗೆ ಲೋಕಪಾಲಕರಿಗೂ ದುರ್ಲಭವಾದ ತನ್ನ ಐಶ್ವರ್ಯವನ್ನೂ, ರಾಜ್ಯಸಂಪತ್ತನ್ನೂ, ಅಧಿಕಾರಶಕ್ತಿಯನ್ನೂ, ದೇಶವನ್ನೂ, ದೇಹಾನುಬಂಧಿಗಳನ್ನೂ ಅನಿತ್ಯವೆಂದು ತಿಳಿದು ವಿರಕ್ತನಾದನು. ಆ ಭರತನಿಗೆ ಮೂರುಮಂದಿ ಭಾರ್ಯೆಯರು ಆ ಮೂವರೂ ವಿದರ್ಭರಾಜನ ಕುಮಾರಿಯರು ಅವರಲ್ಲಿ ಒಬ್ಬೊಬ್ಬಳಿಗೂ ಒಬ್ಬೊಬ್ಬ ಪುತ್ರನು ಜನಿಸಿದನು. ಭರತನು ಆ ಮಕ್ಕಳಲ್ಲಿರುವ ಕೆಲವು ದೋಷಗಳನ್ನು ನೋಡಿ, ತನಗೆ ತಕ್ಕ ಪುತ್ರರಲ್ಲವೆಂದು ಅವರನ್ನು ಆಗಾಗ ನಿಂದಿಸುತಿದ್ದನು ಇದನ್ನು ನೋಡಿ ಆ ಮೂವರುಪತ್ನಿಯರೂ ಪತಿಗೆ ತಮ್ಮಲ್ಲಿ ವ್ಯಭಿಚಾರಶಂಕೆಯಿರಬಹುವುದೆಂದೂ, ಅದರಿಂದ ತಮ್ಮನ್ನು ಪರಿತ್ಯಾಗಮಾಡಬಹುದೆಂದೂ ಶಂಕಿಸಿ, ಆ ಪುತ್ರರನ್ನು ತಾವೇ ಕೊಂದುಬಿಟ್ಟರು. ಹೀಗೆ ತನಗ ವಂಶಚ್ಛೇದವಾದುದರಿಂದ ಭರತನು ಚಿಂತಾಕುಲನಾಗಿ. ಮರುತ್ತುಗಳನ್ನುದ್ದೇಶಿಸಿ ಒಂದು ಯಾಗವನ್ನು ಮಾಡಿದನು. ಆ ಮರುತ್ತುಗಳು ಅವನಲ್ಲಿ ಪ್ರಸನ್ನರಾಗಿ ಒಬ್ಬ ಪುತ್ರನನ್ನು ಕರುಣಿಸಿದರು. ಆತನಿಗೆ ಭರದ್ವಾಜನೆಂದು ಹೆಸರಾಯಿತು ಈ ಹೆಸರು ಬರುವುದಕ್ಕೆ ಒಂದು ಕಾರಣವುಂಟು. ಬೃಹಸ್ಪತಿಗೆ ಉಚಥ್ಯನೆಂಬ ಸಹೋದರನೊಬ್ಬನಿರುವನು ಅವನಿಗೆ ಮಮ

ತೆಯೆಂಬ ಭಾರ್ಯೆಯಿದ್ದಳು. ಅವಳು ಗರ್ಭವತಿಯಾಗಿದ್ದಾಗ, ಬೃಹಸ್ಪತಿಯು ಅವಳನ್ನು ಕಾಮಿಸಿ, ಅವಳೊಡನೆ ಸಂಭೋಗಿಸುವುದಕ್ಕೆ ಯತ್ನಿಸಿದನು. ಆಗ ಗರ್ಭದಲ್ಲಿದ್ದ ಶಿಶುವು "ಬೇಡಬೇಡ"ವೆಂದು ನಿವಾರಿಸುತ್ತಿರಲು, ಬೃಹಸ್ಪತಿಯು ಕೋಪಿಷ್ಠನಾಗಿ ಆ ಶಿಶುವನ್ನು ಕುರಿತು "ನೀನು ದೀರ್ಘತಮಸ್ಸಿನಲ್ಲಿ ಪ್ರವೇಶಿಸಿ, ಎಂದೆಂದಿಗೂ ಕುರುಡನಾಗಿರು" ಎಂದು ಶಪಿಸಿದುದಲ್ಲದೆ, ಬಲಾತ್ಕಾರಪೂರ್ವಕವಾಗಿ ಆಕೆಯಲ್ಲಿ ತನ್ನ ವೀರ್ಯವನ್ನಿಟ್ಟನು ಆ ಮೇಲೆ ಆ ಗರ್ಭಶಿಶುವು, ತನ್ನ ಹಿಮ್ಮಡಿಯಿಂದ ಬೃಹಸ್ಪತಿಯ ವೀರ್ಯವನ್ನು ಹೊರಕ್ಕೆ ತಳ್ಳಿ, ತಾನೂ ಹೊರಗೆ ಬಂದಿತು. ಆ ಶಿಶುವಿಗೆ ದೀರ್ಘತಮಸ್ಸೆಂದೇ ಹೆಸರಾಯಿತು ಆ ಬೃಹಸ್ಪತಿಯ ವೀರ್ಯವು ಭೂಮಿಯಲ್ಲಿ ಬಿದ್ದೊಡನೆ ಒಂದು ಗಂಡುಶಿಶುವಾಯಿತು. ಉಚಥ್ಯಪತ್ನಿಯಾದ ಮಮತೆಯು, ತನ್ನ ಪತಿಗೆ ಭಯಪಟ್ಟು, ಬೃಹಸ್ಪತಿವೀರ್ಯದಿಂದ ಜನಿಸಿದ ಆ ಕುಮಾರನನ್ನು ಅಲ್ಲಿಯೇ ಬಿಟ್ಟು ಹೊರಡುವುದಕ್ಕೆ ಯತ್ನಿಸಿದಳು ಇದನ್ನು ನೋಡಿ ದೇವತೆಗಳು ಆಕೆಯನ್ನು ಕುರಿತು "ಎಲೆ ಮೂಢೆ ! ಈ ಬಾಲನನ್ನು ಬಿಟ್ಟುಹೋಗಬೇಡ! "ದ್ವಾಜಂ" ಇಬ್ಬರಿಗೆ ಹುಟ್ಟಿದ ಮಗನಾದ ಈ ಕುಮಾರನನ್ನು "ಭರ" ಭರಿಸು, ಎಂದರು. ಆಗಲೂ ಮಮತೆಯು ಗಂಡನ ಭಯದಿಂದ ಆ ಮಾತಿಗೆ ಸಮ್ಮತಿಸದೆ, ಬೃಹಸ್ಪತಿಯನ್ನು ಕುರಿತು "ಓ ಬೃಹಸ್ಪತೀ ! ಈ ದ್ವಾಜನನ್ನು ನೀನೇ ಭರಿಸು" ಎಂದಳು. ಬೃಹಸ್ಪತಿಯೂ ಆಕೆಯನ್ನು ಕುರಿತು "ನೀನೇ ಇವನನ್ನು ಭರಿಸು" ಎಂದನು. ಹೀಗೆ ಒಬ್ಬರಿಗೊಬ್ಬರಿಗೆ ಜಗಳವಾಡುತ್ತ, ಕೊನೆಗೆ ತಾಯಿತಂದೆಗಳಿಬ್ಬರೂ ಆ ಕುಮಾರನನ್ನು ಅಲ್ಲಿಯೇ ಬಿಟ್ಟುಹೊರಟುಹೋದರು. ಹೀಗೆ ಮಮತೆ, ಬೃಹಸ್ಪತಿ, ಇವರಿಬ್ಬರೂ "ಭರ ದ್ವಾಜಂ" "ಭರದ್ವಾಜಂ" ಎಂದು ಒಬ್ಬರಿಗೊಬ್ಬರು ಜಗಳವಾಡಿ ಬಿಟ್ಟುಹೋದುದರಿಂದ, ಆ ಕುಮಾರನಿಗೆ ಭರದ್ವಾಜನೆಂದೇ ಹೆಸರಾಯಿತು ಓ ಪರೀಕ್ಷಿದ್ರಾಜಾ ! ಹೀಗೆ ತಾಯಿತಂದೆಗಳಿಂದ ತ್ಯಜಿಸಲ್ಪಟ್ಟ ಆ ಪುತ್ರನನ್ನು! ಮರುತ್ತುಗಳು ಕರೆತಂದು ಪೋಷಿಸುತ್ತಿದ್ದು, ಕೊನೆಗೆ ದೇವತೆಗಳ ಪ್ರೇರಣೆಯಿಂದ ಅವನನ್ನು ಭರತನ ವಶಕ್ಕೆ ಒಪ್ಪಿಸಿದರು. ಭರತನಿಗೆ ಸಂತಾನವಿಲ್ಲದೆ ವಂಶಚ್ಛೇದವಾಗುತಿದ್ದ ಸಂದರ್ಭ

ದಲ್ಲಿ, ಆವಂಶಕ್ಕೆ ಈತನೇ ದತ್ತಪುತ್ರನಾಗಿ ವಂಶಾಭಿವೃದ್ಧಿಗೆ ಕಾರಣನಾದ ನು. ನಿಂತುಹೋಗುತಿದ್ದ (ವಿತಥವಾಗುತಿದ್ದ) ಭರತವಂಶಕ್ಕೆ ದತ್ತಾದುದ ರಿಂದ, ಇವನಿಗೆ ವಿತಥನೆಂದೂ ನಾಮಾಂತರವುಂಟಾಯಿತು ಇದು ಇಪ್ಪ ತ್ತನೆಯ ಅಧ್ಯಾಯವು

---

ಗಗೇ ರಂತಿದೇವವಂಶಾನುಕ್ರಮವು

ರಾಜೇಂದ್ರಾ, ಕೇಳು ! ಆ ವಿತಥನಿಗೆ ಮನ್ಯುವೆಂಬ ಮಗನಾದನು. ಮನ್ಯುವಿಗೆ, ಬೃಹತ್‌ಕ್ಷತ್ರ, ಜಯ, ಮಹಾವೀರ್ಯ, ನರ, ಗರ್ಗರೆಂಬ ಐ ದುಮಂದಿ ಪುತ್ರರು ಜನಿಸಿದರು ಇವರಲ್ಲಿ ನರನೆಂಬವನಿಗೆ ಸಂಕೃತಿಯೆಂಬ ಪುತ್ರನು ಹುಟ್ಟಿದನು. ಈ ಸಂಕೃತಿಗೆ ಗರ್ಗನೆಂದೂ, ರಂತಿದೇವನೆಂದೂ ಇ ಬ್ಬರು ಪುತ್ರರಾದರು. ಓ ಪರೀಕ್ಷಿದ್ರಾಜಾ ! ಈ ರಂತಿದೇವನ ಕೀರ್ತಿಯು ಭೂಲೋಕದಲ್ಲಿಯೂ,ಸ್ವರ್ಗಲೋಕದಲ್ಲಿಯೂ ವಿಶೇಷವಾಗಿ ಕೊಂಡಾಡಲ್ಪ ಡುವುದು ಈ ರಂತಿದೇವನು ದೈವಾಧೀನವಾಗಿ ತನಗೆ ಲಭಿಸಿದ ಧನಸಮೃದ್ಧಿ ಯಿಂದ ದೊಡ್ಡಧನವಂತನಾಗಿದ್ದರೂ,ಅವೆಲ್ಲವನ್ನೂ ಯಾಚಕರಿಗೆ ಕೊಟ್ಟು ದರಿದ್ರನಾಗಿ,ಆಗಾಗ ದೈವಲಬ್ಧವಾದ ಆಹಾರದಿಂದಲೇ ಉದರಭರಣವನ್ನು ಮಾಡುತ್ತಿದ್ದನು. ಇದರಮೇಲೆ ಇವನು ಕುಟುಂಬಿಯಾಗಿಯೂ ಇದ್ದನು ಆ ಗಾಗ ಲಭಿಸಿದುದನ್ನು ತನ್ನಲ್ಲಿ ಬಂದು ಯಾಚಿಸಿದವರಿಗೆ ಕೊಟ್ಟುಬಿಡುತ್ತ, ತನಗೂ, ತನ್ನ ಕುಟುಂಬಕ್ಕೂ ತನಗೂ ಆಹಾರವಿಲ್ಲದೆ ಕೃಶನಾಗಿ, ನಿತ್ಯದರಿ ದ್ರನಾಗಿ, ಅಹನ್ಯಹನಿ ಕಾಲಕ್ಷೇಪಮಾಡುತಿದ್ದನು. ಈಸ್ಥಿತಿಯಲ್ಲಿದ್ದರೂ ಧೈರ್ಯಗೆಡದೆ, ಜಿತೇಂದ್ರಿಯನಾಗಿಯೇ ಇರುತಿದ್ದನು ಒಮ್ಮೆ ಈತನು ತನ್ನಲ್ಲಿ ದ್ದುದೆಲ್ಲವನ್ನೂ ಯಾಚಕರಿಗೆ ಕೊಟ್ಟು ಜಲಪಾನಕ್ಕೂ ಅವಕಾಶವಿಲ್ಲದೆ, ತ ನ್ನ ಕುಟುಂಬದೊಡನೆ ನಾಲ್ವತ್ತೆಂಟುದಿನಗಳವರೆಗೆ ಉಪವಾಸವಿದ್ದನು. ಇ ಷ್ಟರಲ್ಲಿ ಇವನಿಗೆ ಹಸಿವು ಬಾಯಾರಿಕೆಗಳಿಂದ ದೇಹವೆಲ್ಲವೂ ನಡುಗಲಾರಂಭಿ ಸಿತು. ಆಮೇಲೆ ಮರುದಿನದಬೆಳಿಗ್ಗೆ ಈತನಿಗೆ ದೈವವಶದಿಂದ ಘೃತಮಿಶ್ರ ವಾದ ಜವೆಗೋಧಿಯ ಪಾಯಸಾನ್ನವೂ. ಜಲವೂ ಲಭಿಸಿತು. ತನ್ನ ಕು ಟುಂಬದೊಡನೆ ಆ ಪಾಯಸಾನ್ನವನ್ನು ಭುಜಿಸುವುದಕ್ಕಾಗಿ, ಸ್ನಾನಾದಿಗ

ಳಿಂದ ಸಿದ್ಧನಾಗಿ ಬಂದು, ಆ ಅನ್ನವನ್ನೆತ್ತಿ ಬಾಯಿಗೆ ಹಾಕಿಕೊ
ಳ್ಳುವಷ್ಟರಲ್ಲಿ, ಒಬ್ಬ ಬ್ರಾಹ್ಮಣನು ಇವನ ಮನೆಗೆ ಅತಿಥಿಯಾಗಿ ಬಂದ
ನು ಸಮಸ್ತವನ್ನೂ ಭಗವದಾತ್ಮಕವೆಂದೇ ಭಾವಿಸುತಿದ್ದ ಈ ರಂತಿದೇವ
ನು, ಆ ಬ್ರಾಹ್ಮಣನನ್ನು ಶ್ರದ್ಧೆಯಿಂದಾರಾಧಿಸಿ, ಆ ಪಾಯಸಾನ್ನದಲ್ಲಿ ಸ್ವ
ಲ್ಪಭಾಗವನ್ನು ಆ ಬ್ರಾಹ್ಮಣನಿಗೆ ಕೊಟ್ಟು, ಅವನನ್ನು ತೃಪ್ತಿಪಡಿಸಿ ಕಳುಹಿ
ಸಿದನು ಆ ಬ್ರಾಹ್ಮಣನು ತೃಪ್ತನಾಗಿ ಹೋದಕೂಡಲೆ, ಆ ಶೇಷಾನ್ನವ
ನ್ನು, ತನಗೂ ತನ್ನ ಕುಟುಂಬಕ್ಕೂ ವಿಭಾಗಿಸಿಟ್ಟುಕೊಂಡು, ಭೋಜನಕ್ಕೆ
ಸಿದ್ಧನಾಗಿ ಕುಳಿತನು ಇಷ್ಟರಲ್ಲಿ ಶೂದ್ರನೊಬ್ಬನು ಇವನಮನೆಗೆ ಭೋ
ಜನಾರ್ಥಿಯಾಗಿ ಬಂದನು ಆ ಶೂದ್ರನು ದಾನಾರ್ಹನಲ್ಲವಿದ್ದರೂ, ರಂ
ತಿದೇವನು, ಹಸಿದುಬಂದವರಿಗೆ ಅನ್ನವನ್ನಿಕ್ಕದೆ ಕಳುಹಿಸಬಾರದೆಂಬ ಧರ್ಮ
ಬುದ್ಧಿಯಿಂದ, ತನಗೂ ತನ್ನ ಕುಟುಂಬಕ್ಕೂ ಭೋಜನಕ್ಕಾಗಿ ವಿಭಾಗಿಸಿಟ್ಟ
ಆ ಅನ್ನದಲ್ಲಿಯೇ ಸ್ವಲ್ಪಭಾಗವನ್ನು ಆ ಅತಿಥಿಗೆ ಕೊಟ್ಟು, ಅವನನ್ನೂ ಭಗವ
ತ್ಸ್ವರೂಪವೆಂದೇ ಭಾವಿಸಿ, ತಕ್ಕ ಸತ್ಕಾರಗಳಿಂದ ಅವನನ್ನೂ ಸಂತೋಷ
ಪಡಿಸಿ ಕಳುಹಿಸಿದನು ಆ ಶೂದ್ರನು ಸಂತುಷ್ಟನಾಗಿ ಹೊರಟುಹೋದ
ಮೇಲೆ ಉಳಿದಿದ್ದ ಪಾಯಸಾನ್ನವನ್ನು ತನ್ನ ಕುಟುಂಬದೊಡನೆ ತಾನು ಭು
ಜಿಸುವುದಕ್ಕೆ ಯತ್ನಿಸುತಿದ್ದಾಗ, ಕೆಲವು ನಾಯಿಗಳೊಡನೆ ಬೇರೊಬ್ಬ ಶೂ
ದ್ರನು ಅತಿಥಿಯಾಗಿ ಬಂದು ರಂತಿದೇವನನ್ನು ಕುರಿತು “ಓ ರಾಜಾ!
ಬಹಳವಾಗಿ ಹಸಿದುಬಂದಿರುವೆನು ನನಗೂ ಈ ನಾಯಿಗಳಿಗೂ
ಅನ್ನವನ್ನು ಹಾಕಿ ನಮ್ಮ ಪ್ರಾಣವನ್ನುಳಿಸಬೇಕು” ಎಂದು ಬೇಡಿದನು.
ಅದಕ್ಕೂ ಹಿಂತೆಗೆಯದೆ ರಂತಿದೇವನು, ತನ್ನಲ್ಲಿ ಮಿಕ್ಕಿದ ಅನ್ನವನ್ನೆಲ್ಲಾ ಆ
ಅತಿಥಿಗೂ, ಅವನ ನಾಯಿಗಳಿಗೂ ಗೌರವಪೂರ್ವಕವಾಗಿ ಹಂಚಿಕೊಟ್ಟು, ಅ
ವನನ್ನೇ ಭಗವತ್ಸ್ವರೂಪವೆಂದು ಭಾವಿಸಿ ನಮಸ್ಕಾರಮಾಡಿ ಕಳುಹಿಸಿದನು.
ಇಷ್ಟಾದಮೇಲೆ ಇತ್ತಲಾಗಿ ರಂತಿದೇವನಲ್ಲಿ ಒಂದು ಚೊಂಬುನೀರುಮಾ
ತ್ರವೇ ಮಿಕ್ಕಿತು ಆ ಜಲವಾದರೂ ಒಬ್ಬನಿಗೆಮಾತ್ರ ಸಾಕಾಗುವಂತಿದ್ದಿ
ತು ರಂತಿದೇವನು ಆ ಒಂದು ಚೊಂಬಿನ ನೀರನ್ನೇ ತಮ್ಮೊಳಗೆ ಹಂಚಿಕೊಂ
ಡು, ಆ ದಿನದ ಕಾಲಕ್ಷೇಪವನ್ನು ಮಾಡುವುದಾಗಿ ನಿಶ್ಚಯಿಸಿ, ಮೊದಲು ತಾ

ನು ಸ್ವಲ್ಪನೀರನ್ನು ಕುಡಿಯುವುದಕ್ಕಾಗಿ, ಆ ಜಲಪಾತ್ರವನ್ನೆತ್ತಿಕೊಂಡನು ಆ ಪಾತ್ರವನ್ನೆತ್ತಿ ಬಾಯಿಗೆ ಬಿಟ್ಟುಕೊಳ್ಳುವಷ್ಟರಲ್ಲಿ ಒಬ್ಬಾನೊಬ್ಬ ಹೊಲೆಯನು ಹೊರಬಾಗಿಲಲ್ಲಿ ನಿಂತು "ಓ ರಾಜೇಂದ್ರಾ ! ನಾನು ಹೊಲೆಯನು! ದಾಹದಿಂದ ಸಂಕಟಪಡುತ್ತಿರುವೆನು ಒಂದಿಷ್ಟು ನೀರನ್ನು ಕೊಟ್ಟು ನನ್ನ ಪ್ರಾಣವನ್ನುಳಿಸಬೇಕು" ಎಂದು ಕೂಗಿಕೊಂಡನು. ಎಂತವರಿಗೂ ಕರುಣೆ ಹುಟ್ಟಿಸತಕ್ಕ ಈ ದೀನಧ್ವನಿಯು ಕಿವಿಗೆ ಬಿದ್ದೊಡನೆ, ರಂತಿದೇವನು, ಆ ಜಲಪಾತ್ರವನ್ನು ಕೈಯಲ್ಲಿ ಹಿಡಿದಿದ್ದಹಾಗೆಯೇ ಆತುರದಿಂದ ಹೊರಗೆ ಬಂದು, ಆ ಚಂಡಾಲನ ಸ್ಥಿತಿಯನ್ನು ನೋಡಿ ಬಹಳವಾಗಿ ಕನಿಕರಗೊಂಡು, ಅಮೃತಸಮಾನವಾದ ಪ್ರಿಯವಾಕ್ಯದಿಂದ ಅವನನ್ನು ಕುರಿತು ಹೀಗೆಂದು ಹೇಳುವನು, "ಓ ಪುಲ್ಕಸಾ! ಬ್ರಹ್ಮೇಂದ್ರಾದಿಲೋಕಗಳಲ್ಲಿರುವ ಅಷ್ಟೈಶ್ವರ್ಯಕ್ಕೂ ನಾನು ಆಸಪಡತಕ್ಕವನಲ್ಲ! ಪುನರ್ಜನ್ಮವಿಲ್ಲದ ಮೋಕ್ಷವನ್ನೂ ನಾನು ಕೋರುವವನಲ್ಲ! ನಿನ್ನಂತೆ ಹಸಿವು!ಬಾಯಾರಿಕೆ ಮೊದಲಾದ ಕಷ್ಟಗಳಿಂದ ಪೀಡಿತರಾದ ಬೇರೆ ಎಲ್ಲಾ ಪ್ರಾಣಿಗಳ ದುಃಖವೆಲ್ಲವೂ ನನಗೆ ಪ್ರಾಪ್ತವಾಗಿ, ಅವರೆಲ್ಲರೂ ಆ ಕಷ್ಟದಿಂದ ನಿವೃತ್ತರಾಗಬೇಕೆಂಬುದೇ ನನ್ನ ಕೋರಿಕೆ! ಪ್ರಾಣಾಶಾಸೆಯಿಂದ ನನ್ನಲ್ಲಿಗೆ ಬಂದು ದೈನ್ಯದಿಂದ ಯಾಚಿಸಿದ ನಿನ್ನಂತಹ ಜೀವಿಗಳಿಗೆ, ನಾನು ಕೊಡತಕ್ಕ ಈ ಸ್ವಲ್ಪಜಲವೇ ಜೀವನಾಧಾರವಾಗಿ ಅದರಿಂದ ನೀವು ಬದುಕುವುದಾದರೆ, ನನಗೆ ಅದಕ್ಕಿಂತಲೂ ಮೇಲಾದ ಸಂತೋಷವೇನುಂಟು? ಈ ನೀರು ನಿನ್ನ ಪ್ರಾಣಕ್ಕೆ ಆಪ್ಯಾಯನವನ್ನುಂಟುಮಾಡುವುದಾಗಿದ್ದರೆ, ನನಗೆ ಹಸಿವು, ಬಾಯಿರಿಕೆ, ಬಳಲಿಕೆ, ಮೈನಡುಕ, ದೈನ್ಯ, ಅಶಕ್ತಿ, ದುಃಖ ಚಿಂತೆ, ಮೋಹ ಮೊದಲಾದ ಕಷ್ಟಗಳೆಲ್ಲವೂ ನಿವೃತ್ತವಾದಂತೆಯೇಹೊರತು ಬೇರೆಯಲ್ಲ" ಎಂದು ಹೇಳಿ ಸಹಜದಯಾಳುವಾದ ಆ ರಂತಿದೇವನು, ತಾನು ದಾಹದಿಂದ ಸಾಯುವ ಸ್ಥಿತಿಯಲ್ಲಿರುವಾಗಲೂ, ತನ್ನ ಕೈಯಲ್ಲಿದ್ದ ನೀರನ್ನು ಆ ಚಂಡಾಲನ ಬಾಯಿಗೆ ಬಿಟ್ಟು, ತಾನು ಸುಮ್ಮನಿದ್ದನು. ಹೀಗೆ ರಂತಿದೇವನು ತೋರಿಸಿದ ಉದಾರಬುದ್ಧಿಗೂ, ಧೈರ್ಯಕ್ಕೂ ಮೆಚ್ಚಿ, ವರಪ್ರದರಾದ ಬ್ರಹ್ಮಾದಿದೇವತೆಗಳು ಅವನಿಗೆ ಪ್ರತ್ಯಕ್ಷರಾದರು ಓ ಪರೀಕ್ಷಿದ್ರಾಜಾ! ಆ

ರಂತಿದೇವನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ, ಬ್ರಹ್ಮಾದಿದೇವತೆಗಳೇ ಹೀ
ಗೆ ಚಂಡಾಲಾದಿರೂಪದಿಂದ ಬಂದು, ಅವನ ಗುಣಕ್ಕೆ ಮೆಚ್ಚಿ, ಅವನಿಗೆ ಪ್ರ
ತ್ಯಕ್ಷರಾದರೆಂದು ತಿಳಿ! ಆಮೇಲೆ ಈ ದೇವತೆಗಳು ಆ ರಂತಿದೇವನಿಗೆ ಪ್ರಕೃ
ತಿಪುರುಷವಿವೇಕಜ್ಞಾನವನ್ನು ಬೋಧಿಸಲು, ರಂತಿದೇವನು ಭಕ್ತಿಯಿಂದ
ಅವರ ತತ್ತ್ವೋಪದೇಶವನ್ನು ಸ್ವೀಕರಿಸಿ, ಅವರಿಗೆ ನಮಸ್ಕರಿಸಿ ಕಳುಹಿಸಿ
ದನು ತಾನು ಅದುಮೊದಲು ಕೇವಲವಿರಕ್ತನಾಗಿ, ದೇಹದಲ್ಲಿಯೂ,
ದೇಹಾನುಬಂಧಿಗಳಲ್ಲಿಯೂ ಮಮತೆಯನ್ನು ಬಿಟ್ಟು, ಐಹಿಕಾಮುಷ್ಮಿಕ
ಸುಖಗಳೊಂದಕ್ಕೂ ಆಸೆಪಡದೆ, ಮನಸ್ಸನ್ನು ಶ್ರೀವಾಸುದೇವನಲ್ಲಿ
ನೆಲೆಗೊಳಿಸಿದನು ಈವಿಧವಾದ ಭಗವದುಪಾಸನಾಪ್ರಭಾವದಿಂದ ರಂತಿದೇ
ವನಿಗೆ, ತ್ರಿಗುಣಾತ್ಮಕವಾದ ಮಾಯೆಯು ಕನಸಿನಂತೆ ಅಗೋಚರವಾಯಿ
ತು ರಾಜೇಂದ್ರಾ! ಇವನ ಸಂಗತಿಯು ಹಾಗಿರಲಿ! ಈ ರಂತಿದೇವನ
ಕಾಲದಲ್ಲಿ ಅವನನ್ನನುವರ್ತಿಸುತಿದ್ದವರೆಲ್ಲರೂ, ಆತನ ಸಹವಾಸಬಲದಿಂದ
ಲೇ, ಭಗವದ್ಭಕ್ತಿಯನ್ನು ಸಾಧಿಸಿ, ಮಹಾಯೋಗಿಗಳೆನಿಸಿಕೊಂಡರು ಇನ್ನು
ಅವನ ವಿಚಾರವನ್ನು ಕೇಳಬೇಕೆ? ಅವನು ಸರ್ವೋತ್ತಮವಾದ ಮೋಕ್ಷಪ
ದವಿಯನ್ನು ಹೊಂದಿದನು. ಇದೇ ರಂತಿದೇವನ ಚರಿತ್ರವು

ಇನ್ನು ಗರ್ಗನ ಸಂತತಿಯನ್ನು ತಿಳಿಸುವೆನು ಕೇಳು. ಗರ್ಗನ ಮಗನಿಗೆ
ಶಿನಿಯೆಂದು ಹೆಸರು ಶಿನಿಗೆ ಗಾರ್ಗ್ಯನೆಂಬ ಮಗನಾದನು ಈ ಗಾರ್ಗ್ಯ
ನಿಂದ ಬ್ರಾಹ್ಮಣಕುಲವು ವಿಸ್ತರಿಸಿತು. ಗರ್ಗನ ಸಹೋದರನಾದ ಮಹಾ
ವೀರ್ಯನಿಗೆ ದುರಿತಕ್ಷಯನೆಂಬ ಮಗನಾದನು. ಅವನಿಗೆ ತ್ರಯ್ಯಾರುಣಿ,
ಕವಿ, ಪುಷ್ಕರಾರುಣಿಯೆಂಬ ಮೂವರುಪುತ್ರರು ಜನಿಸಿ, ಅವರೂ ಬ್ರಾ
ಹ್ಮಣರಾದರು.

ಬ್ರಹ್ಮಕ್ಷತ್ರನಿಗೆ ಸುಹೋತ್ರನೆಂಬ ಮಗನಾದನು. ಇವನ ಪುತ್ರ
ನಾದ ಹಸ್ತಿಯೆಂಬವನೇ ಈಗಿನ ಕೌರವರಾಜಧಾನಿಯಾದ ಹಸ್ತಿನಾಪುರ
ವನ್ನು ನಿರ್ಮಿಸಿದವನು ಈ ಹಸ್ತಿಗೆ ಅಜಮೀಢನೆಂದೂ, ದ್ವಿಮೀಢನೆಂದೂ
ಪುರುಮೀಢನೆಂದೂ ಮೂವರು ಮಕ್ಕಳಾದರು. ಇವರಲ್ಲಿ ಅಜಮೀಢನ
ಸಂತತಿಯಲ್ಲಿ ಹುಟ್ಟಿದ ಪ್ರಿಯಮೇಧಾದಿಗಳು ಬ್ರಾಹ್ಮಣರಾದರು. ಈ ಅ

ಜಮೀಢನಿಗೆ ಬೃಹದಿಷುವೆಂಬ ಬೇರೊಬ್ಬಮಗನಿದ್ದನು ಅವನಿಂದ ಪುತ್ರ ಪೌತ್ರಕ್ರಮವಾಗಿ, ಬೃಹದ್ಧನು, ಬೃಹತ್ಕಾಯ, ಬೃಹದ್ರಥ, ವಿಶದ, ಫೇನಜಿತ್ತೆಂಬವರು ಹುಟ್ಟಿದರು. ಈ ಫೇನಜಿತ್ತಿಗೆ ರುಚಿರಾಶ್ವ, ದೃಢಹನು, ಕಾಶ್ಯ, ವತ್ಸರೆಂಬ ನಾಲ್ವರುಪುತ್ರರಾದರು ಇದರಲ್ಲಿ ರುಚಿರಾಶ್ವನಿಗೆ ಪ್ರಾಜ್ಞನೂ, ಅವನಿಗೆ ಪೃಥುಸೇನನೂ, ಅವನಿಗೆ ಪಾರನೂ, ಇವನಿಗೆ ನೀಪನೂ ಜನಿಸಿದರು ಈ ನೀಪನಿಗೆ ನೂರುಮಂದಿ ಮಕ್ಕಳಾದರು ಇದಲ್ಲದೆ ಈನೀಪನು*ಶುಕನ ಮಗಳಾದ ಕೃತಿಯೆಂಬವಳನ್ನು ಮದುವೆಯಾಗಿ, ಅವಳಲ್ಲಿ ಬ್ರಹ್ಮದತ್ತನೆಂಬ ಮಗನನ್ನು ಪಡೆದನು ಈ ಬ್ರಹ್ಮದತ್ತನಿಗೆ ಸರಸ್ವತಿಯೆಂಬ ಭಾರ್ಯೆಯಲ್ಲಿ ವಿಷ್ವಕ್ಸೇನನೆಂಬ ಮಗನಾದನು. ಈತನೇ ಜೈಗೀಷವ್ಯನೆಂಬ ಮಹರ್ಷಿಯ ಉಪದೇಶದಿಂದ ಯೋಗಶಾಸ್ತ್ರಪ್ರವರ್ತಕನಾದನು ಈ ವಿಷ್ವಕ್ಸೇನನಿಂದ ಉದಕ್ಸೇನನೂ, ಅವನಿಂದ ಭಲ್ಲಾದನೂ ಜನಿಸಿದರು ಇದುವರೆಗೆ ಹೇಳಿದವರೆಲ್ಲರೂ ಬೃಹದಿಷುವಿನ ಸಂತತಿಯವರು

ಹಸ್ತಿಯ ಮಗನಾದ ದ್ವಿಮೀಢನಿಗೆ ಯವೀನರನೆಂಬ ಮಗನಾದನು. ಇವನಿಂದ ಪುತ್ರಪೌತ್ರಕ್ರಮವಾಗಿ, ಧೃತಿಮಂತ, ಸತ್ಯಧೃತಿ, ದೃಢನೇಮಿ, ಸುಪಾರ್ಶ್ವ, ಸುಮತಿ, ಸನ್ನತಿಮಂತ, ಕೃತಿಯೆಂಬವರು ಜನಿಸಿದರು. ಈಕೃತಿಯೆಂಬವನು ಹಿರಣ್ಯನಾಭನೆಂಬ ಯೋಗಿಯಿಂದ ಯೋಗಶಾಸ್ತ್ರವನ್ನೂ, ಆರುಬಗೆಯ ಸಾಮಸಂಹಿತೆಗಳನ್ನೂ ಅಧ್ಯಯನಮಾಡಿ,ಅದನ್ನು ಲೋಕಕ್ಕೂ ಉಪದೇಶಿಸಿದನು. ಈ ಕೃತಿಯಿಂದಾಚೆಗೆ ಪುತ್ರಪೌತ್ರಕ್ರಮವಾಗಿ ಉಗ್ರಾಯುಧ, ಕ್ಷಮ್ಯ, ಸುವೀರ, ರಿಪುಂಜಯ, ಬಹುರಥರೆಂಬವರು ಜನಿಸಿದರು.

ಹಸ್ತಿಯ ಮೂರನೆಯ ಮಗನಾದ ಪುರುಮೀಢನಿಗೆ ಸಂತಾನವಿಲ್ಲದೆ ಹೋಯಿತು. ಆದರೆ ಆತನ ಜ್ಯೇಷ್ಠಪುತ್ರನಾದ ಅಜಮೀಢನಿಗೆ ಪ್ರಿಯಮೇಧಾದಿಗಳಿಂದ ಒಂದು ಬ್ರಾಹ್ಮಣಸಂತತಿಯೂ, ಬೃಹದಿಷುವಿನಿಂದ ಒಂ

* ಇಲ್ಲಿ ಶುಕನ ಮಗಳೆಂದು ಹೇಳಿರುವುದರಿಂದ, ಶುಕಮುನಿಯೂ ಒಮ್ಮೆ ಗೃಹಸ್ಥಾಶ್ರಮವನ್ನವಲಂಬಿಸಿದ್ದನೆಂದು ತಿಳಿಯಬೇಕು ಹರಿವಂಶದಲ್ಲಿ ಈ ವಿಚಾರವು ವ್ಯಕ್ತವಾಗಿ ಹೇಳಲ್ಪಟ್ಟಿದೆ.

ದು ಕ್ಷತ್ರಿಯಸಂತತಿಯೂ ವಿಸ್ತರಿಸಿತಷ್ಟೆ? ಇವನಿಂದ ಬೇರೊಂದು ಸಂತತಿ ಯೂ ವಿಸ್ತರಿಸಿತು ಆ ಅಜಮೀಢನಿಗೆ ನಳಿನಿಯೆಂಬ ಬೇರೊಬ್ಬ ಭಾರ್ಯೆಯಲ್ಲಿ ನೀಲನೆಂಬ ಮಗನಾದನು. ಅವನ ಸಂತತಿಯಲ್ಲಿ ಪುತ್ರಪೌತ್ರಕ್ರಮವಾಗಿ, ಶಾಂತಿ, ಸುಶಾಂತಿ, ಪುರುಜ್ಞ, ಅರ್ಕ, ಭರ್ಮ್ಯಾಶ್ವರೆಂಬವರು ಜನಿಸಿದರು. ಈ ಭರ್ಮ್ಯಾಶ್ವನಿಗೆ, ಮುದ್ಗಲ, ಯವೀನರ, ಬೃಹದಿಷು, ಕಾಂಪಿಲ್ಯ, ಸೃಂ ಜಯರೆಂಬ ಐದುಮಂದಿ ಪುತ್ರರಾದರು ಭರ್ಮ್ಯಾಶ್ವನು ಈ ಐದುಮಂದಿ ಮಕ್ಕಳಿಗೂ ತನ್ನ ದೇಶವನ್ನು ಐದುವಿಭಾಗಮಾಡಿ ಹಂಚಿಕೊಟ್ಟು "ಎಲೈ ಮಕ್ಕಳಿರಾ! ನೀವು (ಪಂಚಾನಾಂ ಅಲಂ) ಈ ಐದು ದೇಶಗಳನ್ನೂ ಕ್ರಮ ವಾಗಿ ರಕ್ಷಿಸಬಲ್ಲವರಾಗಿರಿ!" ಎಂದು ನಿಯಮಿಸಿದುದರಿಂದ, ಅವರಿಗೆ ಪಂ ಚಾಲರೆಂದೇ ಹೆಸರಾಯಿತು ಈ ಐವರುಮಕ್ಕಳಲ್ಲಿ ಮುದ್ಗಲನಿಂದ ಬ್ರಾ ಹ್ಮಣವಂಶವು ವಿಸ್ತರಿಸಿ, ಆ ಕುಲದವರಿಗೆ ಮೌದ್ಗಲ್ಯರೆಂದೇ ಹೆಸರಾಯಿತು. ಈ ವಂಶಾಭಿವೃದ್ಧಿಕ್ರಮವನ್ನು ಸಂಗ್ರಹವಾಗಿ ಹೇಳುವೆನು ಕೇಳು ಈ ಮುದ್ಗಲನಿಗೆ ದಿವೋದಾಸನೆಂಬ ಮಗನೂ, ಅಹಲ್ಯೆಯೆಂಬ ಕುಮಾರಿಯೂ ಹುಟ್ಟಿದರು. ಇವರಲ್ಲಿ ಅಹಲ್ಯೆಯು, ಗೌತಮನ ಭಾರ್ಯೆಯಾಗಿ ಶತಾನಂ ದನೆಂಬ ಪುತ್ರನನ್ನು ಪಡೆದಳು ಶತಾನಂದನಿಗೆ ಸತ್ಯಧೃತಿಯೆಂಬ ಮಗನು ಹುಟ್ಟಿ ಧನುರ್ವೇದದಲ್ಲಿ ನಿಪುಣನಾದನು. ಈ ಸತ್ಯಧೃತಿಯಿಂದ ಶರದ್ವಂ ಶನೆಂಬವನು ಜನಿಸಿದನು ಈ ಶರದ್ವಂಶನು, ಒಮ್ಮೆ ಅಕಸ್ಮಾತ್ತಾಗಿ ಊ ರ್ವಶಿಯನ್ನು ನೋಡಿದಾಗ, ಅವನಿಗೆ ಕಾಮವಿಕಾರದಿಂದ ವೀರ್ಯಸ್ಖಲನ ವಾಗಿ, ಆ ವೀರ್ಯವು ಒಂದು (ಶರಸ್ತಂಬದಲ್ಲಿ) ನೊದೆಯ ಹುಲ್ಲಿನಮೇಲೆ ಬಿದ್ದಿತು ಅದರಿಂದ ಒಂದು ಗಂಡುಮಗವೂ, ಒಂದು ಹೆಣ್ಣುಮಗುವೂ ಹುಟ್ಟಿದುವು ಶಂತನುವೆಂಬ ರಾಜನು ಒಮ್ಮೆ ಬೇಟೆಗಾಗಿ ಕಾಡಿನಲ್ಲಿ ತಿರು ಗುವಾಗ, ಈ ಮಕ್ಕಳನ್ನು ಕಂಡು, ಕೃಪಾಪರವಶನಾಗಿ ಮನೆಗೆ ತಂದು ಅ ವುಗಳಿಗೆ ಕ್ರಮವಾಗಿ ಕೃಪನೆಂದೂ, ಕೃಪಿಯೆಂದೂ ಹೆಸರಿಟ್ಟು ಬೆಳೆಸಿದನು. ಈ ಕೃಪಿಯೇ ದ್ರೋಣಾಚಾರ್ಯನ ಪತ್ನಿಯಾದಳು. ಇದು ಇಪ್ಪತ್ತೊಂದ ನೆಯ ಅಧ್ಯಾಯವು

---

## ಪಾಂಚಾಲಕೌರವವಂಶಾನುಕ್ರಮವು.

ರಾಜಾ! ಮುದ್ಗಲನ ದೌಹಿತ್ರಸಂತತಿಯನ್ನು ಕೇಳಿದೆಯಷ್ಟೆ! ಇನ್ನು ಆತನ ಪುತ್ರಸಂತತಿಯನ್ನು ಹೇಳುವೆನು ಕೇಳು! ಮುದ್ಗಲನ ಮಗನಾದ ದಿವೋದಾಸನಿಂದ ಮಿತ್ರಾಯುವೂ, ಅವನಿಂದ ಚ್ಯವನ, ಸುದಾಸ, ಸಹದೇವ, ಸೋಮಕರೆಂಬ ನಾಲ್ವರುಪುತ್ರರೂ ಜನಿಸಿದರು ಇವರಲ್ಲಿ ಸೋಮಕನಿಗೆ ಜಂತುವೆಂಬವನು ಮೊದಲಾಗಿ ನೂರುಮಂದಿಮಕ್ಕಳಾದರು. ಇವರಲ್ಲಿ ಕಿರಿಯವನಾದ ಪೃಷದನಿಗೆ ದ್ರುಪದನೆಂಬ ಮಗನಾದನು. ಆ ದ್ರುಪದನಿಗೆ ಧೃಷ್ಟದ್ಯುಮ್ನನೇ ಮೊದಲಾದ ಕೆಲವುಮಂದಿ ಪುತ್ರರೂ, ದ್ರೌಪದಿಯೆಂಬ ಮಗಳೂ ಹುಟ್ಟಿದರು ಧೃಷ್ಟದ್ಯುಮ್ನನಿಗೆ ಧೃಷ್ಟಕೇತುವೆಂಬ ಮಗನಾದನು ಇವರೆಲ್ಲರೂ ಪಂಚಾಲರಲ್ಲಿ ಸೇರಿದ ಮುದ್ಗಲನ ಸಂತತಿಯವರಾದುದರಿಂದ, ಪಾಂಚಾಲರೆಂದೇ ಕರೆಯಲ್ಪಡುವರು

ಅಜಮೀಢನಿಗೆ ಋಕ್ಷನೆಂಬ ಬೇರೊಬ್ಬಮಗನಿದ್ದನು. ಈ ಋಕ್ಷನಿಗೆ ಪರೀಕ್ಷಿತ್ತೆಂದೂ, ಸುಧನುವೆಂದೂ, ಜಹ್ನುವೆಂದೂ, ನಿಷಧನೆಂದೂ ನಾಲ್ವರು ಮಕ್ಕಳಾದರು ಅವರಲ್ಲಿ ಸುಧನುವಿಗೆ ಸುಹೋತ್ರನೆಂಬ ಮಗನಾದನು ಇವನಿಂದಾಚೆಗೆ ಇದೇಸಂತತಿಯಲ್ಲಿ, ಪುತ್ರಪೌತ್ರಕ್ರಮವಾಗಿ, ಚ್ಯವನ, ಕೃತಿ, ಉಪರಿಚರವಸುವೆಂಬವರು ಜನಿಸಿದರು. ಈ ಉಪರಿಚರವಸುವಿಗೆ ಬೃಹದ್ರಥ,ಕುಸುಂಭ, ಮತ್ಸ್ಯ, ಪ್ರತ್ಯಗ್ರ,ಚೇದಿಪರೇ ಮೊದಲಾದ ಕೆಲವು ಮಕ್ಕಳಾದರು. ಇವರಲ್ಲಿ ಬೃಹದ್ರಥನಿಗೆ ಕುಶಾಗ್ರನೂ, ಅವನಿಗೆ ಋಷಭನೂ, ಋಷಭನಿಗೆ ಪುಷ್ಪವಂತನೂ, ಆತನಿಗೆ ಹಿತನೂ, ಹಿತನಿಗೆ ಜಹ್ನುವೆಂಬವನೂ ಹುಟ್ಟಿದರು. ಬೃಹದ್ರಥನಿಗೆ ಬೇರೆಪತ್ನಿಯಲ್ಲಿ ಜನನಕಾಲದಲ್ಲಿಯೇ ಎರಡುಸೀಳಾಗಿ ಒಂದುಶಿಶುವು ಹುಟ್ಟಿತು. ತಾಯಿಯು ಆ ತುಂಡುಗಳೆರಡನ್ನೂ ನಿಷ್ಪ್ರಯೋಜನವೆಂದು ತಿಳಿದು, ಹೊರಗೆ ಬಿಸಾಡಿಬಿಟ್ಟಳು ಆ ರಾತ್ರಿಯಲ್ಲಿ ಜರೆಯೆಂಬ ರಾಕ್ಷಸಿಯೊಬ್ಬಳು, ದಾರಿಯಲ್ಲಿ ಬರುತ್ತಿರುವಾಗ, ಅದನ್ನು ಕಂಡು, ಆ ತುಂಡುಗಳೆರಡನ್ನೂ ಜೋಡಿಸಿ, ಅದಕ್ಕೆ ಜೀವವನ್ನು ಕೂಡಿಸಿ. "ನೀನು ಹೀಗೆಯೇ ಬದುಕಿರು!" ಎಂದು ಹೇಳಿ, ಆ

ಶಿಶುವಿನೊಡನೆ! ಬಹುಕಾಲದವರೆಗೆ ಆಟವಾಡುತ್ತಿದ್ದಳು. ಹೀಗೆ ಜರೆಯೆಂಬ ರಾಕ್ಷಸಿಯಿಂದ ಜೋಡಿಸಲ್ಪಟ್ಟ ಆ ಶಿಶುವಿಗೆ ಜರಾಸಂಧನೆಂದೇ ಹೆಸರಾಯಿತು. ಆ ಜರಾಸಂಧನಿಂದ ಸಹದೇವನೂ, ಅವನಿಂದ ಸೋಮಾಪಿಯೂ, ಅತನಿಂದ ಶ್ರುತಶ್ರವನೂ ಹುಟ್ಟಿದರು. ಕುರುಪುತ್ರನಾದ ಪರೀಕ್ಷಿತ್ತಿಗೆ ಸಂತತಿಯಿಲ್ಲದೆ ಹೋಯಿತು. ಅವನ ತಮ್ಮನಾದ ಜಹ್ನುವಿನಿಂದ ಪುತ್ರಪೌತ್ರಪರಂಪರೆಯಾಗಿ, ಸುರಥ, ವಿದೂರಥ, ಸಾರ್ವಭೌಮ, ಜಯತ್ಸೇನ, ರಾಧಿಕ, ದ್ಯುಮಂತ, ಕ್ರೋಧನ, ದೇವಾತಿಥಿ, ಋಕ್ಷ, ದಿಲೀಪ, ಪ್ರತೀಪರೆಂಬವರು ಜನಿಸಿದರು. ಆ ಪ್ರತೀಪನಿಗೆ ದೇವಾಪಿ, ಶಂತನು, ಬಾಹ್ಲೀಕರೆಂಬ ಮೂವರು ಮಕ್ಕಳಾದರು. ಇವರಲ್ಲಿ ದೇವಾಪಿಯು ರಾಜ್ಯವನ್ನೊಲ್ಲದೆ ತಪಸ್ಸಿಗಾಗಿ ಕಾಡಿಗೆ ಹೋಗಲು ಶಂತನುವೇ ರಾಜನಾದನು. ಈತನು ಪೂರ್ವಜನ್ಮದಲ್ಲಿ ಮಹಾಭಿಷಕ್ಕೆಂದು ಪ್ರಸಿದ್ಧಿಗೊಂಡಿದ್ದನು. ಅತನೇ ಈ ಜನ್ಮದಲ್ಲಿಯೂ ತನ್ನ ಕೈಯಿಂದ ಮುಟ್ಟಿದ ಮುದುಕರನ್ನು ಯೌವನಶಾಲಿಗಳನ್ನಾಗಿ ಮಾಡಿ, ಲೋಕಕ್ಕೆ ಶಾಂತಿಯನ್ನೂ ಸುಖವನ್ನೂ ಹೆಚ್ಚಿಸಿದುದರಿಂದ, ಶಂತನುವೆಂದು ಪ್ರಸಿದ್ಧಿಗೊಂಡನು. ಈ ಶಂತನುವು ರಾಜ್ಯವಾಳುತ್ತಿರುವಾಗ ಒಮ್ಮೆ ದ್ವಾದಶವರ್ಷಕ್ಷಾಮವು ಸಂಭವಿಸಿತು. ಆಗ ಆ ರಾಜನು ಬ್ರಾಹ್ಮಣರನ್ನು ಕರೆಸಿ ಅದರ ಕಾರಣವೇನೆಂದು ವಿಚಾರಿಸಿದನು. ಅದಕ್ಕಾ ಬ್ರಾಹ್ಮಣರು, “ಓ ರಾಜೇಂದ್ರಾ! ಇದಕ್ಕೆ ನೀನೇ ಕಾರಣವು. ಏಕೆಂದರೆ, ತನಗಿಂತಲೂ ಜ್ಯೇಷ್ಠನಾದವನಿಗೆ (ಅಣ್ಣನಿಗೆ) ಮದುವೆಯಿಲ್ಲದಿರುವಾಗ ತಮ್ಮನು ಮದುವೆಯಾಗಿ ದಾರಾಗ್ನಿಯನ್ನು ಪರಿಗ್ರಹಿಸಿದಪಕ್ಷದಲ್ಲಿ, ಅವನಿಗೆ ಪರಿವೇತ್ತನೆಂದು ಹೆಸರು. ಈಗ ನಿನ್ನಣ್ಣನು ಮದುವೆಯಿಲ್ಲದೆ ಅನಗ್ನಿಮಂತನಾಗಿ ಕಾಡಿಗೆ ಹೋಗಿರುವಾಗ, ನೀನು ವಿವಾಹಿತನಾಗಿ ದಾರಾಗ್ನಿಯನ್ನು ನಡೆಸುತ್ತಿರುವುದರಿಂದ, ನೀನು ದೋಷಿಯಾಗಿರುವೆ! ಇದಲ್ಲದೆ ನಿನ್ನಣ್ಣನಿರುವಾಗ ನೀನು ರಾಜ್ಯಕ್ಕೂ ಅರ್ಹನಲ್ಲ. ಈಗಲೂ ನೀನು ನಿನ್ನಣ್ಣನಿಗೆ ರಾಜ್ಯವನ್ನೊಪ್ಪಿಸಿದಪಕ್ಷದಲ್ಲಿ, ರಾಜ್ಯವು ಸುಭಿಕ್ಷವಾಗುವುದು” ಎಂದರು. ಇದನ್ನು ಕೇಳಿದೊಡನೆ ಶಂತನುವು ಕಾಡಿಗೆ ಹೊರಟು, ತನ್ನಣ್ಣನಾದ ದೇವಾಪಿಯ ಪಾದಗಳಮೇಲೆ ಬಿದ್ದು, ರಾಜ್ಯವನ್ನು ಕೈಕೊಳ್ಳಬೇಕೆಂದು ಬಹಳವಿಧ

ವಾಗಿ ಪ್ರಾರ್ಥಿಸಿದನು. ಆದರೆ ಈ ರಾಜ್ಯಕ್ಕೆ ವೃದ್ಧಮಂತ್ರಿಯಾಗಿದ್ದ ಅಶ್ಮರಾಥನೆಂಬವನು ಧಾರ್ಮಿಕನಾದ ಈ ಶಂತನುವಿಗೇ ರಾಜ್ಯವನು ಸ್ಥಿರ ಪಡಿಸಬೇಕೆಂಬ ಉದ್ದೇಶದಿಂದ, ಇದಕ್ಕೆ ಮೊದಲೇ ಕೆಲವು ಬ್ರಾಹ್ಮಣರನ್ನು ಕಳುಹಿಸಿ, ಕಾಡಿನಲ್ಲಿರುವ ದೇವಾಪಿಗೆ ಪಾಷಂಡಮತವನ್ನುಪದೇಶಿಸಿ, ಅವನ ಬುದ್ಧಿಯನ್ನು ಕೆಡಿಸಿದ್ದುದರಿಂದ, ದೇವಾಪಿಯು ಆಮತವನ್ನು ಹಿಡಿದು ವೇದಗಳನ್ನು ನಿಂದಿಸುತ್ತಾ ಆ ದೋಷದಿಂದ ರಾಜ್ಯವನ್ನಾಳುವುದಕ್ಕೆ ಅರ್ಹನಲ್ಲದೆಹೋದನು ಶಂತನುವು ಇದನ್ನು ತಿಳಿದು, ಆ ದೇವಾಪಿಯನ್ನು ನಿರ್ಬಂಧಿಸಲಾರದೆ ಹಿಂತಿರುಗಿ ಪಟ್ಟಣಕ್ಕೆ ಬಂದುಬಿಟ್ಟನು. ಜ್ಯೇಷ್ಠನಿಗೆ ಅರ್ಹತೆಯಿಲ್ಲದಿರುವಾಗ ತಮ್ಮನು ರಾಜ್ಯವನ್ನು ವಹಿಸುವುದು ಧರ್ಮಯುಕ್ತವಾದುದರಿಂದ, ಶಂತನುವು ದೋಷಭಾಗಿಯಾಗಲಿಲ್ಲ. ಶಂತನುವಿನ ರಾಜ್ಯದಲ್ಲಿ ಸುವೃಷ್ಟಿಯುಂಟಾಗಿ ದೇಶವು ಸುಭಿಕ್ಷವಾಯಿತು ಆತ್ತಲಾಗಿ ದೇವಾಪಿಯು ಯೋಗವನ್ನು ಹಿಡಿದು, ಕಲಾಪವೆಂಬ ಗ್ರಾಮದಲ್ಲಿ ಸೇರಿ ಈಗಲೂ ಅಲ್ಲಿಯೇ ಇರುವನು ಮುಂದೆ ಕಲಿಯುಗದಲ್ಲಿ ಚಂದ್ರವಂಶವು ನಷ್ಟವಾದಾಗ, ಕೃತಯುಗಾರಂಭದಲ್ಲಿ ಇವನಿಂದಲೇ ತಿರುಗಿ ಆ ವಂಶವು ವಿಸ್ತರಿಸುವುದು.

ಪ್ರತೀಪನ ಮೂರನೆಯ ಮಗನಾದ (ಶಂತನುವಿನ ತಮ್ಮನಾದ) ಬಾಹ್ಲೀಕನಿಗೆ ಸೋಮದತ್ತನೆಂಬ ಮಗನಾದನು ಅವನಿಂದ, ಭೂರಿ, ಭೂರಿಶ್ರವಸ್ಸು, ಶಲರೆಂಬ ಮೂವರು ಪುತ್ರರು ಜನಿಸಿದರು. ಇದಲ್ಲದೆ ಶಂತನುವು, ಬ್ರಹ್ಮಶಾಪದಿಂದ ಮನುಷ್ಯತ್ವವನ್ನು ಹೊಂದಿದ್ದ ಗಂಗೆಯನ್ನುವರಿಸಿ, ಅವಳಲ್ಲಿ ಭೀಷ್ಮನೆಂಬ ಪುತ್ರನನ್ನು ಪಡೆದನು. ಓ ಪರೀಕ್ಷಿದ್ರಾಜಾ! ಈ ಭೀಷ್ಮನ ಮಹಿಮೆಯು ಅಪಾರವಾದುದು. ಈತನು ಬ್ರಹ್ಮಜ್ಞಾನಿಯಾಗಿ, ಧರ್ಮಜ್ಞರಲ್ಲಿ ತಾನೇ ಮೇಲೆನಿಸಿಕೊಂಡಿದ್ದನು ಪರಮಭಾಗವತೋತ್ತಮನು. ವಿದ್ವಾಂಸನು ! ವೀರಾಗ್ರಗಣ್ಯನು ! ಈತನು ತನ್ನ ಪರಾಕ್ರಮದಿಂದ ಧನುರ್ವೇದ ಪ್ರವರ್ತಕನಾದ ಪರಶುರಾಮನನ್ನೂ ಸೋಲಿಸಿ, ಅವನನ್ನು ಸಂತೋಷಪಡಿಸಿದವನು. ಶಂತನುಪತ್ನಿಯಾಗಿದ್ದ ಗಂಗಾದೇವಿಯು, ಶಾಪವಿಮುಕ್ತಳಾಗಿ ಅವನನ್ನು ಬಿಟ್ಟುಹೋದಮೇಲೆ, ಆ ಶಂತನುವು ಸತ್ಯವತಿಯೆಂಬ ಕ

ನ್ಯೆಯನ್ನು ವರಿಸಿದನು ಈ ಸತ್ಯವತಿಯು ಒಬ್ಬ ಬೆಸ್ತನ ಮನೆಯಲ್ಲಿ ಬೆಳೆಯುತಿದ್ದವಳು ಈಕೆಯ ಉತ್ಪತ್ತಿಕ್ರಮವನ್ನು ಹೇಳುವೆನು ಕೇಳು! ಉಪರಿಚರನೆಂಬ ವಸುವಿನ ವೀರ್ಯವನ್ನು ನುಂಗಿದ್ದ ಒಂದಾನೊಂದು ಮತ್ಸ್ಯವು ಒಬ್ಬ ಬೆಸ್ತನ ಕೈಗೆ ಸಿಕ್ಕಿತು ಅದರ ಹೊಟ್ಟೆಯನ್ನು ಸೀಳಿದಾಗ ಈ ಹೆಣ್ಣುಕೂಸು ಸಿಕ್ಕಿತು ಆ ಬಸ್ತನು ಆ ಮಗುವನ್ನು ಬೆಳೆಸಿದುದರಿಂದ, ಅವಳಿಗೆ ಮತ್ಸ್ಯಗಂಧಿಯೆಂದೂ, ಯೋಜನಗಂಧಿಯೆಂದೂ, ಸತ್ಯವತಿಯೆಂದೂ ಬೇರೆಬೇರೆ ಹೆಸರಾಯಿತು. ಶಂತನುವಿಗೆ ಆ ಸತ್ಯವತಿಯಲ್ಲಿ ಚಿತ್ರಾಂಗದ ವಿಚಿತ್ರವೀರ್ಯರೆಂಬ ಇಬ್ಬರು ಮಕ್ಕಳಾದರು ಅವರಲ್ಲಿ ಹಿರಿಯವನಾದ ಚಿತ್ರಾಂಗದನು, ಚಿತ್ರಾಂಗದನೆಂಬ ಗಂಧರ್ವನಿಂದ ಯುದ್ಧದಲ್ಲಿ ಹತನಾದನು ಪರೀಕ್ಷಿದ್ರಾಜಾ! ಈ ಸತ್ಯವತಿಯು ಶಂತನುವನ್ನು ವರಿಸುವುದಕ್ಕೆಮೊದಲೇ, ಇವಳಲ್ಲಿ ಪೂಜ್ಯನಾದ ಪರಾಶರಮಹರ್ಷಿಯ ಸಂಬಂಧದಿಂದ ಸಾಕ್ಷಾದ್ಭಗವದಂಶಭೂತನಾದ ಕೃಷ್ಣದ್ವೈಪಾಯನನು ಹುಟ್ಟಿದನು ಅಖಂಡವಾದ ವೇದವನ್ನು ಬೇರೆಬೇರೆಯಾಗಿ ವಿಭಾಗಿಸಿ, ಲೋಕದಲ್ಲಿ ಪ್ರಚಾರಗೊಳಿಸಿದುದರಿಂದ ಈತನೇ ವ್ಯಾಸನೆಂದು ಪ್ರಸಿದ್ಧಿಹೊಂದಿದನು ರಾಜಾ! ಆತನೇ ನನ್ನ ತಂದೆಯು. ಆತನಿಂದಲೇ ನಾನು ಈ ಭಾಗವತಪುರಾಣವನ್ನಭ್ಯಸಿಸಿದೆನು ಆ ಮಹಾಮುನಿಯು, ಪೈಲನೇ ಮೊದಲಾದ ತನ್ನ ಶಿಷ್ಯರನೇಕರಿದ್ದರೂ, ಅವರೆಲ್ಲರನ್ನೂ ಬಿಟ್ಟು, ಪುತ್ರನಾದ ನನ್ನಲ್ಲಿ ಕರುಣೆಯಿಟ್ಟು, ಶಾಂತ್ಯಾದಿಗುಣಗಳಿಂದ ನಾನೇ ಆ ಉಪದೇಶಕ್ಕೆ ತಕ್ಕವನೆಂದೆಣಿಸಿ, ಪರಮಗುಹ್ಯವಾದ ಆ ಭಾಗವತವನ್ನುಪದೇಶಿಸಿರುವನು ಈ ಭೀಷ್ಮನು ಕಾಶೀರಾಜನ ಕುಮಾರಿಯರಾದ ಅಂಬಿಕೆ, ಅಂಬಾಲಿಕೆಯರೆಂಬ ಕನ್ಯೆಯರ ಸ್ವಯಂವರಕಾಲದಲ್ಲಿ, ಅವರನ್ನು ತನ್ನ ಪೌರುಷದಿಂದ ಸಾಧಿಸಿತಂದು, ತನ್ನ ಸವತಿತಾಯಿಯ ಮಗನಾದ ವಿಚಿತ್ರವೀರ್ಯನಿಗೆ ಮದುವೆಮಾಡಿದನು. ವಿಚಿತ್ರವೀರ್ಯನು ಅವರಿಬ್ಬರಲ್ಲಿಯೂ ಅತ್ಯಂತಕಾಮಾಸಕ್ತನಾಗಿ, ಯಾವಾಗಲೂ ಅವರೊಡನೆ ಕ್ರೀಡಿಸುತಿದ್ದುದರಿಂದ, ಕ್ಷಯರೋಗಪೀಡಿತನಾಗಿ ಮೃತಿಹೊಂದಿದನು. ಇದರಿಂದ ವಿಚಿತ್ರವೀರ್ಯನಿಗೆ ಸಂತತಿಯಿಲ್ಲದೆ ಹೋಯಿತು. ಆಗ ವ್ಯಾಸಮಹಾಮುನಿಯು, ತಾಯಿಯಾದ ಸತ್ಯವತಿಯ

ಆಜ್ಞೆಯಿಂದ, ತನ್ನ ಸಹೋದರಭಾರ್ಯೆಯರಲ್ಲಿ ತಾನೇ ಸಂಗಮಿಸಿ,ಅಂಬಿಕೆ ಯಲ್ಲಿ ಧೃತರಾಷ್ಟ್ರನನ್ನೂ, ಅಂಬಾಲಿಕೆಯಲ್ಲಿ ಪಾಂಡುವನ್ನೂ, ಮತ್ತೊಬ್ಬ ದಾಸಿಯಲ್ಲಿ(ಬಂಗಾರದವಳಲ್ಲಿ)ವಿದುರನನ್ನೂ ಹುಟ್ಟಿಸಿದನು ಈ ಮೂವರಲ್ಲಿ ಧೃತರಾಷ್ಟ್ರನಿಗೆ ಗಾಂಧಾರಿಯೆಂಬ ಪತ್ನಿಯಲ್ಲಿ ದುರ್ಯೋಧನನೇ ಮೊದಲಾದ ನೂರುಮಂದಿಪುತ್ರರೂ, ದುಶ್ಶಳೆಯೆಂಬ ಕನ್ಯೆಯೂ ಹುಟ್ಟಿದರು ಪಾಂಡುಮಹಾರಾಜನು ಒಮ್ಮೆ ಬೇಟೆಯಾಡುತ್ತಿರುವಾಗ, ಮೃಗರೂಪದಿಂದ ಕ್ರೀಡಿಸುತಿದ್ದ ಮುನಿದಂಪತಿಗಳನ್ನು ಕಂಡು, ಅವುಗಳನ್ನು ನಿಜವಾದ ಮೃಗವೆಂದೇ ತಿಳಿದು, ಪುರುಷಮೃಗವನ್ನು ತನ್ನ ಬಾಣದಿಂದ ಕೊಂದುಬಿಟ್ಟನು. ಇದರಿಂದ ಆ ಮಹರ್ಷಿಯು, ತನ್ನಂತೆಯೇ ಸ್ತ್ರೀಯರೊಡನೆ ಸಂಗಮಿಸಿದಾಗ ಮರಣಹೊಂದುವಂತೆ ಪಾಂಡುವಿಗೆ ಶಾಪವನ್ನು ಕೊಟ್ಟನು ಈ ಶಾಪಭಯದಿಂದ ಪಾಂಡುರಾಜನು, ತನ್ನ ಪತ್ನಿಯರೊಡನೆ ಸಂಗಮಿಸುವುದಕ್ಕೆ ಅವಕಾಶವಿಲ್ಲದೆ ಹೋಯಿತು. ಇದರಿಂದ ಮುಂದೆ ಸಂತಾನಾಭಿವೃದ್ಧಿಗೆ ದಾರಿಯಿಲ್ಲದಂತಾಯಿತು ಆಗ ಪಾಂಡುರಾಜನ ಜ್ಯೇಷ್ಠಪತ್ನಿಯಾದ ಕುಂತಿಯು, ಪತಿಯ ಅನುಮತಿಯನ್ನು ಪಡೆದು, ಯಮಧರ್ಮರಾಜನನ್ನೂ, ವಾಯುವನ್ನೂ, ದೇವೇಂದ್ರನನ್ನೂ ಮೂರುಮಂತ್ರಗಳಿಂದ ಉಪಾಸನೆಮಾಡಲು, ಆ ದೇವತೆಗಳ ಅಂಶದಿಂದ, ಅವಳಲ್ಲಿ ಧರ್ಮರಾಜ, ಭೀಮ, ಅರ್ಜುನರೆಂಬ ಮೂವರು ಪುತ್ರರಾದರು. ಹಾಗೆಯೇ ಕಿರಿಯಹೆಂಡತಿಯಾದ ಮಾದ್ರೀದೇವಿಯೂ ತನ್ನಲ್ಲಿದ್ದ ಒಂದೇಮಂತ್ರದಿಂದ ಅಶ್ವಿನೀದೇವತೆಗಳನ್ನುಪಾಸಿಸಿ, ಅವರ ಅನುಗ್ರಹದಿಂದ ನಕುಲಸಹದೇವರೆಂಬ ಅವಳಿಮಕ್ಕಳನ್ನು ಪಡೆದಳು ಈ ಐದುಮಂದಿಗೂ ದ್ರೌಪದಿಯೆಂಬ ಒಬ್ಬಳೇ ಪತ್ನಿಯಾದಳು. ಆಕೆಯಲ್ಲಿ ಒಬ್ಬೊಬ್ಬನಿಗೆ ಒಬ್ಬೊಬ್ಬ ಪುತ್ರನು ಜನಿಸಿದನು. ಇವರನ್ನು ಉಪಪಾಂಡವರೆಂದು ಹೇಳುವರು. ಈ ಉಪಪಾಂಡವರಿಗೆ ಕ್ರಮವಾಗಿ, ಪ್ರತಿವಿಂಧ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಕರ್ಮರೆಂದು ಹೆಸರು. ಈ ಐದುಮಂದಿಯೂ ಸಂತಾನವಿಲ್ಲದೆ, ಭಾರತಯುದ್ಧದ ಕೊನೆಯಲ್ಲಿ ಅಶ್ವತ್ಥಾಮನಿಂದ ಸಂಹೃತರಾದರು. ಪಂಚಪಾಂಡವರಿಗೆ ದ್ರೌಪದಿಯಲ್ಲಿ ಹುಟ್ಟಿದ ಈ ಐದುಮಂದಿಮಕ್ಕಳುಮಾತ್ರವೇ

ಅಲ್ಲದೆ, ಇತರಪತ್ನಿಯರಲ್ಲಿಯೂ ಬೇರೆ ಕೆಲವು ಮಕ್ಕಳು ಜನಿಸಿದರು ಧರ್ಮ
ರಾಜನಿಗೆ ಪೌರವಿಯೆಂಬ ಪತ್ನಿಯಲ್ಲಿ ದೇವಕನೆಂಬ ಪುತ್ರನು ಜನಿಸಿದನು.
ಭೀಮನಿಗೆ ಹಿಡಿಂಬೆಯೆಂಬ ರಾಕ್ಷಸಕನ್ಯೆಯಲ್ಲಿ ಘಟೋತ್ಕಚನೆಂಬವನೂ,
ಕಾಳಿಯೆಂಬ ಭಾರ್ಯೆಯಲ್ಲಿ ಸರ್ವಗತನೆಂಬವನೂ ಜನಿಸಿದರು. ಸಹದೇವ
ನಿಗೆ ವಿಜಯೆಯೆಂಬ ಪತ್ನಿಯಲ್ಲಿ ಸುಹೋತ್ರನೆಂಬ ಮಗನಾದನು. ನಕುಲ
ನಿಗೆ ಕರೇಣುಮತಿಯೆಂಬವಳಲ್ಲಿ ನಿರಮಿತ್ರನೆಂಬ ಮಗನಾದನು. ಅರ್ಜುನ
ನಿಗೆ ಉಲೂಪಿಯೆಂಬ ನಾಗಕನ್ಯೆಯಲ್ಲಿ ಇರಾವಂತನೆಂಬ ಪುತ್ರನೂ, ಚಿ
ತ್ರಾಂಗದೆಯೆಂಬ ಕ್ಷತ್ರಿಯಕನ್ಯೆಯಲ್ಲಿ ಬಭ್ರುವಾಹನನೆಂಬವನೂ, ಸುಭದ್ರೆ
ಯೆಂಬ ಯಾದವಕುಮಾರಿಯಲ್ಲಿ ಅಭಿಮನ್ಯುವೂ ಜನಿಸಿದರು ಬಭ್ರುವಾಹ
ನನು ಅರ್ಜುನನ ಮಗನಾಗಿದ್ದರೂ,ತನ್ನ ಮಾತಾಮಹನಾದ(ಮಣಲೂರು)
ರಾಜನಿಗೂ ತಾನೇ ಪುತ್ರರೂಪದಿಂದಿದ್ದನು ಓ ಪರೀಕ್ಷಿದ್ರಾಜಾ! ಅರ್ಜು
ನನಿಗೆ ಸುಭದ್ರೆಯಲ್ಲಿ ಜನಿಸಿದ ಅಭಿಮನ್ಯುವಿಗೆ, ಉತ್ತರೆಯ ಗರ್ಭದಲ್ಲಿ ಜನಿಸಿ
ದವನೇ ನೀನು! ಭಾರತಯುದ್ಧದಲ್ಲಿ ದುರ್ಯೋಧನನೇ ಮೊದಲಾದ ಕೌರವರೆ
ಲ್ಲರೂ ಸಂಹೃತರಾದ ಮೇಲೆ, ಅಶ್ವತ್ಥಾಮನು ಆಗ ಉತ್ತರೆಯ ಗರ್ಭದಲ್ಲಿದ್ದ
ನಿನ್ನನ್ನು ಕೊಲ್ಲುವುದಕ್ಕಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅದರ
ತೇಜಸ್ಸಿನಿಂದ ನಿನ್ನ ದೇಹವು ದಗ್ಧವಾಗಿದ್ದರೂ. ಶ್ರೀಕೃಷ್ಣನ ಕೃಪೆಯಿಂದ
ನೀನು ಸಾಯದೆ ಬದುಕಿಬಂದೆ. ಓ ರಾಜಾ! ನಿನಗೆ ಜನಮೇಜಯ, ಉಗ್ರ
ಸೇನ, ಶ್ರುತಸೇನ, ಭೀಮಸೇನರೆಂಬ ನಾಲ್ವರು ಪುತ್ರರಿರುವರಷ್ಟೆ. ಇವ
ರ ಮುಂದಿನ ವೃತ್ತಾಂತವನ್ನು ತಿಳಿಸುವೆನು ಕೇಳು ನಿನ್ನ ಜ್ಯೇಷ್ಠಪುತ್ರ
ನಾದ ಜನಮೇಜಯನು, ಮುಂದೆ ತಕ್ಷಕನೆಂಬ ಸರ್ಪದಿಂದ ನಿನಗುಂಟಾಗುವ
ಮರಣವನ್ನು ಕೇಳಿ, ಕೋಪದಿಂದ ಲೋಕದಲ್ಲಿ ಹಾವುಗಳ ಹುಟ್ಟೇ ಇಲ್ಲದಂ
ತೆ ಮಾಡಬೇಕೆಂದು. ಸರ್ಪಯಾಗವನ್ನಾರಂಭಿಸಿ, ಅನೇಕಸರ್ಪಗಳನ್ನು ಅ
ಗ್ನಿಗೆ ಆಹುತಿಯನ್ನಾಗಿ ಮಾಡುವನು ಮತ್ತು ತುರನೆಂಬ ಮಹರ್ಷಿಯ
ನ್ನು ಪುರೋಹಿತನನ್ನಾಗಿಟ್ಟುಕೊಂಡು ಅಶ್ವಮೇಧಯಾಗವನ್ನಾರಂಭಿಸಿ,
ಸಮಸ್ತದಿಕ್ಕುಗಳನ್ನೂ ಜಯಿಸಿ, ಅನೇಕ ಯಾಗಗಳಿಂದ ಭಗವಂತನನ್ನಾ
ರಾಧಿಸುವನು. ಆ ಜನಮೇಜಯನಿಗೆ ಶತಾನೀಕನೆಂಬ ಪುತ್ರನು ಹುಟ್ಟಿ

ಆತನು ಯಾಜ್ಞವಲ್ಕ್ಯಮುನಿಯಿಂದ ವೇದಗಳನ್ನೂ, ಕೃಪಾಚಾರ್ಯನಿಂದ ಧನುರ್ವೇದವನ್ನೂ, ಶೌನಕಮುನಿಯಿಂದ ಆತ್ಮಜ್ಞಾನವನ್ನೂ ಅಭ್ಯಸಿಸಿ, ಅವುಗಳಲ್ಲಿ ಪಾರಂಗತನಾಗುವನು ಈ ಶತಾನೀಕನಿಂದ ಪುತ್ರಪೌತ್ರಕ್ರಮವಾಗಿ, ಸಹಸ್ರಾನೀಕ, ಅಶ್ವಮೇಧಜ, ಅಸೀಮಕೃಷ್ಣ, ನಿಶ್ಚಕ್ರುವೆಂಬವರು ಜನಿಸುವರು ಹಸ್ತಿನಾಪುರವು ಗಂಗಾಪ್ರವಾಹದಲ್ಲಿ ಮುಳುಗಿಹೋದಮೇಲೆ, ಈ ನಿಶ್ಚಕ್ರುವು, ಕೌಶಾಂಬಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವನ್ನು ಪಾಲಿಸುವನು ಈತನಿಂದಾಚೆಗೆ ಪುತ್ರಪೌತ್ರಕ್ರಮವಾಗಿ, ಉಕ್ತ, ಚಿತ್ರರಥ, ಶುಚಿರಥ, ವೃಷ್ಟಿಮಂತ, ಸುಷೇಣ, ಸುನೀತ ನೃಚಕ್ಷು, ಸುಖೀನಲ, ಪರಿಪ್ಲವ, ಮೇಧಾವಿ, ಸುನಯ, ನೃಪಂಜಯ, ದೂರ್ವ, ತಿಮಿ, ಬೃಹದ್ರಥ, ಸುದಾಸ, ಶತಾನೀಕ, ದುರ್ದಮನ, ವಹೀನರ, ದಂಡಪಾಣಿ, ನಿಮಿ, ಕ್ಷೇಮಕರೆಂಬವರು ಜನಿಸುವರು. ಓ ರಾಜೇಂದ್ರಾ! ಬ್ರಾಹ್ಮಣಕ್ಷತ್ರಿಯಕುಲಗಳೆರಡಕ್ಕೂ ಉತ್ಪತ್ತಿಕಾರಣವಾಗಿ ಸಮಸ್ತದೇವತೆಗಳಿಂದಲೂ, ಮಹರ್ಷಿಗಳಿಂದಲೂ ಅನುಗ್ರಹಿಸಲ್ಪಟ್ಟ ಈ ಚಂದ್ರವಂಶಕ್ಕೆ ಕ್ಷೇಮಕನೇ ಕೊನೆಯವನು. ಕಲಿಯುಗದಲ್ಲಿ ಚಂದ್ರವಂಶವು ಈತನೊಡನೆ ನಿಂತುಹೋಗುವುದು. ಇನ್ನು ಮುಂದೆ ಹುಟ್ಟುವ ಮಾಗಧವಂಶದ ರಾಜರನ್ನು ತಿಳಿಸುವೆನು ಕೇಳು. ಜರಾಸಂಧನ ಮಗನು ಸಹದೇವನು. ಸಹದೇವನ ಮಗನು ಮಾರ್ಜಾಲೀಯನು ಈತನ ಮಗನು ಶ್ರುತಶ್ರವನು. ಅವನಿಂದ ಅಯುತಾಯುವು ಜನಿಸುವನು. ಹಾಗೆಯೇ ಅವನಿಂದಾಚೆಗೆ ಪುತ್ರಪೌತ್ರಕ್ರಮವಾಗಿ, ನಿರಮಿತ್ರ, ಸುನಕ್ಷತ್ರ, ಬೃಹತ್ಸೇನ, ಕರ್ಮಜಿತ್ತು ಶ್ರುತಂಜಯರೆಂಬವರು ಜನಿಸುವರು. ಹಾಗೆಯೇ ಯನಿಗೆ ಶುಚಿಯೆಂಬ ಪುತ್ರನು ಹುಟ್ಟಿ ಬ್ರಾಹ್ಮಣನಾಗುವನು. ಈ ಶುಚಿಯಿಂದಾಚೆಗೆ ಪುತ್ರಪೌತ್ರಕ್ರಮವಾಗಿ, ಕ್ಷೇಮ, ಸುವ್ರತ, ಧರ್ಮನೇತ್ರ, ಸ್ರುತ, ದೃಢಸೇನ, ಸುಮತಿ, ಸುಬಲ, ಸುನೀಥ, ಸತ್ಯಜಿತ್ತು, ವಿಶ್ವಜಿತ್ತು, ಪುರಂಜಯರೆಂಬವರು ಹುಟ್ಟುವರು ಇವರೆಲ್ಲರೂ ಬೃಹದ್ರಥಸಂತತಿಯವರು ಈ ಸಂತತಿಯು ಇನ್ನೊಂದು ಸಹಸ್ರಸಂವತ್ಸರದವರೆಗಿದ್ದು, ಆಮೇಲೆ ನಿಂತುಹೋಗುವುದು ಇದು ಇಪ್ಪತ್ತೆರಡನೆಯ ಅಧ್ಯಾಯವು.

## ಪೂರುಸಹೋದರನಾದ ಅನುವಿನ ಮತ್ತು ಯದುವಿನ ಸಂತತಿಯು

ರಾಜೇಂದ್ರಾ! ಯಯಾತಿಯ ಐದುಮಂದಿ ಮಕ್ಕಳಲ್ಲಿ, ಐದನೆಯವನಾದ ಪೂರುವಿನ ಸಂತತಿಯನ್ನು ಹೇಳಿದೆನಷ್ಟೆ? ಇನ್ನು ನಾಲ್ಕನೆಯ ಮಗನಾದ ಅನುವಿನ ವಂಶವನ್ನು ವಿವರಿಸುವೆನು ಕೇಳು ಈ ಅನುವಿಗೆ ಸಭಾನರನೂ, ಅವನಿಂದ ಕಾಲನಾಭನೂ,ಅವನಿಂದ ಸೃಂಜಯನೂ, ಅವನಿಂದ ಜನಮೇಜಯನೂ, ಜನಮೇಜಯನಿಂದ ಮಹಾಶಾಲನೂ, ಆತನಿಂದ ಮಹಾಮನಸ್ಸೆಂಬವನೂ ಜನಿಸಿದರು ಈ ಮಹಾಮನಸ್ಸಿಗೆ ಉಶೀನನೆಂದೂ, ತಿತಿಕ್ಷುವೆಂದೂ ಇಬ್ಬರು ಪುತ್ರರಾದರು ಇವರಲ್ಲಿ ಉಶೀನರನಿಗೆ, ಶಿಬಿ, ವನ, ಕ್ರಿಮಿ, ದರ್ಪರೆಂಬ ನಾಲ್ವರು ಪುತ್ರರಾದರು. ಇವರಲ್ಲಿ ಶಿಬಿಗೆ, ವೃಷದರ್ಭ, ಸುವೀರ,ಮದ್ರ,ಕೇಕಯರೆಂಬ! ನಾಲ್ಕು ಮಂದಿ ಪುತ್ರರು ಹುಟ್ಟಿದರು.ಉಶೀನರನ ಸಹೋದರನಾದ ತಿತಿಕ್ಷುವಿನ ಮಗನು,ರುಷದ್ರಥನು ಅವನಿಗೆ,ಸಭಾನರ,ಚಕ್ಷು,ಪರೋಕ್ಷರೆಂಬ ಮೂವರು ಪುತ್ರರುಂಟು. ಅವರಲ್ಲಿ ಸಭಾನರನಿಂದ ಹೇಮನೂ, ಹೇಮನಿಂದ, ಸುತಪನೂ, ಅವನಿಂದ ಬಲಿಯೆಂಬವನೂ ಜನಿಸಿದರು. ಈ ಬಲಿಯ ತಪಃಫಲದಿಂದ, ಅವನ ಕ್ಷೇತ್ರದಲ್ಲಿ ಅಂಗ, ವಂಗ, ಕಳಿಂಗ, ಸಿಂಹಳ, ಪುಂಡ್ರ,ಆಂಧ್ರರೇ ಮೊದಲಾದ ಕುಮಾರರು ಹುಟ್ಟಿ, ಅವರು ತಮ್ಮತಮ್ಮ ಹೆಸರಿನಿಂದಲೇ ಆರುದೊಡ್ಡ ರಾಜ್ಯಗಳನ್ನು ನಿರ್ಮಿಸಿದರು. ಇವರಲ್ಲಿ ಅಂಗನಿಂದ ಪುತ್ರಪೌತ್ರಕ್ರಮವಾಗಿ, ಖನಪಾನ, ಹವಿರಥ, ಧರ್ಮರಥ,ಚಿತ್ರರಥರೆಂಬವರು ಜನಿಸಿದರು.ಚಿತ್ರರಥನಿಗೆ ಮುಂದೆ ಸಂತಾನವಿಲ್ಲದೆ ನಿಂತುಹೋಯಿತು.ಈ ಚಿತ್ರರಥನಿಗೆ ರೋಮಪಾದನೆಂಬ ಹೆಸರು. ಈತನು ದಶರಥನಿಗೆ ಬಹಳ ಪ್ರಿಯಮಿತ್ರನಾಗಿದ್ದುದರಿಂದ, ದಶರಥನು ತನ್ನ ಮಗಳಾದ ಶಾಂತೆಯೆಂಬವಳನ್ನು ಈ ರೋಮಪಾದನಿಗೆ ಸ್ವೀಕಾರಕೊಟ್ಟನು. ಈ ಶಾಂತೆಯನ್ನು ಋಶ್ಯಶೃಂಗನೆಂಬ ಮಹರ್ಷಿಯು ಮದುವೆಯಾದನು. ಈ ಋಶ್ಯಶೃಂಗನು ವಿಭಾಂಡಕಮುನಿಗೆ ಹರಿಣಿಯಲ್ಲಿ ಹುಟ್ಟಿದವನು.ಒಮ್ಮೆ ರೋಮಪಾದನ ದೇಶದಲ್ಲಿ ಹನ್ನೆರಡುವರ್ಷಗಳವರೆಗೆ ಮಳೆಯಿಲ್ಲದೆ ಕ್ಷಾಮವುಂಟಾದಾಗ, ಋಶ್ಯಶೃಂಗನನ್ನು ಪಟ್ಟಣದೊಳಕ್ಕೆ ಕರೆತಂದರೆ ಸುವೃ

ಷ್ಟಿಯಾಗುವುದೆಂದು ಕೇಳಿ, ರೋಮಪಾದನು, ಅವನನ್ನು ಮೋಹಗೊಳಿಸಿ ಕರೆತರುವುದಕ್ಕಾಗಿ, ಕೆಲವುವೇಶ್ಯೆಯರನ್ನು ಅವನ ಆಶ್ರಮಕ್ಕೆ ಕಳುಹಿಸಿದನು ಆ ವೇಶ್ಯೆಯರು ತಮ್ಮ ಹಾವಭಾವವಿಲಾಸಗಳಿಂದಲೂ, ನೃತ್ಯಗೀತವಾದ್ಯಗಳಿಂದಲೂ, ಆಲಿಂಗನಾದಿಗಳಿಂದಲೂ, ಅವನನ್ನು ತಮ್ಮ ವಶಮಾಡಿಕೊಂಡು ಅರಮನೆಗೆ ಕರೆತಂದರು. ಅವನು ಬಂದಮೇಲೆ ರಾಜಕುಮಾರಿಯಾದ ಶಾಂತೆಯನ್ನು ವಿವಾಹಮಾಡಿಕೊಂಡನು. ಮತ್ತು ಈ ಋಷ್ಯಶೃಂಗನೇ ತನ್ನ ಮಾವನಾದ ರೋಮಪಾದನಿಂದ ಪುತ್ರಕಾಮೇಷ್ಟಿಯನ್ನು ಮಾಡಿಸಿ, ಅವನಿಗೆ ಸಂತಾನವಾಗುವಂತೆ ಮಾಡಿದನು. ದಶರಥನೂಕೂಡ ಬಹುಕಾಲದವರೆಗೆ ಪುತ್ರಸಂತಾನವಿಲ್ಲದಿದ್ದು, ಕೊನೆಗೆ ಈ ಋಷ್ಯಶೃಂಗನ ಅನುಗ್ರಹದಿಂದಲೇ ಸುಪುತ್ರರನ್ನು ಪಡೆದನು ರೋಮಪಾದನಿಗೆ,ಪುತ್ರಕಾಮೇಷ್ಟಿಯ ಫಲರೂಪವಾಗಿ ಚತುರಂಗನೆಂಬ ಮಗನಾದನು ಅವನ ಮಗನು ಪೃಥುಲಾಕ್ಷನು ಈ ಪೃಥುಲಾಕ್ಷನಿಗೆ, ಬೃಹದ್ರಥ, ಬೃಹತ್ಕರ್ಮ, ಬೃಹದ್ಭಾನುವೆಂಬ ಮೂವರು ಪುತ್ರರಾದನು ಇವರಲ್ಲಿ ಬೃಹದ್ರಥನಿಗೆ ಬೃಹನ್ಮನನೆಂಬ ಮಗನಾದನು ಅವನ ಮಗನು ಜಯದ್ರಥನು. ಈ ಜಯದ್ರಥನಿಗೆ ಸಂಭೂತಿಯೆಂಬ ಭಾರ್ಯೆಯಲ್ಲಿ ವಿಜಯನೂ,ಇವನಿಂದ ಧೃತಿಯೂ, ಧೃತಿಯಿಂದ ಧೃತವ್ರತನೂ, ಇವನಿಂದ ಸತ್ಯಕರ್ಮನೂ, ಈತನಿಂದ ರಥನೆಂಬವನೂ ಹುಟ್ಟಿದರು.ಈ ರಥನಿಗೆ ಸಂತಾನವಿಲ್ಲದೆ ಹೋಯಿತು ಆದರೆ ಈ ಕಾಲಕ್ಕೆ ಸರಿಯಾಗಿ ಕುಂತೀದೇವಿಯು,ತನ್ನ ಬಾಲ್ಯದಲ್ಲಿಯೇ ಸೂರ್ಯನನ್ನುಪಾಸಿಸಿ, ಆವನ ಅನುಗ್ರಹದಿಂದ ಒಂದು ಶಿಶುವನ್ನು ಪಡೆದಿದ್ದಳು. ವಿವಾಹಕ್ಕೆಮೊದಲೇ ತನಗೆ ಮಕ್ಕಳಾದುದಕ್ಕಾಗಿ ಆಕೆಯು ಭಯಪಟ್ಟು, ಆ ಶಿಶುವನ್ನು ಒಂದು ಪೆಟ್ಟಿಯಲ್ಲಿ ಮುಚ್ಚಿಟ್ಟು, ನದೀಪ್ರವಾಹದಲ್ಲಿ ತೇಲಬಿಡಲು, ಅದು ಪ್ರವಾಹವೇಗದಿಂದ ತೇಲಿಬರುತ್ತಿರುವಾಗ, ಆ ನದೀತೀರದಲ್ಲಿ ಆಡುತಿದ್ದ ಈ ರಥನ ಕೈಗೆ ಸಿಕ್ಕಿತು. ರಥನು ಆ ಶಿಶುವನ್ನೇ ಪುತ್ರನನ್ನಾಗಿ ಭಾವಿಸಿ ಪ್ರೇಮದಿಂದ ಬೆಳೆಸಿದನು ಓ ಪರೀಕ್ಷಿದ್ರಾಜಾ! ಈತನೇ ಕರ್ಣನು. ಆ ಕರ್ಣನ ಮಗನು ವೃಷಸೇನನು

ರಾಜಾ! ಇನ್ನು ಯಯಾತಿಯ ಮೂರನೆಯ ಮಗನಾದ ದ್ರುಹ್ಯುವಿನ ಸಂತತಿಯನ್ನು ತಿಳಿಸುವೆನು ಕೇಳು ಈತನಿಗೆ ಪುತ್ರಪೌತ್ರಪರಂಪರೆಯಿಂದ, ಬಭ್ರು, ಸೇತು, ಆರಬ್ಧ, ಗಾಂಧಾರ, ಘರ್ಮ, ಘೃತ, ದುರ್ಮದ, ಪ್ರಚೇತಸ್ಸುಗಳೆಂಬವರು ಜನಿಸಿದರು ಈ ಪ್ರಚೇತಸ್ಸಿಗೆ ನೂರುಮಂದಿ ಪುತ್ರರು ಇವರೆಲ್ಲರೂ ಉತ್ತರದೇಶವನ್ನು ಸೇರಿ, ಮ್ಲೇಛ್ಛಾಧಿಪತಿಗಳೆನಿಸಿಕೊಂಡರು

ಯಯಾತಿಯ ಎರಡನೆಯ ಮಗನಾದ ತುರ್ವಸುವಿನಿಂದ ಪುತ್ರಪೌತ್ರಾನುಕ್ರಮವಾಗಿ, ವಹ್ನಿ, ಭಾಗ, ಭಾನುಮಂತ, ಸುಭಾನು, ಕರಂಧಮ, ಮರುತ್ತರೆಂಬವರು ಜನಿಸಿದರು! ಈ ಮರುತ್ತನು ತನಗೆ ಸಂತಾನವಿಲ್ಲದುದರಿಂದ, ಪೂರುವಿನ ಸಂತತಿಯಲ್ಲಿ ಹುಟ್ಟಿದ್ದ ದುಷ್ಯಂತನೆಂಬವನನ್ನು ಸ್ವೀಕಾರತೆಗೆದುಕೊಂಡನು ಆದರೇನು? ಈ ದುಷ್ಯಂತನು ರಾಜ್ಯದಾಸೆಯಿಂದ ತಿರುಗಿ ಜನಕವಂಶವನ್ನೇ ಸೇರಿಕೊಂಡನು.

ಓ ಪರೀಕ್ಷಿದ್ರಾಜಾ! ಇನ್ನು ಯಯಾತಿಯ ಜ್ಯೇಷ್ಠಕುಮಾರನಾದ ಯದುವಿನ ವಂಶವನ್ನು ಹೇಳುವೆನು ಕೇಳು! ಪರಮಪವಿತ್ರವಾದ ಈ ಯದುವಂಶಚರಿತ್ರವನ್ನು ಕೇಳಿದಮಾತ್ರದಿಂದ ಮನುಷ್ಯನ ಸಮಸ್ತಪಾಪಗಳೂ ನೀಗುವುವು ಪರಮಪುರುಷನು ಕೃಷ್ಣನೆಂಬ ಹೆಸರಿನಿಂದ ಮನುಷ್ಯಾವತಾರವನ್ನೆತ್ತಿದುದು ಇದೇ ವಂಶವಾದುದರಿಂದ, ಇದು ಪರಮಪಾವನವಾದುದು. ಈ ವಂಶವಿಸ್ತಾರವನ್ನು ಹೇಳುವೆನು ಕೇಳು ಯದುವಿಗೆ ಸಹಸ್ರಜಿತ್ತು, ಕ್ರೋಷ್ಟು, ನಲ, ರಿಪುವೆಂಬ ನಾಲ್ವರುಪುತ್ರರಾದರು ಇವರಲ್ಲಿ ಜ್ಯೇಷ್ಠನಾದ ಸಹಸ್ರಜಿತ್ತಿಗೆ ಶತಜಿತ್ತೆಂಬ ಪುತ್ರನಾದನು ಇವನಿಗೆ, ಮಹಾಹಯ, ವೇಣುಹಯ, ಹೇಹಯರೆಂಬ ಮೂವರು ಮಕ್ಕಳು ಹುಟ್ಟಿದರು. ಹೇಹಯನಿಗೆ ಧರ್ಮನೆಂಬ ಪುತ್ರನಾದನು. ಈ ಧರ್ಮನಿಂದ ನೇತ್ರನೆಂಬವನು ಹುಟ್ಟಿದನು. ಈತನಿಗೆ ಕುಂತಿಯೆಂದೂ ನಾಮಾಂತರವುಂಟು. ಈ ಕುಂತಿಗೆ ಸೋಹಂಜಿಯೆಂಬ ಮಗನಾದನು. ಈತನ ಮಗನು ಮಹಿಷ್ಮಂತನು. ಇವನಿಂದ ಭದ್ರಸೇವಕನೆಂಬವನು ಜನಿಸಿದನು. ಈತನಿಗೆ ದುರ್ಮದನೆಂದೂ, ಧನಕನೆಂದೂ ಇಬ್ಬರು ಮಕ್ಕಳಾದರು.

ಇವರಲ್ಲಿ ಧನಕನಿಗೆ ಕೃತವೀರ್ಯ, ಕೃತಾಗ್ನಿ, ಕೃತವರ್ಮ, ಕೃತೌಜಸ್ಸುಗ
ಳೆಂಬ ನಾಲ್ವರು ಪುತ್ರರಾದರು. ಕೃತವೀರ್ಯನಿಗೆ ಅರ್ಜುನನೆಂಬ ಮಗನು
ಹುಟ್ಟಿ ಸಪ್ತದ್ವೀಪಾಧಿಪತಿಯೆನಿಸಿಕೊಂಡನು ಇವನೇ ಕಾರ್ತವೀರ್ಯಾ
ರ್ಜುನನು ಈತನು ಭಗವದಂಶಭೂತನಾದ ದತ್ತಾತ್ರೇಯನಿಂದ ಅಣಿ
ಮಾದಿಯೋಗಸಿದ್ಧಿಗಳೆಲ್ಲವನ್ನೂ ಪಡೆದಿದ್ದನು ಓ ಪರೀಕ್ಷಿದ್ರಾಜಾ! ಹೆಚ್ಚೇ
ಕೆ? ಲೋಕದಲ್ಲಿ ಯಜ್ಞ, ದಾನ, ತಪಸ್ಸು, ಯೋಗಸಿದ್ಧಿ, ಶಾಸ್ತ್ರಜ್ಞಾನ,
ವೀರ್ಯಜಯ, ಮುಂತಾದ ಸಮಸ್ತವಿಷಯಗಳಲ್ಲಿಯೂ ಇವನಿಗೆ ಸಮಾನ
ರೆನಿಸಿಕೊಂಡ ರಾಜರು ಬೇರೊಬ್ಬರಿಲ್ಲ ಈತನು ನಾಲ್ವತ್ತುಸಾವಿರವ
ರ್ಷಗಳವರೆಗೆ ನಿರಂಕುಶವಾದ ಪರಾಕ್ರಮದಿಂದ ರಾಜ್ಯವನ್ನಾಳುತ್ತ, ಅನವ
ರತವೂ ಹರಿಧ್ಯಾನಪರನಾಗಿದ್ದನು. ಈಗಲೂ ಈತನ ನಾಮಸ್ಮರಣಮಾತ್ರ
ದಿಂದಲೇ ಮನುಷ್ಯರಿಗೆ ಕಳೆದುಹೋದ ವಸ್ತುಗಳೆಲ್ಲವೂ ಅನಾಯಾಸವಾ
ಗಿ ಲಭಿಸುವುವು ಈತನು ಜೀವಿಸಿರುವವರೆಗೂ ಅಕ್ಷಯವಾದ ಇಂದ್ರಿಯಸು
ಖಗಳನ್ನು ಅನುಭವಿಸುತಿದ್ದನು. ಇವನಿಗೆ ಸಾವಿರಮಂದಿ ಮಕ್ಕಳಾದರು.
ಆದರೆ ಇವರಲ್ಲಿ ಐದುಮಂದಿಹೊರತು ಉಳಿದವರೆಲ್ಲರೂ ಪರಶುರಾಮನಿಂದ
ಸಂಹೃತರಾದರು ಯುದ್ಧದಲ್ಲಿ ಸತ್ತುಳಿದುಬಂದ ಆ ಐದುಮಂದಿಗೂ ಕ್ರ
ಮವಾಗಿ, ಜಯಧ್ವಜ, ಶೂರಸೇನ, ವೃಷಭ, ಮಧು, ಊರ್ಜಿತರೆಂದು ಹೆಸ
ರು. ಇವರಲ್ಲಿ ಜಯಧ್ವಜನಿಂದ ತಾಳಜಂಘನೆಂಬವನು ಜನಿಸಿದನು. ಇವ
ನಿಗೆ ತಾಲಜಂಘರೆಂಬ ನೂರುಮಂದಿ ಮಕ್ಕಳಾಗಿ, ಅವರೆಲ್ಲರೂ ಔರ್ವ
ಮಹಾಮುನಿಯ ತೇಜಸ್ಸಿನಿಂದ ನಶಿಸಲ್ಪಟ್ಟರು. ಈ ನೂರುಮಕ್ಕಳಲ್ಲಿ ಹಿರಿ
ಯವನಾದ ವೀತಿಹೋತ್ರನೆಂಬವನಿಗೆ ಮಧುವೆಂಬ ಪುತ್ರನಾದನು ಅವ
ನಿಂದ ವೃಷ್ಣಿ ಮೊದಲಾದ ನೂರುಮಂದಿ ಪುತ್ರರು ಹುಟ್ಟಿದರು ಇವರಿಗೆ
ಮಾಧವರೆಂದೂ, ಯಾದವರೆಂದೂ ಹೆಸರಾದುದಲ್ಲದೆ, ಇವರಲ್ಲಿ ವೃ
ಷ್ಣಿಯೇ ಜ್ಯೇಷ್ಠನಾದುದರಿಂದ, ಇತರರಿಗೂ ವೃಷ್ಣಿಗಳೆಂದೇ ಹೆಸ
ರಾಗಿ, ಆ ಕುಲಕ್ಕೆ ವೃಷ್ಣಿಕುಲವೆಂದೂ ಪ್ರಸಿದ್ಧಿಯುಂಟಾಯಿತು ಯ
ದುವಿನ ಮಕ್ಕಳಲ್ಲಿ ಜ್ಯೇಷ್ಠಸಂತತಿಯು ಹೀಗಾಯಿತಷ್ಟೆ? ಈತನ ಎರಡ
ನೆಯ ಮಗನಾದ ಕ್ರೋಷ್ಟುವಿನಿಂದ ಪುತ್ರಪೌತ್ರಕ್ರಮವಾಗಿ, ವೃಜಿನ

ವಂತ, ಶ್ವಾಹಿತ, ಉರುಶಂಕು, ಚಿತ್ರರಥ, ಶಶಿಬಿಂದುವೆಂಬವರು ಹುಟ್ಟಿದರು ಈ ಶಶಿಬಿಂದುವು ಮಹಾಯೋಗಿಯೆನಿಸಿಕೊಂಡು,ಮಹಾಮಹಿಮೆಯುಳ್ಳವನಾಗಿ, ಗುಣಿಗಳಲ್ಲಿ ತಾನೇ ಮೇಲೆನಿಸಿಕೊಂಡು, ಚಕ್ರವರ್ತಿಯಾಗಿ ರಾಜ್ಯವನ್ನಾಳುತಿದ್ದನು ಲೋಕದಲ್ಲಿ 'ಜಾತಿಶ್ರೇಷ್ಠಗಳೆನಿಸಿಕೊಂಡ ಹದಿನಾಲ್ಕು ರತ್ನಗಳಿಗೆ ತಾನೇ ಭಾಗಿಯೆನಿಸಿಕೊಂಡಿದ್ದನು ಈತನನ್ನು ಜಯಿಸತಕ್ಕ ರಾಜನು ಬೇರೊಬ್ಬರಿರಲಿಲ್ಲ. ಈ ಶಶಿಬಿಂದುವಿಗೆ ಹತ್ತುಸಾವಿರ ಮಂದಿ ಪತ್ನಿಯರು ಮಹಾಯಶಸ್ವಿಯಾದ ಈ ರಾಜನು ಆ ಪತ್ನಿಯರಲ್ಲಿ ಹತ್ತುಕೋಟಿಮಕ್ಕಳನ್ನು ಪಡೆದನು ಈ ಮಕ್ಕಳಲ್ಲಿ ಪೃಥುಶ್ರವಸ್ಸೇ ಮೊದಲಾದ ಆರುಮಂದಿ ಪ್ರಧಾನರೆನಿಸುವರು ಇವರಲ್ಲಿ ಧರ್ಮನೆಂಬವನಿಗೆ ಉಶನಸ್ಸೆಂಬ ಮಗನಾದನು ಈತನು ನೂರಶ್ವಮೇಧಗಳನ್ನು ಪೂರ್ತಿಮಾಡಿದನು ಈತನ ಮಗನು ರುಚಕನು. ಈ ರುಚಕನಿಗೆ ಪುರುಜಿತ್ತು, ರುಕ್ಮ, ರುಕ್ಮೇಷು, ಪೃಥು, ಜ್ಯಾಮಘರೆಂಬ ಐವರು ಮಕ್ಕಳಾದರು ಇವರಲ್ಲಿ ಜ್ಯಾಮಘನಿಗೆ ಶೈಬ್ಯೆಯೆಂಬ ಭಾರ್ಯೆಯಿದ್ದಳು ಅವಳಲ್ಲಿ ಸಂತಾನವಿಲ್ಲದೆ ಹೋಯಿತು. ಹಾಗಿದ್ದರೂ ಜ್ಯಾಮಘನು, ಅವಳ ಭಯಕ್ಕಾಗಿ ಬೇರೆ ವಿವಾಹವನ್ನೂ ಮಾಡಿಕೊಳ್ಳದಿದ್ದನು ಹೀಗಿರುವಾಗ ಒಮ್ಮೆ ಈ ರಾಜನು, ದಿಗ್ವಿಜಯಕ್ಕಾಗಿ ಹೊರಟು, ಶತ್ರುಗಳನ್ನು ಜಯಿಸಿ, ಅವರಲ್ಲಿದ್ದ ಸುಂದರಿಯಾದ ಒಬ್ಬ ಕನ್ಯೆಯನ್ನು ಕಂಡು, ಅವಳಲ್ಲಿ ಮೋಹಿತನಾಗಿ ಶಾಸ್ತ್ರೋಕ್ತವಾದ ವಿವಾಹವಿಲ್ಲದಿದ್ದರೂ ಅವಳನ್ನು ಉಪಪತ್ನಿಯಾಗಿ ವರಿಸಬೇಕೆಂದು ರಥದಲ್ಲಿ ಕುಳ್ಳಿರಿಸಿ ಕರೆತರುತ್ತಿರುವಾಗ,ಮೊದಲನೆಯ ಹೆಂಡತಿಯಾದ ಶೈಬ್ಯೆಯು ಅದನ್ನು ಕಂಡು ಸಹಿಸಲಾರದೆ ಕೋಪಪಟ್ಟು ಪತಿಯನ್ನು ಕುರಿತು "ಎಲೈ ವಂಚಕನೆ! ನನ್ನ ಸ್ಥಾನದಲ್ಲಿ ಬೇರೊಬ್ಬ ಹೆಂಗಸನ್ನು ಕುಳ್ಳಿರಿಸುವೆಯಾ? ಈ ರಥದಮೇಲೆ ಇವಳನ್ನು ಹೇಗೆ ಸೇರಿಸಿದೆ?" ಎಂದು ಆಕ್ಷೇಪಿಸಿದಳು. ಅವ

* ಹದಿನಾಲ್ಕು ಬಗೆಯರತ್ನಗಳೆಂದರೆ ಆಯಾಜಾತಿಯಲ್ಲಿ ಉತ್ತಮವೆನಿಸಿಕೊಂಡವುಗಳೆಂದು ಗ್ರಾಹ್ಯವು. ಈ ವಿಚಾರವು ಮಾರ್ಕಂಡೇಯಪುರಾಣದಲ್ಲಿ 'ಗಜವಾಜಿರಥಾಸ್ತ್ರೀಷುನಿಧಿಮಾಲಾಂಬರದ್ರುಮಾಃ । ಶಕ್ತಿ ಪಾಶ ಮಣಿ ಛತ್ರ ವಿಮಾನಾನಿ ಚತುರ್ದಶ'' ಎಂದು ನಿರೂಪಿಸಲ್ಪಟ್ಟಿದೆ

ಳ ಗರ್ಜನೆಗೆ ಭಯಪಟ್ಟು ರಾಜನು, ಮೃದುವಾಕ್ಯದಿಂದ “ಪ್ರಿಯೆ! ಇವಳು ನಿನ್ನ ಸವತಿಯಲ್ಲ! ನಿನ್ನ ಸೊಸೆಯೆಂದು ಭಾವಿಸು!” ಎಂದನು ಇದನ್ನು ಕೇಳಿ ಶೈಬ್ಯೆಯು, ಕೋಪಪೂರ್ವಕವಾದ ಹಾಸ್ಯದಿಂದ, ಪತಿಯನ್ನು ಮೂದಲಿಸುತ್ತ. “ಆಹಾ! ಇದೀಗ ಒಪ್ಪತಕ್ಕ ಮಾತು! ಮೊದಲೇ ನಾನು ಬಂಜೆ! ಇದರಮೇಲೆ ನನಗೆ ಬೇರೆ ಸವತಿಯರೂ ಇಲ್ಲ. ಇವಳು ನನಗೆ ಸೊಸೆಯಾಗುವಳಲ್ಲವೆ? ಸುಳ್ಳಾಡಿ ನನ್ನನ್ನು ವಂಚಿಸುವೆಯಾ?” ಎಂದಳು. ಅದಕ್ಕಾ ರಾಜನು “ಎಲೈ ಪ್ರಿಯೆ! ಈಗಿಲ್ಲದಿದ್ದರೂ, ಮುಂದೆಯಾದರೂ ನಿನಗೆ ಪುತ್ರರು ಹುಟ್ಟಬಹುದಲ್ಲವೆ? ಆಮಗನಿಗೆ ಇವಳನ್ನು ಮದುವೆಮಾಡುವೆವು” ಎಂದನು. ಶೈಬ್ಯೆಯು ಸಂತೋಷದಿಂದ ಆ ಮಾತಿಗೆ ಸಮ್ಮತಿಸಿ, ಸುಮ್ಮನಾದಳು ಈ ರಾಜನು ಇದಕ್ಕೆ ಮೊದಲೇ ಬಹುಕಾಲದಿಂದ ಸಂತಾನಾರ್ಥವಾಗಿ ವಿಶ್ವೇದೇವತೆಗಳನ್ನೂ, ಪಿತೃದೇವತೆಗಳನ್ನೂ ಆರಾಧಿಸುತ್ತಿದ್ದನು. ಕೊನೆಗೆ ಅವರ ಅನುಗ್ರಹದಿಂದ ಒಬ್ಬ ಪುತ್ರನು ಜನಿಸಿದನು ಈತನಿಗೆ ವಿದರ್ಭನೆಂದು ಹೆಸರು ಈ ಕುಮಾರನಿಗೇ ಆ ಹೆಣ್ಣನ್ನು ಕೊಟ್ಟು ವಿವಾಹಮಾಡಿದರು ಇದು ಇಪ್ಪತ್ತುಮೂರನೆಯ ಅಧ್ಯಾಯವು

## ಯದುವಂಶಾನುಕ್ರಮವು

ರಾಜಾ ಕೇಳು! ಈ ವಿದರ್ಭನಿಗೆ, ಕುಶ, ಕ್ರಥ, ರೋಮಪಾದರೆಂಬ ಮೂವರು ಮಕ್ಕಳಾದರು ಇವರಲ್ಲಿ ರೋಮಪಾದನಿಂದ ಬಭ್ರುವೂ, ಅವನಿಂದ ಕ್ರತುವೂ, ಕ್ರತುವಿನಿಂದ ಕುಶಿಕನೂ, ಕುಶಿಕನಿಂದ ಚೇದಿಯೆಂಬವನೂ ಜನಿಸಿದರು ಈ ಚೇದಿಯಿಂದ ದಮಘೋಷನೇ ಮೊದಲಾದ ಚೈದ್ಯರಾಜರು ಜನಿಸಿದರು ವಿದರ್ಭಪುತ್ರನಾದ ಕ್ರಥನಿಗೆ ಕುಂತಿಯೆಂಬ ಮಗನಾದನು ಹೀಗೆಯೇ ಇವನ ಸಂತತಿಯಲ್ಲಿ ಪುತ್ರಪೌತ್ರಕ್ರಮವಾಗಿ, ವೃಷ್ಣಿ, ನಿರ್ವೃತಿ, ದಶಾರ್ಹ, ವ್ಯೋಮ, ಜೀಮೂತ, ವಿಕೃತಿ, ತೀವ್ರರಥ, ನವರಥ, ದಶರಥ, ಶಕುನಿ, ಕರಂಭಿ, ದೇವರಾತ, ದೇವಕ್ಷತ್ರ, ಮಧು, ಕುರುವಶ, ಪುರುಹೋತ್ರ, ಸಾತ್ವತರೆಂಬವರು ಜನಿಸಿದರು. ಈ ಸಾತ್ವತನಿಗೆ, ಭಜಮಾನ, ಭಜಿ, ದೀಪ್ತ, ವೃಷ್ಣಿ, ದೇವಾವೃಧ, ಅಂಧಕ, ಮಹಾ

ಭೋಜರೆಂಬ ಏಳುಮಂದಿಪುತ್ರರು ಜನಿಸಿದರು. ಇವರಲ್ಲಿ ಭಜಮಾನನಿಗೆ ಇಬ್ಬರು ಪತ್ನಿಯರಿದ್ದು, ಒಬ್ಬ ಭಾರ್ಯೆಯಲ್ಲಿ ನಿಮ್ರೋಚಿ, ಕಂಕಣ, ವೃಷ್ಣಿ ಯೆಂಬ ಮೂವರು ಪುತ್ರರೂ, ಇನ್ನೊಬ್ಬಭಾರ್ಯೆಯಲ್ಲಿ ಶತಜಿತ್ತು, ಸಹ ಸ್ರಜಿತ್ತು. ಅಯುತಜಿತ್ತೆಂಬ ಮೂವರು ಮಕ್ಕಳೂ ಹುಟ್ಟಿದರು ಸಾತ್ವ ತನ ಐದನೆಯಮಗನಾದ ದೇವಾವೃಧನಿಗೆ ಬಭ್ರುವೆಂಬ ಮಗನಾದನು ಈ ತಂದೆಮಕ್ಕಳ ಪ್ರಭಾವವನ್ನು ಕುರಿತು ಆರ್ಯರಿಂದ ಕೀರ್ತಿಸಲ್ಪಟ್ಟಶ್ಲೋಕ ಗಳೆರಡುಂಟು. ಆ ಶ್ಲೋಕಾರ್ಥಗಳನ್ನು ತಿಳಿಸುವೆನು ಕೇಳು. "ನಾವು ದೇವಾ ವೃಧಬಭ್ರುಗಳ ಪ್ರಭಾವವನ್ನು ದೂರದಲ್ಲಿದ್ದು ಕಿವಿಯಿಂದ ಹೇಗೆ ಕೇಳುತಿದ್ದೆವೋ, ಅದೇವಿಧವಾಗಿ ಪ್ರತ್ಯಕ್ಷದಲ್ಲಿಯೂ ಕಾಣುತ್ತಿರುವೆವು ಮ ನುಷ್ಯರಲ್ಲಿ ಈ ಬಭ್ರುವನ್ನು ಮೀರಿದ ಗುಣಾಢ್ಯರು ಬೇರೊಬ್ಬರಿಲ್ಲ ದೇವಾ ವೃಧನು ಸಾಕ್ಷಾದ್ದೇವತೆಗಳಿಗೆ ಸಮಾನನು. ಈ ತಂದೆಮಕ್ಕಳಿಬ್ಬರೂ ತ ಮ್ಮ ವಂಶಜರಾದ ಹದಿನಾಲ್ಕು ಸಾವಿರದ ಅರುವತ್ತೈದುಮಂದಿ ಪುರುಷ ರನ್ನು ತಮ್ಮ ಮಹಿಮೆಯಿಂದ ಮುಕ್ತಿಹೊಂದಿಸಿರುವರು" ಎಂಬುದೇ ಆ ಎರಡು ಶ್ಲೋಕಾರ್ಥಗಳು! ಇದುಹಾಗಿರಲಿ! ಸಾತ್ವತನ ಪುತ್ರನಾದ ಮಹಾ ಭೋಜನು ಬಹಳ ಧರ್ಮಾತ್ಮನೆನಿಸಿಕೊಂಡಿದ್ದನು ಇವನಿಂದ ಹುಟ್ಟಿದ ರಾಜರೆಲ್ಲರೂ ಭೋಜರೆಂದೇ ಕರೆಯಲ್ಪಡುವರು ಸಾತ್ವತನ ನಾಲ್ಕನೆಯ ಮಗನಾದ ವೃಷ್ಣಿಗೆ, ಸುಮಿತ್ರನೆಂದೂ. ಯುಧಾಜಿತ್ತೆಂದೂ ಇಬ್ಬರು ಮಕ್ಕಳಾದರು. ಇವರಲ್ಲಿ ಯುಧಾಜಿತ್ತಿಗೆ ಶಿನಿಯೆಂದೂ ಅನಮಿತ್ರನೆಂ ದೂ ಇಬ್ಬರು ಪುತ್ರರಾದರು ಇವರಲ್ಲಿ ಅನಮಿತ್ರನಿಗೆ ನಿಮ್ನನೆಂಬ ಮಗ ನಾದನು ಈ ನಿಮ್ನನಿಗೆ ಸತ್ರಾಜಿತ್ತೆಂದೂ, ಪ್ರಸೇನನೆಂದೂ ಇಬ್ಬರು ಮಕ್ಕಳು ಅನಮಿತ್ರನಿಗೆ ನಿಮ್ನನೆಂಬವನುಮಾತ್ರವಲ್ಲದೆ, ಶಿನಿಯೆಂದೂ ವೃಶ್ನಿಯೆಂದೂ ಬೇರೆ ಇಬ್ಬರು ಪುತ್ರರಿದ್ದರು ಇವರಲ್ಲಿ ಶಿನಿಯಿಂದ ಸ ತ್ಯಕನು ಜನಿಸಿದನು. ಇವನ ಮಗನು ಯುಯುಧಾನನು ಇವನಿಂದ ಜಯ ನೆಂಬವನು ಹುಟ್ಟಿದನು ಜಯನಿಗೆ ಕುಣಿಯೆಂಬ ಮಗನಾದನು ಕುಣಿ ಯ ಮಗನು ಯುಗಂಧರನು ಅನಮಿತ್ರನ ಮೂರನೆಯಮಗನಾದ ವೃಶ್ನಿ ಗೆ, ಗಾಂಧಿನಿಯೆಂಬ ಪತ್ನಿಯಲ್ಲಿ ಶ್ವಫಲ್ಕನೆಂದೂ. ಚಿತ್ರಕನೆಂದೂ ಇಬ್ಬರು

ಪುತ್ರರಾದರು. ಇವರಲ್ಲಿ ಶ್ವಫಲ್ಕನಿಗೆ, ಅಕ್ರೂರ, ಅಸಂಗ, ಸಾರಮೇಯ, ಮೃದುಕ, ಮೃದುಪಚ್ಛ್ವ, ವರ್ಮದೃಕ್ಕು, ಧೃಷ್ಟವರ್ಮ, ಕ್ಷತ್ರೋಪೇಕ್ಷ, ಅರಿಮರ್ದನ, ಶತ್ರುಘ್ನ, ಗಂಧಮಾದನ, ಪ್ರತಿಬಾಹುವೆಂಬ ಹನ್ನೆರಡುಮಂದಿ ಪುತ್ರರಾದರು. ಇವರಿಗೆ ಸುಚಾರೆಯೆಂಬ ಸಹೋದರಿಯೊಬ್ಬಳುಂಟು. ಇವರಲ್ಲಿ ಹಿರಿಯವನಾದ ಅಕ್ರೂರನಿಗೆ ದೇವವಂತನೆಂದೂ, ಉಪದೇವನೆಂದೂ ಇಬ್ಬರು ಮಕ್ಕಳಾದರು ಚಿತ್ರರಥನ ಮಗನಾದ ಶಶಿಬಿಂದುವಿನಿಂದ ಹಿಡಿದು, ಇದುವರೆಗೆ ಹೇಳಿದವರೆಲ್ಲರೂ ಚೈತ್ರರಥರೆಂದೇ ಕರೆಯಲ್ಪಡುವರು. ಚಿತ್ರರಥನಿಗೆ ಈ ಶಶಿಬಿಂದುವೊಬ್ಬನೇ ಅಲ್ಲದೆ, ಪೃಥು, ವಿಡೂರಥ ಮೊದಲಾದ ಬೇರೆ ಕೆಲವು ಮಕ್ಕಳಿದ್ದರು. ಅವರ ಸಂತತಿಗೂ ಚಿತ್ರರಥಸಂತತಿಯೆಂದೇ ಹೆಸರು.

ಸಾತ್ವತನ ನಾಲ್ಕನೆಯಮಗನಾದ ವೃಷ್ಣಿಗೆ, ಕುಕುರ, ಭಜಮಾನ, ಶುಚಿ, ಕಂಬಲ, ಬರ್ಹಿಷರೇ ಮೊದಲಾದ ಅನೇಕಪುತ್ರರಾದರು. ಇವರಲ್ಲಿ ಕುಕುರನಿಂದ ವೃಷ್ಣಿಯೂ, ಅವನಿಂದ ವಿಲೋಮನೂ, ಆತನಿಂದ ಕಪೋತರೋಮನೂ ಜನಿಸಿದರು ಈ ಕಪೋತರೋಮನಿಗೆ ತುಂಬುರುವು ಬಹಳ ಪ್ರಿಯಮಿತ್ರನಾಗಿದ್ದನು. ಸಾತ್ವತನ ಆರನೆಯಮಗನಾದ ಅಂಧಕನಿಂದ ದುಂದುಭಿಯೂ, ಅವನಿಂದ ದರಿದ್ಯೋತನೂ, ಆತನಿಂದ ಪುನರ್ವಸುವೂ, ಜನಿಸಿದರು. ಈ ಪುನರ್ವಸುವಿಗೆ ಆಹುಕನೆಂಬ ಪುತ್ರನೊಬ್ಬನೂ, ಆಹುಕಿಯೆಂಬ ಕನ್ಯೆಯೊಬ್ಬಳೂ ಜನಿಸಿದರು ಆಹುಕನಿಗೆ ದೇವಕನೆಂದೂ, ಉಗ್ರಸೇನನೆಂದೂ ಇಬ್ಬರು ಪುತ್ರರಾದರು. ಇವರಲ್ಲಿ ದೇವಕನಿಗೆ, ದೇವವಂತ, ಉಪದೇವ, ಸುದೇವ, ದೇವವರ್ಧನರೆಂಬ ನಾಲ್ವರು ಪುತ್ರರೂ, ಧೃತದೇವೆ, ಶಾಂತಿದೇವೆ, ಉಪದೇವೆ, ಶ್ರೀದೇವೆ, ದೇವರಕ್ಷಿತೆ, ಸಹದೇವೆ, ದೇವಕಿಯರೆಂಬ ಏಳುಮಂದಿ ಕನ್ಯೆಯರೂ ಜನಿಸಿದರು. ಈ ಏಳುಮಂದಿ ಕನ್ಯೆಯರನ್ನೂ ವಸುದೇವನು ವಿವಾಹಮಾಡಿಕೊಂಡನು. ಉಗ್ರಸೇನನಿಗೆ, ಕಂಸ, ಸುನಾಮ, ನ್ಯಗ್ರೋಧ, ಕಹ್ವ, ಶಂಕು, ಸುಭೂ, ರಾಷ್ಟ್ರಪಾಲ, ವಿಸೃಷ್ಟ, ತುಷ್ಟಿಮಂತರೆಂಬ ಒಂಬತ್ತುಮಂದಿ ಪುತ್ರರೂ, ಕಂಸೆ, ಕಂಸವತಿ, ಕಂಕೆ, ಶೂರಭೂ, ರಾಷ್ಟ್ರಪಾಲಿಕೆಯರೆಂಬ ಐದುಮಂದಿ ಕನ್ಯೆ

ಯರೂ ಜನಿಸಿದರು. ಈ ಐದುಮಂದಿಕನ್ಯೆಯರನ್ನೂ ವಸುದೇವನ ಸಹೋದರರಾದ ದೇವಭಾಗಾದಿಗಳೇ ಪರಿಗ್ರಹಿಸಿದರು.

ರಾಜೇಂದ್ರಾ! ಶತಿಬಂಧುವಿನ ಸಹೋದರನಾದ ವಿಡೂರಥನಿಂದ ಪುತ್ರಪೌತ್ರಪರಂಪರೆಯಾಗಿ ಶೂರ, ಭಜಮಾನ, ಶಿಪಿ, ಸ್ವಯಂಭೋಜ, ಹೃದೀಕರೆಂಬವರು ಜನಿಸಿದರು. ಹೃದೀಕನಿಗೆ ದೇವಬಾಹು, ಶತಧನು, ಕೃತವರ್ಮರೆಂಬ ಮೂವರು ಪುತ್ರರಾದರು. ಮೇಲೆ ಹೇಳಿದ ವಿಡೂರಥಪುತ್ರನಲ್ಲದೆ, ದೇವಮೀಢನ ಮಗನಾದ ಶೂರನೆಂಬ ಬೇರೊಬ್ಬ ಯಾದವನಿಗೆ, ಮಾರಿಷೆಯೆಂಬ ಪತ್ನಿಯಲ್ಲಿ, ವಸುದೇವ, ದೇವಭಾಗ, ದೇವಶ್ರವಸ್ಸು, ಆನಕ, ಸೃಂಜಯ, ಶ್ಯಾಮಕ, ಕಂಕ, ಅನೀಕವತ್ಸಕ, ವೃಕರೆಂಬ ಹತ್ತುಮಂದಿ ಪುತ್ರರೂ, ಪೃಥೆ, ಶ್ರುತದೇವೆ, ಶ್ರುತಕೀರ್ತಿ, ಶ್ರುತಶ್ರವಸ್ಸು, ರಾಜಾಧಿದೇವಿಯೆಂಬ ಐದುಮಂದಿ ಕುಮಾರಿಯರೂ ಜನಿಸಿದರು. ಓ ಪರೀಕ್ಷಿದ್ರಾಜಾ! ಈ ಹದಿನೇಳುಮಂದಿ ಮಕ್ಕಳಲ್ಲಿ, ಹಿರಿಯವನಾದ ವಸುದೇವನ ಜನನಕಾಲದಲ್ಲಿ, ಈತನೇ ಶ್ರೀಕೃಷ್ಣಾವತಾರಕ್ಕೆ ಆಶ್ರಯಸ್ಥಾನವೆಂಬುದನ್ನು ಸೂಚಿಸುವಂತೆ, ದೇವದುಂದುಭಿಗಳೂ, ದೇವತೆಗಳ ಆನಕವಾದ್ಯಗಳೂ ಮೊಳಗಿದುದರಿಂದ, ಇವನಿಗೆ ಆನಕದುಂದುಭಿಯೆಂಬ ನಾಮಾಂತರವುಂಟಾಯಿತು. ವಸುದೇವನ ತಂದೆಯಾದ ಶೂರನು, ತನಗೆ ಮಿತ್ರನಾದ ಕುಂತಿಭೋಜನಿಗೆ ಸಂತಾನವಿಲ್ಲದಿದ್ದುದರಿಂದ, ತನ್ನ ಹಿರಿಯಮಗಳಾದ ಪೃಥು (ಕುಂತಿ) ಯನ್ನು ಅವನಿಗೆ ದತ್ತವಾಗಿತ್ತನು. ಕುಂತಿಭೋಜನಿಗೆ ದತ್ತುಮಗಳಾದುದರಿಂದ ಇವಳಿಗೂ ಕುಂತಿಯೆಂಬ ಹೆಸರು ಪ್ರಸಿದ್ಧವಾಯಿತು. ಈ ಕುಂತಿಯ ವಿಚಿತ್ರವಾದ ಬಾಲ್ಯವೃತ್ತಾಂತವನ್ನು ಸ್ವಲ್ಪವಾಗಿ ಸೂಚಿಸುವೆನು ಕೇಳು. ಈಕೆಯು ವಿವಾಹವಾಗುವುದಕ್ಕೆಮೊದಲು, ತಂದೆಯ ಮನೆಯಲ್ಲಿರುವಾಗ, ದೂರ್ವಾಸಮುನಿಯು ಒಮ್ಮೆ ಕುಂತಿಭೋಜನ ಮನೆಗೆ ಅತಿಥಿಯಾಗಿ ಬಂದನು. ಆಗ ಕುಂತಿಯು ಅವನಿಗೆ ಬಹಳ ಭಕ್ತಿಯಿಂದ ಉಪಚಾರಗಳನ್ನು ನಡೆಸಿದಳು. ಇವಳ ಶುಶ್ರೂಷೆಗೆ ಸಂತೋಷಪಟ್ಟು

* ಈ ವಿಡೂರಥನು ಸಾತ್ವತಪುತ್ರನಾದ ವೃಷ್ಣಿಯ ಮಗನೆಂದು ಕೆಲವರ ಮತವು,

ದೂರ್ವಾಸಮುನಿಯು, ಅವಳಿಗೆ “ದೇವಹೂತಿ”ಯೆಂಬ ಒಂದಾನೊಂದು ಮಂತ್ರವಿದ್ಯೆಯನ್ನುಪದೇಶಿಸಿ,ಆ ಮಂತ್ರಶಕ್ತಿಯಿಂದ ಉದ್ದೇಶಿಸಿದ ದೇವತೆಗಳನ್ನು ಪ್ರತ್ಯಕ್ಷವಾಗಿ ಕರೆತರಿಸಬಹುದೆಂದು ಹೇಳಿ ಹೊರಟುಹೋದನು ಆ ಮೇಲೆಕುಂತಿಯು.ಒಮ್ಮೆ ನದಿಗೆ ಸ್ನಾನಾರ್ಥವಾಗಿಹೋಗಿ,ಒಂಟಿಯಾಗಿದ್ದಾಗ,ದೂರ್ವಾಸನು ತನಗೆ ಉಪದೇಶಿಸಿದ ಮಂತ್ರದಮಹಿಮೆಯನ್ನು ಪರೀಕ್ಷಿಸಿ ನೋಡಬೇಕೆಂದುಅವಳಿಗೆ ತೋರಿದುದರಿಂದ, ಅವಳು ಸೂರ್ಯದೇವನನ್ನು ಕುರಿತು ಆ ಮಂತ್ರವನ್ನು ಜಪಿಸಿದಳು ಒಡನೆಯೇ ಸೂರ್ಯನು ಅವಳಮುಂದೆ ಬಂದು ನಿಂತನು. ಅವನನ್ನು ನೋಡಿ ಈ ಕನ್ನಿಕೆಗೆ ಅತ್ಯಾಶ್ಚರ್ಯವೂ, ಭಯವೂ ಉಂಟಾಯಿತು. ಆಗ ಆಕೆಯು ಆ ಸೂರ್ಯನಿಗೆ ಕೈಮುಗಿದು “ದೇವಾ! ನಾನು ದೂರ್ವಾಸನ ಮಂತ್ರಶಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ನಿನ್ನನ್ನು ಕರೆದನೇ ಹೊರತು, ಬೇರೆಯಾವ ಉದ್ದೇಶದಿಂದಲೂ ಕರೆಯಲಿಲ್ಲ. ನಾನು ವ್ಯರ್ಥವಾಗಿ ನಿನಗೆ ಈ ಶ್ರಮವನ್ನು ಕೊಟ್ಟುದಕ್ಕಾಗಿ ನನ್ನನ್ನು ಮನ್ನಿಸಬೇಕು! ಇನ್ನು ನೀನು ಹೋಗಬಹುದು” ಎಂದಳು. ಅದಕ್ಕಾ ಸೂರ್ಯನು “ಓ ಸುಂದರೀ! ನಮ್ಮಂತಹ ದೇವತೆಗಳ ಸಂದರ್ಶನವು ಎಂದಿಗೂ ವ್ಯರ್ಥವಾಗಬಾರದು ಆದುದರಿಂದ ನನಗೆ ಸಮಾನನಾದ ಪುತ್ರನು ನಿನ್ನ ಗರ್ಭದಲ್ಲಿ ಜನಿಸುವಂತೆ ಅನುಗ್ರಹಿಸುವೆನು ಆದರೆ ವಿವಾಹವಾಗುವುದಕ್ಕೆ ಮೊದಲು ಈ ಕನ್ಯಾವಸ್ಥೆಯಲ್ಲಿಯೇ ಗರ್ಭವನ್ನು ಧರಿಸುವವಿಷಯದಲ್ಲಿ ನೀನು ಭಯಪಡಬೇಕಾದುದಿಲ್ಲ,ನನಗೆ ಕನ್ಯಾತ್ವವು ಕೆಡದಂತೆಯೂ ವರವನ್ನು ಕೊಡುವೆನು” ಎಂದು ಹೇಳಿ, ಅವಳ ಗರ್ಭದಲ್ಲಿ ತನ್ನ ತೇಜಸ್ಸನ್ನಿರಿಸಿ ಹೊರಟುಹೋದನು ಆಗಲೇ ಕುಂತಿಗೆ ಸೂರ್ಯಸಮಾನವಾದ ತೇಜಸ್ಸುಳ್ಳ ಒಂದು ಶಿಶುವು ಜನಿಸಿತು. ಕುಂತಿಯು ಲೋಕಾಪವಾದಕ್ಕೆ ಭಯಪಟ್ಟು, ಆ ಶಿಶುವನ್ನು ಒಂದು ಪೆಟ್ಟಿಯಲ್ಲಿರಿಸಿ, ಪ್ರವಾಹದಲ್ಲಿ ತೇಲಬಿಟ್ಟಳು ಆ ಶಿಶುವು ಬೇರೊಬ್ಬಪುರುಷನ ಕೈಗೆ ಸಿಕ್ಕಿ, ಅವನಿಂದ ಪೋಷಿಸಲ್ಪಡುತಿತ್ತು. ಓ ಪರೀಕ್ಷಿದ್ರಾಜಾ! ಈತನೇ ಕರ್ಣನು. ಇತ್ತಲಾಗಿ ಕುಂತಿಯನ್ನು ಕೆಲವು ದಿನಗಳಮೇಲೆ ನಿನ್ನ ಮುತ್ತಾತನಾದ ಪಾಂಡುರಾಜನು ವಿವಾಹಮಾಡಿಕೊಂಡನು. ಕುಂತಿಯ ಸಹೋದರಿಯಾದ ಶ್ರುತದೇವೆಯನ್ನು

ಕರೂಷಪುತ್ರನಾದ ವೃದ್ಧಶರ್ಮನೆಂಬವನು ವರಿಸಿದನು ಋಷಿಶಾಪದಿಂದ ಈ ದಂಪತಿಗಳಿಗೆ ದಂತವಕ್ತ್ರನೆಂಬ ದೈತ್ಯನು ಜನಿಸಿದನು ಕುಂತಿಯ ಮತ್ತೊಬ್ಬ ಸಹೋದರಿಯಾದ ಶ್ರುತಕೀರ್ತಿಯನ್ನು, ಧೃಷ್ಟಕೇತುವೆಂಬ ಕೇಕಯರಾಜನು ವರಿಸಿದನು ಈ ದಂಪತಿಗಳಲ್ಲಿ ಸಂತರ್ದನನೇ ಮೊದಲಾದ ಐದುಮಂದಿ ಪುತ್ರರಾದರು. ಇವರೂ ಕೈಕಯರೆಂದೇ ಹೆಸರುಗೊಂಡರು ಕುಂತಿಯ ಬೇರೊಬ್ಬ ಸಹೋದರಿಯಾದ ರಾಜಾಧಿದೇವಿಯನ್ನು, ಅವಂತಿಯೆಂಬ ರಾಜನು ವರಿಸಿ, ಜಯತ್ಸೇನನೆಂಬ ಪುತ್ರನನ್ನು ಪಡೆದನು ಶ್ರುತಶ್ರವಸ್ಸೆಂಬ ಮತ್ತೊಬ್ಬ ಸಹೋದರಿಯನ್ನು ಚೇದಿರಾಜನಾದ ದಮಘೋಷನು ವಿವಾಹಮಾಡಿಕೊಂಡು. ಅವಳಲ್ಲಿ ಶಿಶುಪಾಲನೆಂಬ ಮಗನನ್ನು ಪಡೆದನು. ರಾಜೇಂದ್ರಾ ! ಈ ಶಿಶುಪಾಲನ ಜನನವೃತ್ತಾಂತವನ್ನು ನಿನಗೆ ಹಿಂದೆಯೇ (ಏಳನೆಯ ಸ್ಕಂಧದಲ್ಲಿ) ಸೂಚಿಸಿರುವೆನು ಇದುವರೆಗೆ! ವಸುದೇವನ ಸಹೋದರಿಯರ ವೃತ್ತಾಂತವನ್ನು ತಿಳಿಸಿದೆನಷ್ಟೆ? ಇನ್ನು ಅತನ ಸಹೋದರರ ಸಂತಾನಕ್ರಮವನ್ನು ಹೇಳುವೆನು ಕೇಳು. ವಸುದೇವನ ತಮ್ಮನಾದ ದೇವಭಾಗನಿಗೆ ಕಂಸೆಯೆಂಬ ಭಾರ್ಯೆಯಲ್ಲಿ, ಚಿತ್ರಕೇತು, ಬೃಹದ್ಬಲರೆಂಬ ಇಬ್ಬರು ಪುತ್ರರಾದರು ಮತ್ತೊಬ್ಬ ಸಹೋದರನಾದ ದೇವಶ್ರವಸ್ಸಿಗೆ, ಕಂಕವತಿಯೆಂಬ ಭಾರ್ಯೆಯಲ್ಲಿ, ಸುವೀರನೆಂದೂ, ಇಷುಮಂತನೆಂದೂ ಇಬ್ಬರು ಮಕ್ಕಳಾದರು. ಕಂಕನೆಂಬ ಬೇರೊಬ್ಬ ಸಹೋದರನಿಗೆ ಕಂಕೆಯೆಂಬ ಭಾರ್ಯೆಯಲ್ಲಿ, ಬಕ, ಸತ್ಯಜಿತ್ತು, ಪುರುಜಿತ್ತೆಂಬ ಮೂವರು ಪುತ್ರರು ಜನಿಸಿದರು ಸೃಂಜಯನೆಂಬ ಮತ್ತೊಬ್ಬ ಸಹೋದರನಿಗೆ, ರಾಷ್ಟ್ರಪಾಲಿಕೆಯೆಂಬ ಭಾರ್ಯೆಯಲ್ಲಿ. ವೃಷ, ದುರ್ಮರ್ಷಣರೇ ಮೊದಲಾದ ಕೆಲವುಪುತ್ರರು ಜನಿಸಿದರು. ಮತ್ತೊಬ್ಬ ಸಹೋದರನಾದ ಶ್ಯಾಮಕನಿಗೆ ಶೂರಭೂವೆಂಬ ಪತ್ನಿಯಲ್ಲಿ, ಹರಿಕೇಶ, ಹಿರಣ್ಯಾಕ್ಷರೆಂಬ ಪುತ್ರರು ಜನಿಸಿದರು. ವತ್ಸನೆಂಬ ಮತ್ತೊಬ್ಬ ಸಹೋದರನಿಗೆ, ಮಿಶ್ರಕೇಶಿಯೆಂಬ ಅಪ್ಸರಸಿಯಲ್ಲಿ, ಬಕನೇ ಮೊದಲಾದ ಕೆಲವು ಪುತ್ರರಾದರು. ವೃಕನೆಂಬ ಮತ್ತೊಬ್ಬ ಸಹೋದರನಿಗೆ ದೂರ್ವಾಕ್ಷಿಯೆಂಬ ಪತ್ನಿಯಲ್ಲಿ, ತಕ್ಷ, ಪುಷ್ಕರ, ಸಾಲ್ವ, ಮೊದಲಾದ ಕೆಲವು ಪುತ್ರರಾದರು. ಅನೀಕನೆಂಬ ಬೇರೊಬ್ಬ ಸಹೋದರ

ಸಿಗೆ, ಸುಧಾಮೆಯೆಂಬ ಭಾರ್ಯೆಯಲ್ಲಿ, ಸುಮಿತ್ರ, ಅನೀಕಪಾಲನೇ ಮೊದ ಲಾದ ಕೆಲವು ಪುತ್ರರಾದರು. ಆನಕನೆಂಬ ಮತ್ತೊಬ್ಬ ಸಹೋದರನಿಗೆ ಕರ್ಣಿಕೆಯೆಂಬ ಭಾರ್ಯೆಯಲ್ಲಿ, ಋತಧಾಮನೆಂದೂ, ಜಯನೆಂದೂ ಇಬ್ಬ ರು ಪುತ್ರರಾದರು.

ಇನ್ನು ಇವರೆಲ್ಲರಿಗೂ ಜ್ಯೇಷ್ಠನಾದ ವಸುದೇವನ ಸಂತತಿಯನ್ನು ತಿಳಿಸುವೆನು ಕೇಳು. ವಸುದೇವನಿಗೆ, ದೇವಕಿ, ಪೌರವಿ, ರೋಹಿಣಿ, ಭದ್ರ, ಮದಿರೆ, ಶೋಚನೆ, ಇಳೆ, ಎಂಬ ಅನೇಕಪತ್ನಿಯರುಂಟಷ್ಟೆ? ಅವಳಲ್ಲಿ ದೇವಕಿ ಯೇ ಪ್ರಧಾನಪತ್ನಿಯು. ವಸುದೇವನು, ಈ ಪತ್ನಿಯರೊಳಗೆ ರೋಹಿಣಿ ಯೆಂಬವಳಲ್ಲಿ, ಬಲರಾಮ, ಗದ, ಸಾರಣ, ದುರ್ಮದ, ವಿಪುಲ, ಧ್ರುವರೆಂ ಬವರನ್ನೂ, ಕೃಪನೇ ಮೊದಲಾದ ಇನ್ನೂ ಕೆಲವು ಪುತ್ರರನ್ನೂ ಪಡೆದನು. ಮತ್ತು ಪೌರವಿಯೆಂಬವಳಲ್ಲಿ, ಭೂತ, ಸುಭದ್ರ, ಭದ್ರಬಾಹು, ದುರ್ಮದ, ಭದ್ರ, ಮೊದಲಾದ ಹನ್ನೆರಡು ಮಂದಿ ಪುತ್ರರಾದರು. ಮದಿರೆಯೆಂ ಬವಳಲ್ಲಿ ನಂದ, ಉಪನಂದ, ಕೃತಕ, ಶೂರನೇ ಮೊದಲಾದ ಕೆಲವು ಪುತ್ರ ರು ಹುಟ್ಟಿದರು ಕೋಸಲಪುತ್ರಿಯಾದ ಭದ್ರೆಯೆಂಬವಳಿಗೆ, ಕುಲವರ್ಧಕ ನಾದ ಕೇಶಿಯೆಂಬ ಒಬ್ಬನೇ ಮಗನಾದನು ರೋಚನೆಯೆಂಬವಳಲ್ಲಿ, ಹ ಸ್ತ, ಹೇಮಾಂಗದರೇ ಮೊದಲಾದ ಕೆಲವು ಪುತ್ರರು ಹುಟ್ಟಿದರು. ಇಳೆ ಯೆಂಬವಳಲ್ಲಿ, ಉರುವಲ್ಕನೇ ಮೊದಲಾದ ಕೆಲವು ಯಾದವಶ್ರೇಷ್ಠರು ಜ ನಿಸಿದರು ಧೃತದೇವೆಯೆಂಬವಳಲ್ಲಿ ತ್ರಿಪೃಷ್ಠನೆಂಬ ಕುಮಾರನು ಜನಿಸಿದ ನು ಶಾಂತಿದೇವೆಯೆಂಬವಳಲ್ಲಿ, ಪ್ರಶ್ರವ, ಪ್ರಶ್ರಿತರೇ ಮೊದಲಾದ ಕೆಲ ವು ಪುತ್ರರು ಹುಟ್ಟಿದರು. ಉಪದೇವೆಯೆಂಬವಳಲ್ಲಿ ಕಲ್ಪವರ್ಷನೇ ಮೊದ ಲಾದ ಹತ್ತುಮಂದಿ ಪುತ್ರರಾದರು. ಶ್ರೀದೇವೆಯಲ್ಲಿ, ವಸು, ಹಂಸ, ಸುಧ ನ್ವರೇ ಮೊದಲಾಗಿ ಆರುಮಂದಿ ಪುತ್ರರು ಹುಟ್ಟಿದರು. ದೇವರಕ್ಷಿತೆಯೆಂ ಬವಳಲ್ಲಿ ಗದನೇ ಮೊದಲಾಗಿ ಒಂಬತ್ತುಮಂದಿ ಮಕ್ಕಳಾದರು. ವಸುದೇ ವನು ತನ್ನ ಪ್ರಧಾನಪತ್ನಿಯಾದ ದೇವಕಿಯಲ್ಲಿ ಎಂಟುಮಂದಿ ಮಕ್ಕಳನ್ನು ಪಡೆದನು. ಅವರಲ್ಲಿ ಮೊದಲಿನ ಏಳುಮಕ್ಕಳಿಗೂ ಕ್ರಮವಾಗಿ ಕೀರ್ತಿ ಮಂತ, ಸುಷೇಣ, ಭದ್ರಸೇನ, ಋಜು, ಮದನ, ಭದ್ರ, ಸಂಕರ್ಷಣರೆಂ

ವು ಹೆಸರು ಸಾಕ್ಷಾನ್ಮಹಾವಿಷ್ಣುವೇ ಕೃಷ್ಣನೆಂಬ ಹೆಸರಿನಿಂದ ದೇವಕಿ ಯ ಎಂಟನೆಯ ಗರ್ಭದಲ್ಲಿ ಅವತರಿಸಿದನು. ದೇವಕಿಗೆ ಈ ಎಂಟುಮಂದಿ ಪುತ್ರರೇ ಅಲ್ಲದೆ, ಸುಭದ್ರೆಯೆಂಬ ಕನ್ಯೆಯೊಬ್ಬಳೂ ಜನಿಸಿದಳು ಓ ಪರೀ ಕ್ಷಿದ್ರಾಜಾ! ಈ ಸುಭದ್ರೆಯೇ ನಿನ್ನ ತಂದೆಯಾದ ಅಭಿಮನ್ಯುವಿನ ತಾಯಿ ಯು ರಾಜೇಂದ್ರಾ! ಲೋಕದಲ್ಲಿ ಯಾವಾಗ ಧರ್ಮಕ್ಕೆ ಕ್ಷೀಣದಶೆಯುಂ ಟಾಗುವುದೋ, ಆಗ ಶ್ರೀಹರಿಯು ತಾನಾಗಿಯೇ ಸ್ವೇಚ್ಛೆಯಿಂದ ಈವಿಧ ವಾದ ಅವತಾರಗಳನ್ನೆತ್ತುವನು ಲೋಕದಲ್ಲಿ ಅಧರ್ಮವು ಹೆಚ್ಚಿದುದರಿಂ ದಲೇ, ಭಗವಂತನು ದುಷ್ಟನಿಗ್ರಹಾರ್ಥವಾಗಿ ಕೃಷ್ಣಾವತಾರವನ್ನೆತ್ತಿದ ನು ಆ ಪರಮಪುರುಷನು ಈವಿಧವಾದ ಅವತಾರಗಳನ್ನೆತ್ತುವುದಕ್ಕೂ, ಆಯಾ ಅವತಾರಗಳಲ್ಲಿ ದುಷ್ಟನಿಗ್ರಹಾದಿಕಾರ್ಯಗಳನ್ನು ನಡೆಸುವುದ ಕ್ಕೂ, ಅವನ ಸಂಕಲ್ಪವಲ್ಲದೆ ಬೇರೆ ಕಾರಣವಿಲ್ಲ ಆತನೇ ಎಲ್ಲಕ್ಕೂ ನಿಯಾ ಮಕನೇಹೊರತು ಆತನನ್ನು ನಿಯಮಿಸತಕ್ಕವರು ಬೇರೊಬ್ಬರಿಲ್ಲ ಮತ್ತು ಇತರಜೀವಾತ್ಮರು ನಡೆಸತಕ್ಕ ಪುಣ್ಯಪಾಪಗಳಿಗೆ ಆತನು ಸಾಕ್ಷಿಯಾಗಿ ನೋಡುತ್ತಿರುವನೇಹೊರತು, ತಾನು ಪುಣ್ಯಪಾಪಗಳನ್ನು ನಡೆಸತಕ್ಕವನಲ್ಲ ಆತನು ಚಿದಚಿದಾತ್ಮಕವಾದ ಸಮಸ್ತಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿರುವುದರಿಂದ, ಎಲ್ಲವನ್ನೂ ತಾನೊಬ್ಬನೇ ಏಕಕಾಲದಲ್ಲಿ ಸಾಕ್ಷಾತ್ಕರಿ ಸಬಲ್ಲನು ಆತನ ಸಂಕಲ್ಪಮಾತ್ರದಿಂದಲೇ ಪ್ರಪಂಚದ ಸೃಷ್ಟಿಸ್ಥಿತಿಲಯ ಗಳೆಲ್ಲವೂ ನಡೆಯುವುವು ಆತನು ನಡೆಸತಕ್ಕ ಸೃಷ್ಟ್ಯಾದಿಕಾರ್ಯಗಳೆಲ್ಲವೂ ಜೀವಾತ್ಮರನ್ನನುಗ್ರಹಿಸುವುದಕ್ಕೇಹೊರತು ತನ್ನ ಪ್ರಯೋಜನಕ್ಕಲ್ಲ ಏ ಕೆಂದರೆ, ಆ ಪರಮಪುರುಷನು ರಾಮಕೃಷ್ಣಾದ್ಯವತಾರಗಳನ್ನೆತ್ತಿದಾಗ, ಆ ವನಿಂದ ಸಂರಕ್ಷಿಸಲ್ಪಟ್ಟವರೆಲ್ಲರೂ, ಆತನ ಸಂದರ್ಶನದಿಂದಲೂ, ಅವನ ಸಹ ವಾಸಾದಿಗಳಿಂದಲೂ ಉತ್ತಮಗತಿಯನ್ನೇ ಹೊಂದುವರು ರಾಜೇಂದ್ರಾ! ಈ ದ್ವಾಪರಯುಗದಲ್ಲಿ ದುಷ್ಟಕ್ಷತ್ರಿಯರು ಬಹಳವಾಗಿ ಹೆಚ್ಚಿ, ಧನಮದ ದಿಂದಲೂ, ಅಧಿಕಾರಮದದಿಂದಲೂ ಬಹಳವಾಗಿ ಕೊಬ್ಬಿ, ಅನೇಕ ಸೈನ್ಯಗ ಳನ್ನು ಹೆಚ್ಚಿಸಿಕೊಂಡು, ರಾಕ್ಷಸಸಮಾನರಾಗಿರುವುದನ್ನು ನೋಡಿ ಭಗವಂ ತನು, ಭೂಮಿಗೆ ಭಾರಭೂತರಾದ ಆ ರಾಜಾಧಮರನ್ನಡಗಿಸುವುದಕ್ಕಾಗಿ

ಯೇ ಈ ಕೃಷ್ಣಾವತಾರವನ್ನೆತ್ತಿದನು ಈ ಶ್ರೀಕೃಷ್ಣನು ತನ್ನಣ್ಣನಾದ ಬಲರಾಮನೊಡಗೂಡಿ ನಡೆಸುವ ಅದ್ಭುತಕಾರ್ಯಗಳು, ಬ್ರಹ್ಮಾದಿದೇವತೆಗಳಿಗೂ ಊಹಿಸಲಸಾಧ್ಯವಾಗಿರುವುವು ಈ ಶ್ರೀಕೃಷ್ಣನು ತನ್ನ ಅವತಾರಕಾಲದಲ್ಲಿಮಾತ್ರವೇ ಅಲ್ಲದೆ, ಮುಂದೆ ಕಲಿಯುಗದಲ್ಲಿ ಹುಟ್ಟತಕ್ಕ ತನ್ನ ಭಕ್ತರಿಗೆ, ಕ್ಷೇಮವನ್ನುಂಟುಮಾಡುವುದಕ್ಕಾಗಿ ದುಃಖವನ್ನೂ ಅಜ್ಞಾನವನ್ನೂ ನೀಗಿಸತಕ್ಕ ಪರಮಪಾವನವಾದ ತನ್ನ ಕೀರ್ತಿಯನ್ನು ಲೋಕದಲ್ಲಿ ನೆಲೆಗೊಳಿಸಿರುವನು ಕೇವಲದೋಷಪ್ರಚುರವಾದ ಕಲಿಯುಗದಲ್ಲಿಯೂ ಕೂಡ, ಪುಣ್ಯತೀರ್ಥದಂತೆ ಪರಮಪಾವನವಾಗಿಯೂ, ಅಮೃತಪ್ರಾಯವಾಗಿಯೂ ಇರುವ ಆತನ ಕೀರ್ತಿಯನ್ನು ಒಂದಾವರ್ತಿ ಕಿವಿಯಿಂದ ಕೇಳಿದವರು, ತಮ್ಮ ಕರ್ಮವಾಸನೆಗಳೆಲ್ಲವನ್ನೂ ಕಳೆದು, ಸದ್ಗತಿಯನ್ನು ಹೊಂದುವರು ಭೋಜ, ವೃಷ್ಣಿ, ಅಂಧಕ, ಮಧು, ಶೂರಸೇನ, ದಶಾರ್ಹ, ಕುರು, ಸೃಂಜಯ, ಪಾಂಡು, ಮೊದಲಾದ ಕ್ಷತ್ರಿಯಕುಲದವರಿಂದ, ಅನವರತವೂ ಕೊಂಡಾಡಲ್ಪಡುತ್ತಿರುವ ಅದ್ಭುತವ್ಯಾಪಾರವುಳ್ಳ ಆ ಶ್ರೀಕೃಷ್ಣನು, ಸ್ನೇಹಸೂಚಕವಾದ, ತನ್ನ ನೋಟಗಳಿಂದಲೂ, ತನ್ನ ಮೃದುಗಂಭೀರವಾಕ್ಯಗಳಿಂದಲೂ, ತನ್ನ ಗಮನವಿಲಾಸದಿಂದಲೂ, ಸರ್ವಾಂಗಸುಂದವಾದ ತನ್ನ ದಿವ್ಯಮೂರ್ತಿಯಿಂದಲೂ, ಮನುಷ್ಯಲೋಕವನ್ನೆಲ್ಲಾ ಮೋಹಗೊಳಿಸುತ್ತಿರುವನು ಮಕರಕುಂಡಲಕಾಂತಿಯಿಂದ ಶೋಭಿತವಾದ ಕಿವಿಗಳಿಂದಲೂ ನುಣುಪಾದ ಕಪೋಲಗಳಿಂದಲೂ, ಸುಂದರವಾದ ಮಂದಹಾಸದಿಂದಲೂ ವಿಚಿತ್ರಶೋಭೆಯನ್ನು ಬೀರುತಿದ್ದ ಆ ಕೃಷ್ಣನ ಮುಖಕಮಲಸೌಂದರ್ಯವನ್ನು ಒಂದಾವರ್ತಿ ಕಣ್ಣಾರೆ ನೋಡಿದ ಸ್ತ್ರೀಯರೂ, ಪುರುಷರೂ ತಿರುಗಿ ಅದನ್ನು ಎಷ್ಟಾವರ್ತಿ ನೋಡಿದರೂ ತೃಪ್ತಿಯಿಲ್ಲದೆ, ತಮ್ಮ ಕಣ್ಣುಗಳಿಗೆ ಎವೆಯಾಟವನ್ನು ಕಲ್ಪಿಸಿದ ನಿಮಿಯನ್ನು ಬಹಳವಾಗಿ ನಿಂದಿಸುವರು ಓ ರಾಜೇಂದ್ರಾ ! ಇಂತಹ ದಿವ್ಯಸುಂದರಮೂರ್ತಿಯಾದ ಕೃಷ್ಣನು, ಲೀಲಾಮಾನುಷವಿಗ್ರಹದಿಂದ ವಸುದೇವನ ಮನೆಯಲ್ಲಿ ಜನಿಸಿ, ನಂದಗೋಕುಲದಲ್ಲಿ ಬೆಳೆಯುತಿದ್ದನು ಬಾಲ್ಯದಲ್ಲಿಯೇ ಪೂತನೆ ಮೊದಲಾದ ದುಷ್ಟರನ್ನು ಸಂಹರಿಸಿದನು. ಸಾವಿರಾರುಮಂದಿ ಸ್ತ್ರೀಯರನ್ನು ಮದುವೆಯಾಗಿ, ಅವರೊ

ಬ್ಬೊಬ್ಬರಲ್ಲಿಯೂ ನೂರುನೂರುಮಂದಿ ಪುತ್ರರನ್ನು ಪಡೆದನು. ತನ್ನ ಆ ಜ್ಞಾರೂಪವಾದ ವೇದಪ್ರಾಮಾಣ್ಯವನ್ನು ಲೋಕದಲ್ಲಿ ಸ್ಥಿರಪಡಿಸುವುದ ಕ್ಕಾಗಿ, ತನ್ನ ಕೈಯಿಂದಲೇ ಅನೇಕಯಜ್ಞಗಳನ್ನೂ ನಡೆಸಿ, ಆಮೂಲಕ ವಾಗಿ ತನ್ನನ್ನೇ ತಾನು ಆರಾಧಿಸುತಿದ್ದನು ಮತ್ತು ಭಾರತಯು ದ್ಧದಲ್ಲಿ ಪಾಂಡವರಿಗೆ ಸಹಾಯಮಾಡುವ ನೆವದಿಂದ, ಅನೇಕದುಷ್ಟಕ್ಷತ್ರಿ ಯರನ್ನು ತನ್ನ ದೃಷ್ಟಿಮಾತ್ರದಿಂದಲೇ ನಿಗ್ರಹಿಸಿ, ಭೂಭಾರವನ್ನು ತಗ್ಗಿಸಿ, ಅರ್ಜುನನಿಗೆ ಜಯವನ್ನು ಕೈಗೂಡಿಸಿದನು ಕೊನೆಗೆ ಪರಮಭಕ್ತನಾದ ಉದ್ಧವನಿಗೆ ತತ್ವೋಪದೇಶವನ್ನು ಮಾಡಿ, ಈಗ ತನ್ನ ನಿಜಸ್ಥಾನವಾದ ವೈ ಕುಂಠದಲ್ಲಿ ನೆಲೆಗೊಂಡಿರುವನು. ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು

ಇಲ್ಲಿಗೆ ನವಮಸ್ಕಂಧವು ಸಮಾಪ್ತವು

ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ.

ಶ್ರೀ ಕೃಷ್ಣಾರ್ಪಣಮಸ್ತು.

ಶುಭಂ ಭೂಯಾತ್.



Thompson & Co, Madras.